ಅಂಗುಷ್ಠಾದಿ ವಿತಸ್ತ್ಯಂತ ಪ್ರಮಾಣಾ ಪ್ರತಿಮಾ ಗೃಹೆ
ಪೂಜ್ಯಾನದಗ್ಧಾ ಭಿನ್ನಾ ವಾ ನೋರ್ಧ್ವಾರ್ಧ್ವಾಧೋದೃಷ್ ನ ವಕ್ರಿಕಾ ॥ 33 ॥
ಲಿಂಗಂ ವಾ ಲಕ್ಷಣೋಪೇತಂ ತತ್ರಾವಾಹನಮಾಚರೇತ್ ।
ಮೂಲಮುಚ್ಚಾರ್ಯ ಹೃದಯಾತ್ಸುಷುಮ್ನಾವರ್ತ್ಮನಾ ಸಹ ॥ 34 ॥
ದ್ವಾರೇಣ ಬ್ರಹ್ಮರಂಧ್ರಸ್ಯ ನಾಸಾರಂಧ್ರೆ ವಿನಿರ್ಗತಮ್
ಪುಷ್ಪಾಂಜಲೌ ಮಾತೃಕಾಬ್ಜೆ ಯೋಜಯಿತ್ವಾ ವಿನಿಕ್ಷಿಪೇತ್ ॥ 35 ॥
ಮೂರ್ತೌ ಪುಷ್ಪಾಂಜಲಿಂ ಚೈತದಾವಾಹನಮುದೀರಿತಮ್
ಶಾಲಗ್ರಾಮೆ ಸ್ಥಿರಾಯಾಂ ವಾ ನಾವಾಹನವಿಸರ್ಜನೆ । ॥ 36 ॥
ಆಹ್ವಾನಾದ್ಯುಪಚಾರೇಷು ಶ್ಲೋಕಾಂಭಂಬೂದಿತಾನ್ ಪಠೇತ್
ಆತ್ಮಸಂಸ್ಥಮಜಂ ಶುದ್ಧಂ ತ್ವಾಮಹಂ ಪರಮೇಶ್ವರ । ॥ 37 ॥
ಅರಣ್ಯಾಮಿವ ಹವ್ಯಾಂಶಂ ಮೂರ್ತಾವಾವಾಹಯಾಮ್ಯಹಮ್ ॥ 38 ॥

ಶ್ವೇತ, ಕೃಷ್ಣ, ಅರುಣ, ಪೀತ, ಶ್ಯಾಮ,ರಕ್ತ, ಶ್ವೇತ, ಕೃಷ್ಣ ಮತ್ತು ರಕ್ತ ವಸ್ತ್ರ ಧರಿಸಿರುವ ಮತು ಅಭಯ ಮುದ್ರೆ ಧರಿಸಿರುವ ಪೀಠಶಕ್ತಿಗಳ ಧ್ಯಾನ ಮಾಡಬೇಕು.

ಶಾಲಿಗ್ರಾಮದಲ್ಲಿ, ಮಣಿಯಲ್ಲಿ ಮತ್ತು ಯಂತ್ರದಲ್ಲಿನಿತ್ಯಪೂಜೆಯ ವಿಧಾನವಿದೆ. ಬಂಗಾರದಿಂದ ನಿರ್ಮಿತ ಪ್ರತಿಮೆ ಅಥವಾ ವಿಧಾನಪೂರ್ವಕವಾಗಿ ಸ್ಥಾಪಿಸಲ್ಪಟ್ಟ ಪ್ರತಿಮೆಯನ್ನು ಪ್ರತಿದಿನ ಪೂಜಿಸಬೇಕು. ಹೆಬ್ಬೆರಳಿನಿಂದ ಹಿಡಿದು ಒಂದು ಗೇಣು (9") ಅಳತೆಯ ಪ್ರತಿಮೆಯನ್ನು ಮನೆಯಲ್ಲಿ ಪೂಜೆ ಮಾಡಬಹುದು. ಸುಟ್ಟ, ಮುರಿದ, ಊರ್ಧ್ವ, ಅಧೋ ದೃಷ್ಟಿಯ ಮತ್ತು ವಕ್ರ ದೃಷ್ಟಿಯ, ಆಕೃತಿಯ ಪ್ರತಿಮೆಗಳು ನಿಷಿದ್ಧವಾಗಿವೆ.

ಸರ್ವಲಕ್ಷಣ ಸಂಯುಕ್ತ ಶಿವಲಿಂಗದ ಪೂಜೆಯನ್ನು ಮನೆಯಲ್ಲಿ ಪ್ರತಿದಿನ ಮಾಡಬೇಕು. ಮತ್ತು ಅದರಲ್ಲಿ ಆವಾಹನೆಯನ್ನು ಕೂಡಾ ಮಾಡಬೇಕು.

ಮೂಲಮಂತ್ರವನ್ನು ಉಚ್ಚರಿಸುತ್ತ ಹೃದಯದಿಂದ ಸುಷುಮ್ನಾ ಮಾರ್ಗದಿಂದ ಬ್ರಹ್ಮರಂಧ್ರದಲ್ಲಿ ಸ್ಥಿತ ಇಷ್ಟದೇವನನ್ನು, ನಾಸಾರಂಧ್ರದಿಂದ ಪುನಃ ಅದನ್ನು ಹೊರತೆಗೆದು, ಮಾತೃಕಾ ಯಂತ್ರದ ಮೇಲೆ ಸ್ಥಾಪಿಸಿ ಪುಷ್ಪಾಂಜಲಿಯಲ್ಲಿ ಏಕೀಕೃತಗೊಳಿಸಿ ಅವುಗಳನ್ನು ಮೂರ್ತಿಯ ಮೇಲೆ ಸಮರ್ಪಿಸಬೇಕು. ಈ ಕ್ರಿಯೆಯನ್ನು ಆವಾಹನೆ ಎಂದು ಕರೆಯಲಾಗುತ್ತದೆ.

ಸಾಲಿಗ್ರಾಮ ಶಿಲೆಯಲ್ಲಿ ಅಥವಾ ಅಚಲ ಪ್ರತಿಷ್ಠಿತ ಮೂರ್ತಿಯಲ್ಲಿ ಆವಾಹನೆಯನ್ನಾಗಲಿ ವಿಸರ್ಜನೆಯನ್ನಾಗಲಿ ಮಾಡಬಾರದು. ಮೂರ್ತಿಯಲ್ಲಿ





ಆವಾಹನಾದಿ ಉಪಚಾರಗಳಿಂದ ಪೂಜೆ ಮಾಡುವಾಗ ಭಗವಾನ್ ಶಂಕರನ ಮೂಲಕ ಹೇಳಲ್ಪಟ್ಟ ಈ ಶ್ಲೋಕವನ್ನು ಪಠಣ ಮಾಡಬೇಕು. ಆತ್ಮಸಂಸ್ಥಮಜಂ ಶುದ್ಧಂ ತ್ವಾಮಹಂ ಪರಮೇಶ್ವರ ಅರಣ್ಯಾಮಿವ ಹವ್ಯಾಂಶಂ ಮೂರ್ತಾವಾವಾಹಯಾಮ್ಯ ಹಮ್

## ಪಂಚಾಯತನ ದೇವತಾ ಸ್ಥಾಪನ

ಪಂಚಾಯತನಪಕ್ಷೇತು ಮಧ್ಯೆ ವಿಷ್ಣುಂ ಸಮರ್ಚಯೇತ್ ।
ಅಗ್ನಿನಿರ್ಋತಿವಾಯವ್ಯೇಶಾನೇಷು ಗಣನಾಯಕಮ್ ॥ 39 ॥
ರವಿಂ ಶಿವಾಂ ಶಿವಂ ಮಧ್ಯೆ ವಿಘ್ನಾಜನಗಜೇಶ್ವರಾನ್ ॥ 40 ॥
ಭವಾನ್ಯಾಂ ಮಧ್ಯ ಸಂಸ್ಥಾಯಾಮೀಶವಿಘ್ನಾರ್ಕಮಾಧವಾನ್ ।
ಹರೇ ಮಧ್ಯಗತೆ ಸೂರ್ಯಗಣೇಶಗಿರಿಜಾಚ್ಯುತಾನ್ ॥ 41 ॥
ಸಂಪೂಜ್ಯಾದೌ ಮಧ್ಯಗತಂ ಗಣೇಶಾದಿ ತತೋ ಯಜೇತ್ ।
ಗಣೇಶೆ ಮಧ್ಯಸಂಸ್ಥೆ ತು ಪೂಜಯೇದ್ ಭಾಸ್ಕರಾದಿತಃ ॥ 42 ॥
ಕಾಂಡಾನುಸಮಯೇನಾತ್ರ ಪೂಜಾ ಪ್ರೋಕ್ತಾ ಮನೀಷಿಭಿಃ ।

ಪಂಚಾಯತನದ ಪಕ್ಷದಲ್ಲಿ, ಮಧ್ಯದಲ್ಲಿ ವಿಷ್ಣುವಿನ ಪೂಜೆಯಾಗುತ್ತದೆ. ನಂತರ ಆಗ್ನೆಯ, ನೈಋತ್ಯ, ವಾಯುವ್ಯ ಮತ್ತು ಈಶಾನ ಕೋನಗಳಲ್ಲಿ ಕ್ರಮವಾಗಿ ಗಣೇಶ, ರವಿ, ಶಕ್ತಿ ಮತ್ತು ಶಿವರನ್ನು ಸ್ಥಾಪಿಸಿ ಪೂಜೆ ಮಾಡಬೇಕು.

ಮಧ್ಯದಲ್ಲಿ ಗಣೇಶನನ್ನು ಸ್ಥಾಪಿಸಿ ಪೂಜೆ ಮಾಡುವದಿದ್ದರೆ ಉಳಿದ ಕೋನಗಳಲ್ಲಿ ಕ್ರಮವಾಗಿ ಶಿವ, ಶಕ್ತಿ, ರವಿ ಮತ್ತು ವಿಷ್ಣುಗಳನ್ನು ರವಿ ಮಧ್ಯದಲ್ಲಿದ್ದರೆ ಶಿವ, ಗಣೇಶ, ಸೂರ್ಯ ಮತ್ತು ವಿಷ್ಣುಗಳ ಮತ್ತು ಶಿವ ಮಧ್ಯದಲ್ಲಿದ್ದರೆ ಕ್ರಮವಾಗಿ ರವಿ, ಗಣೇಶ, ಶಕ್ತಿ ಮತ್ತು ಅಚ್ಯುತರನ್ನು ಪೂಜೆ ಮಾಡಬೇಕು.

ಸರ್ವ ಪ್ರಥಮ ಮಧ್ಯಗತ ದೇವರನ್ನು ಪೂಜೆ ಮಾಡಿದ ನಂತರ ಗಣೇಶಾದಿಗಳನ್ನು ಪೂಜೆ ಮಾಡಬೇಕು. ಮಧ್ಯದಲ್ಲಿ ಗಣೇಶನಿದ್ದರೆ, ಗಣೇಶನನ್ನು ಪ್ರಾರಂಭದಲ್ಲಿ ಪೂಜಿಸಿ, ನಂತರ ರವಿ ಮುಂತಾದವರನ್ನು ಪೂಜಿಸಬೇಕು. ಇಲ್ಲಿ ಪ್ರಾಚೀನ ಮನೀಷಿಗಳು ಕಾಂಡಾನುಸಮಯ ವಿಧಾನದಿಂದ ಪೂಜೆ ಮಾಡುವುದನ್ನು ಹೇಳುತ್ತಾರೆ. ಒಂದು ದೇವತೆಯ ಪೂಜಾಕಾಂಡವನ್ನು ಸಮಾಪ್ತಗೊಳಿಸಿ ಎರಡನೆಯ ದೇವತೆಯ ಪೂಜಾಕಾಂಡವನ್ನು ಕಾಂಡಾನುಸಮಯವೆಂದು ಕರೆಯಲಾಗುತ್ತದೆ.

(ಐ) ಜ್ಞಾನಾಮೃತೊ ಭೌತಿಕಶ್ಚಾಧರೋ ದಾಮೋದರಸ್ತಥಾ
ವಾಗೀಶೋವರ್ಮಭಯದ ಐಕಾರಸ್ತ್ರಿಪುರಸ್ತಥಾ ॥ 14 ॥
(ಓ) ಸದ್ಯೋಜಾತೊ ವಾಸುದೇವ ಊರ್ಧ್ವದಂತಸ್ತ್ರಿಮಾತ್ರಕಃ ।
ಅಪ್ಯಾಯನಿಮಂತ್ರನಾಥ ಓಂ ಕಾರೋನಾಗಸಂಜ್ಞಕಃ ॥ 15 ॥
(ಔ) ಸಂಕರ್ಷಣೋನುಗ್ರಹೇಶೋ ಮುರಾರಿಯಾಪಿನಿ ತಥಾ ।
ಅಧೋದಂತಗತೊ ಮಾಯಿ ನೃಸಿಂಹಾಂಗಸ್ತಥೌರಸಃ ॥ 16 ॥
(ಅಂ)ಅಕ್ರೂರೋ ವ್ಯೋಮರೂಪಶ್ಚ ಪ್ರದ್ಯುಮ್ನಶ್ಚಂದ್ರಸಂಜ್ಞಕಃ ।
ಅನುಸ್ವಾರಸ್ತಥಾ ಬಿಂದುರಂಕಾರಶ್ಚ ಶಿರೋವ್ಯಯಃ ॥ 17 ॥
(ಅಃ)ಅನಂತಶ್ಚ ಮಹಾಸೇನೋನಿರುದ್ಧೋ ರಸವರ್ಣಕಃ ।
ಕನ್ಯಾಸ್ತನನಿಭಸ್ಸರ್ಗೋ ವಿಸರ್ಗಶ್ಶಾಂತಿಮತ್ಸ್ವರಃ ॥ 18 ॥
(ಕ) ಕ್ರೋಧಿಶೊ ಧಾತೃಸಂಜ್ಞಶ್ಚಕ್ರಿಸೃಷ್ಟಿಶ್ಚ ಕರಾದಿಗಃ ।
ವರ್ಗಾದಿಗಃ ಪಾತವೇಷಃ ಕಕಾರಃ ಕಾಮಗಸ್ಸ್ಮೃತಃ ॥ 19 ॥
(ಖ) ಕ್ಷುಧಾರ್ಧಿಗರಿಚಂಡಿಕಾ ಖೇಟೊ ದಕ್ಷಿಣಕೂರ್ಪರಃ ।
ಕೈಟಭಾರಿಶ್ಚ ಮಾತಂಗಃ ಸಂಹಾರಃ ಖಾರ್ಣಕಃ ಸ್ಮೃತಃ ॥ 20 ॥
(ಗ) ಸ್ಮೃತಿಃ ಪಂಚಾಂತಕಶ್ಶಾರ್ಙ್ಗಿ ಗಣೇಶೋ ಮಣಿಬಂಧಗಃ ।
ಗೋಮುಖೋ ಗಜಕುಂಭಶ್ಚ ಗಕಾರಃ ಸಿಂಹಸಂಜ್ಞಕಃ ॥ 21 ॥
(ಘ) ಖಡ್ಗಿ ಶಿವೋತ್ತಮೊ ಮೇಧಾ ದಕ್ಷಿಣಾಂಗುಲಿಮೂಲಗಃ ।
ಘನೋಽಘಃ ಘನಸ್ವರಶ್ಚೈವ ಘಕಾರೋ ಜದಿಮಸ್ಸ್ಮೃತಃ ॥22 ॥
(ಙ) ಸಂಜ್ಞಾಕೊ ರುದ್ರಕಾಂತಿಶ್ಚ ದಕ್ಷಾಂಗುಲ್ಯಗ್ರಸಂಸ್ಥಿತಃ ।
ಕ್ಲೀಬವಕ್ತ್ರಶ್ಚ ಭದ್ರೇಶೋ ಙಂಕಾರಶ್ಚಾನುನಾಸಿಕಃ ॥ 23 ॥
(ಚ) ಹಲಿಕೂರ್ಮೇಶ್ವರೊಲಕ್ಷ್ಮೀ ರ್ವಾಮಬಾಹ್ವಾದಿಗಸ್ತಥಾ ।
ಚಿತ್ರಧಾರಿ ಚಂಚಲಶ್ಚ ಚಕಾರಸ್ಸಂಸ್ಮೃತೋ ಬುಧೈಃ ॥ 24 ॥
(ಛ) ಏಕನೇತ್ರಶ್ಚ ಮುಸಲಿ ವಾಮಕೂರ್ಪರಗೋ ದ್ಯುತಿಃ ।
ತ್ರಿಬಿಂದುಕಸ್ತಥಾ ಚಾರಿ ಛಕಾರಃ ಶ್ಲೇಷ್ಮಕಾಮಿಧಃ ॥ 25 ॥
(ಜ) ಸ್ಥಿರಾಜಪನ್ನಾಜಪಜಶ್ಶೂಲಿ ಚ ಚತುರಾನನಃ ।
ಮಣಿಬಂಧಗತೊ ವಾಮೆ ಜಕಾರಾಂಜನಕೋತ್ತಮಃ ॥ 26 ॥
(ಝ)ಸ್ಥಿತಿಃ ಪಾಶಿ ತಥಾಜೇಶೊ ವಾಮಾಂಗುಲಿತಲಸ್ಥಿತಃ ।
ಸ್ವಸ್ತಿಕಸ್ಸ್ಥಾಣುಸಂಜ್ಞಶ್ಚ ಝಕಾರೊ ಚಾಂತಸಂಜ್ಞಕಃ ॥ 27 ॥
(ಞ) ವಾಮಾಂಗುಲ್ಯಾಗ್ರತಃ ಸಿದ್ಧಿರಂಕುಶೀಸರ್ವಸಂಜ್ಞಕಃ ।
ಮಾತಂಗೊ ಹ್ಯನುಗಾನಶ್ಚ ಞಕಾರಶ್ಚ ನಿರಂಜನಃ ॥28 ॥





(ಟ) ಜರಾಮುಕುಂದಸ್ಸೋಮೇಶೋ ದಕ್ಷಪಾದಾದಿಗೋಮುಖಃ ।
ಗಜಾಂಕುಶಶ್ಚ ಬಾಲೇಂದುರಮೃತಾಧ್ಯಕ್ಷಸ್ಸ್ಮೃತಃ ॥ 29 ॥
(ಠ) ಲಾಂಗೂಲೀಶೊ ನಂದಜಶ್ಚ ಪಾಲಿನಿ ಚ ಕಮಂಡಲುಃ ।
ದಕ್ಷಜಾನುಗತಸ್ಸ್ಥಾಯಿ ಠಕಾರಸ್ಸ್ಥಿರಸ್ಸ್ಮೃತಃ ॥ 30 ॥
(ಡ) ನಂದಿಕ್ಕಾಂತಿರ್ದಾರಕಶ್ಚ ಡಾಮರೊ ದಕ್ಷಗುಲ್ಫಗಃ ।
ವ್ಯಾಘ್ರಪಾದಶ್ಶುಭಾಂಘ್ರಿಶ್ಚ ಡಕಾರಸ್ತೋಮರೊ ಮತಃ ॥ 31 ॥
(ಢ) ಏಕಾರಿ ಚಾರ್ಧನಾರೀಶೊ ನರಶ್ಚಾಖಾಂತರಾಕೃತಿಃ ।
ದಕ್ಷಪಾದಾಂಗುಲಿಮೂಲೋ ಡಲೊ ಢಕ್ಕೊ ಢಕಾರಕಃ ॥ 32 ॥
(ಣ) ಉಮಾಕಾಂತೊ ನರಕಜಿದ್ ರತಿರ್ದಕ್ಷಪದಾಗ್ರಗಃ ।
ನಿರ್ವಾಣಾಸ್ತ್ರಿಗುಣಾಕಾರ ಸ್ತ್ರಿರೇಖೋಣಸ್ಸಮೀರಿತಃ ॥ 33 ॥
(ತ) ವಾಮೋರುಮೂಲನಿಲಯ ಆಷಾಢಿ ಕಾಮಿಕಾ ಹರಿಃ ।
ತೀವ್ರಶ್ಚ ತರಲೊ ನೀಟಸ್ತಕಾರಃ ಕೀರ್ತಿತೋ ಬುಧೈಃ ॥ 34 ॥
(ಥ) ದಂಡಿಶೋ ವರದಃ ಕೃಷ್ಣೋ ವಾಮಜಾನುಗತಸ್ವರಃ ।
ಶೌರಿ ಚಾಪಿ ವಿಶಾಲಾಕ್ಷಸ್ಥಕಾರಃ ಪರಿಕೀರ್ತಿತಃ ॥ 35 ॥
(ದ) ಸತ್ಯೋತ್ರೀಶೊ ಹ್ಲಾದಿನಿಚ ವಾಮಗುಲ್ಫಗತಸ್ತಥಾ ।
ಶೂಲಿ ಕುಬೇರೋ ದಾತಾ ಚ ದಕಾರೊ ಧಾದಿಮಃ ಸ್ಮೃತಃ ॥ 36 ॥
(ಧ) ಮೀನೇಶಸ್ಸಾತ್ವತ ಪ್ರೀತಿರ್ವಾಮಪಾದಾಂಗುಲೀಗತಃ ।
ಧನೇಶೊ ಧರಣೀಶಶ್ಚ ಧಕಾರೋ ದಾಂತಿಮಃ ಸ್ಮೃತಃ ॥37 ॥
(ನ ಶಾರಿಮೇಶೆಶ್ವರೀದೀರ್ಘಾ ವಾಮಪಾದಾಗ್ರಸಂಸ್ಥಿತಃ ।
ನರೋ ನ ದೀನೋ ನಾದಿ ಚ ನಕಾರಶ್ಚಾನುನಾಸಿಕಃ ॥ 38 ॥
(ಪ) ತೀಕ್ಷ್ಣಾ ಚ ಲೋಹಿತಶ್ಚಾರೊ ದಕ್ಷಪಾರ್ಶ್ವಶ್ಚ ಪಾರ್ಥಿವಃ ।
ಪದ್ಮೇಶೊ ನಾಂತಿಮಃ ಫಾದಿಃ ಪಕಾರೋಪಿ ಪ್ರಕೀರ್ತಿತಃ ॥ 39 ॥
(ಫ) ಜನಾರ್ದನಃ ಶಿಖಿ ರೌದ್ರಿ ವಾಮಪಾರ್ಶ್ವಕೃತಾಲಯಃ ।
ಫಟ್‌ಕಾರಃ ಪ್ರೋಚ್ಯತೆ ಸದ್ಭಿಃ ಫಕಾರಃ ಪಾಂತಮಸ್ಸ್ಮೃತಃ ॥ 40 ॥
(ಬ) ಛಲಗಂಡೊ ಭೂಧರಶ್ಚ ಭಯಾಪೃಷ್ಠಗತಸ್ತಥಾ ।
ಸುರಸೊ ವಜ್ರಮುಷ್ಟಿಶ್ಚ ಬಕಾರೊ ಭಾದಿಮೊ ಮತಃ ॥ 41 ॥
(ಭ) ವಿಶ್ವಮೂರ್ತಿರ್ದ್ವಿರಂಡೇಶೊ ನಿದ್ರಾ ನಾಭಿಗತೋಪಿ ಚ ।
ಭ್ರುಕುಟಿ ಚ ಭರದ್ವಾಜೊ ಭಕಾರಶ್ಚ ಜಯಾಪಹಃ ॥ 42 ॥
(ಮ)ವೈಕುಂಠಶ್ಚ ಮಹಾಕಾಲಸ್ತಂದ್ರಿ ಜಠರಸಂಸ್ಥಿತಃ ।
ಮಂತ್ರೇಶೋ ಮಂಡಲೊ ಮಾನಿಂ ವಿಷಸ್ವಾರ್ಯೋರ್ಮಕಾರಕಃ ॥ 43 ॥

(ಯ) ಕ್ಷುಧಾ ಬಾಲಾ ಚ ವಾಯುಸ್ತ್ವಗ್ರೈತಶ್ಚ ಪುರುಷೋತ್ತಮಃ ।
ಯಮುನೊ ಯಾಮುನೇಯಶ್ಚ ಯಕಾರೊ ಮಾಂತಿಮಃ ಸ್ಮೃತಃ ॥ 44 ॥
(ರ) ಕ್ರೋಧಿನಿ ಚ ಭುಜಂಗೇಶ ಜ್ವಾಲಿ ರುಧಿರಪಾವಕಾ ।
ರೋಚಿಷ್ಪಾಂದಕ್ಷಿಣಾಂಶಶ್ಚ ರುಚಿರೊ ರೇಫ ಈರಿತಃ ॥ 45 ॥
(ಲ) ಕ್ರಿಯಾಕಕುದ್ಗತೊ ಮಾಂಸಂ ಪಿನಾಕೀಭೂರ್ಬಲಾನುಜಃ ।
ಲಂಪಟಃ ಶಕ್ರಸಂಜ್ಞಶ್ಚ ವಾದ್ಯೋ ರಾಂತೊ ಲಕಾರಕಃ ॥ 46 ॥
(ವ) ಬಾಲೊ ವಾಮಾಂಸನಿಲಯೊ ಮೇದೊ ವಾರಿದವಾರುಣಾ ।
ಉತ್ಕಾರೀ ಜಲಸಂಜ್ಞಶ್ಚ ಖಡ್ಗೀಶೋಪಿ ವಕಾರಕಃ ॥ 47 ॥
(ಶ) ಮೃತ್ಯುರ್ಬಕೊ ವೃಷಘ್ನಶ್ಚ ಹೃದೊ ದಕ್ಷಕರಸ್ಥಿತಃ ।
ಶಂಕುಕರ್ಣೋಸ್ಥಿಸಂಜ್ಞಶ್ಚ ಶಕಾರೊ ವಿದ್ಭಿರೀರಿತಃ ॥ 48 ॥
(ಷ) ವೃಷಃ ಶ್ವೇತೇಶ್ವರಃ ಪೀತಮಜ್ಜಾಹೃದ್ವಾಮಬಾಹುಗಃ ।
ಷಡಾನನಃ ಷಕಾರಶ್ಚ ಕೀರ್ತಿತಶ್ಚ ಬುಧೈಖರಃ ॥ 49 ॥
(ಸ) ಭೃಗುಃ ಶ್ವೇತಸ್ತಥಾ ಹಂಸೋ ಹೃದೋ ದಕ್ಷಿಣಪಾದಗಃ ।
ಸಮಯಸ್ತಾಮಗಪ್ಶುಕ್ರಸ್ಸಂಗತಿಸ್ತಾರ್ಣಕತ್ವಶಿ ॥ 50 ॥
(ಹ) ನಭೋ ವರಾಹೊ ನಕುಲೊ ಹೃದೊ ವಾಮಪದಸ್ಥಿತಃ ।
ಸದಾಶಿವೋರುಣಃ ಪ್ರಾಣೊ ಹಕಾರಶ್ಚ ಹಯಾನನಃ ॥ 51 ॥
(ಳ) ಹೃದಯಾನ್ನಾಭಿಸಂಸ್ಥಾನಶ್ಶಿವೇಶೊ ವಿಮಲೋಸಿತಃ ।
ಲಘುಪ್ರಯತ್ನಶ್ಚೋಪಾಂತ್ಯೊ ಳಕಾರಃ ಪ್ರೋಚ್ಯತೆ ಬುಧೈಃ ॥ 52 ॥
(ಕ್ಷ) ಸಂವರ್ತಕೊ ನೃಸಿಂಹಶ್ಚ ಹೃದಯಾನ್ಮುಖಸಂಸ್ಥಿತಃ ।
ಅನಂತಃ ಪರಮಾತ್ಮಾ ಚ ವಜ್ರಕಾಯೋಂತಿಮಾಕ್ಷರಃ ॥ 53 ॥

॥ ಇತಿ ಹಾದಿಮತೆ ಮಾತೃಕಾಕೋಶ ಸಮಾಪ್ತಃ ॥







## ಮುದ್ರೆಗಳು





ಸ್ಥಾಪನಿ ಮುದ್ರಾ



ಸಮ್ಮುಖೀಕರಣ ಮುದ್ರಾ



ಮುಷ್ಟಿ ಮುದ್ರಾ



ಮೃಗ ಮುದ್ರಾ



ಶಕ್ತಿ ಮುದ್ರಾ



ಲಿಂಗ ಮುದ್ರಾ


ಪಂಚಮುಖಿ ಮುದ್ರಾ


ಮತ್ಸ್ಯ ಮುದ್ರಾ


ಗರುಡ ಮುದ್ರಾ


ಮುಸಲ ಮುದ್ರೆ


ಧೇನು ಮುದ್ರಾ


ಸರ್ವಾಕರ್ಷಣಿ ಮುದ್ರಾ






ಆಕರ್ಷಣ ಮುದ್ರಾ


ಕವಚ ಮುದ್ರೆ


ಅಸ್ತ್ರ ಮುದ್ರಾ


ಚಕ್ರ ಮುದ್ರಾ


ಕೂರ್ಮ ಮುದ್ರಾ


ಮಹಾಯೋನಿ ಮುದ್ರಾ



ತ್ರಿಖಂಡಾ ಮುದ್ರಾ



ಸ್ನಾನ ಮುದ್ರೆ



ಕೀರ್ತಿ ಮುದ್ರೆ



ಮಾಯಾ ಮುದ್ರೆ





ಜಯ ಮುದ್ರೆ



ಯಾನ ಮುದ್ರೆ





ಚಂಡ ಮುಂಡ



ಗಂಗಾಯಮುನಾ ಮುದ್ರೆ

ಮುದ್ರೆಗಳಿಂದ ಪೂಜಿಸುವ ತನ್ನ ಭಕ್ತರಿಗೆ ಸಮಸ್ತ ಸಿದ್ಧಿಗಳನ್ನು ಪ್ರದಾನಿಸುವ ಭಗವಾನ್ ಶ್ರೀ ನೃಸಿಂಹನು ನನಗೆ ರಜೋ ಗುಣರಹಿತ ಬುದ್ಧಿಯನ್ನು ಕೊಡಲಿ.

ಭಗವಾನ್ ಶ್ರೀ ಲಕ್ಷ್ಮಿನೃಸಿಂಹನಿಗೆ ಜಯವಾಗಲಿ! ಪರಮಕಲ್ಯಾಣಕಾರಿ ಶ್ರೀ ನೃಸಿಂಹನಿಗೆ ನಾನು ವಂದಿಸುತ್ತೇನೆ. ಯಾವ ಮಹಾಬಲವಾನ ನೃಸಿಂಹನು ಬಲಶಾಲಿಗಳಾದ ದೈತ್ಯರನ್ನು ವಧೆ ಮಾಡಿದನೋ ಆ ನರಹರಿಗೆ ನಾನು ವಂದಿಸುತ್ತೇನೆ.

ಲಕ್ಷ್ಮಿನೃಸಿಂಹನಿಗಿಂತ ಹಿರಿದಾದ ಅನ್ಯ ದೇವರಿಲ್ಲ. ಕಾರಣ ಶ್ರೀಲಕ್ಷ್ಮಿ ನೃಸಿಂಹನ ಚರಣಗಳ ಸೇವೆ ಮಾಡಬೇಕು. ಈ ಯೋಚನೆಯಿಂದ ಶ್ರೀ ನೃಸಿಂಹನು ನನ್ನ ಮನದಲ್ಲಿ ನಿವಾಸ ಮಾಡಲಿ. ನನ್ನ ಮನಸ್ಸು ಲಕ್ಷ್ಮಿ ನೃಸಿಂಹನಿಂದ ಎಂದಿಗೂ ಬೇರೆಯಾಗದಿರಲಿ.

**ವಿಶ್ವೇಶೋ ಇರಿಜಾಬಿಂದುಮಾಧವೋ ಮಣಿಕರ್ಣಿಕಾ ।**
**ಭೈರವೋ ಜಾಹ್ನವಿದಂಡಪಾಣಿರ್ಮೆ ತನ್ವತಾಂ ಶಿವಮ್ ॥ 131 ॥**

**ಅಬ್ದೆ ವಿಕ್ರಮತೋ ಜಾತೆ ಬಾಣವೇದನೃಪೈರ್ಮಿತೆ ।**
**ಜೇಷ್ಠಾಷ್ಟಮ್ಯಾಂ ಶಿವಸ್ಯಾಗ್ರೆ ಪೂರ್ಣೋ ಮಂತ್ರ ಮಹೋದಧಿಃ ॥ 132 ॥**

ಭಗವಾನ್ ವಿಶ್ವನಾಥ, ಭವಾನಿ ಅನ್ನಪೂರ್ಣಾ, ಬಿಂದುಮಾಧವ, ಮಣಿಕರ್ಣಿಕಾ, ಭೈರವ, ಭಾಗಿರಥಿ ಮತ್ತು ದಂಡಪಾಣಿಗೆ ನಾನು ನಮಸ್ಕರಿಸುತ್ತೇನೆ. ಅವರು ಸದಾ ನನ್ನ ಕಲ್ಯಾಣ ಮಾಡಲಿ.

ವಿಕ್ರಮ ಸಂವತ್ 1645 ಜೇಷ್ಠ ಶುಕ್ಲ ಅಷ್ಟಮಿಯಂದು ಬಾಬಾ ವಿಶ್ವನಾಥನ ಸಾನಿಧ್ಯದಲ್ಲಿ ಈ ಮಂತ್ರ ಮಹೋದಧಿ ಎಂಬ ಗ್ರಂಥವು ಪೂರ್ಣವಾಗಿತು.

[ಈ ಪ್ರಕಾರ ಶ್ರೀಮನ್ ಮಹೀಧರ ವಿರಚಿತ ಮಂತ್ರಮಹೋದಧಿಯ ಇಪ್ಪತ್ತೈದನೆಯ ತರಂಗವು ಸಂಪೂರ್ಣ]





# ಮಾತೃಕಾ ಕೋಶ

**ಶ್ರೀ ಗಣೇಶಂ ಮಹೇಶಾನಂ ಭಾರತೀಮೀಶ್ವರಂ ಶಿವಮ್ ।**
**ನತ್ವಾ ವಕ್ಷೆ ಮಾತೃಕಾಣಾಂ ನಿಘಂಟುಂ ಬಾಲಬುದ್ಧಯೆ ॥ 1 ॥**
**(ಓಂ) ಧ್ರುವಸ್ತಾರಸ್ತ್ರಿವೃದ್‌ಬ್ರಹ್ಮಾ ವೇದಾದಿಸ್ತಾರಕೋಽವ್ಯಯಃ ।**
**ಪ್ರಣವಶ್ಚ ತ್ರಿಮಾತ್ರೋಽಪಿ ಓಂ ಕಾರೊ ಜ್ಯೋತಿರಾದಿತಃ ॥ 2 ॥**
**(ಅ) ಶ್ರೀ ಕಂಠಃ ಕೇಶವಶ್ಚಾಪಿ ನಿವೃತ್ತಿಶ್ಚ ಸ್ವರಾದಿಕಃ ।**
**ಅ ಕಾರೊ ಮಾತೃಕಾಧ್ಯಕ್ಷ ವಾತ ಇತ್ಯಭಿಧೀಯತೆ ॥ 3 ॥**
**(ಆ) ನಾರಾಯಣಸ್ತಥಾನಂತೊ ಮುರವೃತ್ತೊ ಗುರುಸ್ತಥಾ ।**
**ವಿಷ್ಣುಶಯ್ಯಾ ತಥಾ ಶೇಷೊ ದೀರ್ಘಆಕಾರ ಏವಚ ॥ 4 ॥**
**(ಇ) ಮಾಧವಸ್ಸೂಕ್ಷ್ಮ ಸಂಜ್ಞಶ್ಚ ವಿದ್ಯಾದಕ್ಷಿಣಲೋಚನಮ್ ।**
**ಗಂಧರ್ವಃ ಪಾಂಚಜನ್ಯ ಇಕಾರಶ್ಚ ಮುಕಾಂಕುರಃ ॥ 5 ॥**
**(ಈ) ಗೋವಿಂದಾಶ್ಚ ತ್ರಿಮೂರ್ತಿಶಃ ಶಾಂತಿಃ ಸ್ಯಾದ್ವಾಮಲೋಚನಮ್ ।**
**ನೃಸಿಂಹಾಸ್ತ್ರಂ ತಥಾ ಮಾಯಾ ಈಕಾರೋಽಪಿ ಸುರೇಶ್ವರಃ ॥ 6 ॥**
**(ಉ) ಅಮರೇಶಸ್ತಥಾ ವಿಷ್ಣುರಿಂಧಿಕಾ ಚ ಗಜಾಂಕುಶಃ ।**
**ದಕ್ಷಕರ್ಣಾಶ್ಚ ವಿಜಯಿ ಉಕಾರೊ ಮನ್ಮಥಾಧಿಪಃ ॥ 7 ॥**
**(ಊ) ಅರ್ವಾಶೊ ದೀಪಿಕಾ ವಾಮ ಶ್ರವಣಂ ಮಧುಸೂದನಃ ।**
**ಇಂದ್ರಚಾಪಪಣ್ಮುಖಶ್ಚ ಊಕಾರೊ ರಕ್ಷಣಾಧಿಪಃ ॥ 8 ॥**
**(ಋ) ದೇವಿಕಾ ದಕ್ಷನಾಸಾ ಚ ಭಾರಭೂತಿಸ್ತ್ರಿವಿಕ್ರಮಃ ।**
**ದೇವಮಾತಾರಿಪುಘ್ನಶ್ಚ ಋಕಾರಸ್ತಪನಸ್ತಥಾ ॥ 9 ॥**
**(ೠ) ಅತಿಥಿಶೋ ವಾಮನಶ್ಚ ಮೋಚಿಕಾ ವಾಮನಾಸಿಕಾ ।**
**ದೈತ್ಯಮಾತಾ ಚ ದೈವಜ್ಞ ೠಕಾರಸ್ತ್ರಿಪುರಾಂತಕಃ ॥ 10 ॥**
**(ಌ) ಶ್ರೀಧರಶ್ಚ ಪರಾಸ್ಥಾಣುರ್ದಕ್ಷಗಂಡ ಸ್ತ್ರೀವೇದಕಃ ।**
**ವಿಕಾಂಘ್ರಿರ್ವಜ್ರದಂಡಶ್ಚ ವ್ಯೋಮದ್ಧಿರ್ಲೃ ಸ್ವರಸ್ಮೃತಃ ॥ 11 ॥**
**(ೡ) ಹೃಷಿಕೇಶೋ ಹರಸ್ಸೂಕ್ಷ್ಮೊ ವಾಮಗಂಡಃ ಕುಬೇರದೃಕ್ ।**
**ಅರ್ಧ್ವಚಕ್ರೊ ನೀಲಚರಣೊ ಲೃಕಾರಶ್ಚ ತ್ರಿಕೂಟಕಃ ॥ 12 ॥**
**(ಏ) ಝಿಂಟೀಶಃ ಪದ್ಮನಾಭಶ್ಚ ಶಕ್ತಿಸ್ಸೂಕ್ಷ್ಮಾ ಸ್ಮೃತ ಭಗಃ ।**
**ಊರ್ಧ್ವೋಷ್ಠಗಃ ಕಾಮರೂಪ ಏಕಾರಶ್ ತ್ರಿಕೋಣಕಃ ॥ 13 ॥**

ಮಾಡಬಹುದು. ಯಾವ ಪ್ರಕಾರ ತಂದೆಯು ತನ್ನ ಬಾಲಕನನ್ನು ಚಪಲತೆಗಾಗಿ ಕ್ಷಮಿಸುತ್ತಾನೆಯೊ ಅದೇ ಪ್ರಕಾರ ಮಂತ್ರದ ವಿಷಯದಲ್ಲಿ ಮಾಡಿರುವಂಥ ಈ ಸಾಹಸವನ್ನು ವಿದ್ವಜ್ಜನರು ಕ್ಷಮಿಸಬೇಕು ಎಂದು ಗ್ರಂಥಕಾರರು ಉಪಸಂಹಾರ ಮಾಡುತ್ತ ಹೇಳುತ್ತಾರೆ.

**ಗ್ರಂಥಕರ್ತ್ರುಃ ವಂಶ ಕಥನ**

ಅಹಿಚ್ಛತ್ರದ್ವಿಜಚ್ಛತ್ರವತ್ಸಗೋತ್ರಸಮುದ್ಭವಃ ।
ಆಸೀದ್ರತ್ನಾಕರೋ ನಾಮ ವಿದ್ವಾನ್ಖ್ಯಾತೋ ಧರಾತಲೆ ॥ 121 ॥

ತತ್ತನುಜೊ ರಾಮಭಕ್ತಃ ಫನೂಬಟ್ಟಾಭಿಧೋಭವತ್ ।
ಮಹೀಧರಸ್ತದುತ್ಪನ್ನಃ ಸಂಸಾರಸಾರತಾಂ ವಿದನ್ ॥ 122 ॥

ನಿಜದೇಶಂ ಪರಿತ್ಯಜ್ಯ ಗತೊ ವಾರಾಣಸಿಂ ಪರಿಮ್ ।
ಸೇವಮಾನೊ ನರಹರಿಂ ತಂತ್ರ ಗ್ರಂಥಮಿದಂ ವ್ಯಧಾತ್ ॥ 123 ॥

ಕಲ್ಯಾಣಭಿಧಪುತ್ರೇಣ ತಥಾನ್ಯೈರ್ದ್ವಿಜಸತ್ತಮೈಃ ।
ಅನೇಕಾನಾಗಮಗ್ರಂಥಾನ್ ವಿಲೋಕ್ಯ ತು ಮುನೀಶ್ವರೈಃ ॥ 124 ॥

ಏಕಗ್ರಂಥೆ ಸ್ಥಿತಂ ಸರ್ವ ಮಂತ್ರಾಣಾಂ ಸಾರಮಿಚ್ಛುಭಿಃ ।
ಸಂಪ್ರಾರ್ಥಿತಃ ಸ್ವಮತ್ಯಾಸೌ ನಾಮ್ನಾ ಮಂತ್ರಮಹೋದಧಿಃ ॥ 125 ॥

ಅಹಿಚ್ಛತ್ರ ದೇಶದಲ್ಲಿ ದ್ವಿಜರ ಛತ್ರ ಸಮಾನ ವತ್ಸ ಗೋತ್ರದಲ್ಲಿ ಉತ್ಪನ್ನ, ಪ್ರಪಂಚದಲ್ಲಿ ತನ್ನ ವಿದ್ವತ್‌ದಿಂದ ಪ್ರಖ್ಯಾತ ರತ್ನಾಕರರೆಂಬ ಬ್ರಾಹ್ಮಣರಿದ್ದರು. ಅವರ ಪುತ್ರ ಫನ್ನಭಟ್ಟರು ಭಗವಾನ್ ಶ್ರೀ ರಾಮನ ಅನನ್ಯ ಭಕ್ತರಾಗಿದ್ದರು. ಅವರ ಪುತ್ರರಾದ ಶ್ರೀ ಮಹೀಧರರು, ಸಂಸಾರದ ಅಸಾರತೆಯನ್ನು ಅರಿತು ತನ್ನ ದೇಶವನ್ನು ತೊರೆದು ವಾರಣಾಸಿಗೆ ಬಂದು ಭಗವಾನ್ ನೃಸಿಂಹನ ಸೇವೆ ಮಾಡುತ್ತ 'ಮಂತ್ರ ಮಹೋದಧಿ' ನಾಮಕ ತಂತ್ರ ಗ್ರಂಥದ ರಚನೆ ಮಾಡಿದರು.

ಅನೇಕ ಗ್ರಂಥಗಳಲ್ಲಿ ಬರೆಯಲ್ಪಟ್ಟ ನಾನಾ ಪ್ರಕಾರದ ಮಂತ್ರಗಳ ಸಾರವನ್ನು ಒಂದೇ ಗ್ರಂಥರೂಪದಲ್ಲಿ ಸಂಯೋಜಿಸಬೇಕು. ಎನ್ನುವ ಇಚ್ಛೆಯಿಂದ ಮತ್ತು ಆಗಮ ಗ್ರಂಥಗಳ ಮರ್ಮಜ್ಞರಾದ ಮಹಾಮುನಿಗಳು, ಶ್ರೇಷ್ಠ ಬ್ರಾಹ್ಮಣರು ಮತ್ತು ಕಲ್ಯಾಣ ನಾಮಕ ಪುತ್ರನ ಪ್ರಾರ್ಥನೆಗೆ ಓಗೊಟ್ಟು, ನನ್ನ ಬುದ್ಧಿಮತ್ತೆಗೆ ಅನುಸಾರವಶಗಿ ಈ ಮಂತ್ರ ಮಹೋದಧಿ, ನಾಮಕ ಗ್ರಂಥವನ್ನು ರಚಿಸಿದ್ದೇನೆ ಎಂದು ಗ್ರಂಥಕಾರರು ತಮ್ಮ ವಂಶಾವಳಿ ಮತ್ತು ಪುಸ್ತಕ ರಚನೆಯ ಸಂದರ್ಭದಲಿ ವಿವರಿಸುತ್ತಾರೆ.





**ಆಶೀರ್ವಚನ**

ಅವಿಚ್ಛಿನ್ನಾನ್ವಯಾಃ ಸಂತು ನಿಜಧರ್ಮಪರಾಯಣಾಃ ।
ಮಂಗಲಾನಿ ಪ್ರಪಶ್ಯಂ ತು ಸರ್ವೆ ದ್ರೋಹಪರಾಙ್ಮುಖಾಃ ॥ 126 ॥

ಹರಿಃ ಕರೋತು ಕಲ್ಯಾಣಂ ಸರ್ವೇಷಾಂ ಜಗದೀಶ್ವರಃ ।
ಪ್ರವರ್ತಯಂತ್ವಿಮಂ ಗ್ರಂಥಂ ಯಾವದ್ವೇದೊ ರವಿಃ ಶಶಿ ॥

ಈ ಗ್ರಂಥವನ್ನು ಅಭ್ಯಾಸ ಮಾಡುವ ಸಮಸ್ತ ಪಾಠಕ ಗಣ ಸ್ವಧರ್ಮ ಪರಾಯಣರಾಗಿರಲಿ. ಸರ್ವರ ಕಲ್ಯಾಣವನ್ನು ನೋಡುವಂತಾಗಲಿ ದ್ರೋಹದಿಂದ ಸದಾ ದೂರವಿರಲಿ. ಇಂಥವರ ವಂಶಪರಂಪರೆಯು ಅವಿಚ್ಛಿನ್ನವಾಗಿ ಮುಂದುವರಿಯಲಿ.

ಜಗದೀಶ್ವರನಾದ ಶ್ರೀ ಹರಿಯು ಎಲ್ಲರಿಗೂ ಕಲ್ಯಾಣವನ್ನುಂಟು ಮಾಡಲಿ. ವೇದ, ಸೂರ್ಯ-ಚಂದ್ರರಿರುವವರೆಗೂ ಈ ಗ್ರಂಥದ ಪ್ರಸಾರ-ಪ್ರಚಾರವು ನಡೆಯುತ್ತಿರಲಿ ಎಂದು ಗ್ರಂಥಕಾರರು ಹಾರೈಸುತ್ತಾರೆ.

**ದೇವ ಪ್ರಾರ್ಥನಾ**

ನರಸಿಂಹೊ ಮಹಾದೇವೋ ಮಹಾದೇವಾರ್ತಿನಾಶನಃ ।
ಮುದೆ ಪರೊ ಮಹಾಲಕ್ಷ್ಮ್ಯಾ ದೇವಾವರ ನತೋಸ್ತು ಮೆ ॥ 128 ॥

ನೃಸಿಂಹಉತ್ತಂಗಸಮುದ್ರಜಾಯಂ ಸಮುದ್ರಜದ್ವಿಜಗೃಹೆ ನಿಷಣ್ಣಃ ।
ಸಮುದ್ರಜೋಹೀನಮತಿಃ ಸದಾವ್ಯಾತ್ ಸಮುದ್ರಭುಕ್ತಾಖಿಲಸಿದ್ಧಿದಾಯ ॥ 129॥

ರಾಜಾಲಕ್ಷ್ಮಿನೃಸಿಂಹೊಜಯತಿ ಸುಖಕರಂ ಶ್ರೀ ನೃಸಿಂಹಂ ಭಜೇಯಂ ।
ದೈತ್ಯಾಧೀಶಾಮಹಾಂತೊಹಸತನೃಹರಿಣಾ ಶ್ರೀ ನೃಸಿಂಹಾಯನೌಮಿ ।
ಸೇವ್ಯೋ ಲಕ್ಷ್ಮಿನೃಸಿಂಹಾದಪರ ಇಹ ನಹಿ ಶ್ರೀ ನೃಸಿಂಹಸ್ಯ ಪಾದೌ ಸೇವೆ
ಲಕ್ಷ್ಮಿನೃಸಿಂಹೆ ವಸತು ಮಮ ಮನಃ ಶ್ರೀನೃಸಿಂಹಾವ ಭಕ್ತಮ್ ॥

ಸಮಸ್ತ ದೇವತಾಗಣಗಳ ಆಪತ್ತನ್ನು ದೂರ ಮಾಡುವ, ಸಕಲ ದೇವತೆಗಳಿಂದ ವಂದಿತ ಲಕ್ಷ್ಮಿ ಸಹಿತ ಶ್ರೀ ನೃಸಿಂಹ ದೇವನು ನಮಗೆ ನಿರಂತರ ಆನಂದವನ್ನು ಕೊಡುತ್ತಿರಲಿ.

ಕ್ಷೀರಸಾಗರದ ಮಧ್ಯದಲ್ಲಿರುವ ಶ್ವೇತ ದ್ವೀಪದ ಮಂಟಪದಲ್ಲಿ ಲಕ್ಷ್ಮಿಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ವಿರಾಜಮಾನನಾದ ಪ್ರಸನ್ನತೆಯಿಂದ ಪೂರ್ಣನಾದ ಭಗವಾನ್ ಶ್ರೀ ನೃಸಿಂಹನು ನನ್ನನ್ನು ರಕ್ಷಿಸಲಿ. ಅಂಜಲಿ ಅದಿ

ಸಪ್ತಮ ತರಂಗದಲ್ಲಿ ವಟಯಕ್ಷಿಣಿ, ವಟಯಕ್ಷೀನಿ ಭೇದಗಳು ವಾರಾಹಿ, ಜೇಷ್ಠಾ, ಕರ್ಣಪಿಶಾಚಿನಿ, ಸ್ವಪ್ನೇಶ್ವರಿ, ವಾತಂಗಿ, ಬಾಣೇಶಿ, ಮತ್ತು ಕಾಮೇಶಿಯವರ ಮಂತ್ರಗಳನ್ನು ಪ್ರತಿಪಾದಿಸಲಾಗಿದೆ.

ಅಷ್ಟಮ ತರಂಗದಲ್ಲಿ ತ್ರಿಪುರಬಾಲಾ ಮತ್ತು ಅದರ ಭೇದಗಳ ವಿಸ್ತಾರವಾದ ವಿವೇಚನೆ । ನವಮ ತರಂಗದಲ್ಲಿ, ಅನ್ನಪೂರ್ಣಾ ಮತ್ತು ಅದರ ಭೇದಗಳು, ತ್ರೈಲೋಕ್ಯಮೋಹನ ಗೌರಿ, ಜೇಷ್ಠಾಲಕ್ಷ್ಮಿ ಮತತು ಪ್ರತ್ಯಂಗಿರಾ ದೇವಿಯರ ಮಂತ್ರಗಳನ್ನು ವಿವೇಚಿಸಲಾಗಿದೆ.

**ಜೇಷ್ಠಾಲಕ್ಷ್ಮಿ ರತ್ರ ಮಂತ್ರಾ ಉಕ್ತಾ ಪ್ರತ್ಯಂಗಿರಾರಿಹಾ ।**
**ದಶಮೆ ಬಗಲಾವಕ್ತ್ರಾ ವಾರಾಹಿದ್ವಿತಯಂ ತಥಾ** ॥ 111 ॥

**ಶ್ರೀವಿದ್ಯೈಕಾದಶೆ ಪ್ರೋಕ್ತಾ ದ್ವಾದಶೆತು ತದಾವೃತಿಃ ।**
**ತ್ರಯೋದಶೆ ತು ಹನುಮಾನ್ನಿಸ್ತರಾತ್ ಪ್ರತಿಪಾದಿತಃ** ॥ 112 ॥

**ಚತುರ್ದಶೆ ನಾರಸಿಂಹೊ ಗೋಪಾಲೊ ಗರುಡೋಪಿ ಚ ।**
**ಅಥ ಪಂಚದಶೆ ಸೂರ್ಯೊಭೌಮೊ ಜೀವಃ ಸಿತೋಮುನಿಃ** ॥ 113 ॥

**ಷೋಡಶಾಮಾರ್ಣ ಮಹಾಮೃತ್ಯುಂಜಯೊ ರುದ್ರೋ ಧನೇಶ್ವರಃ ।**
**ಜಾಹ್ನವಿಮಣಿಕರ್ಣಿ ಚ ಪ್ರೋಕ್ತಾ ಸಪ್ತದಶೋರ್ಜುನಃ** ॥ 114 ॥

**ಅಷ್ಟಾದಶೆ ಕಾಲರಾತ್ರಿಶ್ಚಂಡಿಕಾಯಾ ನವಾಕ್ಷರಃ ।**
**ಏಕೋನವಿಂಶೆ ಚರಣಯುಧಃ ಶಾಸ್ತ್ರ ಸಮನ್ವಿತಃ** ॥ 115 ॥
**ಪಾರ್ಥಿವಾರ್ಚನಕೀನಾಶಚಿತ್ರಗುಪ್ತಾಸುರೀವಿಧಿಃ ।**

ದಶಮ ತರಂಗದಲ್ಲಿ ಬಗಲಾಮುಖಿ ಮತ್ತು ವಾರಾಹಿ ಮಂತ್ರಗಳು । ಏಕಾದಶ ತರಂಗದಲ್ಲಿ ಶ್ರೀವಿದ್ಯಾ ಮಂತ್ರ ಸಾಧನಾ । ದ್ವಾದಶ ತರಂಗದಲ್ಲಿ ಶ್ರೀ ವಿದ್ಯಾ ಆವರಣ ಪೂಜಾ ಕಥನ । ತ್ರಯೋದಶ ತರಂಗದಲ್ಲಿ ಶ್ರೀ ಹನುಮಾನ್ ಮಂತ್ರ ಸಾಧನೆ ಮತ್ತು ಪ್ರಯೋಗಗಳನ್ನು ವಿಸ್ತಾರವಾಗಿ ವಿವರಿಸಲಾಗಿದೆ. । ಚತುರ್ದಶ ತರಂಗದಲ್ಲಿ ಶ್ರೀ ನೃಸಿಂಹ, ಗೋಪಾಲ ಮತ್ತು ಗರುಡ ಮಂತ್ರ ಸಾಧನೆ । ಪಂಚದಶ ತರಂಗದಲ್ಲಿ ಸೂರ್ಯ, ಮಂಗಳ, ಗುರು, ಶುಕ್ರ, ಮತ್ತು ವೇದವ್ಯಾಸರ ಮಂತ್ರಗಳನ್ನು ಹೇಳಲಾಇದೆ.

ಷೋಡಶ ತರಂಗದಲ್ಲಿ ಮಹಾಮೃತ್ಯುಂಜಯ, ರುದ್ರ, ಗಂಗಾ ಮತ್ತು ಮಣಿಕರ್ಣಿಕಾ ಮಂತ್ರ ಸಾಧನೆ ಮತ್ತು ಪ್ರಯೋಗಗಳು । ಸಪ್ತದಶ ತರಂಗದಲ್ಲಿ





ಕಾರ್ತವೀರ್ಯಾರ್ಜುನ ಮಂತ್ರಗಳು, ದೀಪದಾನ ವಿಧಾನ ಇತ್ಯಾದಿ । ಅಷ್ಟಾದಶ ತರಂಗದಲ್ಲಿ ಕಾಲರಾತ್ರಿ ಮಂತ್ರ ಸಾಧನೆ, ನವಾರ್ಣ ಮಂತ್ರ, ಶತಚಂಡಿ ಮತ್ತು ಸಹಸ್ರಚಂಡಿ ವಿಧಾನಗಳು । ಏಕೋನವಿಂಶ ತರಂಗದಲ್ಲಿ ಚರಣಾಯುಧ ಮಂತ್ರ, ಶಾಸ್ತಾ ಮಂತ್ರ, ಪಾರ್ಥಿವ, ಅರ್ಚನ, ಧರ್ಮರಾಜ, ಚಿತ್ರಗುಪ್ತ, ಆಸುರಿ ದುರ್ಗಾ ಮಂತ್ರ ಸಾಧನಾ ವಿಧಿಗಳನ್ನು ಹೇಳಲಾಗಿದೆ.

**ವಿಂಶೆ ತರಂಗೆ ಯಂತ್ರಾಣಿ ಸ್ವರ್ಣಾಕರ್ಷಣಭೈರವಃ** ॥ 116 ॥
**ಸ್ನಾನಾದಿರಂತರ್ಯಾಗಾಂತ ಏಕವಿಂಶೋರ್ಚನಾವಿಧಿಃ ।**
**ದ್ವಾವಿಂಶೇರ್ಘ್ಯ ಸಮಾರಭ್ಯ ಪೂಜನಂ ತದ್ಧಿದಾ ಅಪಿ** ॥ 117 ॥
**ತ್ರಯೋವಿಂಶೆ ತು ದಮನೈಃ ಪವಿತ್ರೈಶ್ಚ ಸಮರ್ಚನಮ್ ।**
**ಚತುರ್ವಿಂಶೆ ಚ ಭೇದೇನ ಮಂತ್ರಾಣಾಂ ಪರಿಶೋಧನಮ್** ॥118 ॥
**ತರಂಗೆ ಚರಮೆ ಪ್ರೋಕ್ತಂ ಕರ್ಮಷಟ್ಕಮ ।**
**ಏವಂ ಮಂತ್ರೋದಧಾವಸ್ಮಿನ್ ಪಂಚವಿಂಶತಿರೂರ್ಮಯಃ** ॥ 119 ॥
**ವಿಶೋಧನೀಯಾ ವಿದ್ವದ್ಭಿಃ ಕ್ಷಂತವ್ಯ ಸಾಹಸಂ ಮಮ ।**
**ಚಾಪಲಂ ನಿಜಬಾಲಾನಾಂ ಕ್ಷಮತೆ ಜನಕೊ ಯಥಾ** ॥ 120 ॥

ಇಪ್ಪತ್ತನೆಯ ತರಂಗದಲ್ಲಿ ವಿವಿಧ ಯಂತ್ರಗಳು, ಸ್ವರ್ಣಾ ಕರ್ಷಣ ಭೈರವ ಉಪಾಸನಾ ವಿಧಾನ ಮತ್ತು ಅನೇಕ ಯಂತ್ರಗಳ ವರ್ಣನೆಯಿದೆ. । ಇಪ್ಪತ್ತೊಂದನೆಯ ತರಂಗದಲ್ಲಿ ಸ್ನಾನ, ಅಂತರ್ಯಾಗ ಮತ್ತು ನಿತ್ಯಕರ್ಮಗಳ ವಿಸ್ತಾರವಾದ ವಿವರಣೆಯಿರುತ್ತದೆ. । ಇಪ್ಪತ್ತೆರಡನೆಯ ತರಂಗದಲ್ಲಿ ಅರ್ಘ್ಯ ಸ್ಥಾಪನೆಯಿಂದ ಪೂಜೆಯವರೆಗೆ ಕೃತ್ಯ ಮತ್ತು ಪೂಜೆಯ ಭೇದಗಳನ್ನು ವಿವರಿಸಲಾಗಿದೆ. ।

ಇಪ್ಪತ್ಮೂರನೆಯ ತರಂಗದಲ್ಲಿ ದಮನಕ ಮತ್ತು ಪವಿತ್ರಕಗಳಿಂದ ಇಷ್ಟದೇವತೆಯ ಅರ್ಚನೆ ಇತ್ಯಾದಿ ವಿವರಗಳು । ಇಪ್ಪತ್ತಾಲ್ಕನೆಯ ತರಂಗದಲ್ಲಿ ಮಂತ್ರಶೋಧನ ವಿವಿಧ ವಿಧಾನಗಳನ್ನು ವಿವರವಾಗಿ ಉದಾಹರಣೆಗಳೊಂದಿಗೆ ಚರ್ಚಿಸಲಾಗಿದೆ. । ಇಪ್ಪತ್ತೈದನೆಯ ತರಂಗದಲ್ಲಿ ಶಾಂತಿ ಮುಂತಾದ ಷಟ್ಕರ್ಮಗಳ ಸಮಗ್ರ ವಿವರಗಳನ್ನು ಚರ್ಚಿಸಲಾಗಿದೆ ।

ಈ ಪ್ರಕಾರ ಮಂತ್ರ ಮಹೋದಧಿಯ ಇಪ್ಪತ್ತೈದು ತರಂಗ (ಅಧ್ಯಾಯ)ಗಳಲ್ಲಿ ಈ ಎಲ್ಲ ವಿಷಯಗಳನ್ನು ವರ್ಣಿಸಲಾಗಿದೆ.

ಅವಶ್ಯಕವೆನಿಸಿದಲ್ಲಿ ವಿಶೇಷಜ್ಞರು ಈ ವಿಷಯದಲ್ಲಿ ಸಂಶೋಧನೆ

ರಮ್ಯತಾರೋಗ್ಯಗಾಂಭೀರ್ಯಮಭಾವ ಕ್ರೋಧಲೋಭಯೋಃ ।
ಏವಮಾದೀನಿ ಚಿಹ್ನಾನಿ ಯದಾ ಪಶ್ಯತಿ ಮಂತ್ರವಿತ್ ॥ 99 ॥
ಸಿದ್ಧಿಂ ಮಂತ್ರಸ್ಯ ಜಾನಿಯಾದ್ ದೇವತಾಯಾಃ ಪ್ರಸನ್ನತಾಮ್ ।

ಮಾನಸಿಕ ಪ್ರಸನ್ನತೆ, ಆತ್ಮಸಂತೋಷ, ನಗಾರಿಯ ಧ್ವನಿ ಗೀತೆಯ ಧ್ವನಿ, ತಾಳಗಳ ಧ್ವನಿ, ಗಂಧರ್ವರ ದರ್ಶನ, ತನ್ನ ತೇಜಸ್ಸನ್ನು ಸೂರ್ಯನಿಗೆ ಸಮಾನವಾಗಿ ಹೋಲಿಸುವುದು. ನಿದ್ರಾ, ಕ್ಷುಧಾಗಳ ಪರಿವೆ ಇಲ್ಲದೆ ಜಪ ಮಾಡುವುದು. ಶರೀರದ ಸೌಂದರ್ಯದಲ್ಲಿ ವೃದ್ಧಿ, ಆರೋಗ್ಯ ವೃದ್ಧಿ, ಗಾಂಭೀರ್ಯ, ಕ್ರೋಧ ಮತ್ತು ಲೋಭಗಳ ವಿನಾಶ ಇತ್ಯಾದಿ ಚಿನ್ಹಗಳು ಸಾಧಕನಿಗೆ ಕಂಡು ಬಂದರೆ ಮಂತ್ರದ ಸಿದ್ಧಿ ಮತ್ತು ದೇವತೆಗಳು ಪ್ರಸನ್ನರಾಗಿರುವರೆಂದು ತಿಳಿಯಬೇಕು.

ತತೋ ಜಪೇಧಿಕಂ ಯತ್ನಂ ಪ್ರಕುರ್ಯಾಜ್ಞಾನಲಬ್ಧಯೆ ॥ 100 ॥

ಲಬ್ಧಜ್ಞಾನಃ ಕೃತಾರ್ಥಃ ಸ್ಯಾತ್ಸಂಸಾರಾತ್ತ್ರಿಮುಚ್ಯತೆ ।
ಜ್ಞಾತ್ವಾತ್ಮಾನಂ ಪರಂ ಬಹ್ಮವೇದಾಂತೈಃ ಪ್ರತಿಪಾದಿತಮ್ ॥ 101 ॥

ಮಂತ್ರಸಿದ್ಧಿಯನ್ನು ಪಡೆದುಕೊಂಡ ನಂತರ ಸಾಧಕರು ಜ್ಞಾನಪ್ರಾಪ್ತಿಗಾಗಿ ಜಪ ಸಂಖ್ಯೆಯನ್ನು ನಿರಂತರವಾಗಿ ವೃದ್ಧಿಸಲು ಪ್ರಯತ್ನಿಸಬೇಕು. ವೇದಾಂತ ಪ್ರತಿಪಾದಿತ ಬ್ರಹ್ಮ ಜ್ಞಾನವು ಪ್ರಾಪ್ತವಾದ ನಂತರ ಸಾಧಕನು ಕೃತಾರ್ಥನಾಗುತ್ತಾನೆ. ಮತ್ತು ಸಂಸಾರ ಬಂಧನದಿಂದ ಮುಕ್ತನಾಗುತ್ತಾನೆ

ಗ್ರಂಥ ಸಮಾಪ್ತಿ ಮಂಗಲಾಚರಣ

ತಂ ವಂದೆ ಪರಮಾತ್ಮಾನಂ ಸರ್ವವ್ಯಾಪಿನಮೀಶ್ವರಮ್ ।
ಯೊ ನಾನಾದೇವತಾರೂಪೋ ನೃಣಾಮಿಷ್ಟಂ ಪ್ರಯಚ್ಛತಿ ॥ 102 ॥

ವಿಲೋಕ್ಯ ನಾನಾತಂತ್ರಾಣಿ ಪ್ರಾರ್ಥಿತೊ ದ್ವಿಜಸತ್ತಮೈಃ ।
ಸ್ವಮತೇರನುಸಾರೇಣ ಕೃತೊ ಮಂತ್ರಮಹೋದಧಿಃ ॥ 103 ॥

ಅನೇಕ ದೇವತೆಗಳ ಸ್ವರೂಪವನ್ನು ಧರಿಸಿ ಮಾನವರ ಅಭೀಷ್ಟಗಳನ್ನು ನೆರವೇರಿಸುತ್ತಿರುವ ಸರ್ವವ್ಯಾಪಿ ಪರಮೇಶ್ವರನಿಗೆ ನಾನು ವಂದಿಸುತ್ತೇನೆ.

ಶ್ರೇಷ ಬ್ರಾಹ್ಮಣ ವಿದ್ವಾಂಸರು ಪ್ರಾರ್ಥನೆ ಮಾಡಿದ ಕಾರಣ ಅನೇಕ ತಂತ್ರ ಗ್ರಂಥಗಳನ್ನು ಅವಲೋಕನ ಮಾಡಿ ತನ್ನ ಬುದ್ಧಿಗೆ ಅನುಸಾರವಾಗಿ ನಾನು ಈ "ಮಂತ್ರ ಮಹೋದಧಿ' ಗ್ರಂಥವನ್ನು ರಚಿಸಿರುತ್ತೇನೆ ಎಂದು ಗ್ರಂಥಕಾರರು ಗ್ರಂಥ ರಚನೆಯ ಉದ್ದೇಶವನ್ನು ವಿವರಿಸುತ್ತಾರೆ.





ತರಂಗಾನುಕ್ರಮ ಕಥನ

ಬಾಣನೇತ್ರಮಿತಾಸ್ತಸ್ಮಿಂಸ್ತರಂಗಾಃ ಸಂತಿ ನಿರ್ಮಿತಾಃ ।
ತತ್ತಾನುಕ್ರಮಣಿಂ ವಕ್ಷೆ ಮಂತ್ರಿನಾಂ ಸುಖವೃದ್ಧಯೆ ॥ 104 ॥

ಭೂತಶುದ್ಧಿಸ್ತಥಾ ಪ್ರಾಣಪ್ರತಿಷ್ಠಾನ್ಯಸನಂ ಲಿಪೆಃ ।
ಪುರಶ್ಚರ್ಯಾಹೋಮವಿಧಿಸ್ತರ್ಪಣಾಧ್ಯಾದ್ಯ ಈರಿತಮ್ ॥ 105 ॥

ದ್ವಿತಿಯೋರ್ಮಾ ಗಣೇಶಸ್ಯ ಮಂತ್ರಾಃ ಸಮ್ಯಕ್ಸಮೀರಿತಾಃ ।
ಕಾಲಿಕಾಲ್ಯಭಿಧಾನಾನಾಂ ಸುಮುಖ್ಯಾಶ್ಚ ತೃತಿಯಕೆ ॥ 106 ॥

ತಾರಾತುರೀಯೆ ಸಂಪ್ರೋಕ್ತಾ ತಾರಾಭೇದಾಸ್ತು ಪಂಚಮಿ ।
ಷಷ್ಟೆ ತರಂಗೆ ಗದಿತಾ ಛಿನ್ನಮಸ್ತಾಶಬರ್ಯ ಪಿ ॥ 107 ॥

ಸ್ವಯಂವರಾ ಮಧುಮತಿ ಪ್ರಮದಾ ಚ ಪ್ರಮೋದಯಾ ।
ಬಂದೀಬಂಧನಹಾರೀತಿ ಸಪ್ತಮೆ ಪಟಯಕ್ಷಿಣಿ ॥ 108 ॥

ತಸ್ಯಾ ಭೇದಾಶ್ಚ ವಾರಾಹಿ ಜ್ಯೇಷ್ಠಾ ಕರ್ಣಪಿಶಾಚಿನಿ ।
ಸ್ವಪ್ನೇಶ್ವರಿ ಚ ಮಾತಂಗಿ ಬಾಣೇಶಿ ಮದನೇಶ್ವರಿ ॥ 109 ॥

ಅಷ್ಟಮೆ ವಿಸ್ತರಾತ್ಪ್ರೋಕ್ತಾ ಬಾಲಾ ಬಾಲಾಭಿದಾ ಅಪಿ ।
ನವಮೆ ತ್ವನ್ನಪೂರ್ಣೋಕ್ತಾಂ ತದ್ಭೇದಾಮೋಹನಾದ್ರಿಜಾ ॥ 110 ॥

ಈಗ ಮಂತ್ರ ಮಹೋದಧಿಯ ಅನುಕ್ರಮಣಿಕೆಯನ್ನು ಹೇಳಲಾಗುತ್ತದೆ. ಈ ಮಂತ್ರ ಮಹೋದಧಿಯಲ್ಲಿ ಇಪ್ಪತ್ತೈದು ತರಂಗಗಳಿರುತ್ತವೆ. ಮಾಂತ್ರಿಕರ ಅನುಕೂಲಾರ್ಥ ಅವುಗಳ ಅನುಕ್ರಮಣಿಕೆಯನ್ನು ಹೇಳಲಾಗುತ್ತದೆ.

ಪ್ರಥಮ ತರಂಗದಲ್ಲಿ ಭೂತಶುದ್ಧಿ, ಪ್ರಾಣಪ್ರತಿಷ್ಠಾ, ಮಾತೃಕಾನ್ಯಾಸ, ಪುರಶ್ಚರಣ ಮತ್ತು ಹೋಮವಿಧಿ, ತರ್ಪಣ ವಿಷಯಗಳು । ದ್ವಿತಿಯ ತರಂಗದಲ್ಲಿ ಶ್ರೀ ಗಣೇಶನ ವಿವಿಧ ಮಂತ್ರಗಳು ಮತ್ತು ಅದರ ಸಿದ್ಧಿಯ ಪ್ರಕಾರಗಳು । ತೃತಿಯ ತರಂಗದಲ್ಲಿ ಕಾಲಿ ಮತ್ತು ಕಾಲಿನಾಮದಿಂದ ಕರೆಯಲ್ಪಡುವ ದಕ್ಷಿಣ ಕಾಲಿ ಮುಂತಾದವರ ಅನೇಕ ಮಂತ್ರ ಮತ್ತು ಸುಮುಖಿ ಮಂತ್ರ ಪ್ರತಿಪಾದನ ಮತ್ತು ಕಾಮ್ಯ ಪ್ರಯೋಗ । ಚತುರ್ಥ ತರಂಗದಲ್ಲಿ ತಾರಾ ಉಪಾಸನಾ ಮತ್ತು ಪಂಚಮ ತರಂಗದಲ್ಲಿ ತಾರಾಳ ಭೇದಗಳನ್ನು ಹೇಳಲಾಗಿದೆ.

ಷಷ್ಟಮ ತರಂಗದಲ್ಲಿ ಛಿನ್ನಮಸ್ತಾ, ಶಬರಿ, ಸ್ವಯಂವರಾ, ಮಧುಮತಿ, ಪ್ರಮದಾ, ಪ್ರಮೋದಾ, ಬಂಧನದಿಂದ ಮುಕ್ತಿ ನೀಡುವ ಬಂದಿ ಇತ್ಯಾದಿ ದೇವತೆಗಳ ಮಂತ್ರಗಳು

ಅತ್ಯಂತ ಶುದ್ಧವಾದ ಕುಲದಲ್ಲಿ ಉತ್ಪನ್ನವಾದ, ಸಾಂಗವೇದ ವಿದ್ವಾಂಸರಾದ, ಪವಿತ್ರ ನಿರ್ಮಲ ಅಂತಃಕರಣವುಳ್ಳವರು, ಸದಾಚಾರ ಪರಾಯಣರು ಆದ ಬ್ರಾಹ್ಮಣರನ್ನು ವಿವಿಧ ಪ್ರಕಾರದ ಮನೋಹರ ಭೋಜ್ಯ ಪದಾರ್ಥಗಳಿಂದ ಭೋಜನ ಮಾಡಿಸಬೇಕು. ಅವರನ್ನು ದೇವತಾ ಸ್ವರೂಪವೆಂದು ಭಾವಿಸಿ ಪೂಜೆ ಮಾಡಬೇಕು. ಅವರಿಗೆ ಪುನಃ ಪುನಃ ನಮಸ್ಕರಿಸಬೇಕು. ಮಧುರವಾದ ವಾಣಿಯಿಂದ ಮತ್ತು ಸುವರ್ಣಾದಿಗಳನ್ನು ದಾನ ಮಾಡುತ್ತ ಅವರನ್ನು ಸಂತುಷ್ಟಗೊಳಿಸಬೇಕು.

ಈ ಪ್ರಕಾರ ಬ್ರಾಹ್ಮಣರ ಮೂಲಕ ಕೊಡಲಾಗುವ ಆಶೀರ್ವಾದ ಪ್ರಾಪ್ತಿಯಿಂದ ಸಾಧಕರ ಸಮಸ್ತ ಅಭಿಚಾರಾದಿ ಪಾಪಗಳು ನಷ್ಟವಾಗುತ್ತವೆ ಮತ್ತು ಅವರಿಗೆ ಮನೋಭಿಲಾಷಿತ ವಸ್ತುಗಳ ಪ್ರಾಪ್ತಿಯಾಗುತ್ತದೆ.

### ಲೇಖನ ದ್ರವ್ಯಗಳು

ಚಂದನಂ ರೋಚನಾರಾತ್ರಿರ್ಗೃಹಧೂಮಶ್ಚಿತಾಭವಃ ॥ 55 ॥

ಅಂಗಾರೋಷ್ಟವಿಷಾಣೀತಿ ಶಾಂತ್ಯಾದೌ ಯಂತ್ರಲೇಖನಿ ।
ಪೂರ್ವೋಕ್ತಂ ಲೇಖನದ್ರವ್ಯಂ ಗೃಹ್ಣಿಯಾತ್ತದಪಿ ಧ್ರುವಮ್ ॥ 56 ॥
ಪಿಪ್ಪಲಿಮರೀಚಂ ಶುಂಠಿ ಶ್ಯೇನವಿಷ್ಠಾ ಚ ಚಿತ್ರಕಃ ।
ಗೃಹಧೂಮೋಂತ್ರರಸೋ ಲವಣಂ ಚ ವಿಷಾಷ್ಟಕಮ್ ॥ 57 ॥

ಚಂದನ, ಗೋರೋಚನ, ಅರಿಷಣ, ಗೃಹಧೂಮ, ಚಿತೆಯ ಬೂದಿ ಮತ್ತು ವಿಷಾಷ್ಟಕಗಳನ್ನು ಯಂತ್ರ ಲೇಖನದ ದ್ರವ್ಯಗಳೆಂದು ಕರೆಯಲಾಗುತ್ತದೆ. ಯಂತ್ರ (20) ತರಂಗದಲ್ಲಿ ವಿವರಿಸಿದ ದ್ರವ್ಯಗಳನ್ನು ಆಯಾ ಕಾಮನೆಗಳ ಪ್ರಯೋಗದಲ್ಲಿ ಲೇಖನ ದ್ರವ್ಯಗಳ ಹೇಳಲಾಗಿದ್ದು ಅವು ಕೂಡಾ ಗ್ರಾಹ್ಯವಾಗಿವೆ. ಹಿಪ್ಪಲಿ, ಮೆಣಸು, ಶುಂಠಿ, ಬಾಜಪಕ್ಷಿಯ ಮಲ, ಚಿತ್ರಕ, ಗೃಹಧೂಮ,ಧತ್ತೂರದ ರಸ, ಲವಣ ಇವುಗಳನ್ನು ವಿಷಾಷ್ಟಕಗಳೆಂದು ಕರೆಯಲಾಗಿದೆ.

ಶಾಂತೌವಶ್ಯೆ ಲಿಖೇದ್ ಭೂರ್ಜೆ ಸ್ತಂಭನೆ ದ್ವೀಪಿಚರ್ಮಣಿ ।
ಖರಚರ್ಮಾಣಿ ವಿದ್ವೇಷೆ ಉಚ್ಚಾಟೆ ಧ್ವಜ ವಾಸಸಿ ॥ 58 ॥
ನರಾಸ್ಥಿನಿ ಲಿಖೇಧ್ಯಂತ್ರಂ ಮಾರಣೆ ಮಂತ್ರವಿತ್ತಮಃ ।
ಯೆ ತ್ವಾಧಾರಾಃ ಸ್ಮೃತಾ ಯಂತ್ರತರಂಗೆ ತೇಪಿ ಸಮ್ಮತಾಃ ॥ 59 ॥





ಶಾಂತಿ ಮತ್ತು ವಶ್ಯ ಕರ್ಮಗಳಲ್ಲಿ ಭೋಜ ಪತ್ರದ ಮೇಲೆ, ಸ್ತಂಭನದಲ್ಲಿ ಹುಲಿಯ ಚರ್ಮದ ಮೇಲೆ, ವಿದ್ವೇಷಣದಲ್ಲಿ ಕತ್ತೆಯ ಚರ್ಮದ ಮೇಲೆ, ಉಚ್ಚಾಟನದಲ್ಲಿ ಧ್ವಜ ವಸ್ತ್ರದ ಮೇಲೆ ಮತ್ತು ಮಾರಣದಲ್ಲಿ ಮಾನವನ ಅಸ್ಥಿಯ ಮೇಲೆ ಮಂತ್ರಗಳನ್ನು ಬರೆಯಬೇಕು. ಯಂತ್ರ (20) ತರಂಗದಲ್ಲಿ ವಿವಿಧ ಪ್ರಯೋಗಗಳಲ್ಲಿ ಯಂತ್ರಗಳನ್ನು ಬರೆಯಲು ಯಾವ ಯಾವ ಆಧಾರಗಳನ್ನು ಹೇಳಲಾಗಿದೆಯೊ ಅವು ಕೂಡಾ ಯಂತ್ರಾಧಾರದಲ್ಲಿ ಗ್ರಾಹ್ಯವಾಗಿವೆ.

### ಕುಂಡ ಕಥನ

ವೃತ್ತಂ ಪದ್ಮಂ ಚತುಷ್ಕೋಣಂ ತ್ರಿಷಟ್ಕೋಣಂ ದಲೇಂದುವತ್ ।
ತೋಯೇಶಸೋಮಶಕ್ರಾಣಾಂ ಯಾತು ವಾಯ್ವೋರ್ಯಮಸ್ಯ ಚ ॥ 60॥

ಆಶಾಸು ಕ್ರಮತಃ ಕುಂಡಂ ಶಾಂತಿಮುಖ್ಯೇಷು ಕರ್ಮಸು ।
ಸೌವರ್ಣೌ ಯಜ್ಞವೃಕ್ಷೋತ್ಥೌ ಸ್ರುಕ್ಸ್ರುವೌ ಶಾಂತಿವಶ್ಯಯೋಃ ॥ 61 ॥
ಸ್ತಂಭನಾದಿಷು ಕಾರ್ಯೇಷು ಸ್ಮೃತಾ ಲೋಹಮಯಾ ಹಿ ತೌ ।

ಶಾಂತಿ ಆದಿ ಷಟ್ಕರ್ಮಗಳಲ್ಲಿ ಕ್ರಮವಾಗಿ ವೃತ್ತಾಕಾರ, ಪದ್ಮಾಕಾರ, ಚೌಕೋನ, ತ್ರಿಕೋನ, ಷಟ್ಕೋನ ಮತ್ತು ಅರ್ಧಚಂದ್ರಾಕಾರಗಳ ಕುಂಡಗಳನ್ನು ನಿರ್ಮಾಣ ಮಾಡಿ ಪಶ್ಚಿಮ ಉತ್ತರ–ಪೂರ್ವ, ನೈರುತ್ಯ, ವಾಯುವ್ಯ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಕರ್ಮಗಳನ್ನು ಮಾಡಬೇಕು.

ಶಾಂತಿಯಲ್ಲಿ ಸುವರ್ಣ ಮತ್ತು ವಶ್ಯದಲ್ಲಿ ಯಜ್ಞವೃಕ್ಷ (ಆಲ)ದ ಸ್ರುವಾ ಮತ್ತು ಸ್ರುಚಿ ತಯಾರಿಸಬೇಕು. ಶೇಷ ಸ್ತಂಭನಾದಿ ಕಾರ್ಯಗಳಲ್ಲಿ ಲೋಹದ ಸ್ರುವಾ ಮತ್ತು ಸ್ರುಚಿ ತಯಾರಿಸಬೇಕು.

### ಲೇಖನಿ ಪ್ರಕಾರಗಳು

ಹೇಮಜ ರೂಪ್ಯಜಾ ಜಾತಿ ಸಂಭವಾ ಲೇಖನಿ ಶುಭೆ ॥ 62 ॥

ವಶ್ಯೆ ದುರ್ವಾಂಕುರೋತ್ಪನ್ನಾಸ್ತಂಬನೆಗಸ್ತ್ಯವೃಕ್ಷಜಾ ।
ರಾಜವೃಕ್ಷಭವಾ ವಾ ಸ್ಯಾದ್ವಿದ್ವೇಷೆ ತು ಕರೆಂಜಜಾ ॥ 63 ॥

ಶುಭೆ ಕರ್ಮಣಿ ರಮ್ಯಾಹೆ ಲೇಖನಿಂ ರಚಯೇತ್ಸುಧಿಃ ।
ಬಿಭೀತಕೋತ್ಥಿತೋಚ್ಚಾಟೆ ಮಾರಣೆ ತು ಮಮಸ್ಥಿಜಾ ॥ 64 ॥
ರಿಕ್ತಾತಿಥೌ ಕುಜದಿನೆ ವಿಷ್ಟೌ ತಾಮಶುಭೆ ಪುನಃ ।

ಶಾಂತಿ ಕರ್ಮಗಳಲ್ಲಿ ಬಂಗಾರ, ಬೆಳ್ಳಿ ಅಥವಾ ಮಲ್ಲಿಗೆಯ, ವಶ್ಯ ಕರ್ಮಗಳಲ್ಲಿ

ದೂರ್ವಾ (ದರ್ಭೆ), ಸ್ತಂಭನದಲ್ಲಿ ಅಗಸ್ತ್ಯ ಅಥವಾ ಅಮಲತಾಸ ವೃಕ್ಷದ, ವಿದ್ವೇಷಣದಲ್ಲಿ ಹೊಂಗೆಮರದ, ಉಚ್ಚಾಟನದಲ್ಲಿ ತಾರೆಗಿಡದ ಮತ್ತು ಮಾರಣದಲ್ಲಿ ಮಾನವ ಅಸ್ಥಿಯ ಲೇಖನಿಗಳಿಂದ ಯಂತ್ರವನ್ನು ಬರೆಯಬೇಕು. ಶುಭ ಕರ್ಮಗಳಲ್ಲಿ ಶುಭ ಮಹೂರ್ತದಲ್ಲಿ, ಅಶುಭ ಕಾರ್ಯಗಳಲ್ಲಿ ಚತುರ್ಥಿ, ನವಮಿ, ಚತುರ್ದಶಿ ಇತ್ಯಾದಿ ರಿಕ್ತ ತಿಥಿಗಳಲ್ಲಿ ಮಂಗಳವಾರದ ದಿನ ಮತ್ತು ವಿಷ್ಟಿ (ಭದ್ರಾ) ಯಲ್ಲಿ ಲೇಖನಿಗಳನ್ನು ತಯಾರಿಸಬೇಕು.

### ಭಕ್ಷ ಪದಾರ್ಥ ಮತ್ತು ತರ್ಪಣ ದ್ರವ್ಯಗಳು

ಭಕ್ಷ್ಯಂ ಚ ತರ್ಪಣಂ ದ್ರವ್ಯಂ ತತ್ರಾತ್ರಮಥ ಕೀರ್ತ್ಯತೆ ॥ 65 ॥

ಶಂತೌ ವಶ್ಯೆ ಹವಿಷಾನ್ನಂ ಸ್ತಂಭನೆ ಪರಮಾನ್ನಕಮ್ ।
ಮಾಷಾಮುದ್ಗಾಶ್ಚ ವಿದ್ವೇಷೆ ಗೋಧೂಮಾಭ್ರಂಶನೆ ಸ್ಥಲಾತ್ ॥ 66 ॥

ಮಸೂರಾನ್ನಂ ತಥಾ ಶ್ಯಾಮಾಅಜಾದುಗ್ಧೋತ್ಥಪಾಯಸಮ್ ।
ಮಾರಣೇ ಪ್ರೋದಿತಂ ಭಕ್ಷಂ ಮಂತ್ರಿಣಾಂ ಕರ್ಮಕುರ್ವತಾಮ್ ॥ 67॥

ಶಾಂತಿ ಮತ್ತು ವಶ್ಯ ಕರ್ಮಗಳನ್ನು ಮಾಡುವಾಗ ಹವಿಷ್ಯಾನ್ನ, ಸ್ತಂಭನ ಮಾಡುವ ಸಮಯದಲ್ಲಿ ಪಾಯಸ, ವಿದ್ವೇಷಣ ಮಾಡುವಾಗ ಉದ್ದು ಮತ್ತು ಹೆಸರು, ಉಚ್ಚಾಟನ ಮಾಡುವ ಸಮಯದಲ್ಲಿ ಗೋದಿ ಮತ್ತು ಮಾರಣ ಮಾಡುವಾಗ ಮಾಂತ್ರಿಕರು ಚನ್ನಂಗಿ ಬೇಳೆ ಮತ್ತು ಕಪ್ಪು ಆಡಿನ ಹಾಲಿನಿಂದ ತಯಾರಿಸಿದ ಖೀರನ್ನು ಸೇವಿಸಬೇಕು.

ಶಾಂತೌ ವಶ್ಯೆ ಹರಿದ್ರಾಕ್ತಂ ಜಲಂ ತರ್ಪಣ ಈರಿತಮ್ ।
ಮರೀಚಾಢ್ಯಂ ಕವೋಷ್ಣಂ ತತ್ಸ್ತಂಬನೆ ಮಾರಣೆ ತಥಾ ॥ 68 ॥

ಮೇಷರಕ್ತಾನ್ವಿತಂ ತೋಯಂ ವಿದ್ವೇಷೋಚ್ಚಾಟಯೋರ್ಮತಮ್ ।
ಸ್ವರ್ಣಪಾತ್ರಂ ತರ್ಪಣೇಸ್ಯಾಚ್ಛಾಂತ್ ವಶ್ಯೆ ಚ ಕರ್ಮಣಿ ॥ 69 ॥

ಸ್ತಂಭನೆ ಮೃತ್ತಿಕಾಪಾತ್ರಂ ವಿದ್ವೇಷೆ ಖದಿರೋದ್ಭವಮ್ ।
ಲೋಹನಿರ್ಮಿತಮುಚ್ಚಾಟೆ ಕಕ್ಕುಡಾಂಡ ತು ಮಾರಣೆ ॥ 70 ॥

ಶಾಂತಿ ಕರ್ಮ ಮತ್ತು ವಶ್ಯ ಕರ್ಮಗಳಲ್ಲಿ ಅರಿಷಿಣ ಮಿಶ್ರಿತ ಜಲ, ಸ್ತಂಭನ ಮತ್ತು ಮಾರಣ ಕರ್ಮಗಳಲ್ಲಿ ಮೆಣಸಿನ ಪುಡಿ ಮಿಶ್ರಿತ ಬೆಚ್ಚಗಿನ ನೀರು ಮತ್ತು ವಿದ್ವೇಷಣ ಮತ್ತು ಉಚ್ಚಾಟನದಲ್ಲಿ ಕುರಿಯ ರಕ್ತ ಮಿಶ್ರಿತ ನೀರು ತರ್ಪಣ ದ್ರವ್ಯಗಳೆಂದು ಹೇಳಲಾಗಿದೆ.





ಶಾಂತಿ ಮತ್ತು ವಶ್ಯ ಕರ್ಮಗಳಲ್ಲಿ ಬಂಗಾರದ ಪಾತ್ರೆಯಲ್ಲಿ, ಸ್ತಂಭನದಲ್ಲಿ ಮಣ್ಣಿನ ಪಾತ್ರೆ, ವಿದ್ವೇಷಣದಲ್ಲಿ ಕಾಚಿನ ಗಿಡದ ಕಟ್ಟಿಗೆ ಪಾತ್ರೆಯಲ್ಲಿ ಉಚ್ಚಾಟನದಲ್ಲಿ ಲೋಹದ ಪಾತ್ರೆಯಲ್ಲಿ ಮತ್ತು ಮಾರಣ ಕರ್ಮದಲ್ಲಿ ಕೋಳಿಯ ತತ್ತಿಯಲ್ಲಿ ತರ್ಪಣ ಕೊಡಬೇಕು.

ಮೃದ್ವಾಸನೆ ಸಮಾಸೀನಃ ಶಾಂತೌ ವಶ್ಯೆ ಪ್ರತರ್ಪಯೇತ್ ।
ಜಾನುಭ್ಯಾಮುತ್ಥಿತಃ ಸ್ತಂಭೆ ದ್ವೇಷಾದಾವೇಕಪಾತ್ಸ್ಥಿತಃ ॥ 71 ॥

ಷಟ್‌ಕರ್ಮಣಾಂ ವಿಧಿಃ ಪ್ರೋಕ್ತ ಏವಂ ಮಂತ್ರಜ್ಞತುಷ್ಟಯೆ ।
ಸಮ್ಯಕೃತ್ವಾ ನ್ಯಾಸಜಾತಮಾತ್ಮರಕ್ಷಾಂ ವಿಧಾಯ ಚ ॥ 72 ॥

ಶಾಂತಿ ಮತ್ತು ವಶ್ಯ ಕರ್ಮಗಳಲ್ಲಿ ಮೃದು ಆಸನದಲ್ಲಿ ತರ್ಪಣ ಮಾಡಬೇಕು. ಸ್ತಂಭನದಲ್ಲಿ ಮೊಳಕಾಲೂರಿ ಕುಳಿತುಕೊಂಡು, ಮತ್ತು ವಿದ್ವೇಷಣ ಆದಿಗಳಲ್ಲಿ ಒಂದೇ ಕಾಲಿನ ಮೇಲೆ ನಿಂತುಕೊಂಡು ತರ್ಪಣ ಮಾಡಬೇಕು.

ಮಂತ್ರ ಸಾಧಕರ ಸಂತೋಷಕ್ಕಾಗಿ ಷಟ್ಕರ್ಮಗಳ ವಿಧಾನವನ್ನು ವಿವರಿಸಲಾಗಿದೆ. ಪ್ರಾರಂಭದಲ್ಲಿ ವಿಧಿ ಪೂರ್ವಕವಾಗಿ ನ್ಯಾಸ ಮಾಡುವುದರ ಮೂಲಕ ಆತ್ಮರಕ್ಷಣೆಯನ್ನು ಮಾಡಿಕೊಂಡ ನಂತರ ಮಾತ್ರ ಕಾಮ್ಯ ಕರ್ಮಗಳ ಅನುಷ್ಠಾನ ಮಾಡಬೇಕು. ಅನ್ಯಥಾ ಹಾನಿ ಮತ್ತು ಅಸಫಲತೆಯನ್ನು ಎದುರಿಸಬೇಕಾಗುತ್ತದೆ.

### ಕಾಮ್ಯ ಕರ್ಮ ಕಥನ

ಕಾಮ್ಯಂ ಕರ್ಮಪ್ರಕರ್ತವ್ಯಮನ್ಯಥಾಭಿಭವೋ ಭವೇತ್ ।
ಶುಭಂ ವಾಪ್ಯಶುಭಂ ವಾಪಿ ಕಾಮ್ಯಂ ಕರ್ಮ ಕರೋತಿಯಃ ॥ 73 ॥

ತಸ್ಯಾರಿತ್ವಂ ವ್ರಜೇನ್ಮಂತ್ರೋ ನತಸ್ಮಾತ್ತತ್ಪರೋ ಭವೇತ್ ।
ವಿಷಯಾಸಕ್ತಚಿತ್ತಾನಾಂ ಸಂತೋಷಾಯ ಪ್ರಕಾಶಿತಮ್ ॥ 74 ॥

ಪೂರ್ವಾಚಾರ್ಯೋದಿತಂ ಕಾಮ್ಯಂ ಕರ್ಮನೈತಾದ್ಧಿತಾವಹಮ್ ।
ಕಾಮ್ಯ ಕರ್ಮಪ್ರಸಕ್ತಾನಾಂ ತಾವನ್ಮಾಯ್ರಂ ಭವೇತ್ಫಲಮ್ ॥ 75 ॥

ಯಾವ ವ್ಯಕ್ತಿಗಳು ಶುಭ ಅಥವಾ ಅಶುಭ ಯಾವುದೇ ಪ್ರಕಾರದ ಕಾಮ್ಯ ಕರ್ಮವನ್ನು ಮಾಡುತ್ತಾನೆಯೊ ಮಂತ್ರವು ಅವನ ಶತ್ರುವಾಗುತ್ತದೆ. ಕಾರಣ ಕಾಮ್ಯ ಕರ್ಮಮಾಡದಿರುವುದೇ ಉತ್ತಮವು.

ಕಾಮ್ಯ ಕರ್ಮವನ್ನು ಮಾಡುವುದು ನಿಷಿದ್ಧವಾಗಿದ್ದರೆ ಇಂತಹ ವಿಶಾಲವಾದ, ವಿಸ್ತಾರವಾದ ಗ್ರಂಥದ ರಚನೆಯು ಅವಶ್ಯಕವಾಗಿತ್ತೆ? ವಿಷಯಾಸಕ್ತ ಚಿತ್ತವೃತ್ತಿಯ ಜನರಿಗಾಗಿ ಪ್ರಾಚೀನ ಆಚಾರ್ಯರು ಕಾಮ್ಯ ಕರ್ಮಗಳ ವಿಧಾನವನ್ನು ಪ್ರತಿಪಾದಿಸಿರುತ್ತಾರೆ. ಆದರೆ ಇದು ಹಿತಕರವಾಗಿರುವುದಿಲ್ಲ. ಕಾಮ್ಯ ಕರ್ಮ ಪ್ರಯೋಗ ಮಾಡಿದವರಿಗೆ ಕೇವಲ ಕಾಮನಾ ಸಿದ್ಧಿ ಮಾತ್ರ ಫಲಗಳು ದೊರೆಯುತ್ತವೆ.

ನಿಷ್ಕಾಮಂ ಭಜತಾಂ ದೇವಮಖಿಲಾಭಿಷ್ಟಸಿದ್ಧಯಃ ।
ಪ್ರತಿಮಂತ್ರಂ ಸಮುದಿತಾ ಯೆ ಪ್ರಯೋಗಾಃ ಸುಖಾಪ್ತಯೆ ।
ತದಾಶಕ್ತಿ ವಿಹಾಯ್ಯೆವ ನಿಷ್ಕಾಮೊ ದೇವತಾಂ ಭಜೇತ್ ॥ 76 ॥

ಆದರೆ ನಿಷ್ಕಾಮ ಭಾವದಿಂದ ದೇವತೆಗಳ ಉಪಾಸನೆಯನ್ನು ಮಾಡುವವರಿಗೆ ಸಕಲ ಸಿದ್ಧಿಗಳು ಅನಾಯಾಸವಾಗಿ ಪ್ರಾಪ್ತವಾಗುತ್ತವೆ. ಕೇವಲ ಸುಖಪ್ರಾಪ್ತಿಗಾಗಿ ಪ್ರತ್ಯೇಕ ಮಂತ್ರಗಳ ಪ್ರಯೋಗಗಳನ್ನು ಹೇಳಲಾಗಿದ್ದು ಅವುಗಳಲ್ಲಿ ಆಸಕ್ತಿಯನ್ನು ತ್ಯಜಿಸಿ ನಿಷ್ಕಾಮಭಾವದಿಂದ ದೇವತೆಗಳ ಪೂಜೆ ಮಾಡಬೇಕು.

ವೇದೆ ಕಾಂಡತ್ರಯಂ ಪ್ರೋಕ್ತಂ ಕರ್ಮೋಪಾಸನಬೋಧನಮ್ ।
ಸಾಧನಂ ಕಾಂಡಯುಗ್ಮೋಕ್ತಂ ತೃತಿಯೆ ಸಾಧ್ಯಮೀರಿತಮ್ ॥ 77 ॥

ತಸ್ಮಾದ್ವೇದೋದಿತಂ ಕುರ್ಯಾದುಪಾಸೀತ ಚ ದೇವತಾಃ ।
ಶುದ್ಧಾಂತಃ ಕರಣಸ್ತೇನ ಲಭತೆ ಜ್ಞಾನಮುತ್ತಮಮ್ ॥ 78 ॥

ಕಾರ್ಯಕಾರಣಸಂಪಾತಂ ಪ್ರವಿಷ್ಟಶ್ಚೇತನಾತ್ಮಕಃ ।
ಜೀವೋ ಬ್ರಹ್ಮೈವ ಸಂಪೂರ್ಣಮಿತಿ ಜ್ಞಾತ್ವಾ ವಿಮುಚ್ಯತೆ ॥ 79 ॥

ಮನುಷ್ಯ ದೇಹಂ ಸಂಪ್ರಾಪ್ಯ ಉಪಾಸೀತ ಚ ದೇವತಾಃ ।
ಯೋ ನ ಮುಚ್ಯೇತ ಸಂಸಾರಾನ್ಮಹಾಪಾಪಯುತೊ ಹಿ ಸಃ ॥ 80 ॥

ಆತ್ಮಜ್ಞಾನಾಪ್ತಯೆ ತಸ್ಮಾದ್ಯತಿತವ್ಯಂ ನರೋತ್ತಮೈಃ ।
ಕರ್ಮಭಿರ್ದೇವಸೇವಾಭಿಃ ಕಾಮಾದ್ಯರಿಗಣಕ್ಷಯಾತ್ ॥ 81 ॥

ವೇದಗಳಲ್ಲಿ ಕರ್ಮಕಾಂಡ, ಉಪಾಸನಾ ಮತ್ತು ಜ್ಞಾನ ಇವು ಮೂರು ಕಾಂಡಗಳನ್ನು ಹೇಳಲಾಗಿದೆ. 'ಜ್ಯೋತಿಷ್ಟೋಮೇನ ಯಜೇತ್' ಇದು ಕರ್ಮಕಾಂಡ. 'ಸೂರ್ಯೋ ಬ್ರಹ್ಮೋತ್ಯುಪಾಸೀತ' ಇದು ಉಪಾಸನಾ ಕಾಂಡ ಇವು ಎರಡೂ ಕಾಂಡಗಳು ಜ್ಞಾನದ ಸಾಧನಗಳಾಗಿದ್ದು 'ಅಯಮಾತ್ಮಾ ಬ್ರಹ್ಮ' ಇದು ಜ್ಞಾನವಾಗಿದ್ದು ಇದು ಸ್ವಯಂ ಸಾಧ್ಯವಾಗಿದೆ. ಮೊದಲೆರಡು ಕಾಂಡಗಳ ಫಲವೇ





ಜ್ಞಾನವಾಗಿದೆ. ಕಾರಣ ಜ್ಞಾನ ಪ್ರಾಪ್ತಿಗಾಗಿ ವೇದೋದಿತ ಕರ್ಮ ಮತ್ತು ಉಪಾಸನ ಎರಡನ್ನು ವೇದೋಕ್ತ ಮಾರ್ಗಾನುಸಾರವಾಗಿಯೇ ಪ್ರವೃತ್ತರಾಗಬೇಕು. ದೇವತೆಗಳ ಉಪಾಸನೆಯಿಂದ ಅಂತಃಕರಣ ಶುದ್ಧಿಯಾಗುತ್ತದೆ. ಮತ್ತು ಅದರಿಂದ ಉತ್ತಮ ಜ್ಞಾನವು ಪ್ರಾಪ್ತಿಯಾಗುತ್ತದೆ. ಕಾರ್ಯ ಕಾರಣಗಳ ಸಂಘಾತ ಈ ಶರೀರದಲ್ಲಿ ಸ್ಥಿತವಾಗಿರುವ ಜೀವವೇ ಪರಬ್ರಹ್ಮವಾಗಿದೆ. ಈ ಜ್ಞಾನವನ್ನು ಪಡೆಯುವ ಸಾಧಕನು ಮುಕ್ತನಾಗುತ್ತಾನೆ. ಕಾರಣ ಮಾನವ ಶರೀರಧಾರಿಗಳು ದೇವತೆಗಳ ಉಪಾಸನೆಯಿಂದ ಮುಕ್ತಿಯನ್ನು ಪಡೆದುಕೊಳ್ಳಬೇಕು. ಯಾರು ಮಾನವ ದೇಹವನ್ನು ಪಡೆದು ಸಂಸಾರ ಬಂಧನದಿಂದ ಮುಕ್ತರಾಗಲು ಪ್ರಯತ್ನಿಸುವುದಿಲ್ಲವೋ ಅವರು ಮಹಾಪಾಪಿಗಳಾಗುತ್ತಾರೆ. ಕಾರಣ ಉಪಾಸನಾ ಮತ್ತು ಕರ್ಮ ಮಾರ್ಗಪ್ರವೃತ್ತರಾಗಿ ಕಾಮಕ್ರೋಧಾದಿಗಳನ್ನು ನಾಶ ಮಾಡಿ ಆತ್ಮಜ್ಞಾನದ ಪ್ರಾಪ್ತಿಗಾಗಿ ನರೋತ್ತಮ (ಸಾಧಕರು) ಸತತ ಪ್ರಯತ್ನಶೀಲರಾಗಿರಬೇಕು.

ಚಿಕೀರ್ಷುರ್ದೇವತೋಪಾಸ್ತಿಮಾದೌ ಭಾವಿ ವಿಚಾರಯೇತ್ ।
ಸ್ನಾನದಾನಾದಿಕಂ ಕೃತ್ವಾ ಸ್ಮೃತ್ವಾ ಹರಿಪದಾಂಬುಜಮ್ ॥ 82 ॥

ಶಯೀತ ಕುಶಶಯ್ಯಾಯಾಂ ಪ್ರಾರ್ಥಯೇದ್ವೃಷಭಧ್ವಜಮ್ ।
ಭಗವಾನ್ ದೇವದೇವೇಶ ಶೂಲಭೃದ್ ವೃಷವಾಹನ ॥ 83 ॥

ಇಷ್ಟಾನಿಷ್ಟೆ ಸಮಾಚಕ್ಷ್ವ ಮಮ ಸುಪ್ತಸ್ಯ ಶಾಶ್ವತ ।
ನಮೋಜಾಯ ತ್ರಿನೇತ್ರಾಯ ಪಿಂಗಳಾಯ ಮಹಾತ್ಮನೆ ॥ 84 ॥

ವಾಮಾಯ ವಿಶ್ವರೂಪಾಯ ಸ್ವಪ್ನಾಧಿಪತಯೆ ನಮಃ ।
ಸ್ವಪ್ನೆ ಕಥಯ ಮೆ ತಥ್ಯಂ ಸರ್ವಕಾರ್ಯೆಷ್ವಶೇಷತಃ ॥ 85 ॥

ಕ್ರಿಯಾಸಿದ್ಧಿಂ ವಿಧಾಸ್ಯಾಮಿ ತ್ವತ್ಪ್ರಸಾದಾನ್ಮಹೇಶ್ವರ ।
ವಿಭಿರ್ಮಂತ್ರೈಃ ಶಿವಂ ಪ್ರಾರ್ಥ್ಯ ನಿದ್ರಾಂ ಕುರ್ಯಾನ್ನಿರಾಕುಲಃ ॥ 86 ॥

ಸ್ವಪ್ನಂ ದೃಷ್ಟಂ ನಿಶಿ ಪ್ರಾತರ್ಗುರವೆ ವಿನಿವೇದಯೇತ್ ।
ತಮಂತರೇಣ ಮಂತ್ರಜ್ಞಃ ಸ್ವಯಂ ಸ್ವಪ್ನಂ ವಿಚಾರಯೇತ್ ॥ 87 ॥

ದೇವತಾ ಉಪಾಸನೆ ಮಾಡುವವರು ತಮ್ಮ ಭವಿಷ್ಯವನ್ನು ವಿಚಾರ ಮಾಡುತ್ತ ಆದರಲ್ಲಿ ಪ್ರವೃತ್ತರಾಗಬೇಕು.

ಸ್ನಾನ ಮತ್ತು ದಾನ ಇತ್ಯಾದಿಗಳನ್ನು ಮಾಡಿದ ನಂತರ ಭಗವಾನ್ ವಿಷ್ಣುವಿನ ಚರಣ ಕಮಲಗಳನ್ನು ಧ್ಯಾನ ಮಾಡುತ್ತ ಕುಶದ ಹಾಸಿನ ಮೇಲೆ ಮಲಗಿಕೊಳ್ಳಬೇಕು.

ಭಗವಾನ್ ಶಿವನ, 'ಭಗವಾನ್ ದೇವದೇವೇಶ'........ತತ್ಪ್ರಸಾದಾನ್ಮಹೇಶ್ವರ' ಪರ್ಯಂತ ಮೂರು ಶ್ಲೋಕಗಳನ್ನು ಹೇಳುತ್ತ ಪ್ರಾರ್ಥನೆ ಮಾಡಿ ನಿಶ್ಚಿಂತೆಯಾಗಿ ನಿದ್ರಿಸಬೇಕು.

ಪ್ರಾತಃ ಕಾಲ ಎದ್ದ ನಂತರ ಕಂಡ ಸ್ವಪ್ನದ ವೃತ್ತಾಂತವನ್ನು ಗುರುಗಳಿಗೆ ಹೇಳಬೇಕು. ಗುರುವು ಇಲ್ಲದಿದ್ದಲ್ಲಿ ಸ್ವಯಂ ಸಾಧಕರು ತಮ್ಮ ಸ್ವಪ್ನದ ಬಗೆಗೆ ವಿಚಾರ ಮಾಡಬೇಕು.

### ಶುಭಸ್ವಪ್ನ ವಿಚಾರ

**ಲಿಂಗಂ ಚಂದ್ರಾರ್ಕಯೋರ್ಬಿಂಬಂ ಭಾರತಿಂ ಜಾಹ್ನವಿಂ ಗುರುಮ್ ।**
**ರಕ್ತಾಬ್ಧಿತರಣಂ ಯುದ್ಧೆ ಜಯೋನಲಸಮರ್ಚನಮ್ ॥ 88 ॥**

**ಶಿಖಿಹಂಸರಥಾಂಗಾಢ್ಯೆ ರಥೇ ಸ್ನಾನಂ ಚ ಮೋಹನಮ್ ।**
**ಆರೋಹಣಂ ಸಾರಸಸ್ಯ ಧರಾಲಾಭಾಶ್ಚ ನಿಮ್ನಗಾ ॥ 89 ॥**

**ಪ್ರಾಸಾದಃ ಸ್ಯಂದನಃ ಪದ್ಮಂ ಛತ್ರಂ ಕನ್ಯಾ ದ್ರುಮಃ ಫಲಿ ।**
**ನಾಗೋ ದೀಪೋ ಹಯಃ ಪುಷ್ಪಂ ವೃಷಭೋಶ್ವಶ್ಚ ಪರ್ವತಃ ॥ 90 ॥**

**ಸುರಾಘಟೊ ಗ್ರಹಾಸ್ತಾರಾ ನಾರೀ ಸೂರ್ಯೋದಯೋಪ್ಸರಾಃ ।**
**ಹರ್ಮ್ಯಶೈಲವಿಮಾನಾನಾಮಾರೋಹೊ ಗಗನೆ ಗಮಃ ॥ 91 ॥**

**ಮದ್ಯಮಾಂಸಾದನಮ ವಿಷ್ಠಾಲೇಪೋ ರುಧಿರಸೇಚನಮ್ ।**
**ದಧ್ಯೋದನಾದನಂ ರಾಜ್ಯಾಭಿಷೇಕೊ ಗೋವೃಷಧ್ವಜಾಃ ॥ 92 ॥**

**ಸಿಂಹಸಿಂಹಾಸನಂ ಶಂಖೊ ವಾದಿತ್ರಂ ರೋಚನಾದಧಿ ।**
**ಚಂದನಂ ದರ್ಪಣಶ್ಚೈಷಾಂ ಸ್ವಪ್ನೆ ಸಂದರ್ಶನಂ ಶುಭಮ್ ॥ 93 ॥**

ಲಿಂಗ, ಚಂದ್ರ ಮತ್ತು ಸೂರ್ಯ ಬಿಂಬಗಳು, ಸರಸ್ವತಿ, ಗಂಗಾ, ಗುರು. ಕೆಂಪು ವರ್ಣದ ಸಾಗರದಲ್ಲಿ ಈಜುವುದು, ಯುದ್ಧದಲ್ಲಿ ವಿಜಯ, ಅಗ್ನಿಯನ್ನು ಅರ್ಚನೆ ಮಾಡುವುದು, ಮಯೂರಯುಕ್ತ, ಹಂಸಯುಕ್ತ ಅಥವಾ ಚಕ್ರಯುಕ್ತ ರಥದಲ್ಲಿ ಸವಾರಿ, ಸ್ನಾನ, ಸಂಭೋಗ, ಹಂಸದ ಛತ್ರ, ಕನ್ಯಾ, ಫಲಭರಿತ ವೃಕ್ಷಗಳು, ಸರ್ಪ, ಆನೆ, ದೀಪ, ಕುದುರೆ, ಪುಷ್ಪ,ಹೋರಿ ಮತ್ತು ಅಶ್ವ, ಪರ್ವತ, ಮದ್ಯದ ಕೊಡ, ಗ್ರಹ, ನಕ್ಷತ್ರ, ಸ್ತ್ರೀ ಉದಯಿಸುತ್ತಿರುವ ಸೂರ್ಯ, ಅಪ್ಸರೆಯರ ದರ್ಶನ. ಸಾರಿಸಿ ಗುಡಿಸಿದ ಮನೆಯಂಗಳ, ಪರ್ವತ ಅಥವಾ ವಿಮಾನವನ್ನೇರುವುದು. ಆಕಾಶಯಾತ್ರೆ ಮದ್ಯಸೇವನೆ, ಮಾಂಸಭಕ್ಷಣೆ, ಮಲಲೇಪನ, ರಕ್ತದಿಂದ ಸ್ನಾನ,





ಮೊಸರನ್ನದ ಭೋಜನ, ರಾಜ್ಯಾಭಿಷೇಕವಾಗುವುದು, ಹಸು, ಎತ್ತು ಮತ್ತು ಧ್ವಜದರ್ಶನ, ಸಿಂಹ ಮತ್ತು ಸಿಂಹಾಸನ, ಶಂಖ, ಮಂಗಳವಾದ್ಯ, ಗೋರೋಚನ, ಮೊಸರು, ಶ್ರೀಗಂಧ ಮತ್ತು ಕನ್ನಡಿ ಇವುಗಳು ಸ್ವಪ್ನದಲ್ಲಿ ಕಂಡುಬರುವುದು ಶುಭವೆಂದು ಹೇಳಲಾಗುತ್ತದೆ.

### ಅಶುಭ ಸ್ವಪ್ನ ವಿಚಾರ

ತೈಲಾಭ್ಯಕ್ತಃ ಕೃಷ್ಣವರ್ಣೋ ನಗ್ನೋ ನಾ ಗರ್ತವಾಯಸಾ ।
ಶುಷ್ಕಕಂಟಕಿವೃಕ್ಷಶ್ಚ ಚಾಂಡಾಲೋ ದೀರ್ಘಕಂಧರಃ ॥ 94 ॥

ಪ್ರಾಸಾದಸ್ತಲಹೀನಶ್ಚ ನೈತೆ ಸ್ವಪ್ನೆ ಶುಭಾವಹಾಃ ।
ಶಾಂತಿಂ ಕುರ್ವೀತ್ ದುಃಸ್ವಪ್ನೆ ಜಪೇನ್ಮಂತ್ರಮನನ್ಯಧೀಃ ॥ 95 ॥

ಅಬ್ದತ್ರಿಕಂ ಜಪಂ ತಸ್ಯ ಕುರ್ವತೊ ವಿಘ್ನಸಂಭವಃ ।
ವಿಘ್ನಸಂಘಮನಾದೃತ್ಯ ತದಾ ಜಪಪರೊ ಭವೇತ್ ॥ 96 ॥
ಸಿದ್ಧ್ಯೈ ವಿಶ್ವಸ್ತಚಿತ್ತಃ ಸಂಸ್ತುರೀಯೆಚ್ಚೆ ಸಸಿದ್ಧಿಭಕ್ ।

ತೈಲವನ್ನು ಹಚ್ಚಿಕೊಂಡ ಮರುಷ, ಕಪ್ಪು ಬಣ್ಣದ ಅಥವಾ ನಗ್ನನಾದ ವ್ಯಕ್ತಿ, ತಗು ಪರದೇಶ, ಕಾಗೆ, ಒಣಗಿದ, ಮುಳ್ಳಿನ ಗಿಡಗಳು, ಚಾಂಡಾಲ ದೀರ್ಘವಾದ ಬಾಹುಗಳ ಪುರುಷ, ಮೇಲ್ಛಾವಣಿ ಇಲ್ಲದ ಮನೆ, ಇತ್ಯಾದಿ ಸ್ವಪ್ನದಲ್ಲಿ ಕಂಡು ಬರುವುದು ಅಶುಭವಾಗುತ್ತದೆ.

ದುಃಸ್ವಪ್ನ ಶಾಂತಿಃ ದುಃಸ್ವಪ್ನವು ಕಂಡು ಬಂದರೆ ದೋಷ ನಿವೃತ್ತಿಗಾಗಿ ಶಾಂತಿ ಮಾಡಬೇಕು. ಏಕಾಗ್ರಚಿತ್ತದಿಂದ ಇಷ್ಟದೇವತೆಯ ಮಂತ್ರವನ್ನು ಜಪಿಸಬೇಕು. ಮೂರು ವರ್ಷಗಳವರೆಗೆ ಜಪ ಮಾಡುವಾಗ ವಿಘ್ನಗಳುಂಟಾಗುವ ಸಂಭವವಿರುತ್ತದೆ. ಕಾರಣ ವಿಘ್ನಗಳನ್ನು ಲೆಕ್ಕಿಸದೆ ಜಪದಲ್ಲಿ ತತ್ಪರರಾಗಿರಬೇಕು. ಚಿತ್ತೈಕಾಗ್ರತೆಯನ್ನು ಸಾಧಿಸುವ ಸಾಧಕರು ನಾಲ್ಕನೆಯ ವರ್ಷದಲ್ಲಿ ಸಿದ್ಧಿಯನ್ನು ಪಡೆದುಕೊಳ್ಳುತ್ತಾರೆ.

### ಮಂತ್ರಸಿದ್ಧಿಯ ಲಕ್ಷಣಗಳು

ಮನಃ ಪ್ರಸಾದಃ ಸಂತೋಷಃ ಶ್ರವಣಂ ದುಂದುಭಿಧ್ವನೇಃ ॥ 97 ॥

ಗೀತಸ್ಯ ತಾಲಶಬ್ದಸ್ಯ ಗಂಧರ್ವಾಣಾಂ ಸಮೀಕ್ಷಣಮ್ ।
ಸ್ವತೇಜಸಃ ಸೂರ್ಯಸಾಮ್ಯೇಕ್ಷಣಂ ನಿದ್ರಾಕ್ಷುಧಾಜಪಃ ॥ 98 ॥

ಅನಾಮಿಕಾ ಮತ್ತು ಹೆಬ್ಬೆರಳಿನಿಂದ ಜಪ ಮಾಡಬೇಕು. ವಿದ್ವೇಷಣ ಮತ್ತು ಉಚ್ಚಾಟನದಲ್ಲಿ ತರ್ಜನಿ ಮತ್ತು ಹೆಬ್ಬೆರಳುಗಳನ್ನು ಉಪಯೋಗಿಸಬೇಕು. ಮತ್ತು ಮಾರಣದಲ್ಲಿ ಕಿರು ಬೆರಳು ಮತ್ತು ಹೆಬ್ಬೆರಳುಗಳಿಂದ ಜಪ ಮಾಡುವ ವಿಧಾನವಿದೆ.

**ಅಷ್ಟೋತ್ತರ ಶತಂ ಸಂಖ್ಯಾತದರ್ಧ್ವ ಚ ತದರ್ಧಕಮ್ ।**
**ಮಣಿನಾಂ ಶುಭಕಾರ್ಯೆ ಸ್ಯಾತ್ತಿಥಿಸಂಖ್ಯಾಭಿಚಾರಕೆ** ॥ 44 ॥

ಶುಭ ಕಾರ್ಯಗಳಲ್ಲಿ ಮಾಲೆಯ ಮಣಿಗಳ ಸಂಖ್ಯೆ 108, 54, ಅಥವಾ 27 ಎಂದು ಹೇಳಲಾಗಿದೆ. ಆದರೆ ಅಭಿಚಾರ (ಮಾರಣ) ಕರ್ಮಗಳಲ್ಲಿ ಮಣಿಗಳ ಸಂಖ್ಯೆ 15 ಎಂದು ಹೇಳಲಾಗಿದೆ.

**ಶಾಂತಿರ್ವಶ್ಯಂ ಲೌಕಿಕಾಗ್ನೌ ಸ್ತಂಭನಂ ವಟಜೇನಲೆ ।**
**ದ್ವೇಷಃ ಕಲಿತರೂತ್ಪನ್ನೆ ಶೇಷೆ ಪಿತೃವನಸ್ಥಿತೆ** ॥ 45 ॥

ಶಾಂತಿ ಮತ್ತು ವಶೀಕರಣ ಕರ್ಮಗಳಲ್ಲಿ ಲೌಕಿಕ ಅಗ್ನಿಯಲ್ಲಿ ಸ್ತಂಭನದಲ್ಲಿ ವಟ ವೃಕ್ಷದ ಸಮಿಧಾದ ಅಗ್ನಿಯಲ್ಲಿ, ವಿದ್ವೇಷಣದಲ್ಲಿ ತಾರೆಗಿಡದ ಕಟ್ಟಿಗೆಯ ಅಗ್ನಿ ಮತ್ತು ಉಚ್ಚಾಟನ ಮತ್ತು ಮಾರಣ ಪ್ರಯೋಗಗಳಲ್ಲಿ ಸ್ಮಶಾನದ ಅಗ್ನಿಯಲ್ಲಿ ಹೋಮ ಮಾಡಬೇಕು.

**ಶುಭೆ ಕರ್ಮಾಣಿ ಬಿಲ್ವಾರ್ಕಪಲಾಶಕ್ಷೀರವೃಕ್ಷಜೈಃ ।**
**ಅಶುಭೆ ವಿಷವೃಕ್ಷಾಕ್ಷೈರ್ನಿಂಬಧತ್ತೂರಶೇಲುಜೈಃ** ॥ 46 ॥

**ಕಾಷ್ಠೈ ಪ್ರದೀಪಯೇದಗ್ನಿಂ ಹೋಮಕರ್ಮಾಣಿ ಮಂತ್ರವಿತ್ ।**

ಶುಭ ಕಾರ್ಯಗಳಲ್ಲಿ ಬಿಲ್ವ, ಎಕ್ಕೆ, ಮುತ್ತುಗ ಮತ್ತು ಹಾಲು ಸ್ರವಿಸುವ ವೃಕ್ಷಗಳ ಸಮಿಧಾಗಳಿಂದ, ಅಶುಭ ಕರ್ಮಗಳಲ್ಲಿ ವಿಷ ವೃಕ್ಷಗಳು, ತಾರೇಕಾಯಿ, ಬೇವು, ದತೂರ ಮತ್ತು ಶೇಲುಜ್ಜೆ ವೃಕ್ಷಗಳ ಸಮಿಧಾಗಳಿಂದ ಮಾಂತ್ರಿಕರು ಅಗ್ನಿಯನ್ನು ಪ್ರಜ್ವಲಿಸಬೇಕು.

### ಅಗ್ನಿಜಿಹ್ವಾ ಪೂಜೆ

**ವಹ್ನೇರ್ಜಿಹ್ವಾಂ ಸುಪ್ರಭಾಖ್ಯಾಂ ಶಾಂತಿಕರ್ಮಾಣಿ ಪೂಜಯೇತ್** ॥ 47 ॥

**ವಶ್ಯಕಾರ್ಯೆ ಹಿ ರಕ್ತಾಖ್ಯಾಂ ಸ್ತಂಭನೆ ಕನಕಾಭಿಧಾಮ ।**
**ವಿದ್ವೇಷೆ ಗಗನಾಂ ಜಿಹ್ವಾಮುಚ್ಚಾಟೇಪ್ಯತಿರಕ್ತಿಕಾಮ್** ॥ 48 ॥

**ಕೃಷ್ಣಾಂ ತು ಮಾರಣೆ ಚಾರ್ಚೇದ್ ಬಹುರೂಪಾಂ ತು ಸರ್ವತಃ ।**





ಈಗ ಅಗ್ನಿಜಿಹ್ವೆಗಳನ್ನು ಆಯಾ ಕರ್ಮಗಳಲ್ಲಿ ಪೂಜಿಸುವ ವಿಧಾನವನ್ನು ಹೇಳಲಾಗುತ್ತದೆ. ಶಾಂತಿ ಕರ್ಮಗಳಲ್ಲಿ ಅಗ್ನಿಯ ಸುಪ್ರಭಾ ಸಂಜ್ಞಕ ಜಿಹ್ವೆಯ, ವಶ್ಯದಲ್ಲಿ ರಕ್ತಾನಾಮಕ ಜಿಹ್ವೆಯ ಸ್ತಂಭನ ಕರ್ಮಗಳಲ್ಲಿ ಹಿರಣ್ಯಾ ನಾಮದ ಜಿಹ್ವೆಯ, ವಿದ್ವೇಷಣದಲ್ಲಿ ಗಗನಾ ಎಂಬ ಜಿಹ್ವೆಯ, ಉಚ್ಚಾಟನದಲ್ಲಿ ಅತಿರಕ್ತಿಕಾ ಮತ್ತು ಮಾರಣದಲ್ಲಿ ಕೃಷ್ಣಾ ನಾಮಕ ಅಗ್ನಿ ಜಿಹ್ವೆಗಳನ್ನು ಮತ್ತು ಎಲ್ಲ ಸ್ಥಾನಗಳಲ್ಲಿ ಬಹುರೂಪಾ ಹೆಸರಿನ ಅಗ್ನಿಜಿಹ್ವೆಯನ್ನು ಪೂಜಿಸಬೇಕು.

**ಭೋಜ್ಯೆ ಸಂಖ್ಯಾವಿಶೇಷೋಪಿ ಜ್ಞೇಯಃ ಶಾಂತ್ಯಾದಿಕರ್ಮಸು** ॥ 49 ॥

**ಶಾಂತೌ ವಶ್ಯೆ ಭೋಜಯೇತ್ ಹೋಮಾದ್ವಿಪ್ರಾನ್ ದಶಾಂಶತಃ ।**
**ಉತ್ತಮಂ ತದ್ಧವೇತ್ಕರ್ಮ ತತ್ಪಾಂಶೇನ ತು ಮಧ್ಯಮಮ್** ॥ 50 ॥

**ಹೋಮಾಚ್ಛತಾಂಶತೊ ವಿಪ್ರಭೋಜನಂ ತ್ವಧಮಂ ತು ತತ್** ॥ 51 ॥
**ತ್ರಿಗುಣಂ ದ್ವೇಷಣೋಚ್ಚಾಟೆ ಮಾರಣೆ ಹೋಮ ಸಮ್ಮಿತಮ್ ।**

ಶಾಂತ್ಯಾದಿ ಕರ್ಮಗಳಲ್ಲಿ ಬ್ರಾಹ್ಮಣ ಭೋಜನದ ವಿಷಯದಲ್ಲಿ ಕೆಲವು ವಿಶೇಷತೆಗಳಿರುತ್ತವೆ. ಶಾಂತಿ ಮತ್ತು ವಶ್ಯ ಕರ್ಮಗಳಲ್ಲಿ ಹೋಮದ ದಶಾಂಶ ಸಂಖ್ಯೆಯಲ್ಲಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಇದು ಉತ್ತಮವಾದದ್ದೆಂದು ತಿಳಿಯಲಾಗಿದೆ. ಹೋಮದ ಸಂಖ್ಯೆಯ ಇಪ್ಪತ್ತೈದು ಅಂಶದಲ್ಲಿ (1/4)ಬ್ರಾಹ್ಮಣ ಭೋಜನ ಮಾಡಿಸುವುದು ಮಧ್ಯಮ ಮತ್ತು ಶತಾಂಶ (1/100) ಅಧಮ ಶ್ರೇಣಿಯೆಂದು ಭಾವಿಸಲಾಗುತ್ತದೆ. ಸ್ತಂಭನ ಕಾರ್ಯದಲ್ಲಿ ಶಾಂತಿಯ ಸಂಖ್ಯೆಯ ಎರಡು ಪಟ್ಟು ಬ್ರಾಹ್ಮಣ ಭೋಜನ ಮಾಡಿಸಬೇಕು. ಇದೇ ಪ್ರಕಾರ ವಿದ್ವೇಷಣ ಮತ್ತು ಉಚ್ಚಾಟನಗಳಲ್ಲಿ ಶಾಂತಿಯ ಸಂಖ್ಯೆಯ ಮೂರು ಪಟ್ಟು ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

### ವಿಪ್ರಲಕ್ಷಣಗಳು

**ಅತಿಶುದ್ಧಕುಲೋತ್ಪನ್ನಾಃ ಸಾಂಗವೇದವಿದೋಮಲಾಃ** ॥ 52 ॥

**ಸದಾಚಾರರತಾ ವಿಪ್ರಾ ಭೋಜ್ಯಾ ಭೋಜ್ಯೈರ್ಮನೋಹರೈಃ ।**
**ಪೂಜ್ಯಾಸ್ತೆ ದೇವತಾಬುದ್ಧ್ಯಾ ನಮಸ್ಕಾರ್ಯಾಃ ಪುನಃ ಪುನಃ** ॥ 53 ॥

**ಸಂತೋಷ್ಯಾ ಮಧುರೈರ್ವಾಕ್ಯೈರ್ಹಿರಣ್ಯಾದಿ ಪ್ರದಾನತಃ ।** ॥ 54 ॥
**ಅಚಿರಾಲ್ಲಭತೇಭಿಷ್ಟಂ ಗೃಹೀತಾಯಾಂ ತದಾಶಿಷಿ**
**ಎನೋಭಿಚಾರಕರ್ಮೋತ್ಥಂ ನಶ್ಯತಿ ದ್ವಿಜ ವಾಕ್ಯತಃ ।**

ಶಾಂತ್ಯಾದಿ ಕರ್ಮಸು ಜ್ಞೇಯಾ ಜಾತಯಃ ಷಡ್ಭೂಃ ಕ್ರಮಾತ್
ನಮಃ ಸ್ವಾಹಾ ವಷಟ್ ವೌಷಟ್ ಹುಂ ಫಟ್ ಷಣ್ಮಂತ್ರವಿತ್ತಮೈ । ॥ 32 ॥

ಶಾಂತಾದಿ ಕರ್ಮಗಳಲ್ಲಿ ಕ್ರಮವಾಗಿ, ನಮಃ ಸ್ವಾಹಾ ವಷಟ್, ವೌಷಟ್, ಹುಮ್ ಮತ್ತು ಫಟ್ ಈ ಆರನ್ನು ಜಾತಿತ್ವೇನ ಸ್ವೀಕರಿಸಲಾಗಿದೆ.

**ಭೂತೋದಯ ಕಥನ**

ನಾಸಾಪುಟದ್ವಯಾಧಸ್ತಾಧ್ಯದಾ ಪ್ರಾಣಗತಿರ್ಭವೇತ್
ತೋಯೋದಯಸ್ತಥಾ ಜ್ಞೇಯಃ ಶಾಂತಿಕರ್ಮಾಣಿ ಸಿದ್ಧಿದಃ । ॥ 33 ॥
ನಾಸಾದಂಡಾಶ್ರಿತಗತೌ ಪ್ರಾಣೆ ಸ್ತಂಭೆ ಧರೋದಯಃ ॥ 34 ॥
ಪುಟಮಧ್ಯಗತೌ ತಸ್ಮಿನ್ನ್ವೇಷೆ ವ್ಯೊಮೊದಯಃ ಶುಭಃ ।
ಪುಟೋಪರಿಷ್ಟಾದ್ಗಮನೆ ಪ್ರಾಣೆ ಸ್ಯಾತ್ಪಾವಕೋದಯಃ ॥ 35 ॥
ತದಾ ಕರ್ಮದ್ವಯೆ ಸಿದ್ಧಿಮಾರಣೆ ಚ ವಶೀಕೃತೌ ।
ಪ್ರಾಣೇತಿರ್ಯಗ್ಗತೌ ಜ್ಞೇಯ ಉಚ್ಚಾಟೆ ಮಾರುತೋದಯಃ ॥ 36 ॥

ಈಗ ಭೂತಗಳ ಉದಯವನ್ನು ಹೇಳಲಾಗುತ್ತದೆ. ಎರಡು ನಾಸಾಪುಟಗಳ ಕೆಳಗಿನ ವರೆಗೆ ಶ್ವಾಸವು ಚಲಿಸುತ್ತಿದ್ದರೆ ಜಲತತ್ವ ಉದಯವಾಗಿದೆ ಎಂದು ತಿಳಿಯಬೇಕು. ಇದು ಶಾಂತಿ ಕರ್ಮಗಳಲ್ಲಿ ಸಿದ್ಧಿದಾಯಕವಾಗುತ್ತದೆ.

ನಾಸಿಕದ ಮಧ್ಯದಲ್ಲಿ ನೇರವಾದ ದಂಡದಂತೆ ಶ್ವಾಸದ ಗತಿಯಿದ್ದರೆ, ಸ್ತಂಭನ ಕಾರ್ಯಗಳಲ್ಲಿ ಸಿದ್ಧಿದಾಯಕವಾದ ಪೃಥ್ವಿ ತತ್ವವು ಉದಯಾಗಿದೆ ಎಂದು ತಿಳಿಯಬೇಕು.

ಮೂಗಿನ ಹೊರಳೆಗಳ ಮಧ್ಯದಲ್ಲಿ ಶ್ವಾಸದ ಗತಿಯಿದ್ದರೆ ಆಕಾಶ ತತ್ವದ ಉದಯವಾಗುತ್ತದೆ. ಮತ್ತು ಅದು ವಿದ್ವೇಷಣ ಪ್ರಯೋಗಗಳಲ್ಲಿ ಸಿದ್ಧಿದಾಯಕವಾಗಿದೆ.

ಮೂಗಿನ ಹೊರಳೆಗಳ ಮೇಲೆ ಶ್ವಾಸದ ಗತಿಯಿದ್ದರೆ ಅಗ್ನಿತತ್ವದ ಉದಯವೆಂದು ತಿಳಿಯಬೇಕು. ಇಂಥ ಸಮಯದಲ್ಲಿ ಮಾರಣ ಮತ್ತು ವಶೀಕರಣ ಎರಡೂ ಕಾರ್ಯಗಳಲ್ಲಿ ಸಫಲತೆ ದೊರೆಯುತ್ತದೆ. ಶ್ವಾಸದ ಗತಿಯು ತಿರ್ಯಕ್ ಅಂದರೆ ವಕ್ರವಾಗಿದ್ದರೆ ವಾಯುತತ್ವದ ಉದಯವಾಗಿದೆ ಎಂದು ತಿಳಿಯಬೇಕು. ಇದು ಉಚ್ಚಾಟನ ಕ್ರಿಯೆಗಳಲ್ಲಿ ಸಿದ್ಧಿದಾಯಕವಾಗಿದೆ.





ದೂರ್ವಾಯಾಃ ಸಮಿಧಃ ಶಾಂತೌ ಗೋಘೃತೇನ ಸಮನ್ವಿತಾಃ ।
ದಾಡಿಮಾಪ್ರಸುವೊ ಹೋಮೆ ವಶ್ಯೇಜಾಘೃರತ ಸಂಯುತಾಃ
ಮೇಷಿಘೃತಾಕ್ತಾಃ ಸಮಿಧಃ ಸ್ತಂಭೆ ರಾಜತರುದ್ಭವಾಃ । ॥ 37 ॥
ಧತ್ತೂರಸಮಿಧೊ ದ್ವೇಷೆ ಅತಸೀತೈಲಸಂಯುತಃ
ಚೂತಜಾಃ ಕಟುತೈಲಾಕ್ತಾ ಉಚ್ಚಾಟನವಿಧೌ ಮತಾಃ । ॥ 38 ॥
ಕಟುತೈಲಯುತಾಃ ಶಸ್ತಾ ಮಾರಣೆ ಖದಿರೋದ್ಭವಾ ॥ 39 ॥

ಸಮಿಧಾಗಳು : ಶಾಂತಿ ಕರ್ಮಗಳಲ್ಲಿ ಹಸುವಿನ ತುಪ್ಪ ಮಿಶ್ರಿತ ದೂರ್ವಾದಿಂದ, ವಶ್ಯ ಕರ್ಮಗಳಲ್ಲಿ ಆಡಿನ ತುಪ್ಪದಲ್ಲಿ ಮಿಶ್ರಿತ ದಾಳಿಂಬದ ಸಮಿಧಾದಿಂದ, ಸ್ತಂಭನ ಕಾರ್ಯಗಳಲ್ಲಿ ಕುರಿಯ ತುಪ್ಪದಲ್ಲಿ ಅದ್ದಿದ ಅಮಲತಾಸ ವೃಕ್ಷದ ಸಮಿಧಾಗಳಿಂದ, ವಿದ್ವೇಷಣ ಕರ್ಮಗಳಲ್ಲಿ ಅಗಸೆ ಎಣ್ಣೆಯಲ್ಲಿ ಮಿಶ್ರಿತ ಧತ್ತೂರದ ಸಮಿಧಾಗಳಿಂದ, ಉಚ್ಚಾಟನ ಕರ್ಮಗಳಲ್ಲಿ ಸಾಸಿವೆ ಎಣ್ಣೆಯಲ್ಲಿ ಅದ್ದಿದ ಮಾವಿನ ಸಮಿಧಾಗಳಿಂದ ಮತ್ತು ಮಾರಣದಲ್ಲಿ ಕಟುತೈಲದಲ್ಲಿ ಮಿಶ್ರಿತ ಕಾಚಿನ ಗಿಡದ ಸಮಿಧಾಗಳಿಂದ ಹೋಮ ಮಾಡಬೇಕು.

ಶಂಖಜಾ ಪದ್ಮಬೀಜೋತ್ಥಾ ನಿಂಬಾರಿಷ್ಟಫಲೋದ್ಭವಾ ।
ಪ್ರೇತದಂತಭವಾ ವಾಹರದೋತ್ಥಾ ಖರದಂತಜಾ ॥ 40 ॥
ಜಪಮಾಲಾ : ಕ್ರಮಾಜ್ಞೇಯಾಃ ಶಾಂತಿಮುಖ್ಯೇಷು ಕರ್ಮಸು ।

ಜಪಮಾಲೆಗಳು ; ಶಂಖ ಮಾಲೆಯನ್ನು ಶಾಂತಿಯಲ್ಲಿ ಕಮಲಗಟ್ಟಾ ಮಾಲೆಯನ್ನು ವಶ್ಯ ಕರ್ಮಗಳಲ್ಲಿ, ನಿಂಬೆಯ ಮಾಲೆಯನ್ನು ಸ್ತಂಭನದಲ್ಲಿ, ಬೇವಿನ ಮಾಲೆಯನ್ನು ವಿದ್ವೇಷಣದಲ್ಲಿ, ಕುದುರೆಯ ಹಲ್ಲಿನಮಾಲೆಯನ್ನು ಮತ್ತು ಕತ್ತೆಯ ಹಲ್ಲುಗಳ ಮಾಲೆಯನ್ನು ಮಾರಣ ಕರ್ಮಗಳಲ್ಲಿ ಉಪಯೋಗಿಸುತ್ತಾರೆ.

ಮಧ್ಯಮಾಯಾಂ ಸ್ಥಿತಾಂ ಮಾಲಾಂ ಜ್ಯೇಷ್ಠನಾವರ್ತಯೇತ್ಸುಧಿಃ ॥ 41 ॥
ಶಾಂತೌ ವಶ್ಯೆ ತಥಾ ಪುಷ್ಟಾ ಭೋಗವೋಕ್ಷಾರ್ಥಕೆ ಜಪೆ ।
ಅನಾಮಾಂಗುಷ್ಠಯೋಗೇನ ಸ್ತಂಭನಾದೌ ಜಪೇತ್ಸುಧಿಃ ॥ 42 ॥
ತರ್ಜನ್ಯಾಂಗುಷ್ಠಯೋಗೇನ ದ್ವೇಷೋಚ್ಚಾಟನಯೋಃ ಪುನಃ ।
ಕನಿಷ್ಠಾಂಗುಷ್ಠಸಂಯೋಗಾನ್ಮಾರಣೆ ಪ್ರಜಪೇತ್ಸುಧಿಃ ॥ 43 ॥

ಶಾಂತಿ, ವಶ್ಯ, ಪುಷ್ಟಿ, ಭೋಗ ಮತ್ತು ಮೋಕ್ಷ ಕರ್ಮಗಳಲ್ಲಿ ಮಧ್ಯಮಾದಲ್ಲಿ ಸ್ಥಿತ ಮಾಲೆಯನ್ನು ಹೆಬ್ಬೆರಳಿನಿಂದ ತಿರುಗಿಸಬೇಕು. ಸ್ತಂಭನಾದಿ ಕಾರ್ಯಗಳಲ್ಲಿ

ಆಕಾಶ ಮಂಡಲವು ವೃತ್ತಕಾರವಾಗಿರುತ್ತದೆ. ಇದು ವಿದ್ವೇಷಣ ಕಾರ್ಯಗಳಿಗೆ ಉಪಯೋಗಿಸಲ್ಪಡುತ್ತದೆ. । ಆರು ಬೀಜಗಳಿಂದ ಅಂಕಿತ ವೃತ್ತವು ವಾಯುಮಂಡಲವೆಂದು ಕರೆಯಲ್ಪಡುತ್ತಿದ್ದು ಉಚ್ಚಾಟನ ಕಾರ್ಯಗಳಿಗೆ ಉಪಯುಕ್ತವಾಗುತ್ತದೆ. । ಮಾರಣ ಕರ್ಮಗಳಲ್ಲಿ ವಹ್ನಿ ಅರ್ಥಾತ್ ಅಗ್ನಿಮಂಡಲವನ್ನು ಉಪಯೋಗಿಸಬೇಕು.

### ಮುದ್ರಾಕಥನ

**ಸರೋರುಹಂ ಪಾಶಗದೆ ಮುಸಲಂ ಕುಲಿಶಂ ತ್ವಸಿಃ** ॥ 26 ॥

**ಷಣ್ಮುದ್ರಾಃ ಕರ್ಮಷಟ್ಕೇ ಸ್ಯುರಥಹೋಮೆ ನಿಗದ್ಯತೆ ।**
**ಮೃಗಿ ಹಂಸಿ ಸೂಕರೀತಿ ಹೋಮೆ ಮುದ್ರಾತ್ರಯಂ ಮತಮ್** ॥ 27 ॥

**ಮಧ್ಯಮಾನಾಮಿಕಾಂಗುಷ್ಠಯೋಗೇ ಮುದ್ರಾ ಮೃಗಿ ಮತಾ ।**
**ಹಂಸಿಕನಿಷ್ಠಾಹೀನಾನಾಂ ಸರ್ವಾಸಾಂ ಯೋಜನೆಮತಾ** ॥ 28 ॥

**ಸೂಕರೀಕರಸಂಕೋಚೆ ಮುದ್ರಾ ಲಕ್ಷಣಮೀರಿತಮ್ ।**
**ಶಾಂತೊ ವಶ್ಯೆ ಮೃಗಿ ಹಂಸೆ ಸ್ತಂಭನಾದಿಷು ಸೂಕರಿ** ॥ 29 ॥

ಶಾಂತಿ ಮುಂತಾದ ಷಟ್ಕರ್ಮಗಳಲ್ಲಿ ಪದ್ಮ, ಪಾಶವು ಗದಾ, ಮುಶಲ, ವಜ್ರ ಮತ್ತು ಖಡ್ಗ ಮುದ್ರಾಗಳನ್ನು ಪ್ರದರ್ಶಿಸಬೇಕು.

**ಪದ್ಮಮುದ್ರಾ :** ಎರಡು ಕೈಗಳನ್ನು ಎದುರಿಗೆ ಮಾಡಿ ಅಂಗೈಗಳನ್ನು ಮೇಲೆ ಮಾಡಿ ಬೆರಳುಗಳನ್ನು ಜೋಡಿಸಿ ಮುಷ್ಟಿ ಮಾಡಬೇಕು. ಈಗ ಎರಡೂ ಹೆಬ್ಬೆರಳುಗಳನ್ನು ಬೆರಳುಗಳ ಮೇಲಿನಿಂದ ಪರಸ್ಪರ ಸ್ಪರ್ಶಿಸಬೇಕು. ಇದು ಪದ್ಮ ಮುದ್ರೆ

**ಪಾಶ ಮುದ್ರೆ :** ಎರಡೂ ಕೈಗಳನು ಮುಷ್ಟಿ ಕಟ್ಟಿ ಎಡಗೈ ತೋರಬೆರಳನ್ನು ಬಲಗೈ ತೋರಬೆರಳಿನಿಂದ ಕಟ್ಟಿರಿ. ನಂತರ ಎರಡೂ ತರ್ಜನಿಗಳನ್ನು ಆಯಾ ಹೆಬ್ಬೆರಳುಗಳಿಂದ ಒತ್ತಬೇಕು. ಈಗ ಬಲಗೈ ತರ್ಜನಿಯ ಅಗ್ರಭಾಗವನ್ನು ಸ್ವಲ್ಪ ಬೇರೆ ಮಾಡುವುದರಿಂದ ಪಾಶಮುದ್ರೆಯಾಗುತ್ತದೆ.

**ಗದಾಮುದ್ರಾ:** ಎರಡೂ ಕೈಗಳ ಅಂಗೈಗಳನ್ನು ಜೋಡಿಸಿರಿ. ನಂತರ ಎರಡೂ ಕೈಗಳ ಬೆರಳುಗಳನ್ನು ಪರಸ್ಪರ ಒಂದರೊಳಗೊಂದು ಸೇರಿಸಿರಿ ಈಗ ಮಧ್ಯಮಾ ಬೆರಳುಗಳನ್ನು ಸೇರಿಸಿ ಮುಂದಕ್ಕೆ ಚಾಚಿರಿ. ಇದು ಈಗ ವಿಷ್ಣುವಿನ ಪ್ರಿಯವಾದ ಗದೆಯಾಗುತ್ತದೆ.





**ಮುಶಲ ಮುದ್ರಾ ;** ಎರಡೂ ಕೈಗಳ ಮುಷ್ಟಿ ಕಟ್ಟಿ ನಂತರ ಬಲಗೈ ಮುಷ್ಟಿಯನ್ನು ಎಡಗೈ ಮುಷ್ಟಿಯ ಮೇಲೆ ಇಡುವುದರಿಂದ ಮುಶಲ ಮುದ್ರಾ ಆಗುತ್ತದೆ.

**ವಜ್ರಮುದ್ರಾ ;** ಕನಿಷ್ಠ ಮತ್ತು ಹೆಬ್ಬೆರಳುಗಳನ್ನು ಸೇರಿಸಿ ತ್ರಿಕೋಣ ಮಾಡುವುದನ್ನು ವಜ್ರಮುದ್ರಾ ಆಗುತ್ತದೆ.

**ಖಡ್ಗಮುದ್ರಾ ;** ಕಿರುಬೆರಳು ಮತ್ತು ಅನಾಮಿಕಾ ಬೆರಳುಗಳನ್ನು ಒಂದರೊಂದು ಸೇರಿಸಿ ಹೆಬ್ಬೆರಳಿನೊಂದಿಗೆ ಸೇರಿಸಿರಿ. ಉಳಿದ ಬೆರಳುಗಳನ್ನು ಜೋಡಿಸಿ ಮುಂದೆ ಚಾಚುವುದರಿಂದ ಖಡ್ಗ ಮುದ್ರಾ ಆಗುತ್ತದೆ.

ಮೃಗಿ, ಹಂಸಿ ಮತ್ತು ಸೂಕರ ಇವು ಮೂರು ಹೋಮಮುದ್ರೆಗಳಾಗಿರುತ್ತವೆ. ಮಧ್ಯಮಾ, ಅನಾಮಿಕಾ ಮತ್ತು ಹೆಬ್ಬೆರಳು ಸೇರಿಸಿದರೆ ಮೃಗಿಮುದ್ರಾ, ಕಿರುಬೆರಳನ್ನುಬಿಟ್ಟು ಉಳಿದ ಎಲ್ಲ ಬೆರಳುಗಳನ್ನು ಸೇರಿಸಿದರೆ ಹಂಸಿ ಮುದ್ರಾ, ಕೈಯನ್ನು ಸಂಕುಚಿತಗೊಳಿಸುವುದರಿಂದ ಸೂಕರಿ ಮುದ್ರಾ ಆಗುತ್ತದೆ. ಈ ಪ್ರಕಾರ ಮುದ್ರೆಗಳ ಲಕ್ಷಣಗಳನ್ನು ವಿವರಿಸಲಾಗಿದ್ದು, ಶಾಂತಿ ಕರ್ಮಗಳಲ್ಲಿ, ಮೃಗಿ, ಹಂಸಿ ಮತ್ತು ಅನ್ಯ ಸ್ತಂಭನಾದಿ ಕಾರ್ಯಗಳಲ್ಲಿ ಸೂಕರಿ ಮುದ್ರೆಯನ್ನು ಪ್ರಯೋಗಿಸಬೇಕು.

**ಚಂದ್ರತೋಯಧರಾಕಾಶ ಪವನಾಲವರ್ಣಕಾಃ ।**
**ಷಟ್ಸು ಕರ್ಮಸು ಯಂತ್ರಸ್ಥ ಬೀಜಾನ್ಯುಕ್ತಾನಿ ಮಂತ್ರಿಭಿಃ** ॥ 30 ॥
**ಸ್ವರಾಃ ಸಶೌ ಚಂದ್ರವರ್ಣಾ ಭೂತವರ್ಣಾ ಉದೀರಿತಾಃ ।**
**ಚಂದ್ರಾರ್ಣಹೀನಾಸ್ತೆ ಗ್ರಾಹ್ಯಾ ವಶೀಕೃತ್ಯಾದಿ ಕರ್ಮಣಿ** ॥ 31 ॥
**ಕೇಚಿತ್ ಸವಲಹಾನ್ಯಂ ರಮಾಹುಶ್ಚಂದ್ರಾದಿವರ್ಣಕಾನ್ ।**

ಶಾಂತಿ ಆದಿ ಷಟ್ಕರ್ಮಗಳಲ್ಲಿ ಯಂತ್ರದ ಮೇಲೆ ಚಂದ್ರ, ಜಲ, ಧರಾ, ಆಕಾಶ, ಪವನ ಮತ್ತು ಅನಲ ವರ್ಣಗಳ ಬೀಜಾಕ್ಷರಗಳನ್ನು ಕ್ರಮವಾಗಿ ಬರೆಯಬೇಕು ಎಂದು ವಿದ್ವಾಂಸರು ಹೇಳುತ್ತಾರೆ.

ಹದಿನಾರು ಸ್ವರಗಳು, ಸ ಮತ್ತು ಶ ಇವು ಒಟ್ಟು ಹದಿನೆಂಟು ಚಂದ್ರವರ್ಣದ ಬೀಜಾಕ್ಷರಗಳಾಗಿವೆ. ಚಂದ್ರವರ್ಣದಿಂದ ಹೀನ ಪಂಚಭೂತಗಳ ಅಕ್ಷರಗಳು ಜಲ ಮುಂತಾದ ತತ್ವಗಳ ಬೀಜಾಕ್ಷರಗಳು ವಶ್ಯಾದಿ ಕರ್ಮಗಳಿಗೆ ಉಪಯುಕ್ತವಾಗಿವೆ. ಕೆಲವು ಆಚಾರ್ಯರು ಸ,ವ,ಲ,ಹ,ಯ ಮತ್ತು ರ ಗಳನ್ನು ಕ್ರಮವಾಗಿ ಚಂದ್ರ, ಜಲ,ಭೂಮಿ, ಆಕಾಶ ಮತ್ತು ವಾಯು ಹಾಗೂ ಅಗ್ನಿಗಳ ಬೀಜಾಕ್ಷರಗಳೆಂದು ಹೇಳುತ್ತಾರೆ.

ವಿದ್ವೇಷಣ ಕರ್ಮಗಳಿಗೆ ದಶಮಿ, ಏಕಾದಶಿ, ನವಮಿ, ಅಷ್ಟಮಿ ತಿಥಿಗಳಂದು ಶುಕ್ರವಾರ ಅಥವಾ ಶನಿವಾರವಿರುವಾಗ ಶುಭವಾಗಿರುತ್ತದೆ.

ಕೃಷ್ಣಪಕ್ಷದ ಅಷ್ಟಮಿ ಅಥವಾ ಚತುರ್ದಶಿಯಂದು ಶನಿವಾರವಿದ್ದರೆ ಉಚ್ಚಾಟನ ಕಾರ್ಯವು ಸಿದ್ಧಿಯಾಗುತ್ತದೆ. ಕೃಷ್ಣಪಕ್ಷದ ಅಷ್ಟಮಿ, ಚತುರ್ದಶಿ ಮತ್ತು ಅಮಾವಾಸ್ಯೆಗಳಂದು ರವಿವಾರವಿದ್ದರೆ ಮಾರಣ ಮತ್ತು ಸ್ತಂಭನ ಕರ್ಮಗಳು ಸಿದ್ಧವಾಗುತ್ತವೆ.

**ಪದ್ಮಂ ಸ್ವಸ್ತಿಕವಿಕಟೆ ಕುಕ್ಕುಟಂ ವಜ್ರಭದ್ರಕೆ**
**ಶಾಂತ್ಯಾದಿಷು ಪ್ರಕುರ್ವೀತ ಕ್ರಮಾದಾಸನಮುತ್ತಮಮ್ ।** ॥ 15 ॥

**ಗೋಖಡ್ಗಜಫೇರುಣಾಂ ಮೇಷಿಮಹಿಷಯೋಸ್ತಥಾ**
**ಕೃತೌ ನಿವೇಶ್ಯ ಕುರ್ವೀತ ಜಪಂ ಶಾಂತ್ಯಾದಿಕರ್ಮಣಿ ।** ॥ 16 ॥
**ಆಸನಾನ್ಯೇವ ಸಂಕೀರ್ತ್ಯವಿನ್ಯಾಸಃ ಪ್ರೋಚ್ಯತೆಧುನಾ** ॥ 17 ॥

ಶಾಂತಿ ಮುಂತಾದ ಷಟ್ಕರ್ಮಗಳಿಗೆ ಕ್ರಮವಾಗಿ ಪದ್ಮಾಸನ, ಸ್ವಸ್ತಿಕಾಸನ, ವಿಕಟಾಸನ, ಕುಕ್ಕುಟಾಸನ, ವಜ್ರಾಸನ ಮತ್ತು ಭದ್ರಾಸನಗಳನ್ನು ಉಪಯೋಗಿಸಬೇಕು. ಹಸು, ಖಡ್ಗಮೃಗ, ಆಮೆ, ನರಿ, ಕುರಿ ಮತ್ತು ಎಮ್ಮೆಯ ಚರ್ಮದ ಆಸನದ ಮೇಲೆ ಕುಳಿತು ಶಾಂತ್ಯಾದಿ ಷಟ್ಕರ್ಮಗಳನ್ನು ಮಾಡಬೇಕು.

### ವಿನ್ಯಾಸ ಕಥನ

**ಗ್ರಂಥನಂ ಚ ವಿದರ್ಭಾಕ್ಯಃ ಸಂಪುಟೊ ರೋಧನಂ ತಥಾ ।**
**ಯೋಗಃ ಪಲ್ಲವ ಏತೆ ಷಡ್ ವಿನ್ಯಾಸಾಃ ಕರ್ಮಸುಸ್ಮೃತಾ** ॥ 18 ॥

**ಪ್ರತ್ಯೇಕಮೇಷಾಂ ಷಣ್ಣಾಂ ತು ಲಕ್ಷ್ಮಂ ಪ್ರಣಿಗದ್ಯತೆ ।**
**ಏಕೋ ಮಂತ್ರಸ್ಯ ವರ್ಣಾಃ ಸ್ಯಾತ್ತತೊ ನಾಮಾಕ್ಷರಂ ಪುನಃ** ॥ 19 ॥

**ಮಂತ್ರಾರ್ಣೊ ನಾಮವರ್ಣಶ್ಚೈತ್ಯೇವಂ ಗ್ರಂಥನಮೀರಿತಮ್ ।**
**ಆದೌ ಮಂತ್ರಾಕ್ಷರ ದ್ವಂದ್ವಮೇಕಂ ನಾಮಾಕ್ಷರಂ ತತಃ** ॥ 20 ॥

**ಏವಂ ಪುನಃ ಪುನಃ ಪ್ರೋಕ್ತೊ ವಿದರ್ಭೊ ಮಂತ್ರವಿತ್ತಮೈಃ ।**
**ಮಂತ್ರಮಾದೌ ಸಮುಚ್ಚಾರ್ಯ ತತೊ ನಾಮಾಖಿಲಂ ಪಠೇತ್** ॥ 21 ॥

**ಅಂತೆ ವ್ಯುತ್ಕ್ರಮತೊ ಮಂತ್ರಮೇಷ ಸಂಪುಟ ಈರಿತಮ್ ಮ ।**
**ಆದಿಮಧ್ಯಾವಸಾನೇಷು ನಾಮ್ನೋ ಮಂತ್ರಸ್ತು ರೋಧನಮ್** ॥ 22 ॥





**ನಾಮಾಂತೆ ತು ಮನುರ್ಯೋಗೆ ಮಂತ್ರಾಂತೆ ನಾಮಪಲ್ಲವಃ ।**

ಆಸನಗಳ ನಂತರ ಈಗ ವಿನ್ಯಾಸಗಳನ್ನು ಹೇಳಲಾಗುತ್ತದೆ. ಶಾಂತಿ ಮುಂತಾದ ಷಟ್ಕರ್ಮಗಳಲ್ಲಿ ಕ್ರಮವಾಗಿ ಗ್ರಂಥನ, ವಿದರ್ಭ, ಸಂಪುಟ, ರೋಧನ, ಯೋಗ ಮತ್ತು ಪಲ್ಲವ ಈ ಪ್ರಕಾರ ಆರು ವಿನ್ಯಾಸಗಳಿರುತ್ತದೆ.

1. ಮಂತ್ರದ ಒಂದು ಅಕ್ಷರ ಅದರ ನಂತರ ಹೆಸರಿನ ಒಂದು ಅಕ್ಷರ ಈ ಪ್ರಕಾರ ಮಂತ್ರ ಮತ್ತು ನಾಮದ ಅಕ್ಷರಗಳ ಪುನಃ ಗ್ರಂಥನ ಮಾಡುವುದು ಗ್ರಂಥನ ವಿನ್ಯಾಸವೆನ್ನುತ್ತಾರೆ. । 2. ಪ್ರಾರಂಭದಲ್ಲಿ ಮಂತ್ರದ ಎರಡು ಅಕ್ಷರ ಅದರ ನಂತರ ಹೆಸರಿನ ಒಂದು ಅಕ್ಷರ ಈ ಪ್ರಕಾರ ಮಂತ್ರ ಮತ್ತು ನಾಮದ ಅಕ್ಷರಗಳ ವಿನ್ಯಾಸವನ್ನು ವಿದರ್ಭವಿನ್ಯಾಸವೆನ್ನುತ್ತಾರೆ. । 3. ಮೊದಲು ಸಮಗ್ರ ಮಂತ್ರದ ಉಚ್ಚಾರಣ ನಂತರ ಸಮಗ್ರ ನಾಮಾಕ್ಷರಗಳ ಉಚ್ಚಾರಣ ಮಾಡುವುದು ನಂತರ ಇದಾದ ಮೇಲೆ ವಿಲೋಮ ಕ್ರಮದಿಂದ ಮಂತ್ರವನ್ನು ಹೇಳುವುದು ಸಂಪುಟವಿನ್ಯಾಸವಾಗುತ್ತದೆ. । 4. ನಾಮದ ಆದಿ, ಮಧ್ಯ ಮತ್ತು ಅಂತದಲ್ಲಿ ಮಂತ್ರವನ್ನು ಉಚ್ಚಾರಣ ಮಾಡುವುದು ರೋಧನ ವಿನ್ಯಾಸವಾಗುತ್ತದೆ. । 5. ನಾಮದ ಅಂತದಲ್ಲಿ ಮಂತ್ರವನ್ನು ಹೇಳುವುದು ಯೋಗ ವಿನ್ಯಾಸವಾಗುತ್ತದೆ. । 6. ಮಂತ್ರದ ಕೊನೆಯಲ್ಲಿ ನಾಮೋಚ್ಚಾರಣವನ್ನು ಪಲ್ಲವವಿನ್ಯಾಸವೆಂದು ಕರೆಯಲಾಗುತ್ತದೆ.

### ಮಂಡಲಗಳ ಲಕ್ಷಣಗಳು

**ಅರ್ಧಚಂದ್ರನಿಭಂ ಪಾರ್ಶ್ವದ್ವಯೆ ಪದ್ಮದ್ವಯಾಂಕಿತಮ್** ॥ 23 ॥
**ಜಲಸ್ಯ ಮಂಡಲಂ ಪ್ರೋಕ್ತಂ ಪ್ರಶಸ್ತಂ ಶಾಂತಿ ಕರ್ಮಣಿ ।**
**ತ್ರಿಕೋಣಂ ಸ್ವಸ್ತಿಕೋಪೇತಂ ವಶ್ಯೆ ವಹ್ನೇಸ್ತು ಮಂಡಲಮ್** ॥ 24 ॥

**ಚತುರಸ್ರಂ ವಜ್ರಯುಕ್ತಂ ಸ್ತಂಭೆ ಭೂಮೇಸ್ತು ಮಂಡಲಮ್ ।**
**ವೃತ್ತಂ ದಿವಸ್ತಾದ್ವಿದ್ವೇಷೆ ಬಿಂದುಷಟ್ಕಾಂಕಿತಂ ತು ತತ್** ॥ 25 ॥
**ವಾಯುಮಂಡಲಮುಚ್ಚಾಟೆ ಮಾರಣೆ ವಹ್ನಿಮಂಡಲಮ್ ।**

ಎರಡೂ ಬದಿಗಳಲ್ಲಿ ಎರಡೆರಡು ಕಮಲಗಳಿಂದ ಯುಕ್ತ ಅರ್ಧಚಂದ್ರಾಕಾರ ಚಿಹ್ನವನ್ನು ಜಲಮಂಡಲವೆನ್ನುತ್ತಾರೆ. ಇದು ಶಾಂತಿಕರ್ಮಗಳಿಗೆ ಪ್ರಶಸ್ತವಾಗಿರುತ್ತದೆ. । ತ್ರಿಕೋಣದ ಮಧ್ಯದಲ್ಲಿ ಸ್ವಸ್ತಿಕ ಚಿಹ್ನವಿಡುವುದು ಅಗ್ನಿಮಂಡಲವಾಗುತ್ತದೆ. ಇದು ವಶ್ಯಕರ್ಮಗಳಲ್ಲಿ ಸೂಕ್ತವಾಗಿರುತ್ತದೆ. । ವಜ್ರ ಚಿಹ್ನದಿಂದ ಯುಕ್ತ ಚೌಕೋನವು ಭೂಮಿಮಂಡಲವಾಗಿರುತ್ತದೆ. ಮತ್ತು ಸ್ತಂಭನ ಕಾರ್ಯಗಳಲ್ಲಿ ಪ್ರಶಸ್ತವಾಗಿರುತ್ತದೆ.

ಜಪೇನ್ಮಾಯಾಪುಟಂ ಮಂತ್ರಂ ಸಹಸ್ರಂ ಗೋಪನಂ ಹಿ ತತ್ ।
ಬಾಲಾತಾರ್ತೀಯ ಬೀಜೇನ ಗಗನಾದ್ಯೇನ ಸಂಪುಟಿಮ್ || 107 ||

ಸಹಸ್ರಂ ಪ್ರಜಪೇನ್ಮಂತ್ರಮೇತದಾಪ್ಯಯನಂ ಮತಮ್ ।
ಸಂಸ್ಕಾರದಶಕಂ ಪ್ರೋಕ್ತಂ ಮನುನಾಂ ದೋಷನಾಶನಮ್ || 108 ||

**ಜೀವನ ಸಂಸ್ಕಾರ :** ಸ್ವಧಾ ಸಹಿತ ವಷಟ್ ಮಂತ್ರದಿಂದ ಸಂಪುಟಿತ ಮೂಲಮಂತ್ರದ ಒಂದು ಸಾವಿರ ಜಪ ಮಾಡುವುದರಿಂದ ಮಂತ್ರದ ಜೀವನ ಸಂಸ್ಕಾರವಾಗುತ್ತದೆ. 'ಸ್ವಧಾ ವಷಟ್ ರಾಮಾಯ ನಮಃ ವಷಟ್ ಸ್ವಾಹಾ"

**ತರ್ಪಣ ಸಂಸ್ಕಾರ:** ಹಾಲು, ತುಪ್ಪ ಮತ್ತು ನೀರಿನಿಂದ ಮೂಲ ಮಂತ್ರದ ಮೂಲಕ ಒಂದು ನೂರು ಬಾರಿ ತರ್ಪಣ ಕೊಡುವುದರಿಂದ ಮಂತ್ರದ ತರ್ಪಣ ಸಂಸ್ಕಾರವಾಗುತ್ತದೆ. ತರ್ಪಣ ಸಂಸ್ಕಾರಕ್ಕಾಗಿ ಗೋರೋಚನಾದಿಗಳಿಂದ ತಾಡವೋಲೆಯ ಮೇಲೆ ಮೂಲಮಂತ್ರವನ್ನು ಬರೆದು ನಂತರ ತರ್ಪಣ ಕೊಡಬೇಕು.

**ಗೋಪನ ಸಂಸ್ಕಾರ :** ಮಾಯಾ ಬೀಜ (ಹ್ರೀಂ) ದಿಂದ ಸಂಪುಟಿತ ಮೂಲಮಂತ್ರದ ಒಂದು ಸಾವಿರ ಜಪ ಮಾಡುವುದರಿಂದ ಮಂತ್ರದ ಗೋಪನ ಸಂಸ್ಕಾರವಾಗುತ್ತದೆ. ಹ್ರೀಂ ರಾಮಾಯ ನಮಃ ಹ್ರೀಂ

**ಅಪ್ಯಾಯನ ಸಂಸ್ಕಾರ :** ಬಾಲಾದ ತೃತಿಯ ಬೀಜ ಮಂತ್ರ 'ಸೌ'ದ ಪ್ರಾರಂಭದಲ್ಲಿ ಗಗನ (ಹ್) ಅರ್ಥಾತ್ 'ಹ ಸೌಃ' ದಿಂದ ಸಂಪುಟಿತ ಮೂಲಮಂತ್ರದ ಒಂದು ಸಾವಿರ ಜಪ ಮಾಡುವುದರಿಂದ ಮಂತ್ರದ ಅಪ್ಯಾಪನ ಸಂಸ್ಕಾರವಾಗುತ್ತದೆ. ಈವರೆಗೆ ಮಂತ್ರಗಳ ಛಿನ್ನಾದಿ 50 ದೋಷಗಳ ನಿವಾರಣೆಗೆ ಹತ್ತು ಪ್ರಕಾರದ ಸಂಸ್ಕಾರಗಳನ್ನು ಹೇಳಲಾಗಿದೆ.

**ಕಲಿಯುಗದ ಸಿದ್ಧಿಪ್ರದ ಮಂತ್ರಗಳು**

ಸಿದ್ಧಿಪ್ರದಾ ಕಲಿಯುಗೆ ಯೆ ಮಂತ್ರಸ್ತಾನ ವದಾಮ್ಯತಃ ।
ತ್ರ್ಯಕ್ಷ ಏಕಾಕ್ಷರೋನುಷ್ಟುಪ್ ತ್ರಿವಿಧೋ ನರಕೇಸರಿ || 109 ||

ಏಕಾಕ್ಷರೋರ್ಜುನೋನುಷ್ಟುಬ್ವಿಧಸ್ತುರಗಾನನಃ ।
ಚಿಂತಾಮಣಿಃ ಕ್ಷೇತ್ರಪಾಲೋ ಭೈರವೋ ಯಕ್ಷನಾಯಕಃ || 110 ||

ಗೋಪಾಲೋ ಗಜವಕ್ತ್ರಶ್ಚ ಚೇಟಿಕಾ ಯಕ್ಷಿಣಿ ತಥಾ ।
ಮಾತಂಗಿ ಸುಂದರಿ ಶ್ಯಾಮಾ ತಾರಾ ಕರ್ಣ ಪಿಶಾಚಿನಿ || 111 ||

ಶಬರ್ಯೇಕಜಟಾ ವಾಮಾ ಕಾಲೀ ನೀಲಸರಸ್ವತಿ ।
ತ್ರಿಪುರಾ ಕಾಲರಾತ್ರಿಶ್ಚ ಕಲಾವಿಷ್ಟಪ್ರದಾ ಇಮೆ || 112 ||





ನೃಸಿಂಹ ತ್ರ್ಯಕ್ಷರ, ಏಕಾಕ್ಷರ ಮತ್ತು ಅನುಷ್ಟುಪ್ ಮಂತ್ರ, (ಕಾರ್ತವೀರ್ಯ) ಅರ್ಜುನನ ಏಕಾಕ್ಷರ ಮತ್ತು ಅನುಷ್ಟುಪ್ ಮಂತ್ರ, ಹಯಗ್ರೀವ ಮಂತ್ರ, ಚಿಂತಾಮಣಿ ಮಂತ್ರ, ಕ್ಷೇತ್ರಪಾಲ, ಭೈರವ, ಯಕ್ಷರಾಜ ಕುಬೇರ, ಗೋಪಾಲ, ಗಣಪತಿ, ಚೇಟಕಾಯಕ್ಷಿಣಿ, ಮಾತಂಗಿ ಸುಂದರಿ, ಶ್ಯಾಮಾ, ತಾರಾ, ಕರ್ಣಪಿಶಾಚಿನಿ, ಶಬರಿ, ಏಕಜಟಾ, ವಾಮಾಕಾಲಿ ನೀಲಸರಸ್ವತಿ, ತ್ರಿಪುರಾ ಮತ್ತು ಕಾಲರಾತ್ರಿ ಮಂತ್ರಗಳು ಕಲಿಯುಗದಲ್ಲಿ ಅಭೀಷ್ಟ ಫಲದಾಯಕ ಮಂತ್ರಗಳೆಂದು ಹೇಳಲಾಗಿದೆ.

ನೃಸಿಂಹ ಏಕಾಕ್ಷರ ಮಂತ್ರ –ಕ್ಷ್ರೌಂ ಅಕ್ಷರಮಂತ್ರ –ಹ್ರೀಂ ಕ್ಷ್ರೌಂ ಹ್ರೀಂ ಅನುಷ್ಟುಪ್ ಮಂತ್ರ–ಉಗ್ರವೀರಂ ಮಹಾವಿಷ್ಣುಂ ಜ್ವಲಂತು ಸರ್ವತೋಮುಖಮ್। ನೃಸಿಂಹ ಭೀಷಣಂ ಭದ್ರಂ ಮೃತ್ಯುಂ ಮೃತ್ಯುಂ ನಮಾಮ್ಯಹಮ್ ಕಾರ್ತವೀರ್ಯಾರ್ಜುನೊ ನಾಮ ರಾಜಾ ಬಾಹು ಸಹಸ್ರವಾನ್। ತಸ್ಯ ಸ್ಮರಣ ಮಾತ್ರೇಣ ಗತಂ ನಷ್ಟಂ ಚ ಲಭ್ಯತೆ

ಹಯಗ್ರೀವ ಏಕಾಕ್ಷರ ಮಂತ್ರ ಹ್ಸೌಂ, ಅಟನುಷ್ಟುಪ್ ಮಂತ್ರ–ಉದ್ಗಿರದ್ ಪ್ರಣವೋದ್ಗೀಥ ಸರ್ವವಾಗೀಶ್ವರೇಶ್ವರ । ಸರ್ವವೇದಮಯಾಚಿಂತಯ ಸರ್ವ ಭೋದಯ ಬೋಧಯ, ಚಿಂತಾಮಣಿಮಂತ್ರಃ ಕ್ಷ್ರೌಂ

**ವಿಪ್ರಾದಿ ತ್ರಿವರ್ಣ ದೀಕ್ಷೋಚಿತ ಮಂತ್ರ**

ಅಘೋರಾ ದಕ್ಷಿಣಾಮೂರ್ತಿರುಮಾಮಹೇಶ್ವರೋ ಮನುಃ ।
ಹಯಗ್ರೀವೊ ವರಾಹಶ್ಚ ಲಕ್ಷ್ಮಿನಾರಾಯಣಸ್ತಥಾ || 113 ||

ಪ್ರಣವಾದ್ಯಶ್ಚತುರ್ವರ್ಣಾ ವಹ್ನೇರ್ಮಂತ್ರಾಸ್ತಥಾ ರವೇಃ ।
ಪ್ರಣವಾದ್ಯೋ ಗಣಪತಿರ್ಹರಿದ್ರಾಗಣನಾಯಕಃ || 114 ||

ಸೌರೋಷ್ಟಾಕ್ಷರಮಂತ್ರಶ್ಚ ತಥಾ ರಾಮಷಡಕ್ಷರಃ ।
ಮಂತ್ರರಾಜೊ ಧ್ರುವಾದಿಶ್ಚ ಪ್ರಣವೊ ವೈದಿಕೊ ಮನುಃ || 115 ||

ವರ್ಣತ್ರಯಾಯ ದಾತವ್ಯಾ ಏತೆ ಶೂದ್ರಾಯನೋ ಬುಧೈಃ ।

ಅಘೋರ, ದಕ್ಷಿಣಾಮೂರ್ತಿ, ಉಮಾಮಹೇಶ್ವರ (ಓಂ.ಹ್ರೀಂ. ಹ್ರೌಂ ನಮಃ ಶಿವಾಯ) ಹಯಗ್ರೀವ, ವರಾಹ.ಲಕ್ಷ್ಮಿನಾರಾಯಣ ಮಂತ್ರ ಪ್ರಣವ ಮಂತ್ರಗಳನ್ನು ನಾಲ್ಕು ವರ್ಣದವರು, ಅಗ್ನಿಮಂತ್ರ, ಸೂರ್ಯ ಮಂತ್ರ, ಪ್ರಣವ ಸಹಿತ ಗಣಪತಿ ಮತ್ತು ಹರಿದ್ರಾಗಣಪತಿ, ಅಷ್ಟಾಕ್ಷರ ಸೂರ್ಯಮಂತ್ರ, ಷಡಕ್ಷರ ರಾಮಮಂತ್ರ, ಪ್ರಣವಾದಿ ಮಂತ್ರರಾಜ ನೃಸಿಂಹ ಮಂತ್ರ, ಪ್ರಣವ ಹಾಗೂ ಈ ವೈದಿಕ ಮಂತ್ರಗಳನ್ನು, ಶೂದ್ರರನ್ನು ಹೊರತುಪಡಿಸಿ ಅನ್ಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣದವರಿಗೆ ಮಾತ್ರ ಕೊಡಬೇಕು.

ಸುದರ್ಶನಂ ಪಾಶುಪತಮಾನೇಯಾಸ್ತ್ರಂ ನೃಕೇಸರಿ
ವರ್ಣದ್ವಯಾಯ ದಾತವ್ಯಾ ನಾನ್ಯವರ್ಣೇ ಕದಾಚನ । ॥ 116 ॥
ಛಿನ್ನಮಸ್ತಾ ಚ ಮತಂಗಿ ತ್ರಿಪುರಾ ಕಾಲಿಕಾ ಶಿವಃ
ಲಘುಶ್ಯಾಮಾ ಕಾಲರಾತ್ರಿರ್ಗೋಪಾಲೋ ಜಾನಕೀ ಪತಿಃ । ॥ 117 ॥
ಉಗ್ರತಾರಾ ಭೈರವಶ್ಚ ದೇಯಾ ವರ್ಣಚತುಷ್ಟಯೆ
ಮೃಗೀದೃಶಾಂ ವಿಶೇಷೇಣ ಮಂತ್ರಾ ಏತೆ ಸುಸಿದ್ಧಿದಾಃ । ॥ 118 ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ನಾರ್ಯೋಽಧಿಕಾರಿಣಃ ॥ 119 ॥
ಶ್ರದ್ಧಾವಂತೊ ದೇವಗುರುದ್ವಿಜಪೂಜಾಸು ಸರ್ವಥಾ ।

ಸುದರ್ಶನ, ಪಾಶುಪತ, ಆಗ್ನೇಯಾಸ್ತ್ರ ಮತ್ತು ನೃಸಿಂಹ ಮಂತ್ರಗಳನ್ನು ಬ್ರಾಹ್ಮಣ, ಕ್ಷತ್ರಿಯ, ಕೇವಲ ಈ ಎರಡು ವರ್ಣದವರಿಗೆ ಮಾತ್ರ ಕೊಡಬೇಕು. ಅನ್ಯ ವರ್ಣದವರಿಗೆ ಕೊಡಬಾರದು.

ಛಿನ್ನಮಸ್ತಾ, ಮಾತಂಗಿ, ತ್ರಿಪುರಾ, ಕಾಲಿಕಾ, ಶಿವ, ಲಘುಶ್ಯಾಮಾ, ಕಾಲರಾತ್ರಿ ಗೋಪಾಲ, ಜಾನಕಿಪತಿರಾಮ, ಉಗ್ರಾತಾರಾ, ಭೈರವ ಮಂತ್ರಗಳನ್ನು ನಾಲ್ಕೂ ವರ್ಣದವರಿಗೆ ಕೊಡಬೇಕು. ಸ್ತ್ರೀಯರಿಗೂ ಕೂಡಾ ಈ ಮಂತ್ರಗಳು ವಿಶೇಷ ರೂಪದಲ್ಲಿ ಸಿದ್ಧಿದಾಯಕವೆಂದು ಹೇಳಲಾಗುತ್ತದೆ.

ದೇವತೆ, ಗುರು ಮತ್ತು ದ್ವಿಜ ಪೂಜೆಗಳಲ್ಲಿ ಶ್ರದ್ಧೆಯುಳ್ಳ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಸ್ತ್ರೀಯರು ಎಲ್ಲರೂ ಅಧಿಕಾರಿಯಾಗಿರುವರು.

### ವರ್ಣಾನುಕ್ರಮೇಣ ದೇಯ ಬೀಜಮಂತ್ರ

ಮಾಯಾಂ ಕಾಮಂ ಶ್ರೀಯಂ ವಾಚಂ ಪ್ರದಧ್ಯಾನ್ಮುಖಜನ್ಮನೆ ॥ 120 ॥
ಮಾಯಾಮೃತೇಬಾಹುಜೇಭ್ಯ ಊರುಜೇಭ್ಯಃ ಶ್ರಿಯಂ ಗಿರಮ್ ।
ವಾಣೀಬೀಜಂ ತು ಶೂದ್ರೇಭ್ಯೋನ್ಯೆಭ್ಯೋ ವರ್ಮವಷಣ್ಣಮಃ ॥ 121 ॥

ಮಾಯಾ (ಹ್ರೀಂ) ಕಾಮ (ಕ್ಲೀಂ) ಶ್ರೀ (ಶ್ರೀಂ) ಮತ್ತು ವಾಕ್ (ಐಂ) ಬೀಜ ಮಂತ್ರಗಳನ್ನು ಬ್ರಾಹ್ಮಣರಿಗೆ ಕೊಡಬೇಕು. ಮಾಯಾಬೀಜ (ಹ್ರೀಂ)ವನ್ನು ಬಿಟ್ಟು ಉಳಿದ ಕ್ಲೀಂ, ಶ್ರೀಂ ಐಂ ಬೀಜಗಳನ್ನು ಕ್ಷತ್ರಿಯರಿಗೆ, ಶ್ರೀಂ ಮತ್ತು ಐಂ ಬೀಜಗಳನ್ನು ವೈಶ್ಯರಿಗೆ, ವಾಗ್ಬೀಜ (ಐಂ) ಶೂದ್ರರಿಗೆ ವರ್ಮ (ಹುಂ) ವಷಟ್ ಮತ್ತು ನಮಃ ಅನ್ಯ (ಕೆಳಗಿನ) ವರ್ಣದವರಿಗೆ ಕೊಡಬೇಕು.





### ಸಾಧಾರಣ ಹೋಮ ದ್ರವ್ಯಗಳು

ಸರ್ವಸಾಧಾರಣಮಥ ಹೋಮದ್ರವ್ಯಮಿಹೋಚ್ಯತೆ ।
ಫಲೈರ್ಮುತ್ತೈಃ ಸುಖಾವಾಪ್ತಿಃ ಪಾಲಾಶೈರಿಷ್ಟಸಿದ್ಧಯೆ ॥ 122 ॥
ಹಯಮಾರೈಃ ಸ್ತ್ರಿಯೊ ವಶ್ಯಾ ಗುಡೂಚ್ಯಾ ರೋಮಸಂಕ್ಷಯಃ ।
ದೂರ್ವಯಾ ಬುದ್ಧಿವೃದ್ಧಿಃ ಸ್ಯಾದ್ ಗುಡೇನ ಜನವಶ್ಯತಾ ॥ 123 ॥
ಬಿಲ್ವಪತ್ರೈರ್ಘೃತೈಃ ಪದ್ಮೈ ಪಾಟಲೈಶ್ಚಂಪಕೈಃ ಶ್ರಿಯಃ ।
ಸಿದ್ಧಾರ್ಥೈರ್ಮಲ್ಲಿಕಾಭಿಶ್ಚ ಕೀರ್ತಯೇಜ್ಜಾತಿಭಿರ್ಗಿರಃ ॥ 124 ॥
ವ್ರಿಹಿಬಿಶ್ಚ ಯವೈಃ ಪ್ಲಕ್ಷೋದುಂಬರಾಶ್ವತ್ಥಜೈಧಸಾ ।
ತಿಲೈಸ್ತ್ರಿಮಧುರೈರಿಷ್ಟಾಃ ಸಂಪದಃ ಸ್ಯುರ್ನೃಣಾ ಹುತಃ ॥ 125 ॥
ಕಿಂಶುಕೈಃ ಕಾಸಮರ್ದೈಶ್ಚ ಕೃತಮಾಲೈಶ್ಚ ಪಾಟಲೈಃ ।
ವಿಪ್ರಾದಯಃ ಕ್ರಮಾದ್ವಶ್ಯಾಃ ಸೌಭಾಗ್ಯಂ ಗಂಧವಸ್ತುಭಿಃ ॥ 126 ॥

ಫಲಗಳ ಹೋಮದಿಂದ ಸುಖಪ್ರಾಪ್ತಿ, ಮುತ್ತುಗದ ಹೋಮದಿಂದ ಇಷ್ಟಸಿದ್ಧಿ, ಕಣಗಿಲ ಹೂಗಳ ಹೋಮದಿಂದ ಸ್ತ್ರೀಯರು ವಶವಾಗುತ್ತಾರೆ. ಅಮೃತ ಬಳ್ಳಿಯ ಹೋಮದಿಂದ ರೋಗಗಳ ನಾಶ, ಗರಿಕೆಯ ಹೋಮದಿಂದ ಬುದ್ಧಿಯ ವೃದ್ಧಿ ಮತ್ತು ಬೆಲ್ಲದ ಹೋಮದಿಂದ ಸಾಮಾನ್ಯ ಜನರು ವಶವಾಗುತ್ತಾರೆ.

ಬಿಲ್ವಪತ್ರ, ತುಪ್ಪ, ಕಮಲ,ಗುಲಾಬಿ ಮತ್ತು ಚಂಪಾ ಹೂಗಳ ಹೋಮದಿಂದ ಧನಪ್ರಾಪ್ತಿಯಾಗುತ್ತದೆ. ಬಿಳಿಯ ಸಾಸಿವೆ ಮತ್ತು ಮಲ್ಲಿಗೆ ಹೂಗಳ ಹೋಮದಿಂದ ಕೀರ್ತಿ ದೊರೆಯುತ್ತದೆ. ಜಾಜಿ ಪುಷ್ಪಗಳ ಹೋಮದಿಂದ ವಾಕ್‌ಸಿದ್ಧಿ ಪ್ರಾಪ್ತವಾಗುತ್ತದೆ.

ಭತ್ತ, ಜವೆಗೋಧಿ, ಜುಲ್ಲಿ ಹಣ್ಣು, ಔದುಂಬರ ಮತ್ತು ಅರಳೆ ಮರದ ಸಮಿಧಾ ಮತ್ತು ತ್ರಿಮಧು (ಸಕ್ಕರೆ, ತುಪ್ಪ, ಜೇನುತುಪ್ಪ) ಸಹಿತ ತಿಲಗಳ ಹೋಮದಿಂದ ಇಚ್ಛಿತ ಸಂಪತ್ತು ಪ್ರಾಪ್ತವಾಗುತ್ತದೆ.

ಮುತ್ತುಗದ ಕಾಸಮದ, ಕೃತಮಾಲ ಮತ್ತು ಗುಲಾಬಿಗಳ ಹೋಮದಿಂದ ಕ್ರಮವಾಗಿ ಬ್ರಾಹ್ಮಣಾದಿ ವರ್ಣಗಳು ವಶೀಭೂತರಾಗುತ್ತಾರೆ. ಕರ್ಪೂರಾದಿ ಸುಗಂಧಿತ ದ್ರವ್ಯಗಳ ಹೋಮದಿಂದ ಸೌಭಾಗ್ಯ ವೃದ್ಧಿಯಾಗುತ್ತದೆ.

ಕೋದ್ರವೈರ್ವ್ಯಾಧಯೋರಿಣಾಮುನ್ಮತ್ತತ್ವಂ ಬಿಭೀತಕೈಃ । ॥ 127 ॥
ಕಲಾಪೈಃ ಸಾಧ್ವಸೋತ್ಪತ್ತಿರ್ಮಾಷೈಸ್ತೇಷಾಂ ತು ಮೂಕತಾ

ಸಮಿಧಿಭಿಃ ಶಾಲ್ಮಲೈರ್ನಾಶೋ ರಿಪೂಣಾಮಚಿರಾದ್ ಭವೇತ್।
ಕಿಂ ಭೂರಿಣಾ ದದಾತೀಷ್ಟಂ ದೇವತಾ ಸಮುಪಾಸಿತಾ ॥ 128 ॥
ಪುರಶ್ಚರಣ ಏಕಸ್ಮಿನ್ನತೆ ಜನ್ಮಾಂತರಾಘತಃ ।
ಮಂತ್ರೋಯದಿ ನ ಸಿದ್ಧಃ ಸ್ಯಾತ್ತದಾ ತತ್ಪುನರಾಚರೇತ್ ॥ 129 ॥

ನವಣೆಯ ಹೋಮದಿಂದ ಶತ್ರುಗಳಿಗೆ ರೋಗಬಾಧೆ ಮತ್ತು ತಾರೆಕಾಯಿ ಹೋಮದಿಂದ ಶತ್ರುಗಳಿಗೆ ಮತಿಭ್ರಮಣೆಯಾಗುವುದು. ನವಿಲಿನ ಗರಿಯಿಂದ ಹೋಮ ಮಾಡಿದರೆ ಶತ್ರುಗಳಿಗೆ ಭಯ, ಉದ್ದಿನ ಹೋಮದಿಂದ ಶತ್ರುಗಳ ಜಿಹ್ವಾ ಸ್ತಂಭನ, ಶಾಲ್ಮಲಿ ಸಮಿಧಾಗಳಿಂದ ಹೋಮ ಮಾಡಿದರೆ ಶತ್ರುಗಳ ನಾಶವಾಗುತ್ತದೆ. ವಿಧಿ ಪೂರ್ವಕವಾಗಿ ಉಪಾಸನೆ ಮಾಡುವುದರಿಂದ ಇಷ್ಟದೇವತೆಗಳು ಅಭೀಷ್ಟ ಫಲಗಳನ್ನು ಕೊಡುತ್ತಾರೆ.

ಸಂಕ್ಷಿಪ್ತ ಪುರಶ್ಚರಣ ವಿಧಾನ

ಯದ್ವಾ ಸಮುದ್ರಗಾಮಿನ್ಯಾಂ ನದ್ಯಾಮಿಂದುರವಿಗ್ರಹೆ ।
ಸ್ಪರ್ಶಾನ್ಮೋಕ್ಷಾಂತಮಾಜಪ್ಯ ಜುಹುಯಾತ್ತದ್ದಶಾಂಶತಃ ॥ 130 ॥

ವಿಪ್ರಾನ್ಸಂಭೋಜ್ಯ ನಾನಾನ್ನೈರ್ಮಂತ್ರಾಣಾಂ ಸಿದ್ಧಿಮಾಪ್ನುಯಾತ್ ।
ಶಶ್ವಜ್ಜಪಪರಸ್ಯಾಪಿ ಸಿದ್ಧ್ಯಂತಿ ಮನವೋಽಚಿರಾತ್ ॥ 131 ॥

ಚಂದ್ರ ಗ್ರಹಣ ಅಥವಾ ಸೂರ್ಯಗ್ರಹಣಗಳ ಸಮಯದಲ್ಲಿ ಸಮುದ್ರಗಾಮಿನಿ ಗಂಗಾ ಮುಂತಾದ ನದಿಗಳ ಜಲದಲ್ಲಿ ನಿಂತು ಸ್ಪರ್ಶ ಕಾಲದಿಂದ ಮೋಕ್ಷ ಕಾಲದ ಪರ್ಯಂತ ಜಪ ಮಾಡಿ ಅದರ ದಶಾಂಶ ಹೋಮ, ಹೋಮದ ದಶಾಂಶ ಬ್ರಾಹ್ಮಣರಿಗೆ ವಿವಿಧ ಭಕ್ಷ್ಯಗಳ ಭೋಜನ ಮಾಡಿಸುವುದರಿಂದ ಮಂತ್ರವು ಸಿದ್ಧಿಯಾಗುತ್ತದೆ. ನಿರಂತರ ಜಪ ಮಾಡುವುದರಿಂದ ಶೀಘ್ರವಾಗಿ ಮಂತ್ರ ಸಿದ್ಧಿಯಾಗುತ್ತದೆ.

[ಈ ಪ್ರಕಾರ ಶ್ರೀಮನ್ ಮಹೀಧರ ವಿರಚಿತ ಮಂತ್ರಮಹೋದಧಿಯ
ಇಪ್ಪತ್ನಾಲ್ಕನೆಯ ತರಂಗ ಸಮಾಪ್ತವು]







# ॥ ಪಂಚವಿಂಶ ತರಂಗ ॥



## ಶಾಂತ್ಯಾದಿಷಟ್ಕರ್ಮ

ಕರ್ಮಾಣಿ ಷಡಥೊ ವಕ್ಷೆ ಸಿದ್ಧಿದಾನಿ ಪ್ರಯೋಗಃ ।
ಶಾಂತಿರ್ವಶ್ಯಂ ಸ್ತಂಭನಂ ಚ ದ್ವೇಷಮುಚ್ಚಾಟಮಾರಣೆ ॥ 1 ॥

ಉಕ್ತಾನೀಮಾನಿ ಕರ್ಮಾಣಿ ಶಾಂತಿರೋಗಾದಿನಾಶನಮ್ ।
ವಶ್ಯಂ ವಚನಕಾರಿತ್ವಂ ಸ್ತಂಭೋ ವೃತ್ತಿನಿರೋಧನಮ್ ॥ 2 ॥

ದ್ವೇಷೋ ಪ್ರೀತಿಃ ಪ್ರೀತಿಮತೋರುಚ್ಚಾಟಃ ಸ್ಥಾನತಚ್ಯುತಿಃ ।
ಮಾರಣಂ ಪ್ರಾಣಹರಣಮಿತಿ ಷಟ್ಕರ್ಮಲಕ್ಷಣಮ್ ॥ 3 ॥

ಈಗ ಪ್ರಯೋಗಗಳ ಮೂಲಕ ಸಿದ್ಧಿಯನ್ನು ಕೊಡುವ ಷಟ್ಕರ್ಮಗಳನ್ನು ಹೇಳಲಾಗುತ್ತದೆ.

1. ಶಾಂತಿ 2. ವಶ್ಯ 3. ಸ್ತಂಭನ 4. ವಿದ್ವೇಷಣ 5. ಉಚ್ಚಾಟನ 6. ಮಾರಣ ಇವುಗಳನ್ನು ತಂತ್ರಶಾಸ್ತ್ರದಲ್ಲಿ ಷಟ್ಕರ್ಮವೆಂದು ಕರೆಯಲಾಗುತ್ತದೆ.

ರೋಗಾದಿನಾಶಗಳ ಉಪಾಯಕ್ಕೆ ಶಾಂತಿ ಎನ್ನುತ್ತಾರೆ. ಆಜ್ಞಾಕಾರಿಯಾಗಿ

ಮಾಡಿಕೊಳ್ಳುವುದು. ವಶ್ಯ ಅಥವಾ ವಶೀಕರಣ ವೃತ್ತಿಗಳ ಸರ್ವಥಾ ನಿರೋಧ ಸ್ತಂಭನವಾಗುತ್ತದೆ. ಪರಸ್ಪರ ಪ್ರೀತಿಯುಳ್ಳವರಲ್ಲಿ ವಿರೋಧವನ್ನು ಉತ್ಪನ್ನ ಮಾಡುವುದು ವಿದ್ವೇಷಣವೆನ್ನುತ್ತಾರೆ. ಸ್ಥಾನದಿಂದ ಭ್ರಷ್ಟಗೊಳಿಸುವದು ಉಚ್ಚಾಟನ ಯಾಗುತ್ತದೆ ಮತ್ತು ಪ್ರಾಣವನು ತೆಗೆಯುವುದು ಮಾರಣವಾಗುತ್ತದೆ ಇವು ಷಟ್ಕರ್ಮಗಳ ಲಕ್ಷಣಗಳು.

ದೇವತಾದೇವತಾವರ್ಣಾ ಋತುದಿಗ್ದಿವಸಾಸನಮ್ ।
ವಿನ್ಯಾಸಾಮಂಡಲಂ ಮುದ್ರಾಕ್ಷರಂ ಭೂತೋದಯಃ ಸಮಿತ್ ॥ 4 ॥

ಮಾಲಾಗ್ನಿರ್ಲೇಖನಂ ದ್ರವ್ಯಂ ಕುಂಡಸ್ರುಕ್ಸ್ರುವಲೇಖನೀ ।
ಷಟ್ ಕರ್ಮಾಣಿ ಪ್ರತ್ಯುಂಜಿತ ಜ್ಞಾತ್ವೈತಾನಿ ಯಥಾಯಥಮ್ ॥ 5 ॥

ದೇವತಾ, ದೇವತೆಗಳ ವರ್ಣ, ಋತು, ದಿಶೆ, ದಿನ, ಆಸನ, ವಿನ್ಯಾಸ, ಮಂಡಲ, ಮುದ್ರಾ, ಅಕ್ಷರ, ಭೂತೋದಯ, ಸಮಿಧಾಗಳು, ಮಾಲಾ, ಅಗ್ನಿ, ಲೇಖನದ್ರವ್ಯಗಳು, ಕುಂಡ, ಸ್ರುಕ್, ಯಜ್ಞಪಾತ್ರ ಮತ್ತು ಲೇಖನಿ ಈ ಹದಿನಾರು ಅವಶ್ಯಕ ವಸ್ತುಗಳ ಬಗೆಗೆ ಸೂಕ್ತವಾದ ಜ್ಞಾನವನ್ನು ಹೊಂದಿದ್ದು ಷಟ್ಕರ್ಮಗಳಲ್ಲಿ ಪ್ರಯೋಗಿಸಬೇಕು.

ರತಿರ್ವಾಣೀರಮಾಜ್ಯೇಷ್ಠಾದುರ್ಗಾಕಾಲಿ ಚ ದೇವತಾ ।
ಸಿತಾರುಣಹರಿದ್ರಾಭಮಿಶ್ರಶ್ಯಾಮಲಧೂಸರಾಃ ॥ 6 ॥

ಪ್ರಪೂಜಯೇತ್ ಕರ್ಮಾದಾ ಸ್ವವರ್ಣೈಃ ಕುಸುಮೈಃ ಕ್ರಮಾತ್ ।
ಋತುಷಟ್ಕಂ ವಸಂತಾದ್ಯಮಹೋರಾತ್ರಂ ಭವೇತ್ ಕ್ರಮಾತ್ ॥ 7 ॥

ಏಕೈಕಸ್ಯ ಋತೋರ್ಮಾನಂ ಘಟಿಕಾದಶಕಂ ಮತಮ್ ।
ಹೇಮಂತ ಚ ವಸಂತಾಖ್ಯಂ ಶಿಶಿರಂ ಗ್ರೀಷ್ಮತೊ ಯದೊ ॥ 8 ॥

ಶರದಂ ಕರ್ಮಣಾಂ ಷಟ್ಕೇ ಯೋಜಯೇತ್ ಕ್ರಮತಃ ಸುಧೀಃ ।
ಶಿವಸೋಮೇಂದ್ರನಿಋತಿಪವನಾಗ್ನಿದಿಶಃ ಕ್ರಮಾತ್ ॥ 9 ॥

ತತ್ತ್ಕರ್ಮಾಣಿ ಕುರ್ವೀತ ಜಪನ್ಸ್ತತ್ತದೀಶಾಮುಖಃ ।

ಈಗ ಕ್ರಮಪ್ರಾಪ್ತ ದೇವತೆಗಳು ಮತ್ತು ಅವರ ವರ್ಣಗಳನ್ನು ಹೇಳುತ್ತೇವೆ.

1. ರತಿ 2. ವಾಣಿ 3. ರಮಾ 4. ಜ್ಯೇಷ್ಠಾ 5. ದುರ್ಗಾ 6. ಕಾಲಿ ಈ ಪ್ರಕಾರ ಶಾಂತಿ ಆದಿ ಷಟ್ಕರ್ಮಗಳ ದೇತೆಗಳಾಗಿರುತ್ತಾರೆ.





1. ಶ್ವೇತ 2. ಅರುಣ 3. ತೆಳುಹಳದಿ 4. ಮಿಶ್ರಿತ 5. ಶ್ಯಾಮಾ (ಕಪ್ಪು) 6. ಧೂಸರಿತ (ಬೂದು) ಇವು ದೇವತೆಗಳ ವರ್ಣ (ಬಣ್ಣ)ಗಳು. ಪ್ರತ್ಯೇಕ ಕರ್ಮದ ಆರಂಭದಲ್ಲಿ ಕರ್ಮದ ದೇವತೆಯ ಅನುಕೂಲ ಪುಷ್ಪಗಳಿಂದ ಪೂಜೆ ಮಾಡಬೇಕು.

ಒಂದು ಅಹೋರಾತ್ರಿಯಲ್ಲಿ ಪ್ರತಿದಿನ ವಸಂತಾದಿ ಆರು ಋತುಗಳಿರುತ್ತವೆ. ಇವುಗಳಲ್ಲಿ ಒಂದೊಂದು ಋತು 10 ಘಟಿ ಎಂದು ತಿಳಿಯಲಾಗಿದೆ. 1. ಹೇಮಂತ 2. ವಸಂತ 3. ಶಿಶಿರ 4. ಗ್ರೀಷ್ಮ 5. ವರ್ಷಾ 6. ಶರತ್ ಈ ಆರು ಋತುಗಳನ್ನು ಸಾಧಕರು ಶಾಂತಿ ಮುಂತಾದ ಕರ್ಮಗಳಲ್ಲಿ ಉಪಯೋಗಿಸಬೇಕು. ಪ್ರತಿದಿನ ಸೂರ್ಯೋದಯದಿಂದ 10 ಘಟಿ (4ಗಂ)ವಸಂತ, ಅದರ ಮುಂದಕ್ಕೆ ಪ್ರತಿ ಹತ್ತು ಘಟಿಗಳಿಗೆ ಶಿಶಿರ ಮುಂತಾದ ಋತುಗಳ ಕ್ರಮವಿರುತ್ತದೆ.

ದಿಶೆಗಳು : ಈಶಾನ, ಉತ್ತರ, ಪೂರ್ವ, ನೈಋತ್ಯ, ವಾಯುವ್ಯ ಮತ್ತು ಆಗ್ನೇಯ ಇವು ಶಾಂತಿ ಆದಿ ಕರ್ಮಗಳ ದಿಶೆಗಳೆಂದು ಹೇಳಲಾಗಿದೆ. ಶಾಂತಿ ಆದಿ ಕರ್ಮಗಳಿಗೆ, ಆಯಾ ದಿಶೆಗಳ ಕಡೆಗೆ ಮುಖ ಮಾಡಿ ಜಪಾದಿ ಕಾರ್ಯಗಳನ್ನು ಮಾಡಬೇಕು.

ಶುಕ್ಲಪಕ್ಷೆ ದ್ವಿತಿಯಾ ಚ ಸಪ್ತಮಿ ಪಂಚಮಿ ತಥಾ ॥ 10 ॥

ತೃತಿಯಾಬುಧಜೀವಾಭ್ಯಾಂ ಯುತಾ ಶಾಂತಿವಿಧೌ ಮತಾ ।
ಚತುರ್ಥಿನವಮಿಷಷ್ಠೀತ್ರಯೋದಶೀತಿಥಿಸ್ತಥಾ ॥ 11 ॥

ಜೀವಸೋಮಯುತಾ ಶಸ್ತಾ ವಶೀಕರಣಕರ್ಮಣಿ ।
ಏಕಾದಶಿ ಚ ದಶಮಿ ನವಮಿ ಚಾಷ್ಟಮಿ ಪುನಃ ॥ 12 ॥

ಶನೈಶ್ವರಸಿತೋಪೇತಾ ಪ್ರೋಕ್ತಾ ವಿದ್ವೇಷಕರ್ಮಣಿ ।
ಕೃಷ್ಣೆ ಚತುರ್ದಶ್ಯಷ್ಟಮ್ಯಾ ಭಾನುಸೂನುಯುತೆ ಯದಿ ॥ 13 ॥

ಉಚ್ಚಾಟನಾಖ್ಯಂ ಕರ್ಮಾತ್ರ ಕರ್ತವ್ಯಂ ಫಲಸಿದ್ಧಯೆ ।
ಭೂತಾಷ್ಟಮ್ಯಾ ಕೃಷ್ಣಗತೆ ಅಮಾವಾಸ್ಯಾ ತದಂತಗಾ ॥ 14 ॥
ಭಾನುಮಂದಕುಜೋಪೇತಾಃ ಸ್ತಂಭಮಾರಣಯೋಃ ಶುಭಾಃ ।

ಶುಕ್ಲ ಪಕ್ಷದ ದ್ವಿತಿಯಾ, ತೃತಿಯಾ, ಪಂಚಮಿ, ಸಪ್ತಮಿ ತಿಥಿಗಳಂದು ಬುಧವಾರ ಅಥವಾ ಗುರುವಾರ ಬಂದಾಗ ಶಾಂತಿಕರ್ಮಗಳನ್ನು ಮಾಡಬೇಕು. ಶುಕ್ಲಪಕ್ಷದ ಚತುರ್ಥಿ, ಷಷ್ಠಿ, ನವಮಿ ಮತ್ತು ತ್ರಯೋದಶಿಗಳಂದು ಸೋಮವಾರ ಅಥವಾ ಗುರುವಾರ ಬಂದಾಗ ವಶೀಕರಣ ಕರ್ಮಗಳಿಗೆ ಪ್ರಶಸ್ತವಾಗಿರುತ್ತದೆ.

ಕೋನಗಳಲ್ಲಿ ಕೂಡಾ ಏಳು ಸಮಾನ ಭಾಗಗಳನ್ನು ಮಾಡಬೇಕು. ಈ ಪ್ರಕಾರ ಅವುಗಳ ಮಧ್ಯದಲ್ಲಿ ಆರು-ಆರು ರೇಖೆಗಳನ್ನು ಎಳೆಯುವುದರಿಂದ 49 ಂತ್ರಿಕೋಣಗಳು ರಚನೆಯಾಗುತ್ತವೆ.

ಜನನ ಯಂತ್ರ



ಈ ಚಕ್ರದ ಈಶಾನ್ಯ ಕೋನದಿಂದ ಪ್ರಾರಂಭಿಸಿ ಪಶ್ಚಿಮದವರೆಗೆ ಅಕಾರದಿಂದ ಹಕಾರದವರೆಗೆ 49 ವರ್ಣಗಳನ್ನು ಕ್ರಮವಾಗಿ ಬರೆದು ಅದರ ಮೇಲೆ ಮಾತೃಕಾ ದೇವಿಯನ್ನು ಆವಾಹನೆ ಮಾಡಿ ಚಂದನಾದಿಗಳಿಂದ ಅವುಗಳನ್ನು ಪೂಜೆ ಮಾಡಬೇಕು. ನಂತರ ಆದರಿಂದ ಮಂತ್ರದ ಒಂದೊಂದು ವರ್ಣವನ್ನು ಉದ್ಧಾರ ಮಾಡಬೇಕು.

**ಮಂತ್ರದ ಜನನ**

**ದೇವಿಂ ತತ್ರ ಸಮಾವಾಹ್ಯಾ ಪೂಜಯೇಚ್ಛಂದನಾದಿಭಿಃ ।**
**ತತಃ ಸಮುದ್ಧರೇಮಂತ್ರಜನನಂ ತದುದಷೀರಿತಮ್ ॥ 101॥**

ವರ್ಣಗಳ ಉದ್ಧಾರವೆಂದರೆ ಅಲ್ಲಿಂದ ವರ್ಣಗಳನ್ನು ಬೇರೆ ಪತ್ರದ ಮೇಲೆ ಬರೆಯಬೇಕು. ಇದನ್ನು ಮಂತ್ರದ ಜನನ ಸಂಸ್ಕಾರವೆನ್ನುತ್ತಾರೆ.

**ದೀಪನ ಬೋಧನಾದಿ ಸಂಸ್ಕಾರ**

**ಜಪೋ ಹಂಸಪುಟಸ್ಯಾಸ್ಯ ಸಹಸ್ರಂ ದೀಪನಂ ಸ್ಮೃತಮ್ ।**
**ನಭೋ ವಹ್ನಿಂದುಯುಕ್ತಾರ್ಘಿಸಂಪುಟಸ್ಯ ಜಪೋ ಮನೋಃ ॥ 102 ॥**

**ಸಹಸ್ರಪಂಚಕಮಿತೋ ಬೋಧನಂ ತಸ್ಯ ತಂ ಬುಧೈಃ ।**
**ಸಹಸ್ರಂ ಪ್ರಜಪೇದಸ್ತ್ರಪುಟಿತಂ ತಾಡನಂ ಹಿ ತತೆ ॥ 103 ॥**

**ವಾಗ್ಹಂಸತಾರೈರ್ಜಪ್ತೇನ ಸಹಸ್ರಂ ಪಾಯಸಾ ಮನುಮ್ ।**
**ಅಭಿಷಿಂಚೇತ್ ವಾಗಾದ್ಯೈರಭಿಷೇಕೋಯಮೀರಿತಃ ॥ 104 ॥**





**ಹರಿರ್ವಹನ್ಯನ್ವಿತ ಸ್ತಾರೋವಷಡಂತೋಧ್ರುವಾದಿಕಃ ।**
**ಸಹಸ್ರಂ ತತ್ಪುಟಿಂ ಜಪ್ಯಾದ್ವಿಮಲೀಕರಣೆ ಮನುಃ ॥ 105 ॥**

**ದೀಪನ ಸಂಸ್ಕಾರ :** ಹಂಸ ಮಂತ್ರದಿಂದ ಸಂಪುಟಿತ ಮೂಲಮಂತ್ರದ ಒಂದು ಸಾವಿರ ಜಪ ಮಾಡುವುದರಿಂದ ದೀಪನ ಸಂಸ್ಕಾರವಾಗುತ್ತದೆ. 'ಹಂಸಃ ರಾಮಾಯ ನಮಃ ಸೋಹಮ್'

**ಬೋಧನ ಸಂಸ್ಕಾರ :** ನಭ (ಹ) ವಹ್ನಿ (ರ) ಮತ್ತು ಇಂದು (ಅನುಸ್ವಾರ) ಸಹಿತ ಅರ್ಘೀಶ (ಊ) ಅರ್ಥಾತ್ 'ಹೂಂ' ದಿಂದ ಸಂಪುಟಿತ ಮೂಲಮಂತ್ರದ ಐದು ಸಾವಿರ ಜಪ ಮಾಡುವುದರಿಂದ 'ಬೋಧನ ಸಂಸ್ಕಾರ'ವಾಗುತ್ತದೆ. ಹೂಂ ರಾಮಾಯ ನಮಃ ಹೂಂ

**ತಾಡನ ಸಂಸ್ಕಾರ :** ಅಸ್ತ್ರಮಂತ್ರ (ಫಟ್)ದಿಂದ ಸಂಪುಟಿತ ಮೂಲಮಂತ್ರದ ಒಂದು ಸಾವಿರ ಜಪ ಮಾಡುವುದರಿಂದ ತಾಡನ ಸಂಸ್ಕಾರವಾಗುತ್ತದೆ. ಉದಾ: **ಫಟ್ ರಾಮಾಯ ನಮಃ ಫಟ್**

**ಅಭಿಷೇಕ ಸಂಸ್ಕಾರ :** ವಾಗ್ (ಐಂ), ಹಂಸ (ಹಂ ಸಃ) ಮತ್ತು ತಾರ (ಓಂ) ಈ ಮಂತ್ರ ದ್ವಾರಾ 1 ಸಾವಿರ ಬಾರಿ ಅಭಿಮಂತ್ರಿತ ಜಲದ ಮೂಲಕ ಪುನಃ ಅದೇ ಮಂತ್ರದಿಂದ ಮೂಲಮಂತ್ರವನ್ನು ಅಭಿಷಿಕ್ತ ಮಾಡುವುದನ್ನು ಅಭಿಷೇಕ ಸಂಸ್ಕಾರವೆನ್ನುತ್ತಾರೆ.

'ಐಂ ಹಂಸ ಓಂ' ಮಂತ್ರದಿಂದ 1 ಸಾವಿರ ಅಭಿಮಂತ್ರಿತವಾದ ನೀರಿನಿಂದ ತಾಡವೋಲೆಯಲ್ಲಿ ಬರೆದ ಮೂಲಮಂತ್ರವನ್ನು ಅಶ್ವತ್ಥ ಪತ್ರದಿಂದ ಪುನಃ 'ಐಂ ಹಂಸಃ ಓಂ" ಮಂತ್ರದಿಂದ ಅಭಿಷೇಕ ಮಾಡುವುದನ್ನು ಅಭಿಷೇಕ ಸಂಸ್ಕಾರವೆನ್ನುತ್ತಾರೆ.

**ವಿಮಲೀಕರಣ ಸಂಸ್ಕಾರ :** ವಹ್ನಿ (ರ), ತಾರ (ಓಂ) ಸಹಿತ ಹರಿ (ತ್) ಅರ್ಥಾತ್ (ತ್ರೋಂ) ಕೊನೆಯಲ್ಲಿ 'ವಷಟ್' ಮತ್ತು ಆದಿಯಲ್ಲಿ ಧ್ರುವ (ಓಂ) ಜೋಡಿಸುವುದರಿಂದ 'ಓಂ ತ್ರೋಂ ವಷಟ್' ಮಂತ್ರವು ರಚನೆಯಾಗುತ್ತದೆ. ಇದರಿಂದ ಸಂಪುಟಿತ ಮೂಲಮಂತ್ರದ ಒಂದು ಸಾವಿರ ಜಪ ಮಾಡುವುದರಿಂದ ಮಂತ್ರದ ವಿಮಲೀಕರಣ ಸಂಸ್ಕಾರವಾಗುತ್ತದೆ. "ಓಂ ತ್ರೋಂ ವಷಟ್ ರಾಮಾಯ ನಮಃ ವಷಟ್ ತ್ರೋಂ ಓಂ"

**ಸ್ವಧಾವಷಟ್‌ಪುಟಂ ಜಪ್ಯಾತ್ ಸಹಸ್ರಂ ಜೀವನೇ ಮನುಮ್ ।**
**ಕ್ಷೀರಾಜ್ಯತುತಪಾಥೋಸ್ತರ್ಪಣೆ ತರ್ಪಯೇನ್ಮನುಮ್ ॥ 106 ॥**

ಸ್ವಕುಲೇಭೀಪ್ಸಿತಾಸಿದ್ಧಿಃ ಸಿದ್ಧಿರ್ಮಿತ್ರೇಪಿ ಕೀರ್ತಿತಾ ।
ಅಮಿತ್ರೆ ಮರಣಂ ರೋಗಂ ಉದಾಸೀನೇ ನ ಕಿಂಚನ
ಉದಾಸೀನಮಮಿತ್ರಂ ಚ ಮಂತ್ರಂ ದೂರೇಣ ವರ್ಜಯೇತ್ । ॥ 90 ॥
ಸ್ವಕುಲಂ ಮಿತ್ರಭೂತಂ ಚ ಗೃಹಣೀಯಾದಿಷ್ಟಕಾಮುಕ
ನಕ್ಷತ್ರೈಕ್ಯೇಪಿ ಸಂಪ್ರೋಕ್ತಂ ಸ್ವಕುಲಂ ನಾಮಮಂತ್ರಯೋಃ । ॥ 91 ॥

ತನ್ನ ಕುಲದ ಮಂತ್ರವನ್ನು ತೆಗೆದುಕೊಳ್ಳುವುದರಿಂದ ಅಭೀಷ್ಟ ಸಿದ್ಧಿಯಾಗುತ್ತದೆ, ಮತ್ತು ಮಿತ್ರ ಕುಲದ ಮಂತ್ರ ತೆಗೆದುಕೊಳ್ಳುವುದರಿಂದಲೂ ಸಿದ್ಧಿಯಾಗುತ್ತದೆ. ಶತ್ರುಕುಲದ ಮಂತ್ರವನ್ನು ತೆಗೆದುಕೊಳ್ಳುವದರಿಂದ ರೋಗ ಮತ್ತು ಮೃತ್ಯು ಸಂಭವಿಸುತ್ತವೆ. ಆದರೆ ಉದಾಸೀನ ಕುಲದ ಮಂತ್ರವನ್ನು ತೆಗೆದುಕೊಳ್ಳುವುದರಿಂದ ಏನೂ ಆಗುವುದಿಲ್ಲ. ಕಾರಣ ಉದಾಸೀನ ಮತ್ತು ಶತ್ರುಕುಲದ ಮಂತ್ರಗಳನ್ನು ದೂರದಿಂದಲೇ ಪರಿತ್ಯಜಿಸಬೇಕು. ಇಷ್ಟಸಿದ್ಧಿಯ ಇಚ್ಛುಕರು ಸ್ವಕುಲ ಮತ್ತು ಮಂತ್ರಕುಲದ ಮಂತ್ರಗಳನ್ನೇ ನಾಮದ ಮತ್ತು ಮಂತ್ರದ ನಕ್ಷತ್ರ ಒಂದೇ ಆಗಿರುವುದರಿಂದ ಸ್ವಕುಲ ಮಂತ್ರವೆನ್ನಲಾಗುತ್ತದೆ.

### ಮಂತ್ರಭೇದಗಳು

ಪುಂಸ್ತ್ರೀನಪುಂಸಕಾಃ ಪ್ರೋಕ್ತಾ ಮನವಸ್ತ್ರಿವಿಧಾ ಬುಧೈಃ ॥ 92 ॥
ವಷಡಂತಾಃ ಷಡಂತಾಶ್ಚ ಪುಮಾಂಸೊ ಮನವಃ ಸ್ಮೃತಾ ।
ವೌಷಟ್ ಸ್ವಾಹಾಂತಗಾ ನಾರ್ಯೋ ಹುಂ ನಮೋಂತಾ ನಪುಂಸಕಾಃ ॥93॥

ವಶ್ಯೋಚ್ಚಾಟನರೋಧೇಷು ಪುಮಾಂಸಃ ಸಿದ್ಧಿದಾಯಕಾಃ ।
ಕ್ಷುದ್ರಕರ್ಮರುಜಾಂ ನಾಶೆ ಸ್ತ್ರೀಮಂತ್ರಾಃ ಶೀಘ್ರಸಿದ್ಧಿದಾಃ ॥ 94 ॥

ಅಭಿಚಾರೆ ಸ್ಮೃತಾ ಕ್ಲೀಬಾ ಏವಂ ತೆ ಮನವಸ್ತ್ರಿದಾ ।
ನಕ್ಷತ್ರಶೋಧನೆ ಜನ್ಮನಕ್ಷತ್ರಮಿತರತ್ರ ತು ॥ 95 ॥

ಶೋಧನೆ ಮಂತ್ರಿಭಿರ್ಗ್ರಾಹ್ಯಾಂ ಪ್ರಸಿದ್ಧಂ ಜನಮ್ನಾ ಮತಾ ।
ದತ್ತಃ ಸಂಶೋಧಿತೊ ಮಂತ್ರೊ ಭವೇಚ್ಛಿಷ್ಯೇಷ್ಟಸಿದ್ಧಯೆ ॥ 96 ॥

ಈಗ ಮಂತ್ರಗಳಲ್ಲಿ ಸ್ತ್ರೀ, ಪುರುಷ, ನಪುಂಸಕ ಮತ್ತು ಭೇದಗಳನ್ನು ಹೇಳಲಾಗುತ್ತದೆ. ಪಂಡಿತರು ಮಂತ್ರಗಳನ್ನು ಪುರುಷ, ಸ್ತ್ರೀ, ನಪುಂಸಕ ಎಂದು ಮೂರು ಪ್ರಕಾರಗಳನ್ನು ವಿವರಿಸುತ್ತಾರೆ. ಯಾವ ಮಂತ್ರಗಳ ಕೊನೆಯಲ್ಲಿ 'ವಷಟ್' ಅಥವಾ 'ಫಟ್' ಇರುತ್ತದೆಯೊ ಅವು ಪುರುಷ ಮಂತ್ರಗಳಾಗಿರುತ್ತವೆ. ಮತ್ತು





'ವೌಷಟ್' ಮತ್ತು 'ಸ್ವಾಹಾ' ಇರುವವು ಸ್ತ್ರೀ ಮಂತ್ರಗಳು ಮತ್ತು 'ಹುಂ' ಹಾಗೂ 'ನಮಃ' ಇರುವ ಮಂತ್ರಗಳು ನಪುಂಸಕ ಮಂತ್ರಗಳಾಗಿವೆ.

ವಶ್ಯ, ಉಚ್ಚಾಟನ ಮತ್ತು ಸ್ತಂಭನಗಳಲ್ಲಿ ಪುರುಷ ಮಂತ್ರಗಳು, ಕ್ಷುದ್ರ ಕರ್ಮ ಮತ್ತು ರೋಗ ನಿವಾರಣೆಯಲ್ಲಿ ಸ್ತ್ರೀಮಂತ್ರಗಳು ಶೀಘ್ರ ಸಿದ್ಧಿ ಪ್ರದಾಯಕ ವಾಗಿರುತ್ತವೆ. ಅಭಿಚಾರ ಪ್ರಯೋಗಗಳಲ್ಲಿ ನಪುಂಸಕ ಮಂತ್ರಗಳು ಸಿದ್ಧಿದಾಯಕವೆಂದು ಹೇಳಲಾಗುತ್ತದೆ. ಈ ಪ್ರಕಾರ ಮಂತ್ರಗಳಲ್ಲಿ ಮೂರು ವಿಧಗಳಿರುತ್ತವೆ.

ನಕ್ಷತ್ರ ಶೋಧನದಲ್ಲಿ ಜನ್ಮ ನಕ್ಷತ್ರದ ಮತ್ತು ಅನ್ಯ ಶೋಧನಗಳಲ್ಲಿ ಜನ್ಮ ಕಾಲದಿಂದ ಕರೆಯಲ್ಪಡುವ ಪ್ರಸಿದ್ಧ ನಾಮದಿಂದ ನಕ್ಷತ್ರವನ್ನು ತೆಗೆದುಕೊಳ್ಳಬೇಕು. ಈ ಪ್ರಕಾರ ಉತ್ತಮ ವಿಧಾನಗಳಿಂದ ಸಂಶೋಧಿತ ಮಂತ್ರಗಳು ಶಿಷ್ಯನಿಗೆ ಅಭೀಷ್ಟಸಿದ್ಧಿಯನ್ನು ಕೊಡುತ್ತವೆ.

### ಮಂತ್ರದೋಷ ಮತ್ತು ಸಂಸ್ಕಾರ

ಛಿನತ್ವಾದಿಕದೋಷಾಯಂ ಪಂಚಾಶನ್ಮಂತ್ರಸಂಸ್ಥಿತಾಃ ।
ತೈರ್ದೋಷೈಃ ಸಕಲಾ ವ್ಯಾಪ್ತಾ ಮನವಃ ಸಪ್ತಕೋಟಯಃ ॥ 97 ॥

ಅತಸ್ತದ್ದೋಷಶಾಂತ್ಯರ್ಥ ಸಂಸ್ಕಾರದಶಕಂ ಚರೇತ್ ।
ಭೂರ್ಜಪತ್ರೆ ಲೀಖೇತ್ ಸಮ್ಯಕ್ತ್ರಿಕೋಣಂ ರೋಚನಾದಿಭಿಃ ॥ 98 ॥

ವಾರುಣಂ ಕೋಣಮಾರಭ್ಯ ಸಪ್ತದಾ ವಿಭಜೇತ್ಸಮಮ್ ।
ಏವಮೀಶಾಗ್ನಿಕೋಣಾಭ್ಯಾಂ ಜಾಯಂತೆ ತತ್ರ ಯೋನಯಃ ॥ 99 ॥

ನವವೇದಮಿತಾಸ್ತತ್ರ ವಿಲಿಖೇನ್ಮಾತೃಕಾಂ ಕ್ರಮಾತ್ ।
ಅಕಾರಾದಿಹಕಾರಾಂತಾಮೀಶಾದಿವರುಣಾವದಿ ॥ 100 ॥

ಮಂತ್ರಗಳ ಛಿನ್ನ, ರುದ್ಧ, ಶಕ್ತಿಹೀನತೆ ಇತ್ಯಾದಿ 50 ದೋಷಗಳನ್ನು 'ಶಾರದಾತಿಲಕರಹಸ್ಯ'ದಲ್ಲಿ ವರ್ಣಿಸಲಾಗಿದೆ. ಏಳು ಕೋಟಿ ಮಂತ್ರಗಳು ಈ ದೋಷಗಳ ವ್ಯಾಪ್ತಿಯಲ್ಲಿರುತ್ತವೆ. ಕಾರಣ ಈ ದೋಷಗಳ ಶಾಂತಿಗಾಗಿ ದಶ ಸಂಸ್ಕಾರಗಳನ್ನು ವಿವರಿಸಲಾಗಿದೆ.

1. ಜನನ ಸಂಸ್ಕಾರ : ಭೋಜಪತ್ರದ ಮೇಲೆ ಗೋರೋಚನಾದಿಗಳಿಂದ ಸಮತ್ರಿಭುಜವನ್ನು ಬರೆಯಬೇಕು. ನಂತರ ಪಶ್ಚಿಮದ ಕೋನದಿಂದ ಪ್ರಾರಂಭಿಸಿ ಅದನ್ನು 7 ಸಮಾನ ಭಾಗ ಮಾಡಬೇಕು. ಈ ಪ್ರಕಾರ ಈಶಾನ್ಯ ಮತ್ತು ಆಗ್ನೇಯ

ನೇತ್ರೆ ದ್ವಿತೀಯಾವರ್ಗಾಣಾಮೈರಕ್ಷಾಪಾರ್ವತ್ಮಕಾಃ
ವರ್ಗಾಥ್ಯಾನಂತರಝಿಂಟೀಶಾ ಅಯಬಾ ಮಾರುತಾ ಮತಾಃ । ॥ 81 ॥
ವರ್ಗಾಂತಿಮಾಃ ಕಪೋಲೌಶೋಹೋಬಿಂದುಶ್ಚೇತಿ ನಾಭಸಾಃ
ವಿಸರ್ಗಸ್ತು ಪ್ರಕೃತ್ಯಾತ್ಮಾ ಸರ್ವಭೂತಮಯೋ ಯತಃ । ॥ 82 ॥
ಪ್ರಾಣೇರಿತೋ ವಿನಿರ್ಯಾತಿ ಕಂಠಾದಿಸ್ಥಾನನಮಸ್ಪೃಶನ್ ॥ 83 ॥

ಕುಲಾಕುಲ ವಿಚಾರ–ಸಕಲ ಪ್ರಪಂಚವು ಪಂಚಭೂತಾತ್ಮಕವಾಗಿದೆ. ಅವುಗಳಿಂದ ಮಾತೃಕೆಗಳು ಉತ್ಪನ್ನ ವಾದವು ಮತ್ತು ಅವುಗಳಿಂದ ಐವತ್ತು ವರ್ಣಗಳು ಉತ್ಪನ್ನವಾದವು. ಕಾರಣ ವರ್ಣಗಳು ಕೂಡಾ ಪಂಚಭೂತಾತ್ಮಕವೇ ಆಗಿರುತ್ತದೆ. ವರ್ಗದ ತೃತಿಯಾಕ್ಷರ (ಗಜಡ ದಬ) ಕರ್ಣ (ಉಊ) ಓ,ಲ ಮತ್ತು ಳ ವರ್ಣಗಳು ಭೂಸಂಜ್ಞಕ ಗಳಾಗಿವೆ. ನಾಸಾ (ಋ ೠ), ಔ ವರ್ಗದ ಚತುರ್ಥ ಅಕ್ಷರ (ಘ, ಝ, ಢ,ಧ,ಭ) ವ ಮತ್ತು ಸ ವರ್ಣಗಳು ಜಲಸಂಜ್ಞಕಗಳಾಗಿವೆ. ತೇರ (ಇಈ) ವರ್ಗಗಳ ದ್ವಿತಿಯ ಅಕ್ಷರ (ಖ,ಛ,ಠ,ಥ,ಫ) ಎ,ರ ಮತ್ತು ಕ್ಷ ಇವು ಅಗ್ನಿಸಂಜ್ಞಕ ವರ್ಣ ಗಳಾಗಿವೆ. ವರ್ಗದ ಪ್ರಥಮಾಕ್ಷರ (ಕ,ಚ,ಟ,ತ,ಪ) ಅನಂತ ಅ, ಝಿಂಟೀಶ ಎ ಮತ್ತು ಆ ಯ ವರ್ಣಗಳು ವಾಯವೀಯವೆಂದು ತಿಳಿಯಲಾಗಿದೆ. ವರ್ಗದ ಅಂತಿಮ ಙ, ಞ,ಣ,ನ,ಮ,ಲೃ,ೡ,ಶ, ಹ ಮತ್ತು ಬಿಂದು ಅಂ ಈ ವರ್ಣಗಳು ಆಕಾಶಾತ್ಮಕ ವಾಗಿವೆ. ವಿಸರ್ಗ ಪ್ರಕೃತಿಯ ಆತ್ಮವಾಗಿದೆ. ಕಾರಣ ಸರ್ವಭೂತಾತ್ಮಕವಾಗಿವೆ. ಪ್ರಾಣ (ವಿಸರ್ಗ)ವನ್ನು ಬಿಟ್ಟು ಅನ್ಯ ವರ್ಣಗಳು ಕಂಠಾದಿ ಅನ್ಯ ಸ್ಥಾನಗಳನ್ನು ಸ್ಪರ್ಶಿಸುತ್ತ ಧ್ವನಿಯ ರೂಪದಲ್ಲಿ ಹೊರಡುತ್ತವೆ.

ಕುಲಾಕುಲ ಚಕ್ರ

| ಭೂಮಿ | ಜಲ | ಅಗ್ನಿ | ವಾಯು | ಆಕಾಶ |
|---|---|---|---|---|
| ಉ | ಋ | ಇ | ಅ | ಲೃ |
| ಊ | ೠ | ಈ | ಆ | ೡ |
| ಐ | ಔ | ಎ | ಏಂ | ಅಂ |
| ಗ | ಘ | ಖ | ಕ | ಙ |
| ಜ | ಝ | ಛ | ಚ | ಞ |
| ಡ | ಢ | ಠ | ಟ | ಣ |
| ದ | ಧ | ಥ | ತ | ನ |
| ಬ | ಭ | ಫ | ಪ | ಮ |
| ಲ | ವ | ರ | ಯ | ಶ |
| ಳ | ಸ | ಕ್ಷ | ಕ್ಷ | ಹ |





ಪಾರ್ಥಿವಾದಿಕ ವರ್ಣಾನಾಂ ಸ್ವಕೀಯಾಃ ಸ್ವಕುಲಾಭಿಧಾಃ ।
ಪಾರ್ಥಿವಸ್ಯ ಚ ವರ್ಣಸ್ಯ ಮಿತ್ರಂ ವಾರುಣಮಕ್ಷರಮ್ ॥ 84 ॥
ತೈಜಸಂ ಶತ್ರುಭೂತಂ ಸ್ಯಾದುದಾಸೀನಂ ತು ಮಾರುತಮ್ ।
ಜಲೋದ್ಭವಸ್ಯ ವರ್ಣಸ್ಯ ಪಾರ್ಥಿನಂ ಮಿತ್ರಮೀರಿತಮ್ ॥ 85 ॥
ಸಪತ್ನಂ ವಹ್ನಿಸಂಭುತಮುದಾಸೀನಂ ತು ವಾಯವಮ್ ।
ತೈಜಸಸ್ಯಾಥ ವರ್ಣಸ್ಯ ವಾಯವ್ಯಂ ಮಿತ್ರಮುಚ್ಯತೆ ॥ 86 ॥
ವಿದ್ವೇಷಿ ವಾರುಣೋ ವರ್ಣಉದಾಸೀನಸ್ತು ಪಾರ್ಥಿವಃ ।
ಪವನೋತ್ಥಿತವರ್ಣಸ್ಯ ಮಿತ್ರಂ ವಹ್ನಿಸಮುದ್ಭವಮ್ ॥ 87 ॥
ಶತ್ರುಃ ಪಾರ್ಥಿವವರ್ಣಃ ಸ್ಯಾದುದಾಸೀನಸ್ತು ಪಾರ್ಥಜಃ ।
ಚತುರ್ಣಾ ಪಾರ್ಥಿವಾದೀನಾಮಾಕಾಶಾರ್ಣಃ ಸಖಾ ಸದಾ ॥ 88 ॥
ಮನೋ ಸಾಧಕನಾಮ್ನೋಪಿ ಯೌವರ್ಣಾವಾದಿಮ್ ತಯೋಃ ।
ಸ್ವಕುಲಾದಿಕಭೇದಸ್ತು ಶೋಧ್ಯೋ ಮಂತಿಪ್ರದಿತ್ಸುನಾ ॥ 89 ॥

ಪೃಥ್ವಿ ಮುಂತಾದ ತತ್ವಗಳ ಆಯಾಯ ವರ್ಣಗಳ ಸ್ವಕುಲ ವರ್ಗಗಳನ್ನು ಹೇಳಲಾಗಿದೆ. ಪೃಥ್ವಿ ತತ್ವದ ವರ್ಣಗಳಿಗೆ ಜಲ ತತ್ವ ವರ್ಣಗಳು ಮಿತ್ರರಾಗಿರುತ್ತವೆ. ಅಗ್ನಿತತ್ವದ ಶತ್ರುಗಳು ಮತ್ತು ವಾಯುತತ್ವದ ವರ್ಣಗಳು ಉದಾಸೀನ ಅರ್ಥಾತ್ ತಟಸ್ಥವಾಗಿರುತ್ತವೆ. ಜಲತತ್ವದ ವರ್ಣಗಳಿಗೆ ಪೃಥ್ವಿತತ್ವದ ವರ್ಣಗಳು ಮಿತ್ರ ಮತ್ತು ಅಗ್ನಿತತ್ವದ ವರ್ಣಗಳು ಶತ್ರು ಮತ್ತು ವಾಯುತತ್ವದ ವರ್ಣಗಳು ಉದಾಸೀನವಾಗಿರುತ್ತವೆ.

ಅಗ್ನಿತತ್ವದ ವರ್ಣಗಳಿಗೆ ವಾಯತತ್ವದ ವರ್ಣಗಳು ಮಿತ್ರ, ಜಲತತ್ವ ವರ್ಣಗಳು ಶತ್ರು ಮತ್ತು ಪೃಥ್ವಿತತ್ವದ ವರ್ಣಗಳು ಉದಾಸೀನವಾಗಿರುತ್ತೆ. ವಾಯುತತ್ವದ ವರ್ಣಗಳಿಗೆ ಶತ್ರು ಹಾಗೂ ಜಲ ತತ್ವದ ವರ್ಣಗಳು ಉದಾಸೀನವಾಗಿರುತ್ತವೆ. ಪೃಥ್ವಿ ಮುಂತಾದ ನಾಲ್ಕು ತತ್ವಗಳಿಗೆ ಆಕಾಶ ತತ್ವದ ವರ್ಣಗಳು ಯಾವಾಗಲೂ ಮಿತ್ರರಾಗಿರುತ್ತವೆ. ಮಂತ್ರ ಮತ್ತು ಸಾಧಕನ ಹೆಸರಿನ ಪ್ರಥಮಾಕ್ಷರಗಳ ಸ್ವಕುಲಾದಿ ವಿಚಾರಗಳನ್ನು ದೀಕ್ಷೆ ಕೊಡುವ ಗುರುವು ಯೋಚಿಸಬೇಕು.

ಅದರ ಎದುರಿಗೆ ವೇದಿಯನ್ನು ತಯಾರಿಸಿ ವಿಧಿವತ್ ಅಗ್ನಿಯನ್ನು ಪ್ರತಿಷ್ಠಾಪನೆ ಮಾಡಿ ವಿಲೋಮ ಮಂತ್ರದಿಂದ ತುಪ್ಪದ 100 ಆಹುತಿಗಳನ್ನು ಕೊಡಬೇಕು. ನಂತರ ಪಾಯಸ ಮತ್ತು ತುಪ್ಪ ಮಿಶ್ರಿತ ಅನ್ನದಿಂದ ದಿಕ್ಪಾಲರಿಗೆ ಬಲಿ ಕೊಟ್ಟು ಪುನಃ ಪೂಜೆ ಮಾಡಿ, 'ಅನುಕೂಲ್ಯ.........ಭಕ್ತಿರಸ್ತು ತೇ' (66,67,68ಶ್ಲೋ) ಪರ್ಯಂತ ಮಂತ್ರ ಹೇಳುತ್ತ ಪ್ರಾರ್ಥನೆ ಮಾಡಬೇಕು.

ಈ ಪ್ರಕಾರ ಪ್ರಾರ್ಥನೆ ಮಾಡಿ ತಾಡವೋಲೆಯ ಮೇಲೆ ಕರ್ಪೂರ, ಅಗರ ಮತ್ತು ಚಂದನಗಳಿಂದ, ವಿಲೋಮ ಮಂತ್ರವನ್ನು ಬರೆದು ಅದನ್ನು ಪೂಜೆ ಮಾಡಿ, ತನ್ನ ತಲೆಯ ಮೇಲೆ ಕಟ್ಟಿಕೊಂಡು ಕುಂಭದ ನೀರಿನಿಂದ ಸ್ನಾನ ಮಾಡಬೇಕು.

ಪ್ರಬಧ್ಯ ನಿಜಮೂರ್ಧ್ನೇತತ್ಸ್ನಾಯಾತ್ಕುಂಬರಿಸ್ಥಿತರ್ಜಲೈಃ ।
ಪುನಃ ಸಂಪೂರ್ಯ ತಂ ತೋಯೈಸ್ತಸ್ಮಿನ್ಸ್ಯ ಮಂತ್ರಪತ್ರಕಮ್ ॥ 70 ॥

ಸಂಪೂಜ್ಯ ಕುಂಭೇ ಸರೀತಿ ತಡಾಗೇ ವಾ ವಿನಿಕ್ಷಿಪೇತ್ ।
ವಿಪ್ರಾನ್ ಸಂಭೋಜ್ಯ ಮುಚ್ಯೇತ ಪೀಡಯಾಸೌ ಮನೂತ್ಥಯಾ ॥ 71 ॥

ಅನೇಕಧಾ ಶೋಧನೆ ಚೇಚ್ಛುದ್ಧೋ ನ ಪ್ರಾಪ್ಯತೇ ಮನುಃ ।
ಮಾಯಾಂ ಕಾಮಂ ಶ್ರೀಯಂ ಚಾದೌ ದದ್ಯಾತ್ತದ್ದೋಷಮುಕ್ತಯೇ ॥ 72 ॥

ಯದ್ವಾ ದುಷ್ಟೋ ಮನುರ್ಜಪ್ತಃ ಸಿದ್ಧ್ಯೇತ್ಪ್ರಣವ ಸಂಪುಟಃ ।
ಯದ್ವಾ ಕ್ರಮೋತ್ಕ್ರಮಮಯಾ ಪ್ರಜಪ್ತೋ ವರ್ಣಮಾಲಯಾ ॥ 73 ॥

ಮಂತ್ರೇ ಯಸ್ಯ ಭವೇದ್ ಭಕ್ತಿರ್ವಿಶೇಷಃ ಸಮನೂತ್ತಮಃ ।
ವೈರಿಕೋಷ್ಠಮನುಪ್ರಾಪ್ತಃ ಸಿದ್ಧಿದಸ್ತಸ್ಯ ಜಾಯತೆ ॥ 74 ॥

ಸ್ನಾನದ ನಂತರ ಕುಂಭದಲ್ಲಿ ನೀರನ್ನು ತುಂಬಿ ಅದರಲ್ಲಿ ಮಂತ್ರ ಬರೆದ ತಾಡವೋಲೆಯನ್ನು ಹಾಕಬೇಕು. ಮತ್ತು ಕುಂಭವನ್ನು ಪೂಜೆ ಮಾಡಿ ಅದನ್ನು ನದಿ ಅಥವಾ ಕೆರೆಯಲ್ಲಿ ಹಾಕಬೇಕು. ನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಈ ಪ್ರಕಾರ ಸಾಧಕರು ಅರಿಮಂತ್ರದ ಪ್ರಭಾವದಿಂದ ಮುಕ್ತರಾಗುತ್ತಾರೆ.

ಅನೇಕ ಬಾರಿ ಶೋಧನ ಮಾಡುವುದರಿಂದಲೂ ಶುದ್ಧ ಮಂತ್ರವು ದೊರೆಯದಿದ್ದರೆ ಮಂತ್ರದ ಪ್ರಾರಂಭದಲ್ಲಿ ಮಾಯಾ (ಹ್ರೀಂ), ಕಾಮ (ಕ್ಲೀಂ) ಮತ್ತು ಶ್ರೀ (ಶ್ರೀಂ) ಬೀಜಗಳನ್ನು ಜೋಡಿಸಿ ಮಂತ್ರವನ್ನು ತೆಗೆದುಕೊಳ್ಳುವುದರಿಂದ ಮಂತ್ರದ ದೋಷವು ದೂರವಾಗುತ್ತದೆ. ಅಥವಾ ಸದೋಷ ಮಂತ್ರವನ್ನು ಪ್ರಣವದಿಂದ ಸಂಪುಟಿತಗೊಳಿಸುವುದರಿಂದ ಶುದ್ಧವಾಗುತ್ತದೆ. ಅಥವಾ ಕ್ರಮಪೂರ್ವಕ ಮತ್ತು ವ್ಯುತ್ಕ್ರಮಪೂರ್ವಕ ವರ್ಣಮಾಲೆಯಿಂದ ಜಪ





ಮಾಡುವುದರಿಂದ ಮಂತ್ರದ ಶೋಧನವಾಗುತ್ತದೆ. ಯಾವ ವ್ಯಕ್ತಿಗೆ ಯಾವ ಮಂತ್ರದಲ್ಲಿ ವಿಶೇಷ ನಿಷ್ಠೆಯಿರುತ್ತದೆಯೋ ಆ ಮಂತ್ರವು ಅವನಿಗೆ ಶ್ರೇಯಸ್ಕರವಾಗುತ್ತದೆ. ಇಂಥ ಮಂತ್ರವು ಅರಿವರ್ಗದಲ್ಲಿದ್ದರೂ ಸಾಧಕನಿಗೆ ಸಿದ್ಧಿದಾಯಕವಾಗುತ್ತದೆ.

## ಮಂತ್ರಗಳ ಭೇದ ಕಥನ

ಬೀಜಮಂತ್ರಸ್ತಥಾ ಮಂತ್ರಾ ಮಾಲಮಂತ್ರಾಸ್ತಥಾಪರೆ ।
ತ್ರಿಧಾ ಮಂತ್ರಗಣಾಃ ಪ್ರೋಕ್ತಾ ಬುಧೈರಾಗಮವೇದಿಭಿಃ ॥ 75 ॥

ಬೀಜಮಂತ್ರಾದಶಾರ್ಣಾಂತಾಸ್ತತೋ ಮಂತ್ರಾನಖಾವಧಿ ।
ವಿಂಶತ್ಯಧಿಕವರ್ಣಾ ಯೇ ಮಾಲಾಮಂತ್ರಾಸ್ತು ತೇ ಸ್ಮೃತಾಃ ॥ 76 ॥

ಆಗಮವೇತ್ತ ಪಂಡಿತರು ಮಂತ್ರಗಳಲ್ಲಿ, ಬೀಜಮಂತ್ರ, ಮಂತ್ರ-ಮಂತ್ರ ಮತ್ತು ಮಾಲಾಮಂತ್ರ ಎಂದು ಮೂರು ಭೇದಗಳನ್ನು ಹೇಳಿರುವರು. ಹತ್ತು ಅಕ್ಷರಗಳ ಪರ್ಯಂತ ಮಂತ್ರ ಬೀಜಮಂತ್ರ, ಹನ್ನೊಂದರಿಂದ ಇಪ್ಪತ್ತು ಅಕ್ಷರಗಳ ಮಂತ್ರ ಮಂತ್ರ ಮತ್ತು ಇಪ್ಪತ್ತಕ್ಕಿಂತಲೂ ಹೆಚ್ಚು ಅಕ್ಷರಗಳ ಮಂತ್ರ ಮಾಲಾಮಂತ್ರವೆಂದು ಹೇಳಲಾಗುತ್ತದೆ.

ಬಾಲ್ಯೇ ವಯಸಿಸಿದ್ಧ್ಯಂತಿ ಬೀಜಮಂತ್ರಾ ಉಪಾಸಿತಃ ।
ಮಂತ್ರಾ ಸಿದ್ಧಾ ಯೌವನೇ ತು ಮಾಲಾಮಂತ್ರಾಶ್ಚ ವಾರ್ಧಕ್ಯೇ ॥ 77 ॥

ಉಕ್ತಾನ್ಯಸ್ಯಾಮವಸ್ಥಾಯಾಮಭೀಷ್ಟಪ್ರಾಪ್ತಯೇ ಸುಧೀಃ ।
ಬೀಜಮಂತ್ರಾದಿ ಮಂತ್ರಾಣಾಂ ದ್ವಿಗುಣಂ ಜಪಮಾಚರೇತ್ ॥ 78 ॥

ಸ್ವಕುಲ್ಯಾನ್ಯಕುಲಾಖ್ಯೋಥ ಮಂತ್ರಾಣಾಂ ಭೇದ ಉಚ್ಯತೆ ।
ಪ್ರಕೃತಿಃ ಪಂಚಭೂತಾತ್ಮಾ ತತೋ ಜಾತ ತು ಮಾತೃಕಾ ॥ 79 ॥

ತಸ್ಮಾದ್ವರ್ಣಾಸ್ತು ಪಂಚಾಶತ್ಪಂಚಭೂತಮಯಾ ಯತಃ ।

ಈಗ ವಿವಿಧ ಅವಸ್ಥೆಗಳಲ್ಲಿ ಸಿದ್ಧಿದಾಯಕ ಮಂತ್ರಗಳನ್ನು ಹೇಳಲಾಗುತ್ತದೆ. ಬಾಲ್ಯಾವಸ್ಥೆಯಲ್ಲಿ ಬೀಜಮಂತ್ರವು ಸಿದ್ಧವಾಗುತ್ತದೆ, ಯೌವನಾವಸ್ಥೆಯಲ್ಲಿ ಮಂತ್ರ-ಮಂತ್ರಗಳು ಸಿದ್ಧವಾಗುತ್ತವೆ. ಮತ್ತು ವೃದ್ಧಾವಸ್ಥೆಯಲ್ಲಿ ಮಾಲಾಮಂತ್ರಗಳು ಸಿದ್ಧವಾಗುತ್ತವೆ. ಈ ಅವಸ್ಥೆಗಳಿಗಿಂತ ಭಿನ್ನ ಅವಸ್ಥೆಗಳಲ್ಲಿ, ಸಾಧಕರು ತಮ್ಮ ಅಭೀಷ್ಟ ಸಿದ್ಧಿಗಾಗಿ, ಆಯಾ ಮಂತ್ರಾದಿ ಮಂತ್ರಗಳನ್ನು ದ್ವಿಗುಣಿತ ಜಪ ಮಾಡಬೇಕು. ॥ 80 ॥

ತೃತೀಯಾವರ್ಗಗಾಃ ಕರ್ಣಾ ವೋಲಳಾಃ ಪಾರ್ಥಿವಾ ಮತಾಃ
ನಾಸಯೈರ್ವರ್ಗತುರ್ಯಾಶ್ಚ ವಸೋವರ್ಣಾಃ ಸ್ಮೃತಾಅಪಾಮ್ ।

ನಂತರ ತನ್ನ ನಾಮನಕ್ಷತ್ರದಿಂದ ಪ್ರಾರಂಭಿಸಿ, ಅಗ್ರಿಮ ನಕ್ಷತ್ರ ಕ್ರಮವಾಗಿ, ಜನ್ಮ, ಸಂಪತ್, ವಿಪದ್, ಕ್ಷೇಮ, ಪ್ರತ್ಯರಿ, ಸಾಧಕ, ವಧ, ಮಿತ್ರ ಮತ್ತು ಪರಮಮಿತ್ರ ಎಂದು ತಿಳಿಯಬೇಕು. ಇವುಗಳಲ್ಲಿ ವಿಪತ್, ಪ್ರತ್ಯರಿ ಮತ್ತು ವಧ ಯೋಗಗಳು ಸರ್ವಥಾ ತ್ಯಾಜ್ಯವಾಗಿದೆ. ಉಳಿದ ನಕ್ಷತ್ರಗಳು ಉತ್ತಮವೆಂದು ಹೇಳಲಾಗಿದೆ.

ಉದಾಹರಣಾರ್ಥ, ದೇವದತ್ತನಿಗೆ 'ಐಂ ನಮಃ' ಇತ್ಯಾದಿ ಮಂತ್ರ ಗ್ರಹಣ ಮಾಡುವದಿದ್ದರೆ, ನಕ್ಷತ್ರಶೋಧನದ ಪ್ರಕಾರ ದೇವತದತ್ತನ ನಕ್ಷತ್ರ ಅನುರಾಧಾ ಮತ್ತು ಮಂತ್ರದ ನಕ್ಷತ್ರ ಆರ್ದ್ರಾ ಆಗುತ್ತದೆ. ಅನುರಾಧಾದಿಂದ ಆ ನಕ್ಷತ್ರಗಳನ್ನು ಎಣಿಸುವುದರಿಂದ, ಜನ್ಮನಕ್ಷತ್ರವಾಗುವದರಿಂದ ಮಂತ್ರವು ತೆಗೆದುಕೊಳ್ಳಲು ಯೋಗ್ಯವಾಗಿದೆ.

**ಋಣಧನಶೋಧನ ವರ್ಣನ**

ಅಥರ್ಣಧನಸಂಶುದ್ಧಿಃ ಕಥ್ಯತೇ ಸಿದ್ಧಿದಾಯಿನಿ
ಸಪ್ತತಿರ್ಯಗ್ಲಿಖೇದ್ ರೇಖಾ ದ್ವಾದಶೈವೋರ್ಧ್ವಗಾಃ ಪುನಃ । ॥ 32 ॥
ಏವಂ ಕೃತೇ ತು ಜಾಯಂತೇ ಕೋಷ್ಠಾಃ ಷಟ್‌ಷಷ್ಟಿಸಮ್ಮಿತಾಃ ॥ 33 ॥
ಆದ್ಯಪಂಕ್ತೌ ಲಿಖೇದಂಕಾಂಸ್ತೇ ಕಥ್ಯಂತೇ ಯಥಾಕ್ರಮಮ್ ।
ಮನುನಕ್ಷತ್ರನೇತ್ರರ್ಕ ತಿಥಿಷಡ್‌ವೇದವಹ್ನಯಃ ॥ 34 ॥
ಸಾಯಕಾವಸವೋ ನಂದಾಃ ಕೋಷ್ಠೇಷು ಕ್ರಮತಃ ಸ್ಥಿತಾಃ ।
ದ್ವಿತೀಯಪಂಕ್ತೌ ಸಂಲೇಖ್ಯಾಃ ಪಂಚದಿರ್ಘೋಜ್ಝಿತಾಃ ಸ್ವರಾಃ ॥ 35 ॥
ತೃತೀಯಪಂಕ್ತೌ ಕಾದ್ಯರ್ಣಾಷ್ಟಕಾರಾಂತಾಃ ಶಿವೈರ್ಮಿತಾಃ ।
ಠಾದಿಫಾಂತಾಶ್ಚತುರ್ಥ್ಯಾಂ ತು ಪಂಚಮ್ಯಾಂ ಬಾದಿಹಾಂತಿಮಾಃ ॥ 36 ॥
ಷಷ್ಠ್ಯಾಂ ಪಂಕ್ತೌ ಕ್ರಮಾಲ್ಲೇಖ್ಯಾ ಅಂಕಾಃ ಕಥ್ಯಂತ ಏವತೇ ।
ದಿಕ್ಚಂದ್ರಮುನಿವೇದಾಷ್ಟಗುಣಸಪ್ತೇಷು ಸಾಗರಾಃ ॥ 37 ॥
ರಸಾಶ್ಚ ರಾಮಸಂಖ್ಯಾತಾ ಏವಮಂಕಾ ಉದೀರಿತಾಃ ।
ಮಂತ್ರವರ್ಣಾನ್ ಪೃಥಕ್ಕುರ್ಯಾತ್ ಸ್ವರವ್ಯಂಜನರೂಪತಃ ॥ 38 ॥

ಈಗ ಸಿದ್ಧಿದಾಯಕ ಋಣಧನ ಶುದ್ಧಿಯ ಪ್ರಕಾರಗಳನ್ನು ಹೇಳಲಾಗುತ್ತದೆ. ಏಳು ಅಡ್ಡಗೆರೆಗಳನ್ನು ಮತ್ತು ಹನ್ನೆರಡು ನೇರ ಗೆರೆಗಳನ್ನು ಎಳೆಯಬೇಕು. ಅದರಿಂದ 66 ಕೋಷ್ಠಕಗಳು ತಯಾರಾಗುತ್ತವೆ. ಇದರ ಪ್ರಥಮ ಸಾಲಿನಲ್ಲಿ 14,27,2,12,15,6,4,3,5,8 ಅಂಕಿಗಳು ಮತ್ತು ಎರಡನೆಯ ಸಾಲಿನಲ್ಲಿ ಐದು





ದೀರ್ಘ ಸ್ವರಗಳು (ಆ,ಈ,ಊ,ೠ, ಮತ್ತು ೡ)ಗಳನ್ನು ಹೊರತುಪಡಿಸಿ, ಉಳಿದ 11 ಸ್ವರಗಳನ್ನು ಮೂರನೆಯ ಸಾಲಿನಲ್ಲಿ ಕಕಾರದಿಂದ ಟಕಾರ ಪರ್ಯಂತ

| | | | | | | | | | | |
|---|---|---|---|---|---|---|---|---|---|---|
| 14 | 27 | 2 | 12 | 15 | 6 | 4 | 3 | 5 | 8 | 9 |
| ಅ | ಇ | ಉ | ಋ | ಌ | ಏ | ಐ | ಓ | ಔ | ಅಂ | ಅಃ |
| ಕ | ಖ | ಗ | ಘ | ಙ | ಚ | ಛ | ಜ | ಝ | ಞ | ಟ |
| ಠ | ಡ | ಢ | ಣ | ತ | ಥ | ದ | ಧ | ನ | ಪ | ಫ |
| ಬ | ಭ | ಮ | ಯ | ರ | ಲ | ವ | ಶ | ಷ | ಸ | ಹ |
| 10 | 1 | 7 | 4 | 8 | 3 | 7 | 5 | 4 | 6 | 3 |

ಹನ್ನೊಂದು ವ್ಯಂಜನ ವರ್ಣಗಳು, ನಾಲ್ಕನೆಯ ಪಂಕ್ತಿಯಲ್ಲಿ ಠಕಾರದಿಂದ ಫಕಾರದವರೆಗೆ 11 ವರ್ಣ, ಐದನೆಯ ಸಾಲಿನಲ್ಲಿ ಬಕಾರದಿಂದ ಹಕಾರದವರೆಗೆ 11 ವರ್ಣ ಮತ್ತು ಆರನೆಯ ಸಾಲಿನಲ್ಲಿ 10,1,7,4,8,3,7,5,4,6 ಮತ್ತು ಪುನಃ 3 ಅಂಕಗಳನ್ನು ಬರೆಯಬೇಕು.

**– ಋಣಶೋಧನ ಚಕ್ರ–**

ಕೋಷ್ಠೆ ಯಾವತಿವರ್ಣಾಃ ಸ್ಯಾದ್ ಗಣಯೇತ್ತಾವದಂ ಕಕಮ್ ।
ಕೋಷ್ಠೋಪರಿಸ್ಥಿನಾಂಕೇನ ಸರ್ವವರ್ಣೇಷ್ವಯಂ ವಿಧಿಃ ॥ 39 ॥
ದೀರ್ಘಾಕ್ಷರಾಣಾಮಂಕಾಸ್ತು ಜ್ಞೇಯಾ ಲಘ್ವಕ್ಷರಸ್ಥಿತಾಃ ।
ಏಕೀಕೃತ್ಯಾಖಿಲಾನಂಕಾನಷ್ಟಭಿರ್ವಿಭಜೇತ್ ಪುನಃ ॥ 40 ॥
ಶೇಷೋಂಕೊ ಮಂತ್ರರಾಶಿಃ ಸ್ಯಾನ್ನಾಮವರ್ಣೇಷ್ವಯಂ ವಿಧಿಃ ।
ಅಧಃ ಪಂಕ್ತಿಸ್ಥಿತೈರಂ ಕೈರ್ಗುಣನೀ ಯಾಸ್ತು ತೇಖಿಲಾಃ ॥ 41 ॥
ಅಧರ್ಮಣೋಧಿಕೊ ರಾಶಿರೂನೋ ರಾಶಿರ್ಧನಿ ಸ್ಮೃತಃ ।
ಮಂತ್ರೋ ಯದಾಧರ್ಮಣಃ ಸ್ಯಾತ್ತದಾ ಗ್ರಾಹ್ಯೋ ಧನಿ ನ ತು ॥ 42 ॥

ಇದರ ನಂತರ ಮಂತ್ರದ ವ್ಯಂಜನ ಮತ್ತು ಸ್ವರಗಳನ್ನು ಬೇರೆ ಬೇರೆಯಾಗಿ ಮಾಡಬೇಕು. ಯಾವ ಯಾವ ಕೋಷ್ಟಕಗಳಲ್ಲಿ ಯಾವ ಯಾವ ಅಕ್ಷರಗಳು ಬರುತ್ತವೆಯೊ ಅವುಗಳ ಮೇಲಿನ ಕೋಷ್ಟಕಗಳ ಅಂಕಗಳನ್ನು ಗುರುತಿಸಿಕೊಳ್ಳಬೇಕು. ಮಂತ್ರದಲ್ಲಿ ಬರುವ ಐದು ದೀರ್ಘ ಸ್ವರಗಳ ಸ್ಥಾನದಲ್ಲಿ ಹ್ರಸ್ವ ಸ್ವರಗಳ ಅಂಕಗಳನ್ನು ತೆಗೆದುಕೊಳ್ಳಬೇಕು.

ಈ ಪ್ರಕಾರ ಎಲ್ಲ ಸ್ವರ-ವ್ಯಂಜನಗಳ ಅಂಕಗಳನ್ನು ಕೂಡಿಸಿ 8 ರಿಂದ ಭಾಗಿಸಬೇಕು. ಯಾವುದು ಶೇಷ ಉಳಿಯುತ್ತದೆಯೊ ಅದು ಮಂತ್ರದ ರಾಶಿಯಾಗುತ್ತದೆ. ನಾಮದ ಸ್ವರ ಮತ್ತು ವ್ಯಂಜನಗಳನ್ನು ಕೂಡಾ ಇದೇ ಪ್ರಕಾರ ಬೇರೆ ಬೇರೆಯಾಗಿ ಮಾಡಿ ಅವುಗಳ ಕೆಳಗಿನ ಅಂಕಗಳನ್ನು ತೆಗೆದುಕೊಂಡು ಎರಡನ್ನು ಸೇರಿಸಿ ಎಂಟರಿಂದ ಭಾಗ ಮಾಡಿದಾಗ ಉಳಿಯುವ ಶೇಷವು 'ನಾಮರಾಶಿ'ಯಾಗುತ್ತದೆ.

ಇದರಲ್ಲಿ ಅಧಿಕ ರಾಶಿಯವರು ಋಣಿ ಮತ್ತು ಕಡಿಮೆ ರಾಶಿಯವರು ಧನಿಯೆಂದು ಕರೆಯುತ್ತಾರೆ. ಮಂತ್ರವು ಋಣಿಯಾದಾಗ ಮಾತ್ರ ಅದನ್ನು ತೆಗೆದುಕೊಳ್ಳಬೇಕು. ಅನ್ಯಥಾ ಬೇಡ.

ಉದಾಹರಣಾರ್ಥ, ದೇವದತ್ತನು 'ಕ್ಲೀಂ ಗೋ ವಲ್ಲಭಾಯ ಸ್ವಾಹಾ' ಈ ಅಷ್ಟಾಕ್ಷರಮಂತ್ರವನ್ನು ತೆಗೆದುಕೊಳ್ಳುವದಿದ್ದರೆ, ನಾಮಾಕ್ಷರ ಮತ್ತು ಅಂಕಗಳು. ದ 7, ಎ3 ವ 7 ಅ 10, ದ 7, ಅ 10, ತ್ 8, ತ್ 8, ಅ 10 ಒಟ್ಟು ಎಪ್ಪತ್ತು ಅಂಕಗಳು. ಇದನ್ನು 8ರಿಂದ ಭಾಗಿಸಿದಾಗ ಶೇಷ 6 ನಾಮರಾಶಿಯಾಗುತ್ತವೆ. ಮಂತ್ರಾಕ್ಷರ ಮತ್ತು ಅಂಕಗಳು ಕ 14, ಲ 6, ಈ 27, ಮ್ 2, ಗ್ 2 ಓ 3, ವ್ 14, ಅ 14, ಅ 14, ಲ್ 6, ಲ 6, ಭ 27, ಆ 14, ಯ್ 12, ಅ 14, ಸ್ 8, ವ4, ಆ 14, ಹ9, ಆ14, ಒಟ್ಟು 210 ಅಂಕಗಳಾಗುತ್ತವೆ. ಇದನ್ನು 8ರಿಂದ ಭಾಗಿಸಿದಾಗ ಶೇಷವು 2 ನಾಮರಾಶಿಗಿಂತ ಕಡಿಮೆಯಾಗುವುದರಿಂದ ಧನಿಯೋಗವಾಗುತ್ತದೆ. ಕಾರಣ ಅಗ್ರಾಹ್ಯವಾಗಿದೆ.

ಏವಂ ಧನರ್ಣ ಸಂಪ್ರೋಕ್ತಮನ್ಯಥಾ ಪ್ರೋಚ್ಯತೇ ಪುನಃ ।
ನಾಮಾದ್ಯಕ್ಷರಮಾರಭ್ಯ ಯಾವನ್ಮಂತ್ರಾದಿ ಮಾಕ್ಷರಮ್ ॥ 43 ॥

ಗಣಯೇನ್ಮಾತೃಕಾರ್ಧರ್ಣ ಕ್ರಮೇಣ ಗುಣಯೇತ್ತ್ರಿಭಿಃ ।
ವಿಭಕ್ತೇ ಸಪ್ತಭಿಃ ಶಿಷ್ಟೋ ನಾಮರಾಶಿರುದೀರಿತಃ ॥ 44 ॥

ಏವಂ ಮಂತ್ರಾರ್ಣಮಾರಭ್ಯ ಯೌವನ್ನಾಮಾದಿಮಾಕ್ಷರಮ್ ।
ಗಣಯಿತ್ವಾ ತ್ರಿಭಿರ್ಹತ್ವಾ ವಿಭಜೇತ್ಸಪ್ತಭಿಃ ಸುಧೀಃ ॥ 45 ॥

ಮಂತ್ರರಾಶಿಃ ಸ್ಮೃತಃ ಶಿಷ್ಟಃ ಪೂರ್ವವದ್ಧನಿತರ್ಣತಾ ।

ಈ ಪ್ರಕಾರ ಋಣಧನ ಶೋಧನದ ವಿಧಾನವನ್ನು ಹೇಳಿದ ನಂತರ ಎರಡನೆಯ ವಿಧಾನವನ್ನು ಹೇಳಲಾಗುತ್ತದೆ.





ನಾಮದ ಪ್ರಥಮ ಅಕ್ಷರದಿಂದ ಮಂತ್ರದ ಪ್ರಥಮ ಅಕ್ಷರದ ವರೆಗೆ ವರ್ಣಮಾಲೆಯ ಕ್ರಮದಿಂದ ಎಣಿಸಬೇಕು. ಯಾವ ಸಂಖ್ಯೆ ಬರುತ್ತದೆಯೊ ಅದನ್ನು ಮೂರರಿಂದ ಗುಣಿಸಿ, ಏಳರಿಂದ ಭಾಗ ಮಾಡಿದರೆ ಉಳಿಯುವ ಶೇಷವು ನಾಮರಾಶಿಯಾಗುತ್ತದೆ.

ಈ ಪ್ರಕಾರ ಮಂತ್ರದ ಪ್ರಥಮಾಕ್ಷರದಿಂದ ವರ್ಣಮಾಲೆಯ ಕ್ರಮದಿಂದ ಗಣನೆ ಮಾಡಿದರೆ ಬರುವ ಅಂಕಿಯನ್ನು ಮೂರರಿಂದ ಗುಣಿಸಿ ಏಳರಿಂದ ಭಾಗಿಸಿದರೆ ಬರುವ ಶೇಷವು ಮಂತ್ರರಾಶಿಯಾಗುತ್ತದೆ. ಈ ಹಿಂದಿನ ನಿಯಮದಂತೆ ಅಧಿಕರಾಶಿಯುಳ್ಳದ್ದು ಋಣಿ ಮತ್ತು ಅಲ್ಪ ರಾಶಿಯನ್ನು ಧನಿ ಎಂದು ಕರೆಯುತ್ತಾರೆ.

ಉದಾಹರಣೆಗೆ, ದೇವದತ್ತನಿಗೆ 'ಕ್ಲೀಂ ಗೋವಲ್ಲಭಾಯ ಸ್ವಾಹಾ' ಈ ಅಷ್ಟಾಕ್ಷರ ಮಂತ್ರವನ್ನು ತೆಗೆದುಕೊಳ್ಳುವದಿದ್ದರೆ, ದೇವದತ್ತದ ಮೊದಲಕ್ಷರ 'ದ' ದಿಂದ ಕದವರೆಗೆ ವರ್ಣಮಾಲೆಯಲ್ಲಿ ಎಣಿಕೆ ಮಾಡುವುದರಿಂದ 37 ಸಂಖ್ಯೆಯಾಗುತ್ತದೆ. ಅದನ್ನು 3 ರಿಂದ ಗುಣಿಸಿದರೆ 111 ಆಗುತ್ತದೆ. ಇದರಲ್ಲಿ 7 ರಿಂದ ಭಾಗಿಸಿದರೆ ಉಳಿದ ಶೇಷ 6 ನಾಮರಾಶಿಯಾಗುತ್ತದೆ. ಅದೇ ಪ್ರಕಾರ ಮಂತ್ರದ ಅಕ್ಷರ ಕ ದಿಂದ ದ ವರೆಗೆ ಎಣಿಸಿದರೆ 18 ಆಗುತ್ತದೆ. ಅದನ್ನು 3 ರಿಂದ ಗುಣಿಸಿ ಏಳರಿಂದ ಭಾಗಿಸಿದರೆ ಬರುವ ಶೇಷ 5 ಮಂತ್ರರಾಶಿಯಾಗುತ್ತದೆ. ಅದು ನಾಮ ರಾಶಿಗಿಂತ ಸ್ವಲ್ಪವಾಗುವುದರಿಂದ ಧನಿಯೋಗವಾಗುವುದರಿಂದ ಅಗ್ರಾಹ್ಯವಾಗುತ್ತದೆ.

ಯದ್ವಾ ಮಂತ್ರಾಕ್ಷರಣೇಹ ಸ್ವರವ್ಯಂಜನರೂಪತಃ ॥ 46 ॥
ಪೃಥಕ್ಕೃತ್ಯ ದ್ವಿಗುಣಯೇದ್ಯೋಜಯೇತ್ಸಾಧಕಾಕ್ಷರೈಃ ।
ತಾದೃಶೈರಷ್ಟಭಿರ್ಭಕ್ತೈರ್ಮಂತ್ರರಾಶಿರುದಾಹೃತಃ ॥ 47 ॥

ಏವಂ ನಾಮಾರ್ಣಸಂಘೋಪಿ ದ್ವಿಗುಣೀಕೃತ್ಯ ಯೋಜಿರ್ತ ।
ಮಂತ್ರವರ್ಣೈರಷ್ಟಭಕ್ತೊ ನಾಮರಾಶಿಃ ಸ್ಮೃತೊ ಬುಧೈಃ ॥ 48 ॥

ಋಣಿತಾ ಧನಿತಾ ಚಾತ್ರ ಪೂರ್ವವತ್ಪರಿಕೀರ್ತಿತಾ ।
ಉಕ್ತಾನ್ಯತಮಮಾರ್ಗೇಣ ಶೋಧನಿಯಮೃಣಂ ಧನೈಃ ॥ 49 ॥

ಈಗ ಋಣಧನ ಶೋಧನದ ಮೂರನೆಯ ವಿಧಾನವನ್ನು ಹೇಳಲಾಗುತ್ತದೆ. ಮಂತ್ರದ ಸ್ವರ ಮತ್ತು ವ್ಯಂಜನಗಳನ್ನು ಬೇರೆ ಬೇರೆ ಮಾಡಿ ಕೂಡಿಸಬೇಕು. ನಂತರ ಅದನ್ನು ಎರಡರಿಂದ ಗುಣಿಸಿ ಗುಣನಫಲದಲ್ಲಿ, ಸಾಧಕನ ನಾಮಾಕ್ಷರದ ಸ್ವರ-ವ್ಯಂಜನಗಳನ್ನು ಬೇರೆ ಬೇರೆ ಮಾಡಿ ಅದರಲ್ಲಿ ಕೂಡಿಸಬೇಕು. ಈ ಯೋಗ ಫಲವನ್ನು 8 ರಿಂದ ಭಾಗಿಸಿದರೆ ಬರುವ ಶೇಷವು ಮಂತ್ರರಾಶಿ ಆಗುತ್ತದೆ.

ಇದೇ ಪ್ರಕಾರ ನಾಮದ ಸ್ವರ ವ್ಯಂಜನಗಳನ್ನು ಬೇರೆ ಬೇರೆ ಮಾಡಿ ಅದರ ಯೋಗವನ್ನು ಎರಡರಿಂದ ಗುಣಾಕಾರ ಮಾಡಿ ಗುಣನಫಲದಲ್ಲಿ, ಮಂತ್ರದ ಸ್ವರ-ವ್ಯಂಜನಗಳನ್ನು ಬೇರೆ ಬೇರೆಯಾಗಿ ಅದರಲ್ಲಿ ಜೋಡಿಸಬೇಕು. ನಂತರ ಯೋಗಫಲವನ್ನು 8 ರಿಂದ ಭಾಗಿಸುವುದರಿಂದ ಉಳಿಯುವ ಶೇಷವು 'ನಾಮರಾಶಿ' ಆಗುತ್ತದೆ. ಇಲ್ಲಿಯೂ ಕೂಡ ಋಣತ್ವ-ಧನತ್ವಗಳು ಹಿಂದಿನ ನಿಯಮಾನುಸಾರವಾಗಿ ಕಂಡು ಹಿಡಿಯಬೇಕು. ಇಲ್ಲಿಯವರೆಗೆ ವಿವರಿಸಲಾದ ಮೂರು ವಿಧಾನಗಳಲ್ಲಿ ಯಾವುದಾದರೊಂದು ರೀತಿಯಿಂದ ಋಣ-ಧನ ಶೋಧನ ಮಾಡಬೇಕು.

ಉದಾಹರಣಾರ್ಥ, ದೇವದತ್ತನ ಹೆಸರಿನ ಸ್ವರ ಮತ್ತು ವ್ಯಂಜನಗಳ ಯೋಗ (ದ,ಏ,ವ,ದ,ಅ,ದ,ಅ,ತ್,ತ್,ಅ) ಒಂಭತ್ತು ಆಗುತ್ತದೆ. ಅದರ ಎರಡು ಪಟ್ಟು 18 ಆಗುತ್ತದೆ. ಅದರ ಎರಡು ಒಟ್ಟು 18 ಆಗುತ್ತದೆ. ಅದರಲ್ಲಿ ಮಂತ್ರಾಕ್ಷರಗಳ ಯೋಗ (ಕ್,ಲ್,ಈ,ಅಂ,ಗ,ಓಂ,ವ,ಅ,ಲ್,ಲ್,ಅ,ಭ,ಆ,ಯ,ಅ,ಸ,ವ,ಆ,ಹ್,ಆ) 20 ಜೋಡಿಸುವುದರಿಂದ ಒಟ್ಟು 38 ಆಗುತ್ತದೆ. ಇದನ್ನು 8ರಿಂದ ಭಾಗಿಸುವುದರಿಂದ 6 ಶೇಷ ಬರುತ್ತದೆ. ಅದು ನಾಮರಾಶಿಯಾಗುತ್ತದೆ.

ಈ ಪ್ರಕಾರ ಮಂತ್ರದ ಸ್ವರ ವ್ಯಂಜನಗಳ ಯೋಗವು 20 ಆಗುತ್ತದೆ. ಅದರ ದ್ವಿಗುಣಿತ 40. ಅದರಲ್ಲಿ ನಾಮಾಕ್ಷರಗಳ ಯೋಗವು 9ನ್ನು ಸೇರಿಸಿದರೆ 49 ಆಗುತ್ತದೆ. ಇದರಲ್ಲಿ 8ರಿಂದ ಭಾಗಿಸಿದರೆ ಶೇಷ 1 ಉಳಿಯುತ್ತದೆ. ಇದು ಮಂತ್ರರಾಶಿಯಾಗುತ್ತದೆ. ಇದು ನಾಮರಾಶಿಗಿಂತ ಸ್ವಲ್ಪ ಆಗಿರುವುದರಿಂದ ಧನಿಯೋಗವಾಗುವುದರಿಂದ ಅಗ್ರಾಹ್ಯವಾಗಿದೆ.

**ಋಣಿ-ಧನಿ ಫಲಶ್ರುತಿ**

ಯೋ ಮಂತ್ರಃ ಪೂರ್ವಜನುಷಿ ಸೇವಿತೊ ನಾದದಾತ್ ಫಲಮ್ ।
ಪಾಪಾತ್ ಪಾಪಕ್ಷಯೆ ಜಾತೆ ಫಲಾವಾಪ್ತಿರನೇಹಸಿ ॥ 50 ॥

ಆಯುಃ ಕ್ಷಯಾದ್‌ಗತೊ ನಾಶಂ ಸಾಧಕೋಸ್ಯ ಭವಾಂತರೆ ।
ಋಣಿತ್ವಾತ್ ಪ್ರಾಪ್ತಿಮಾತ್ರೇಣ ಮಂತ್ರೋಭಿಷ್ಟಂ ಪ್ರಯಚ್ಛತಿ ॥ 51 ॥

ಸಮಾಂಕೌ ಯದ್ಯುಭೌ ರಾಶಿ ತದಾ ಸಂಸೇವನಾತ್ಫಲಮ್ ।
ಧನಿಮಂತ್ರಸ್ತು ಸಂಪ್ರಾಪ್ತಃ ಫಲತ್ಯಧಿಕಸೇವಯಾ ॥ 52 ॥

ಪೂರ್ವ ಜನ್ಮದಲ್ಲಿ ಉಪಾಸನಾ ಕಾಲದಲ್ಲಿ ಪಾಪಾಧಿಕದ ಕಾರಣದಿಂದ ಸಾಧಕನ ಆಯುಷ್ಯ ಸಮಾಪ್ತವಾಗಿದ್ದು ಮತ್ತು ಮಂತ್ರವು ಫಲ ನೀಡದಿದ್ದರೆ,





ಸಾಧಕನು ಋಣಿಯಾಗಿರುತ್ತಾನೆ. ಆದ ಕಾರಣ ಈ ಜನ್ಮದಲ್ಲಿ ಅವನು ಮಂತ್ರ ತೆಗೆದುಕೊಳ್ಳುವಾಗ ಸಾಧಕನ ಅಭೀಷ್ಟ ಫಲಗಳನ್ನು ಕೊಡಲು ಉನ್ಮುಖವಾಗುತ್ತವೆ.

ನಾಮರಾಶಿ ಮತ್ತು ಮಂತ್ರರಾಶಿಯ ಅಂಕಗಳು ಸಮಾನವಾಗಿದ್ದರೆ ಉಪಾಸಕನಿಗೆ ಉಪಾಸನೆಯ ಫಲವು ದೊರೆಯುತ್ತದೆ. ಆದರೆ ಧನಿ ಮಂತ್ರವು ಅತ್ಯಧಿಕ ಸಾಧನೆಯಿಂದ ಮಾತ್ರ ಫಲ ನೀಡುತ್ತದೆ.

ಮಂತ್ರಾಣಾಂ ಶೋಧನೆ ಚೈತತ್ತ್ವಕಾರಂತರಮುಚ್ಯತೆ ।
ಷಟ್‌ಕೋಣೆ ವಿಲಿಖೇತ್ಪೂರ್ವಕೋಣಾದ್ಯೈಕೈಕವರ್ಣಕಾನ್ ॥ 53 ॥

ಅಕಾರಾದಿಹಕಾರಾಂತಾನ್ ನಪುಂಸಕವಿವರ್ಜಿತಾನ್ ।
ನಾಮಾದ್ಯಕ್ಷರಮಾರಭ್ಯ ಮಂತ್ರಾರ್ಣಾವಧಿ ಶೋಧಯೇತ್ ॥ 54 ॥

ಪ್ರಥಮೆ ಸಂಪದಾಂ ಪ್ರಾಪ್ತಿರ್ದ್ವಿತಿಯೆ ಧನಸಂಕ್ಷಯಃ ।
ತೃತಿಯೆ ಧನಸಂಪ್ರಾಪ್ತಿಶ್ಚತುರ್ಥೆ ಬಂಧುವಿಗ್ರಹಃ ॥ 55 ॥

ಮಂತ್ರ ಶೋಧನ ಚಕ್ರ



ಪಂಚಮೇ ತು ಭವೇದಾಧಿಃ ಷಷ್ಠೇ ಸರ್ವಸ್ಯ ಸಂಕ್ಷಯಃ ।
ಏವಂ ಸಂಶೋಧಿತಂ ಮಂತ್ರಂ ದದ್ಯಾಚ್ಛಿಷ್ಯಾಯ ಮಾಂತ್ರಿಕಃ ॥ 56 ॥

ಈ ಮಂತ್ರ ಶೋಧನದ ಇನ್ನೊಂದು ವಿಧಾನವನ್ನು ಇಲ್ಲಿ ವಿವರಿಸಲಾಗುತ್ತಿದೆ. ಷಟ್ಕೋನ ಚಕ್ರದಲ್ಲಿ ಪೂರ್ವದಿಂದ ಆರಂಭಿಸಿ ನಪುಂಸಕ (ಋ ೠ ಌ ೡ) ಸ್ವರಗಳನ್ನು ಬಿಟ್ಟು ಅಕಾರದಿಂದ ಹಕಾರದ ಪರ್ಯಂತ ಒಂದೊಂದು ವರ್ಣವನ್ನು ಕ್ರಮವಾಗಿ ಬರೆಯಬೇಕು. ನಂತರ ನಾಮದ ಪ್ರಥಮ ಅಕ್ಷರದಿಂದ ಮಂತ್ರದ ಪ್ರಥಮ ಅಕ್ಷರದ ವರೆಗೆ ಈ ಪ್ರಕಾರ ಸಂಶೋಧನ ಮಾಡಬೇಕು.

ನಾಮದ ಪ್ರಥಮಾಕ್ಷರದಿಂದ ಮಂತ್ರಾಕ್ಷರವು ಪ್ರಥಮ ಕೋಷ್ಠದಲ್ಲಿದ್ದರೆ ಸಂಪತ್ತಿನ ಲಾಭ. ಎರಡರಲ್ಲಿದ್ದರೆ ಧನಹಾನಿ ಮತ್ತು ಮೂರರಲ್ಲಿದ್ದರೆ ಧನಲಾಭ, ನಾಲ್ಕರಲ್ಲಿದ್ದರೆ ಬಂಧುಗಳೊಂದಿಗೆ ವಿರಸ ಐದರಲ್ಲಿದ್ದರೆ ಆಧಿವ್ಯಾಧಿ ಮತ್ತು ಆರರಲ್ಲಿದ್ದರೆ ಸರ್ವಸ್ವ ನಾಶವಾಗುತ್ತದೆ. ಮಂತ್ರವೇತ್ತರಾದ ಗುರುಗಳು ಈ ಪ್ರಕಾರ ಸಂಶೋಧನೆ ಮಾಡಿದ ನಂತರವೇ ಶಿಷ್ಯನಿಗೆ ಮಂತ್ರವನ್ನು ಕೊಡಬೇಕು.

ಯೇಷಾಂ ಮನುನಾಂ ಸಿದ್ಧಾದಿಶೋಧನಂ ನಾಸ್ತಿ ತಾನ್ ಬ್ರುವೇ ।
ಏಕವರ್ಣಾಸ್ತ್ರಿವರ್ಣೋ ವಾ ಪಂಚಾರ್ಣೋ ರಸವರ್ಣಕಃ ॥ 57 ॥

ಸಪ್ತಾರ್ಣೋ ನವವರ್ಣಾಶ್ಚ ರುದ್ರಾರ್ಣೋ ರದನಾಕ್ಷರಃ ।
ಅಷ್ಟಾರ್ಣಾ ಹಂಸಮಂತ್ರಶ್ಚ ಕೂಟೋ ವೇದೋದಿತೊ ಧ್ರುವಃ ॥ 58 ॥

ಸ್ವಪ್ನಲಬ್ಧಃ ಸ್ತ್ರಿಯಾಪ್ರಾಪ್ತೊ ಮಾಲಾಮಂತ್ರೋ ನೃಕೇಸರಿ ।
ಪ್ರಾಸಾದೊ ರವಿಮಂತ್ರಶ್ಚ ವಾರಾಹೊ ಮಾತೃಕಾಪರಾ ॥ 59 ॥

ತ್ರಿಪುರಾಕಾಮ ಮಂತ್ರಶ್ಚಾಜ್ಞಾಸಿದ್ಧಃ ಪಕ್ಷಿನಾಯಕಃ ।
ಬೌದ್ಧಮಂತ್ರಾ ಜೈನಮಂತ್ರಾ ನೈವಸಿದ್ಧಾದಿಶೋಧನಮ್ ॥ 60 ॥

ಏತದ್‌ಭಿನ್ನೇಷು ಮಂತ್ರೇಷು ಶುದ್ಧಿರಾವಶ್ಯಕಿ ಮತಾ ।
ವಿದ್ಯಾಂ ಮಂತ್ರಂ ಸ್ತವಂ ಸೂಕ್ತಮರಿಭೂತಂ ತ್ಯಜೇದ್ ಧ್ರುವಮ್ ॥ 61॥

ಅರಿಮಂತ್ರೊ ಗೃಹೀತಶ್ಚೇದಜ್ಞಾನವಶತಸ್ತದಾ ।
ತಸ್ಯ ತ್ಯಾಗಃ ಪ್ರಕರ್ತವ್ಯಸ್ತತ್ಪ್ರಕಾರೋಧುನೋಚ್ಯತೆ ॥ 62 ॥

ಈಗ ಮಂತ್ರಶೋಧನದ ಅಪವಾದಗಳನ್ನು ಅಂದರೆ ಸಂಶೋಧನೆಯ ಅವಶ್ಯಕತೆಯಿರದಿರುವ ಮಂತ್ರಗಳನ್ನು ಕುರಿತು ಹೇಳಲಾಗುತ್ತದೆ. ಏಕಾಕ್ಷರ, ತ್ರ್ಯಕ್ಷರ, ಪಂಚಾಕ್ಷರ, ಷಡಕ್ಷರ, ಸಪ್ತಾಕ್ಷರ, ನವಾಕ್ಷರ, ಏಕಾದಶಾಕ್ಷರ, ದ್ವಾಂತ್ರಿಂಶದಕ್ಷರ,





ಅಷ್ಟಾಕ್ಷರ, ಹಂಸ ಮಂತ್ರ, ಕೂಟ ಮಂತ್ರ, ವೇದೋಕ್ತ ಮಂತ್ರ, ಪ್ರಣವ, ಸ್ವಪ್ನ ಪ್ರಾಪ್ತ ಮಂತ್ರ, ಸ್ತ್ರೀದ್ವಾರಾ ಪ್ರಾಪ್ತ, ಮಾಲಾ ಮಂತ್ರ, ನರಸಿಂಹ ಮಂತ್ರ, ಪ್ರಾಸಾದ (ಹೌಂ) ರವಿಮಂತ್ರ, ವಾರಾಹ ಮಂತ್ರ, ಮಾತೃಕಾ ಮಂತ್ರ ಪರಾ (ಹ್ರೀಂ), ತ್ರಿಪುರಾ ಕಾಮಮಂತ್ರ, ಆಜ್ಞಾಸಿದ್ಧಿ, ಗರುಡ ಮಂತ್ರ, ಬೌದ್ಧ ಮತ್ತು ಜೈನ ಮಂತ್ರ ಈ ಎಲ್ಲ ಮಂತ್ರಗಳಲಿ ಸಿದ್ಧಾದಿಶೋಧನ ಮಾಡುವ ಅವಶ್ಯಕತೆಯಿರುವುದಿಲ್ಲ. ಇದರ ಹೊರತು ಅನ್ಯ ಎಲ್ಲ ಮಂತ್ರಗಳಲ್ಲಿ ಸಿದ್ಧಾದಿಶೋಧನ ಮಾಡಬೇಕು. ವಿದ್ಯಾಮಂತ್ರ, ಸ್ತವ, ಸೂಕ್ತ ಮತ್ತು ಅರಿ ಮಂತ್ರಗಳಾಗಿದ್ದರೆ ಅವುಗಳನ್ನು ನಿಶ್ಚಿತ ರೂಪದಲ್ಲಿ ತ್ಯಜಿಸಬೇಕು.

ಅರಿಮಂತ್ರ ತ್ಯಾಗ ಪ್ರಕಾರ

ಸುದಿನೆ ಸ್ಥಾಪಯೇತ್ಕುಂಭಂ ಸರ್ವತೋಭದ್ರಮಂಡಲೆ ।
ವಿಲೋಮಂ ಸಂಜಪನ್ಮಂತ್ರಂ ಪೂರಯೇತ್ತಂ ಸುಪಾಥಸಾ ॥ 63 ॥
ತತ್ರ ದೇವಂ ಸಮಾವಾಹ್ಯ ಯಜೇದಾವರಣಾನ್ವಿತಮ್ ।
ತದಗ್ರೆ ಸ್ಥಂಡಿಲಂ ಕೃತ್ವಾ ಪ್ರತಿಷ್ಠಾಪ್ಯಾನಲಂ ತತಃ ॥ 64 ॥
ಬಹುಯಾನ್ಮೂಲ ಮಂತ್ರೇಣ ವಿಲೋಮೇನ ಶತಂ ಘೃತೈಃ ।
ದಿಕ್ಪತಿಭ್ಯೋ ಬಲಿಂ ದದ್ಯಾತ್ ಪಾಯಸಾನ್ನೈರ್ಘೃತಾನ್ವಿತೈಃ ॥ 65 ॥

ಪುನಃ ಸಂಪೂಜ್ಯ ದೇವೇಶಂ ಪ್ರಾರ್ಥಯೇನ್ಮನುನಾಮುನಾ ।
ಅನುಕೂಲ್ಯಮನಾಲೋಚ್ಯ ಮಯಾ ತರಲಬುದ್ಧಿನಾ ॥ 66 ॥

ಯದುಪಾತ್ತಂ ಪೂಜಿತಂ ಚ ಪ್ರಭೋ ಮಂತ್ರಸ್ವರೂಪಿಕಮ್ ।
ತೇನ ಮೆ ಮನಸಃ ಕ್ಷೋಭಮಶೇಷಂ ವಿನಿವರ್ತಯ ॥ 67 ॥

ಪಾಪಂ ಪ್ರತಿಹತಂ ಚಾಸ್ತು ಭೂಯಾಚ್ಛ್ರೇಯಃ ಸನಾತನಮ್ ।
ತನೋತು ಮಮ ಕಲ್ಯಾಣಂ ಪಾವನಿ ಭಕ್ತಿರಸ್ತು ತೆ ॥ 68 ॥

ಏವಂ ಸಂಪ್ರಾರ್ಥ್ಯ ದೇವೇಶಂ ಕರ್ಪೂರಾಗರುಚಂದನೈಃ ।
ವಿಲೋಮಂ ವಿಲಿಖೇನ್ಮಂತ್ರಂ ತಾಡಪತ್ರೆ ತದರ್ಚಯೇತ್ ॥ 69 ॥

ಈಗ ಅರಿಮಂತ್ರ ತ್ಯಾಗದ ಪ್ರಕಾರಗಳನ್ನು ಹೇಳಲಾಗುತ್ತದೆ. ಅಜ್ಞಾನವಶಾತ್ ಶತ್ರುಮಂತ್ರ ದೀಕ್ಷೆ ಪಡೆದುಕೊಂಡಿದ್ದರೆ ಅದನ್ನು ತ್ಯಜಿಸುವ ವಿಧಾನ ಈ ರೀತಿಯಾಗಿದೆ–ಶುಭಮುಹೂರ್ತದಲ್ಲಿ ಸರ್ವತೋಭದ್ರಮಂಡಲದ ಮೇಲೆ ಕಲಶವನ್ನು ಸ್ಥಾಪಿಸಬೇಕು. ಮತ್ತು ವಿಲೋಮ ಮಂತ್ರದ ಜಪ ಮಾಡುತ್ತ ಅದರಲ್ಲಿ ಪವಿತ್ರ ಜಲವನ್ನು ತುಂಬಬೇಕು. ನಂತರ ಮಂತ್ರ ದೇವತೆಯನ್ನು ಆವಾಹನೆ ಮಾಡಿ ಆವರಣ ಸಹಿತ ಪೂಜೆ ಮಾಡಬೇಕು.

ಚಕ್ರದಲ್ಲಿ ದೇವದತ್ತನ ಹೆಸರಿನ ಪ್ರಥಮಾಕ್ಷರ 'ದ'ದಿಂದ ಮಂತ್ರಾಕ್ಷರ 'ಐಂ' ಮೂರನೆಯ ಸ್ಥಾನದಲ್ಲಿ ಬರುತ್ತದೆ. ಕಾರಣ ದೇವದತ್ತನಿಗೆ ಈ ಮಂತ್ರವು ಸುಸಿದ್ಧ ಶ್ರೇಣಿಯಲ್ಲಿ ಬರುವುದರಿಂದ ಗ್ರಾಹ್ಯವಾಗಿದೆ.

**ಸಿದ್ಧಾದಿಶೋಧನ ತೃತಿಯ ವಿಧಾನ**

**ಚತುಃಕೋಷ್ಠೇಷು ವಿಲಿಖೇದಾದಿವರ್ಣಾನ್ ಪುನಃ ಪುನಃ** ॥ 25 ॥

**ನಾಮಾರ್ಣಾತ್ಸಿದ್ಧಸಾಧ್ಯಾದಿ ಜ್ಞೇಯಂ ಮನ್ವಕ್ಷರಾವಧಿ ।**
**ಚತುರ್ಥೋಽಪಿ ಪ್ರಕಾರೋಸ್ತಿ ಸಿದ್ಧಾದೀನಾಂ ವಿಶೋಧನೆ** ॥ 26 ॥

ಸಿದ್ಧಾದಿಶೋಧನದ ಮತ್ತೊಂದು ವಿಧಾನ ಈ ಪ್ರಕಾರವಾಗಿದೆ. ನಾಲ್ಕು ಕೋಷ್ಠಕಗಳಲ್ಲಿ ಅಕಾರಾದಿ ವರ್ಣ ಗಳನ್ನು ಸರಿಯಾಗಿ ಬರೆಯಬೇಕು. ನಂತರ ನಾಮದ ಪ್ರಥಮ ಅಕ್ಷರ ದಿಂದ ಸಿದ್ಧ, ಸಾಧ್ಯ, ಸುಸಿದ್ಧ ಮತ್ತು ಅರಿ ಎಂಬ ಗಳನ್ನು ಗಣನೆ ಮಾಡಬೇಕು.

| | |
|---|---|
| ಅ ಉ ಲೃ ಐ<br>ಕ ಜ ಝ ಡ ಫ<br>ಪ ಮ<br>ವ ಹ | ಆ ಊ ಲೄ ಔ<br>ಖ ಚ ಞ ಢ ದ<br>ಫ ಯ<br>ಶ ಳ |
| ಈ ಋ ಐಂ ಅಃ<br>ಧ ಜ ಠ ತ ನ<br>ಭ ಲ ಸ ಜ್ಞ | ಈ ೠ ಏ ಅಂ<br>ಗ ಭ ಟ ಣ ಥ<br>ಬ ರ<br>ಕ್ಷ ಕ್ಷಃ |

ಉದಾಹರಣಾರ್ಥ, ದೇವದತ್ತನಿಗೆ ಏಕಾರಾದಿ ಮಂತ್ರ ತೆಗೆದುಕೊಳ್ಳಬೇಕಾಗಿದೆ. ಈ ಚಕ್ರದಲ್ಲಿ ದೇವದತ್ತನ ಪ್ರಥಮಾಕ್ಷರ 'ದ'ದಿಂದ ಮಂತ್ರಾಕ್ಷರ ಏ, ಮೂರನೆಯ ಸ್ಥಾನದಲ್ಲಿ ಬರುತ್ತದೆ. ನಿಯಮಾನುಸಾರ ದೇವದತ್ತನಿಗೆ ಈ ಮಂತ್ರವು ಸುಸಿದ್ಧವಾಗುವುದರಿಂದ ದೀಕ್ಷೆ ಮಾತ್ರದಿಂದ ಸಿದ್ಧವಾಗುತ್ತದೆ.

**ನಾಮ್ನೋ ಮಂತ್ರಸ್ಯ ವರ್ಣೌಘಂ ಚತುರ್ಭಿರ್ವಿಭಜೇತ್ ಸುಧೀಃ ।**
**ಏಕಾದಿಶೇಷೆ ಸಿದ್ಧಾದಿಕ್ರಮಾಜ್ಞೇಯಂ ವಿಚಕ್ಷಣೈಃ** ॥ 27 ॥
**ಸಿದ್ಧಾದಿಶೋಧನಂ ಪ್ರೋಕ್ತಮಥ ವಚ್ಮಿ ಭಶೋಧನಮ್ ।**

ಸಿದ್ಧಾದಿಶೋಧನದ ಚತುರ್ಥ ವಿಧಾನವನ್ನು ಹೇಳಲಾಗುತ್ತದೆ. ನಾಮ ಮತ್ತು ಮಂತ್ರಗಳ ವರ್ಣಗಳನ್ನು ಜೊಡಿಸಿ 4 ಭಾಗ ಮಾಡಬೇಕು. 1 ಶೇಷ ಉಳಿದರೆ ಮಂತ್ರಸಿದ್ಧ 2 ಶೇಷ ಉಳಿದರೆ ಸಾಧ್ಯ 3. ಉಳಿದರೆ ಸುಸಿದ್ಧ 4 ಶೇಷ ಉಳಿದರೆ ಶತ್ರುವೆಂದು ತಿಳಿಯಬೇಕು.





ಉದಾಹರಣಾರ್ಥವಾಗಿ, ದೇವದತ್ತನಿಗೆ ಹದಿನಾರು ಅಕ್ಷರಗಳ ವಾಗೀಶ್ವರಿ ಮಂತ್ರ – ಐಂ ನಮೋ ಭಗವತಿ ವದ ವದ ವಾಗ್ದೇವಿ ಸ್ವಾಹಾ"ವನ್ನು ತೆಗೆದುಕೊಳ್ಳಬೇಕಾಗಿದೆ. ಇಲ್ಲಿ ದೇವದತ್ತನ ನಾಮದ ನಾಲ್ಕು ಅಕ್ಷರ ಮತ್ತು ಮಂತ್ರದ 16 ಅಕ್ಷರಗಳನ್ನು ಕೂಡಿಸುವುದರಿಂದ 20 ವರ್ಣಗಳಾಗುತ್ತವೆ. ಅದನ್ನು ನಾಲ್ಕರಿಂದ ಭಾಗ ಮಾಡಿದರೆ ಶೇಷ ನಾಲ್ಕು ಉಳಿಯುತ್ತದೆ. ಈ ನಿಯಮಾನುಸಾರವಾಗಿ ಈ ಮಂತ್ರವು ದೇವದತ್ತನಿಗೆ ಶತ್ರುಯೋಗಕಾರಕವಾಗುವುದರಿಂದ ಅಗ್ರಾಹ್ಯವಾಗಿದೆ.

**ನಕ್ಷತ್ರ ವರ್ಣಶೋಧನ ವಿಧಾನ**

**ನೇತ್ರಭೂಗುಣವೇದಕ್ಷ್ಮಾಧರಾನಯನಭೂಭುಜಾ :** ॥ 28 ॥

**ದ್ವಿಚಂದ್ರಭುಜಬಾಹ್ವಕ್ಷಿಭೂನೇತ್ರತ್ರಿಧರಾಗುಣಾಃ ।**
**ವಿಕೈಕಂ ಭೂಭುಜೌ ದ್ವಯಕ್ಷಿರಾಮಚಂದ್ರಾನುದುಷ್ಟಥ** ॥ 29 ॥

**ಅಶ್ವಿನ್ಯಾದಿಷು ವಿಜ್ಞೇಯಾ ಆದಿವರ್ಣಾಃ ಕ್ರಮಾದ್ ಬುಧೈಃ ।**
**ಕ್ಷಾಂತಾಬಿಂದುವಿಸರ್ಗಾ ತು ಪೌಷ್ಣಭಾಗೆ ವ್ಯವಸ್ಥಿತಾ** ॥ 30 ॥

**ಜನ್ಮಸಂಪದದ್ವಿಪತ್ಕ್ಷೇಮಪ್ರತ್ಯರಿಃ ಸಾಧಕೋ ವಧಃ ।**
**ಮೈತ್ರಂ ಪರಮಮೈತ್ರಂ ಚ ಗಣನೀಯಂ ಸ್ವನಾಮಭೃತ್** ॥ 31 ॥
**ವಿಪದ್ವಧಃ ಪ್ರತ್ಯರಿಶ್ಚ ತ್ಯಾಜ್ಯಾ ಅನ್ಯದುಡೂತ್ತಮಮ್ ।**

| | | | | | | | | |
|---|---|---|---|---|---|---|---|---|
| ಅ<br>ಅ ಆ | ಭ<br>ಇ | ಕೃ<br>ಈ ಉ ಊ | ರೊ<br>ಋ ೠ<br>ಲೃ ಲೄ | ಮೃ<br>ಏ | ಆ<br>ಐ | ಪು<br>ಓ ಔ | ಪು<br>ಕ | ಆ<br>ಖ ಗ |
| ಮ<br>ಘ ಙ | ಪೂ<br>ಚ | ಉ<br>ಛ ಜ | ಹ<br>ಝ ಞ | ಚ<br>ಟ ಠ | ಸ್ವಾ<br>ಡ | ವಿ<br>ಢ ಣ | ಅ<br>ತ ಥ<br>ದ | ಜ್ಯೇ<br>ಧ |
| ಮೂ<br>ನ ಪ ಕ | ಪೂ<br>ಬ | ಅ<br>ಭ | ಶ್ರ<br>ಮ | ಧ<br>ಯ ರ | ಶ<br>ಲ | ಪೂ<br>ವ ಶ | ಉ<br>ಕ್ಷ ಸ<br>ಹ | ರೇ<br>ಕ್ಷ<br>ಅಂ ಅಃ |

ಈಗ ನಕ್ಷತ್ರ ಶೋಧನ ವಿಧಾನವನ್ನು ಹೇಳಲಾಗುತ್ತದೆ. ಅಶ್ವಿನಿ ಅ ದಿಂದ ಹಿಡಿದು ರೇವತಿಯವರೆಗೆ ನಕ್ಷತ್ರಗಳ 27 ಕೋಷ್ಠಕಗಳಲ್ಲಿ ಅಕಾರಾದಿ 2,1,3,4,1,1,2,1,2,2,1,2,2,2,1,2,3,1,3,1,1,1,2,2,2, ಮತ್ತು 3 ಮತ್ತು ರೇವತಿಯಲ್ಲಿ ಕ್ಷ, ಅಂ, ಅಃ ವ್ಯವಸ್ಥಿತ ರೂಪದಿಂದ ಬರೆಯಬೇಕು.

ರೀತಿಯಾಗಿದೆ. ಸಾಧಕನ ಹೆಸರು ಮತ್ತು ಗ್ರಹಣ ಮಾಡುವ ಮಂತ್ರದ ಒಂದೊಂದು ಅಕ್ಷರಗಳನ್ನು ಬರೆದು, ಮಂತ್ರ ಸಮಾಪ್ತವಾಗದಿರುವವರೆಗೆ ಸಿದ್ಧಾದಿ ಗಣನೆ ಮಾಡಬೇಕು. ಮಂತ್ರಾಕ್ಷರದ ಪ್ರಥಮ ನಾಮದ ವರ್ಣವು ಸಮಾಪ್ತವಾಗಿದ್ದರೆ ಪುನಃ ಮಂತ್ರ ಪರ್ಯಂತ ಹೆಸರು ಬರೆಯಬೇಕು.

ಈ ಪ್ರಕಾರ ಸಂಶೋಧನ ಮಾಡಿದ ಮೇಲೆ, ಸಾಧ್ಯ ಮತ್ತು ಶತ್ರು ಅಧಿಕವಾಗಿದ್ದರೆ ಮತ್ತು ಸಿದ್ಧ ಮತ್ತು ಸುಸಿದ್ಧ ಕಡಿಮೆಯಾಗಿದ್ದರೆ ಸಾಧಕನಿಗೆ ಮಂತ್ರವು ಅಶುಭವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಸಿದ್ಧ ಮತ್ತು ಸುಸಿದ್ಧ ಅಧಿಕವಾಗಿದ್ದರೆ ಸಾಧ್ಯ ಮತ್ತು ಅರಿ ಕಡಿಮೆಯಾಗಿದ್ದರೆ ಮಂತ್ರವು ಶುಭವಾಗುತ್ತದೆ. ಇದನ್ನು ಪ್ರಾಜ್ಞರು ಒಪ್ಪಿಕೊಂಡಿರುತ್ತಾರೆ.

ಉದಾಹರಣಾರ್ಥ, ಸಾಧಕನು ಗಣೇಶನ, 'ವಕ್ರತುಂಡಾಯ ಹುಮ್' ಈ ಮಂತ್ರವನ್ನು ತೆಗೆದುಕೊಳ್ಳಲು ಬಯಸುತ್ತಾನೆ ಎಂದಿಟ್ಟುಕೊಳ್ಳಿರಿ. ದೇವದತ್ತನ ಹೆಸರಿನ ಅಕ್ಷರಗಳು, ದ ವ ದ ತ ತ ಮತ್ತು ಮಂತ್ರದ ಅಕ್ಷರ ವ ಕ ದ ತ ಡ ಯ ಹ ಆಗುತ್ತವೆ. ಇಲ್ಲಿ ಸಾಧಕನ ಹೆಸರಿನ ಪ್ರಥಮಾಕ್ಷರವು ದ ಮೂರನೆಯ ಕೋಷ್ಠದಲ್ಲಿದೆ ಮತ್ತು ಮಂತ್ರದ ಪ್ರಥಮಾಕ್ಷರ 'ವ' 12ನೆಯದರಲ್ಲಿ ರುವುದರಿಂದ ಅರಿ (ಶತ್ರು) ಯಾಗಿದೆ.

ಈ ಪ್ರಕಾರ ಸಾಧಕನ ಹೆಸರಿನ ಎರಡನೆಯ ಅಕ್ಷರ 'ವ'ದಿಂದ ಮಂತ್ರದ ಎರಡನೆಯ ಅಕ್ಷರ 'ಕ' ಸಿದ್ಧವಾಗಿದೆ. ಮೂರನೆಯ ಅಕ್ಷರ 'ದ' ದಿಂದ ಮಂತ್ರದ ಮೂರನೆಯ ಅಕ್ಷರ 'ರ' ಸಾಧ್ಯವಾಗಿದೆ. ನಾಲ್ಕನೆಯ ವರ್ಣ 'ತ' ದಿಂದ ಮಂತ್ರದ ನಾಲ್ಕನೆಯ ಅಕ್ಷರ 'ತ' ಸಿದ್ಧವಾಗಿದೆ. ಮತ್ತು ಐದನೆಯ ವರ್ಣ 'ತ'ದಿಂದ 'ಡ' ಸುಸಿದ್ಧವಾಗಿದೆ. ಪುನಃ 'ದ' ದಿಂದ ಯ ಸಿದ್ಧ ಮತ್ತು 'ವ' ದಿಂದ 'ಹ' ವು ಕೂಡಾ ಸಿದ್ಧವಾಗಿದೆ.

ಈ ಪ್ರಕಾರ ನಾಮ ಮತ್ತು ಮಂತ್ರಗಳ ವರ್ಣಗಳಿಂದ ವಿಚಾರ ಮಾಡಿದ ಮೇಲೆ ಸಾಧ್ಯ ಮತ್ತು ಅರಿಯ ಸಂಖ್ಯೆಗಳು ಎರಡು ಮತ್ತು ಸಿದ್ಧ ಹಾಗೂ ಸುಸಿದ್ಧಗಳ ಸಂಖ್ಯೆ 5 ಆಗಿರುವುದರ ಕಾರಣ ಈ ಮಂತ್ರವು ದೇವದತ್ತನಿಗೆ ಶುಭವಾಗುತ್ತದೆ.

ಅಕಡಮ ಚಕ್ರ ಕಥನ

**ದ್ವಾದಶಾರೆ ಲಿಖೇಚ್ಚಕ್ರೆ ವರ್ಣಾನ್ಪೂರ್ವೋದಿತನ್ಮಾತೆ ।**
**ಈಶಾನಾಂತಮಕಾರಾಧ್ಯಾನ್ಹಾಂತಾನ್ ಷಂಢವಿವರ್ಜಿತಾನ್** ॥ 21 ॥

**ತತ್ರ ನಾಮಾರ್ಣಮಾರಭ್ಯ ಮಂತ್ರಾದ್ಯರ್ಣಾವಧಿ ಕ್ರಮಾತ್ ।**
**ಗಣಯೇತ್ಸಿದ್ಧಸಾಧ್ಯಾದಿ ಫಲಂ ತೇಷಾಂ ವಿನಿರ್ದಿಶೇತ್** ॥ 22 ॥





**ಸಿದ್ಧಃ ಸಿದ್ಧ್ಯತಿ ಕಾಲೇನ ಸಾಧ್ಯಾಸ್ತು ಜಪಹೋಮತಃ ।**
**ಸುಸಿದ್ಧಃ ಪ್ರಾಪ್ತಿ ಮಾತ್ರೇಣ ಸಾಧಕಂ ಭಕ್ಷಯೇದರಿಃ** ॥ 23 ॥

**ಸಿದ್ಧೋ ನವೈಕಬಾಣೇಷು ಸಾಧ್ಯೋ ರಸದಿಶಾಕ್ಷಿಷು ।**
**ಸುಸಿದ್ಧಸ್ತ್ರಿಮುನಿಶೇಷು ರಿಪುರ್ವೇದಾಷ್ಟಭಾನುಷು** ॥ 24 ॥

**ಅನ್ಯೋಽಪೀಹ ಪ್ರಕಾರೋಸ್ತಿ ಸಿದ್ಧಸಾಧ್ಯಾದಿಶೋಧನೆ ।**

ಅಕಡಮ ಅಥವಾ ಅನ್ಯ ಪ್ರಕಾರದಿಂದಲೂ ಕೂಡ ಸಿದ್ಧಾದಿಗಳನ್ನು ಶೋಧಿಸುವ ವಿಧಾನಗಳಿವೆ.

ದ್ವಾದಶ ದಳ ಚಕ್ರದಲ್ಲಿ ಋ ೠ ಲೃ ಲೄ ಈ ನಪುಂಸಕ ಸ್ವರಗಳನ್ನು ಬಿಟ್ಟು ಅಕಾರದಿಂದ ಹಕಾರ ಪರ್ಯಂತ ಮಾತೃಕಾ ವರ್ಣಗಳನ್ನು ಪೂರ್ವೋಕ್ತ ವಿಧಾನದಿಂದ ಪ್ರದಕ್ಷಿಣಾ ಕ್ರಮದಲ್ಲಿ ಬರೆಯಬೇಕು. ಈ ಚಕ್ರದ ಹೆಸರಿನ ಪ್ರಥಮ ಅಕ್ಷರದಿಂದ ಮಂತ್ರದ ಪ್ರಥಮ ಅಕ್ಷರದವರೆಗೆ ಸಿದ್ಧ, ಸಾಧ್ಯ, ಸುಸಿದ್ಧ ಮತ್ತು ಅರಿ ಈ ಕ್ರಮದಲ್ಲಿ ಗಣನೆ ಮಾಡಬೇಕು. ಮತ್ತು ಅದರ ಫಲವನ್ನು ಈ ಪ್ರಕಾರ ಹೇಳಬೇಕು. ಸಿದ್ಧ ಮಂತ್ರವು ನಿರ್ಧಾರಿತ ಕಾಲದಲ್ಲಿ, ಸಾಧ್ಯ ಮಂತ್ರವು ಅಧಿಕ ಜಪ ಮತ್ತು ನಿರ್ಧಾರಿತ ಕಾಲದಲ್ಲಿ ಸಾಧ್ಯ ಮಂತ್ರವು ಅಧಿಕ ಜಪ ಮತ್ತು ಹೋಮ ಮಾಡುವುದರಿಂದ, ಸುಸಿದ್ಧ ಮಂತ್ರವು ದೀಕ್ಷಾ ಮಾತ್ರದಿಂದ ಸಿದ್ಧವಾಗುತ್ತದೆ. ಆದರೆ ಅರಿ ಮಂತ್ರವು ಸಾಧಕನನ್ನು ನಾಶ ಮಾಡುತ್ತದೆ.

ಅ ಕ ಡ ಮ ಚಕ್ರ



ನಾಮದ ಪ್ರಥಮಾಕ್ಷರದ ಕೋಷ್ಠದಿಂದ 1,5,9 ಕೋಷ್ಠಕದಲ್ಲಿ ಬರುವ ಮಂತ್ರದ ಪ್ರಥಮಾಕ್ಷರ ಸಿದ್ಧವಾಗುತ್ತದೆ. 2,6,10ನೆಯ ಕೋಷ್ಠದಲಿ ಬರುವುದು ಸಾಧ್ಯ, 3,7,11ನೆಯ ಕೋಷ್ಠಕದಲ್ಲಿ ಬರುವುದು ಸುಸಿದ್ಧ ಮತ್ತು 4,9,12ನೆಯ ಕೋಷ್ಠಕದಲ್ಲಿ ಬರುವ ಮಂತ್ರದ ಪ್ರಥಮಾಕ್ಷರವು ಅರಿಯಾಗುತ್ತದೆ.

ಉದಾಹರಣಾರ್ಥ, ದೇವದತ್ತ ಹೆಸರಿನ ಸಾಧಕನಿಗೆ ಆದಿಯಲ್ಲಿ ಎಕಾರ ವರ್ಣದ ಯಾವುದಾದರೊಂದು ಮಂತ್ರದ ದೀಕ್ಷೆ ತೆಗೆದುಕೊಳ್ಳುವದಿದ್ದರೆ ಈ

### ಯೋಗಫಲಕಥನ

ಸಿದ್ಧಸಿದ್ಧೋ ಯಥೋಕ್ತೇನ ದ್ವಿಗುಣಾತ್ಸಿದ್ಧಸಾಧಕಃ ॥ 13 ॥

ಸಿದ್ಧಸಿದ್ಧೋರ್ಧಜಪಾತ್ಸಿದ್ಧಾರಿರ್ಹಂತಿ ಬಾಂಧವಾನ್ ।
ಸಾಧ್ಯಸಿದ್ಧೋ ದ್ವಿಗುಣಿತಃ ಸಾಧ್ಯಸಾಧ್ಯೋ ನಿರರ್ಥಕಃ ॥ 14 ॥

ದ್ವಿಗುಣಾಜ್ಜಪಾತ್ಸುಸಿದ್ಧಃ ಸಾಧ್ಯಾರಿರ್ಹಂತಿ ಗೋತ್ರಜಾನ್ ।
ಸುಸಿದ್ಧಸಿದ್ಧೋರ್ಧಜಪಾತ್ತತ್ಸಾಧ್ಯೋ ದ್ವಿಗುಣಾಜ್ಜಪಾತ್ ॥ 15 ॥

ತತ್ಸುಸಿದ್ಧಗ್ರಹಾದೇವ ಸುಸಿದ್ಧಾರಿಃ ಕುಟುಂಬಹಾ ।
ಅರಿಸಿದ್ಧಃ ಸುತಂ ಹನ್ಯಾದರಿಸಾಧ್ಯಸ್ತು ಕನ್ಯಕಾಮ್ ॥ 16 ॥

ತತ್ಸುಸಿದ್ಧಸ್ತು ಪತ್ನಿಘ್ನಸ್ತದರಿಃ ಸಾಧಕಾಪಹಃ ।

1. ಮಂತ್ರಸಿದ್ಧಿಯ ವಿಷಯದಲ್ಲಿ ಈ ಪ್ರಕಾರ ವಿಚಾರಿಸಬೇಕು. ಸಿದ್ಧಸಿದ್ಧ ಮಂತ್ರ ಯಥೋಕ್ತ ಕಾಲದಲ್ಲಿ, ಸಿದ್ಧಸಾಧ್ಯ ಮಂತ್ರವು ಅದರ ಎರಡು ಪಟ್ಟು ಕಾಲದಲ್ಲಿ, ಸಿದ್ಧಸುಸಿದ್ಧ ಮಂತ್ರವು ನಿರ್ಧಾರಿತ ಸಂಖ್ಯೆಯ ಅರ್ಧ ಜಪ ಮಾಡುವದರಿಂದ ಸಿದ್ಧವಾಗುತ್ತವೆ. ಆದರ ಸಿದ್ಧಾರಿಯೋಗ ಸಾಧಕನ ಸಮಸ್ತ ಬಂಧು ಬಾಂಧವರನ್ನು ನಾಶ ಮಾಡುತ್ತದೆ.

2. ಸಾಧ್ಯಸಿದ್ಧ ಮಂತ್ರವು ಎರಡು ಪಟ್ಟು ಜಪ ಮಾಡುವದರಿಂದ ಸಿದ್ಧವಾಗುತ್ತದೆ. ಸಾಧ್ಯಸಾಧ್ಯ ನಿರರ್ಥಕವಾಗುತ್ತದೆ. ಸಾಧ್ಯಸುಸಿದ್ಧವೂ ಕೂಡಾ ಎರಡುಪಟ್ಟು ಜಪದಿಂದ ಸಿದ್ಧವಾಗುತ್ತದೆ. ಆದರೆ ಸಾಧ್ಯಾರಿ ಮಂತ್ರ ಯೋಗ ಸಾಧಕನ ಸಮಸ್ತ ಗೋತ್ರಗಳನ್ನು ವಿನಾಶಮಾಡುವಂಥದು ಆಗಿರುತ್ತದೆ.

3. ಸುಸಿದ್ಧಸಿದ್ಧ ಅರ್ಧ ಜಪದಿಂದ, ಸುಸಿದ್ಧ ಸಾಧ್ಯ ಎರಡು ಪಟ್ಟು ಜಪದಿಂದ ಸುಸಿದ್ಧ ಮತ್ತು ಸುಸಿದ್ಧ ಮಂತ್ರ ಸಾಧಕನ ದೀಕ್ಷಗ್ರಹಣ ಮಾತ್ರದಿಂದ ಸಿದ್ಧವಾಗುತ್ತದೆ. ಆದರೆ ಸುಸಿದ್ಧಾರಿ ಮಂತ್ರವು ಸಾಧಕನ ಸಮಸ್ತ ಕುಟುಂಬಗಳನ್ನು ನಾಶ ಮಾಡುತ್ತದೆ.

4. ಅರಿಸಿದ್ಧ ಮಂತ್ರವು ಪುತ್ರನನ್ನು, ಅರಿಸಾಧ್ಯವು ಪುತ್ರಿಯನ್ನು, ಅರಿಸುಸಿದ್ಧ ಪತ್ನಿಯ ಮತ್ತು ಅರಿಅರಿ ಮಂತ್ರದ ಯೋಗವು ಸ್ವತಃ ಸಾಧಕನನ್ನೇ ವಿನಾಶ ಮಾಡುತ್ತದೆ.





### ಅ ಕ ಥ ಹ ಚಕ್ರ

ಉದಾಹರಣೆಗೆ ಸಾಧಕನಿಗೆ 'ಏಂ' ಮೊದಲಕ್ಷರದ ಯಾವುದೋ ಮಂತ್ರವನ್ನು ಗ್ರಹಣ ಮಾಡಬೇಕಾಗಿದೆ. ಈ ಕೋಷ್ಟದಲ್ಲಿ ದೇವದತ್ತ ಹೆಸರಿನ ಪ್ರಥಮ ಅಕ್ಷರದ

| | | | |
|---|---|---|---|
| ಅ ಕ 1 ಥ ಹ | ಉ ಙ ಪ 2 | ಆ ಖ 3 ದ ಕ್ಷ | ಊ ಚ ಫ 4 |
| ಓ ಡ ಬ 5 | ಲೃ ಝ ಮ 6 | ಔ ಢ ಶ 7 | ಲೄ ಞ ಯ 8 |
| ಈ ಘ ನ 9 ಜ್ಞ | ಋ ಜ ಭ 10 | ಇ ಗ ಧ 11 ತ್ರ | ೠ ಛ ವ 12 |
| ಅಃ ತ ಸ 13 | ಐ ಠ ಲ 14 | ಅಂ ಣ ಷ 15 | ಏ ಟ ರ 16 |

ಮೂರು ಸಂಖ್ಯೆಯ ಕೋಷ್ಠದಲ್ಲಿ ಮತ್ತು ಮಂತ್ರದ ಆದ್ಯಕ್ಷರ ಏಂ 14 ನೆಯ ಕೋಷ್ಠದಲ್ಲಿ ಬರುತ್ತದೆ. ಅದು ಸುಸಿದ್ಧ ಚತುಷ್ಟಯದಲ್ಲಿ ಬರುವದರಿಂದ ಸುಸಿದ್ಧಾರಿ ಯೋಗವಾಗುವದರಿಂದ ತ್ಯಾಜ್ಯವಾಗಿದೆ.

#### ಪ್ರಕಾರಾಂತರ ಸಿದ್ಧಾದಿಶೋಧನ

ನಾಮ್ನೋ ಮಂತ್ರಸ್ಯ ವರ್ಣಾಶ್ಚ ಲಿಖಿತ್ವಾ ಪ್ರತಿವರ್ಣಕಮ್ ॥ 17 ॥

ಸಿದ್ಧಾದಿಗಣನಾಕಾರ್ಯಾ ಯಾವನ್ಮಂತ್ರಸಮಾಪನಮ್ ।
ನಾಮ್ನೋಯದಿ ಸಮಾಪ್ತಿಃ ಸ್ಯಾತ್ಪುನರ್ನಾಮ ಲಿಖೇತ್ಸುಧೀಃ ॥ 18 ॥

ಏವಂ ಸಂಶೋಧಿತೇಷು ಸ್ಯೂರ್ಭೂರಿ ವೈ ಸಾಧ್ಯವೈರಿಣಃ ।
ಅಲ್ಪಾಃ ಸಿದ್ಧಸುಸಿದ್ಧಾಶ್ಚೇದಶುಭಂ ವೃತ್ತಮಾಚಭುಭಮ್ ॥ 19 ॥

ಮತಮಿತ್ಥಂ ತು ಕೇಷಾಂಚಿತ್ತದಪಿ ಪ್ರಾಜ್ಞಸಮ್ಮತಮ್ ।
ಅಥವಾನ್ಯ ಪ್ರಕಾರೇಣ ಸಿದ್ಧಾದೀನಾಂ ವಿಶೋಧನಮ್ ॥ 20 ॥

ಅ ಥ ಕ ಹ ಚಕ್ರದಲ್ಲಿ ಸಿದ್ಧಾದಿಶೋಧನದ ಎರಡನೆಯ ವಿಧಾನವು ಈ

ಭೂರಾಮಶಿವನಂದಾಕ್ಷಿವೇದಾರ್ಕದಿಗ್ರಸಾಷ್ಟಭಿಃ।
ಕಲಾಮನುಶರೈರದ್ರಿತಿಥಿವಿಶ್ವೈರ್ಮಿತೇಷು ಚ ॥ 4 ॥

ಈಗ ಅಕಥಹ ಚಕ್ರವನ್ನು ಹೇಳಲಾಗುತ್ತದೆ. ಐದು ಮೇಲಕ್ಕೆ ಮತ್ತು ಐದು ಅಡ್ಡ ರೇಖೆಗಳನ್ನು ಎಳೆಯುವುದರಿಂದ16 ಕೋಷ್ಟಕಗಳು ತಯಾರಾಗುತ್ತವೆ. ನಂತರ ಅವುಗಳಲ್ಲಿ 1,3,11,9,2,4,12,10,6,8,16,14,5,7,15 ಮತ್ತು 123ನೆಯ ಸಂಖ್ಯೆಗಳ ಕೋಷ್ಟಕದಲ್ಲಿ ಕ್ರಮವಾಗಿ ಸಮಸ್ತ ಮಾತೃಕಾ ವರ್ಣಗಳನ್ನು ಬರೆಯಬೇಕು.

ಕೋಷ್ಠೇಷು ಮಾತೃಕಾವರ್ಣಾಸ್ತತ್ರ ನಾಮಾದಿತಃ ಕ್ರಮಾತ್ ।
ಸಿದ್ಧಃ ಸಾಧ್ಯಃ ಸುಸಿದ್ಧೋರಿರ್ಜ್ಞೇಯೊ ಮನ್ವಕ್ಷರಾವಧಿ ॥ 5 ॥

ಯಸ್ಮಿಂಶ್ಚತುಷ್ಕೆ ನಾಮಾಣಸ್ತತ್ಸ್ಯಾತ್ಸಿಧ ಚತುಷ್ಟಯಮ್ ।
ಪ್ರಾದಕ್ಷಿಣ್ಯಾದ ದ್ವಿತಿಯಂ ಸ್ಯಾತ್ಸಾಧ್ಯಾಖ್ಯಂ ತತೃತಿಯಕಮ್ ॥ 6 ॥

ಸುಸಿದ್ಧಾಖ್ಯಂ ಚತುರ್ಥೆ ತು ಸಪತ್ನಾಖ್ಯಂ ಸ್ಮೃತಂ ಬುಧೈಹ ।
ಏಕಕೋಷ್ಠೆ ದ್ವಯೋರ್ವರ್ಣಾಃ ಸಿದ್ಧಸಿದ್ಧಃ ಪ್ರಕೀರ್ತಿತಃ ॥ 7 ॥

ತದ್ ದ್ವಿತಿಯೆ ಮಂತ್ರವರ್ಣೆ ಸಿದ್ಧಸಾಧ್ಯ ಉದಾಹೃತಃ ।
ತೃತಿಯೆ ಸಿದ್ಧಸುಸಿದ್ಧಃ ಸಿದ್ಧಾರಿಃ ಸ್ಯಾಚ್ಚತುರ್ಥಕೆ ॥ 8 ॥

ನಾಮಾದಿಯುಕ್ಷತುಃ ಕೋಷ್ಠಾನ್ ಮನ್ವರ್ಣಾಶ್ಚೇದ ದ್ವಿತಿಯಕೆ ।
ಚತುಷ್ಕೆ ತತ್ರ ಪೂರ್ವ ತು ಯತ್ರ ನಾಮಾಕ್ಷರಂ ಸ್ಥಿತಮ್ ॥ 9 ॥

ತತ್ರ ತತ್ಕೋಷ್ಠಮಾರಭ್ಯ ಗಣಯೇತ್ಪೂರ್ವವತ್ತುಮಾತ್ ।
ಸಾಧ್ಯಸಿದ್ಧಃ ಸಾಧ್ಯಸಾಧ್ಯಾಸ್ತತುಸಿದ್ಧಶ್ಚ ತದ್ರಿಪುಃ ॥ 10 ॥

ಈ ಚಕ್ರದಲ್ಲಿ ನಾಮದ ಪ್ರಥಮ ಅಕ್ಷರದಿಂದ ಮಂತ್ರದ ಪ್ರಥಮ ಅಕ್ಷರದ ಪರ್ಯಂತ ಕ್ರಮವಾಗಿ ಸಿದ್ಧ, ಸಾಧ್ಯ, ಸುಸಿದ್ಧ ಮತ್ತು ಅರಿ ಎಂಬ ಯೋಗಗಳನ್ನು ಅರಿತುಕೊಳ್ಳಬೇಕು.

ಯಾವ ನಾಲ್ಕು ಕೋಷ್ಟಕಗಳಲ್ಲಿ ಸಾಧಕನ ಹೆಸರಿನ ಪ್ರಥಮಕ್ಷರವಿದೆಯೊ ಅವುಗಳನ್ನು ಸಿದ್ಧಚತುಷ್ಟಯ, ನಂತರ ಪ್ರದಕ್ಷಿಣ ಕ್ರಮದಿಂದ ಆ ಹೆಸರಿನ ಮುಂದಿನ ಎರಡನೆಯ ನಾಲ್ಕು ಕೋಷ್ಟಕಗಳನ್ನು ಸಾಧ್ಯ ಚತುಷ್ಟಯ, ಅದರ ಮುಂದಿನ ಮೂರನೆಯ ನಾಲ್ಕು ಕೋಷ್ಟಕಗಳನ್ನು ಸುಸಿದ್ಧಚತುಷ್ಟಯ ಮತ್ತು ಕೊನೆಯ ನಾಲ್ಕು ಕೋಷ್ಟಕಗಳನ್ನು ಶತ್ರು ಚತುಷ್ಟಯ ಕೋಷ್ಠಗಳೆಂದು ಕರೆಯಲಾಗುತ್ತದೆ.





ಸಾಧಕ ಮತ್ತು ಮಂತ್ರ ಈ ಎರಡರ ಹೆಸರಿನ ಪ್ರಥಮಾಕ್ಷರವು ಒಂದೇ ಕೋಷ್ಟಕದಲ್ಲಿದ್ದರೆ ಸಿದ್ಧಸಿದ್ಧಯೋಗ ವೆನ್ನುತ್ತಾರೆ.

1. ಸಾಧಕನ ಹೆಸರಿನ ಪ್ರಥಮಾಕ್ಷರದ ಕೋಷ್ಠದಿಂದ ಎರಡನೆಯ ಕೋಷ್ಟಕದಲ್ಲಿ ಮಂತ್ರಾಕ್ಷರವಿದ್ದರೆ ಸಿದ್ಧಸಾಧ್ಯ, ಅದರಿಂದ ಮೂರನೆಯ ಕೋಷ್ಟಕದಲ್ಲಿದ್ದರೆ ಸಿದ್ಧಸಾಧ್ಯ, ಅದರಿಂದ ನಾಲ್ಕನೆಯ ಕೋಷ್ಠದಲ್ಲಿ ಮಂತ್ರದ ಪ್ರಥಮಾಕ್ಷರವಿದ್ದರೆ ಸಿದ್ಧಾರಿ ಯೋಗವಾಗುತ್ತದೆ.

ಹೆಸರಿನ ಅಕ್ಷರದ ನಾಲ್ಕು ಕೋಷ್ಟಕಗಳಿಮದ ಒಟ್ಟು ನಾಲ್ಕು ಕೋಷ್ಟಕ ಪರ್ಯಂತ ಮಂತ್ರದ ಪ್ರಥಮಾಕ್ಷರವಿದ್ದರೆ, ಯಾವ ಕೋಷ್ಟಕದಲ್ಲಿ ನಾಮಾಕ್ಷರವಿದೆಯೊ ಅದೇ ಸಾಲಿನ ಕೋಷ್ಟಕದಿಂದ ಪ್ರಾರಂಭಿಸಿ ಮೊದಲಿನಂತೆ ಎಣಿಸಬೇಕು.

ಏವಂ ಜ್ಞೇಯಸ್ತೃತೀಯೆ ಚೇಚ್ಚತುಷೆ ಮಂತ್ರವರ್ಣಕಾಃ ।
ತದಾ ಪೂರ್ವೋಕ್ತಯಾ ರೀತ್ಯಾ ಕ್ರಮಾಜ್ಞೇಯಾ ವಿಚಕ್ಷಣೈಃ ॥ 11 ॥

ಸುಸಿದ್ಧಸಿದ್ಧಸ್ತತ್ಸಾಧ್ಯಸ್ತತುಸಿದ್ಧಶ್ಚ ತದ್ರಿಪುಃ ।
ಚತುರ್ಥೆ ತು ಚತುಷ್ಕೆ ಸ್ಯಾದರಿಸಿದ್ಧಾರಿಸಾಧ್ಯಕಃ ॥ 12 ॥
ತತುಸಿದ್ಧೋರ್ಯರಿಃ ಪಶ್ಚಾದೇವಂ ಮಂತ್ರಂ ವಿಚಾರಯೇತ್ ।

2. ಪ್ರಥಮ ಕೋಷ್ಟಕದಲ್ಲಿ ಮಂತ್ರಾಕ್ಷರವಿರುವಾಗ ಸಾಧ್ಯಸಿದ್ಧ, ದ್ವಿತಿಯ ಕೋಷ್ಟಕದಲ್ಲಿರುವಾಗ ಸಾಧ್ಯಸಾಧ್ಯ, ತೃತಿಯದಲ್ಲಿರುವಾಗ ಸಾಧ್ಯಸುಸಿದ್ಧ ಮತ್ತು ಚತುರ್ಥ ಕೋಷ್ಟಕದಲ್ಲಿ ಮಂತ್ರಾಕ್ಷರವಿರುವಾಗ ಆ ಮಂತ್ರವನ್ನು ಸಾಧ್ಯಶತ್ರುವೆಂದು ತಿಳಿಯಬೇಕು. ಈ ಪ್ರಕಾರ ಮೂರನೆಯ ಮತ್ತು ನಾಲ್ಕನೆಯ ಕೋಷ್ಟಕಗಳಲ್ಲಿ ಮಂತ್ರದ ಪ್ರಥಮಾಕ್ಷರವು ಬಂದರೆ ಈ ಹಿಂದಿನ ವಿಧಾನದಂತೆ ಪರಿಗಣಿಸಬೇಕು ಎಂದು ಹೇಳುತ್ತಾರೆ.

3. ಮೂರನೆಯ ನಾಲ್ಕು ಕೋಷ್ಟಕಗಳಲ್ಲಿ ಮಂತ್ರದ ಪ್ರಥಮಾಕ್ಷರವಿರುವಾಗ ಕ್ರಮವಾಗಿ, ಸುಸಿದ್ಧಸಿದ್ಧ, ಸುಸಿದ್ಧಸಾಧ್ಯ, ಸುಸಿದ್ಧಸುಸಿದ್ಧ ಮತ್ತು ಸುಸಿದ್ಧಶತ್ರುಯೋಗಗಳು ಆಗುತ್ತವೆ.

4. ಇದೇ ಪ್ರಕಾರ ನಾಲ್ಕನೆಯ ನಾಲ್ಕು ಕೋಷ್ಠಗಳಲ್ಲಿ ಮಂತ್ರದ ಪ್ರಥಮಾಕ್ಷರವಿರುವಾಗ, ಕ್ರಮವಾಗಿ ಅರಿಸಿದ್ಧ, ಅರಿಸಾಧ್ಯ, ಅರಿಸುಸಿದ್ಧ ಮತ್ತು ಅರಿಅರಿ ಯೋಗವಾಗುತ್ತದೆ.

**ಪೂಜಾವಿಧಾನ :** ಪ್ರಪ್ರಥಮವಾಗಿ ಸೂತ್ರದ ಪ್ರಥಮ, ದ್ವಿತೀಯ ಮತ್ತು ತೃತೀಯ ಎಳೆಗಳಲ್ಲಿ ಕೆಳಗಿನ ಮಂತ್ರಗಳಿಂದ ಪೂಜೆ ಮಾಡಬೇಕು.

ಓಂ ಬ್ರಹ್ಮಣೆ ನಮಃ ಪ್ರಥಮ ದೋರಕೆ, ಓಂ ವಿಷ್ಣವೆ ನಮಃ ದ್ವಿತೀಯ ದೋರಕೆ, ಓಂ ಮಹೇಶಾಯ ನಮಃ ತೃತಿಯ ದೋರಕೆ ।

ಇದರ ನಂತರ ನವಸೂತ್ರಿಕಾದ ಪ್ರತ್ಯೇಕ ಎಳೆಯಲ್ಲಿ ಈ ಪ್ರಕಾರ ಪೂಜೆ ಮಾಡಬೇಕು.

ಓಂ ಕಾರಾಯ ನಮಃ ಪ್ರಥಮಸೂತ್ರೆ, ಓಂ ಚಂದ್ರಮಸೆ ನಮಃ ದ್ವಿತಿಯಸೂತ್ರೆ ಓಂ ವಹ್ನಯೆ ನಮಃ ತೃತಿಯ ಸೂತ್ರೆ, ಓಂ ಬ್ರಹ್ಮಣೆ ನಮಃ ಚತುರ್ಥಸೂತ್ರೆ। ಓಂ ನಾಗೇಭ್ಯೋ ನಮಃ ಪಂಚಮಸೂತ್ರೆ, ಓಂ ಕಾರ್ತಿಕೇಯಾಯ ನಮಃ ಷಷ್ಠಸೂತ್ರೆ, । ಓಂ ಸೂರ್ಯಾಯ ನಮಃ ಸಪ್ತಮ ಸೂತ್ರೆ, ಓಂ ಸದಾಶಿವಾಯ ನಮಃ ಅಷ್ಟಮಸೂತ್ರೆ ಓಂ ವಿಶ್ವೇಭ್ಯೋ ನಮಃ ನವಮ ಸೂತ್ರೆ ।

ಇದರ ನಂತರ ಗ್ರಂಥಿಸ್ಥ ದೇವತೆಗಳನ್ನು ಮಂತ್ರ ದ್ವಾರಾ ಪೂಜೆ ಮಾಡಬೇಕು।

ಓಂ ಕ್ರಿಯಾಯೈ ನಮಃ ಪ್ರಥಮಗ್ರಂಥೌ, ಓಂ ಪೌರುಷ್ಯೈ ನಮಃ ದ್ವಿತಿಯ ಗ್ರಂಥೌ, । ಓಂ ವೀರಾಯೈ ನಮಃ ತೃತಿಯ ಗ್ರಂಥೌ, ಓಂ ಅಪರಾಜಿತಾಯ ನಮಃ ಚತುರ್ಥಗ್ರಂಥೌ, । ಓಂ ವಿಜಯಾಯೈ ನಮಃ ಪಂಚಮಗ್ರಂಥೌ, ಓಂ ಜಯಾಯೈ ನಮಃ ಷಷ್ಠಗ್ರಂಥೌ, । ಓಂ ಮುಕ್ತಿದಾಯೈ ನಮಃ ಸಪ್ತಮಗ್ರಂಥೌ, ಓಂ ಸದಾಶಿವಾಯೈ ನಮಃ ಅಷ್ಟಮಗ್ರಂಥೌ, । ಓಂ ಮನೋನ್ಮನ್ಯೈ ನಮಃ ನವಮಗ್ರಂಥೌ, ಓಂ ಸರ್ವತೋಮುಖ್ಯೈ ನಮಃ ದಶಮ ಗ್ರಂಥೌ

ಈ ಪ್ರಕಾರ ಪವಿತ್ರಗಳ ಅಧಿವಾಸನ ಮಾಡಿ ನಿಜ ಇಷ್ಟದೇವತೆಯ ಹೆಸರು ಮತ್ತು ಗುಣಾದಿ ದ್ವಾರಾ ಸ್ತುತಿ ಮಾಡಿ ಜಾಗರಣೆ ಮಾಡಬೇಕು.

**ಪ್ರಾತರ್ನಿತ್ಯಾರ್ಚನಂ ಕೃತ್ವಾ ಮೂಲೇನಾಷ್ಟೋತ್ತರಂ ಶತಮ್ ।**
**ಕನಿಷ್ಠಾಖ್ಯಂ ಪವಿತ್ರಂ ತದ್‌ಗೃಹಿತ್ವಾಂ ಚಾಭಿಮಂತ್ರಯೇತ್** || 69 ||

**ಘಂಟಾವಾದಿತ್ರವೇದಾನಾಂ ಕಾರಯಂ ಘೋಷಮುತ್ತಮಮ್ ।**
**ಜಯಶಬ್ದಾಂಶ್ಚ ದೇವಸ್ಯ ಕಂಠೆ ಮೂಲೇನ ಚಾರ್ಪಯೇತ್** || 70 ||

**ಏವಮೇವಾರ್ಪಯೇದನ್ಯಂ ಪವಿತ್ರೆ ಮಧ್ಯಮೋತ್ತಮೆ ।**
**ಶ್ವೇತಂ ರಕ್ತಂ ಕ್ರಮಾತ್ಪೀತಂ ಧ್ಯಾಯೇದ್ ದೇವಂ ತದರ್ಪಣೆ** || 71 ||





**ವನಮಾಲಾಪವಿತ್ರಂ ತು ತಾಪನ್ಮೂಲೇನ ಮಂತ್ರಿತಮ್ ।**
**ಅರ್ಪಯೇದಿಷ್ಟದೇವಸ್ಯ ಮುಕುಟೆ ಮೂಲಮುಚ್ಚರನ್** || 72 ||

**ತತಃ ಸುವರ್ಣಕುಸುಮೈಃ ಪುಷ್ಪೈಃ ಶತಮಿತೈಃ ಸಹ ।**
**ಮೂಲಾಭಿಮಂತ್ರಿತಂ ದೇವಮೂರ್ಧ್ನಿ ಮೂಲೇನ ಚಾರ್ಪಯೇತ್** || 73 ||

ಈಗ ಪವಿತ್ರಕ ಪೂಜಾ ವಿಧಾನವನ್ನು ಹೇಳಲಾಗುತ್ತದೆ.

ಪ್ರಾತಃಕಾಲದ ನಿತ್ಯ ಪೂಜೆಯನ್ನು ಪೂರೈಸಿದ ನಂತರ ಪವಿತ್ರವನ್ನು ಕೈಯಲ್ಲಿ ತೆಗೆದುಕೊಂಡು ಮೂಲಮಂತ್ರದಿಂದ 108 ಬಾರಿ ಅಭಿಮಂತ್ರಿಸಬೇಕು. ನಂತರ ಘಂಟೆ, ವಾದ್ಯ, ವೇದ ಧ್ವನಿ ಮತ್ತು ಜಯಜಯಕಾರ ಘೋಷಗಳೊಂದಿಗೆ ಮೂಲಮಂತ್ರದ ಉಚ್ಚಾರಣೆ ಮಾಡುತ್ತ, ಪೂಜಿಸಲ್ಪಟ್ಟ ಪವಿತ್ರವನ್ನು ನಿಜ ಇಷ್ಟದೇವನ ಕೊರಳಲ್ಲಿ ಹಾಕಬೇಕು.

ಮಧ್ಯಮ ಮತ್ತು ಕನಿಷ್ಠ ಪ್ರಕಾರದ ಪವಿತ್ರಗಳನ್ನು ಏರಿಸುವ ವಿಧಾನವು ಕೂಡಾ ಇದೇ ಆಗಿದೆ. ಆದರೆ ಅದರ ವಿಶೇಷತೆ ಏನೆಂದರೆ, ಕನಿಷ್ಠ ಪವಿತ್ರವನ್ನು ಏರಿಸುವ ಸಮಯ ಶ್ವೇತವರ್ಣದ, ಮಧ್ಯಮವನ್ನು ಏರಿಸುವ ಸಮಯ ರಕ್ತವರ್ಣದ ಮತ್ತು ಜ್ಯೇಷ್ಠ ಪವಿತ್ರ ಏರಿಸುವಾಗ ಪೀತವರ್ಣದ ನಿಜ ಇಷ್ಟದೇವತೆಯ ಧ್ಯಾನ ಮಾಡಬೇಕು.

ವನಮಾಲಾ ಹೆಸರಿನ ಪವಿತ್ರವನ್ನು ಮೂಲಮಂತ್ರದಿಂದ 108 ಬಾರಿ ಅಭಿಮಂತ್ರಿಸಿ, ಮೂಲಮಂತ್ರ ಹೇಳುತ್ತ ಇಷ್ಟದೇವತೆಯ ಮುಕುಟದ ಮೇಲೆ ಅದನ್ನು ಸಮರ್ಪಿಸಬೇಕು. ನಂತರ ಮೂಲಮಂತ್ರದಿಂದ ಅಭಿಮಂತ್ರಿತ ಅಮಲತಾಸದ 100 ಹೂಗಳನ್ನು ಮೂಲಮಂತ್ರ ಹೇಳುತ್ತ ದೇವರಿಗೆ ಏರಿಸಬೇಕು.

**ಹೃದಾನ್ಯಪಟಲಸ್ಥಾನಿ ಪವಿತ್ರಾಣ್ಯಭಿಮಂತ್ರ್ಯ ಚ ।**
**ತತ್ತನ್ನಾಮ್ನಾ ನಮೋಂತೇನ ಪರಿವಾರಾನ್ ಸುರಾನ್ ಯಜೇತ್** || 74 ||

**ಏವಂ ಪವಿತ್ರೈ ಸಂಪೂಜ್ಯ ಧೂಪಾದೀನಿ ಪ್ರಕಲ್ಪಯೇತ್**
**ಪಾವಕೆ ದೇವಮಾವಾಹ್ಯ ನಿತ್ಯಹೋಮಂ ವಿಧಾಯ ಚ** || 75 ||

**ಮೂಲೇನಾಗ್ನಿಪವಿತ್ರಂ ತದರ್ಪಯೆದ್ದೇವತಾಂ ಸ್ಮರನ್ ।**
**ಮೂರ್ತಾ ದೇವಂ ಸಮುದ್ವಾಸ್ಯ ವಹ್ನಿಂ ಸಂಯೋಜ್ಯ ಚಾತ್ಮನಿ** || 76 ||

**ಪುಷ್ಪಾಂಜಲಿ ವಿಧಾಯೇಶೆ ಕರ್ಮಾಂತೆ ವಿನಿವೇದಯೇತ್ ।**
**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಕೃಪಾನಿಧೆ** || 77 ||

ಪೂಜನಂ ಪೂರ್ಣತಾಮೇತು ಪವಿತ್ರೇಣಾರ್ಪಿತೇನ ತೆ ।
ಇತಿ ಸಂಪ್ರಾರ್ಥ್ಯ ದೇವೇಶಂ ಯೋಜಯೆದ್ಧೃದಯೆ ನಿಜೆ

ಗುರ್ವಾಂತಿಕಂ ತತೋ ಗತ್ವಾ ದತ್ವಾ ಪುಷ್ಪಾಂಜಲಿಂ ಗುರೌ । ॥ 78 ॥
ಸ್ವಾಂಗೆ ಷಡಂಗ ವಿನ್ಯಸ್ಯ ಗುರುದೇಹೇಪಿ ವಿನ್ಯಸೇತ್

॥ 79 ॥

ಪಟಲದ ಮೇಲಿರುವ ಪವಿತ್ರಗಳನ್ನು 'ನಮಃ' ಮಂತ್ರದಿಂದ ಅಭಿಮಂತ್ರಿತಗೊಳಿಸಬೇಕು. ಮತ್ತು ಅದನ್ನು ಆವರಣ ದೇವತೆಗಳ ಚತುರ್ಥ್ಯಂತ ನಾಮಗಳ ಜೊತೆಗೆ ನಮಃ ಜೋಡಿಸಿ ರಚನೆಯಾಗುವ ಮಂತ್ರಗಳಿಂದ ಆವರಣ ದೇವತೆಗಳಿಗೆ ಏರಿಸಬೇಕು.

ಈ ಪ್ರಕಾರ ಪವಿತ್ರಗಳಿಂದ ದೇವರ ಪೂಜೆಯನ್ನು ಮಾಡಿ ಧೂಪ, ದೀಪ, ನೈವೇದ್ಯ ಆದಿಗಳಿಂದ ಅವುಗಳನ್ನು ಪೂಜೆ ಮಾಡಬೇಕು. ನಂತರ ಅಗ್ನಿಯಲ್ಲಿ ನಿಜ ಇಷ್ಟದೇವತೆಗಳನ್ನು ಆವಾಹನೆ ಮಾಡಿ ನಿತ್ಯ ಹೋಮಗಳನ್ನುಪೂರೈಸಿ ದೇವರಸ್ಮರಣೆಯನ್ನು ಮಾಡುತ್ತ ಮೂಲಮಂತ್ರದಿಂದ ಅವುಗಳಿಗೆ ಅಗ್ನಿಪವಿತ್ರವನ್ನು ಏರಿಸಬೇಕು.

ಮೂರ್ತಿಸ್ಥ ದೇವರಲ್ಲಿ ತನ್ನ ಆತ್ಮವನ್ನು ಅಗ್ನಿಯೊಂದಿಗೆ ಸಂಯೋಜಿಸಿ ಇಷ್ಟದೇವನಿಗೆ ಪುಷ್ಪಾಂಜಲಿಯನ್ನು ಕೊಟ್ಟು ಕರ್ಮವನ್ನು ಸಮಾಪ್ತಗೊಳಿಸಬೇಕು. 'ಮಂತ್ರಹೀನಂ....ಪವಿತ್ರೇಣಾರ್ಪಿತೇನ ತೆ' ಪರ್ಯಂತ ಶ್ಲೋಕವನ್ನು ಉಚ್ಚರಿಸುತ್ತ ಇಷ್ಟದೇವನ ಪ್ರಾರ್ಥನೆ ಮಾಡಬೇಕು. ಮತ್ತು ಇಷ್ಟದೇವನನ್ನು ಹೃದಯದಲ್ಲಿ ಸ್ಥಾಪಿತಗೊಳಿಸಬೇಕು.

ಇದರ ನಂತರ ನಿಜ ಗುರುದೇವನ ಹತ್ತಿರ ಹೋಗಿ ಅವರಿಗೆ ಪುಷ್ಪಾಂಜಲಿಯನ್ನು ನಿವೇದಿಸಿ ತಮ್ಮ ಅಂಗಗಳಲ್ಲಿ ಷಡಂಗನ್ಯಾಸ ಮಾಡಿ ನಂತರ ಗುರುಗಳ ಶರೀರದ ಮೇಲೆ ಷಡಂಗನ್ಯಾಸ ಮಾಡಬೇಕು.

ಪಾದ್ಯಂ ದತ್ವಾ ತಥೈವಾರ್ಘ್ಯ ವಸ್ತ್ರಾಲಂಕಾರಶ್ಚಂದನಮ್ ।
ಪುಷ್ಪೈಃ ಸಂಪೂಜ್ಯ ಮೂಲೇನ ಪವಿತ್ರಂ ತದ್ಗಲೇರ್ಪಯೇತ್ ॥ 80 ॥

ಸ್ವಶಕ್ತ್ಯಾ ದಕ್ಷಿಣಾಂ ದತ್ವಾ ದಂಡವತ್ಪ್ರಣಮೇದ್ ಗುರುಮಾ ।
ಅನೇಭ್ಯಃ ಶಿಷ್ಟವೃದ್ಧೇಭ್ಯಃ ಪವಿತ್ರಾಣಿ ದದೀತ ಚ ॥ 81 ॥

ಸರ್ವಥೈವ ಗುರೋಃ ಪೂಜಾ ಕರ್ತವ್ಯಾ ಮಂತ್ರಿಣಾ ಸದಾ ।
ಅಪೂಜಿತೆ ಗುರೌ ಸರ್ವಾ ಪೂಜಾ ಭವತಿ ನಿಷ್ಫಲಾ ॥ 82 ॥





ಗುರೋರಭಾವೆ ತತ್ಪುತ್ರಂ ತದ್ಭಾವೆ ತದಾತ್ಮಜಮ್ ।
ದೌಹಿತ್ರಂ ತದ್ ಭಾವೇನ್ಯಂ ಪೂಜಯೇದ್ ಗುರುಗೋತ್ರಜಮ್ ॥ 83 ॥

ತತೋ ಧೃತ್ವಾ ಪವಿತ್ರಂ ಸ್ವಂ ಭೋಜಯಿತ್ವಾ ದ್ವಿಜೋತ್ತಮಾನ್ ।
ಭುಂಜೀತ ತದನುಜ್ಞಾತೋ ಬಂಧುಭಿಸ್ತನಯೈಃ ಸಹ ॥ 84 ॥

ಯಥಾಕಥಂಚಿತ್ಕುರ್ವೀತ ಪವಿತ್ರಾಣಿ ಸುರಾರ್ಚನೆ ।
ವಿಧೇರುಕ್ತಸ್ಯ ಚಾಶಕ್ತ್ಯಾ ಪೂಜಾಸಂಪೂರ್ತಿಹೇತವೆ ॥ 85 ॥

ಷಡಂಗನ್ಯಾಸದ ನಂತರ, ಗುರುಗಳಿಗೆ ಪಾದ್ಯ ಮತ್ತು ಅರ್ಘ್ಯವನ್ನು ಕೊಟ್ಟು ವಸ್ತ್ರ, ಆಲಂಕಾರ, ಚಂದನ ಮತ್ತು ಪುಷ್ಪಗಳಿಂದ ಅವರನ್ನು ಪೂಜೆ ಮಾಡಿ ಕಂಠದಲ್ಲಿ ಪವಿತ್ರವನ್ನು ಹಾಕಬೇಕು. ತನ್ನ ಶಕ್ತ್ಯಾನುಸಾರ ಗುರುಗಳಿಗೆ ದಕ್ಷಿಣೆ ಕೊಟ್ಟು ದಂಡವತ್ ಪ್ರಣಾಮ ಸಲ್ಲಿಸಬೇಕು.

ಈ ಪ್ರಕಾರ ತಮ್ಮ ಸಂಪ್ರದಾಯದ ಅನ್ಯ ವಿಶಿಷ್ಟ ಮತ್ತು ವಯೋವೃದ್ಧರಿಗೂ ಕೂಡ ಕೊರಳಲ್ಲಿ ಪವಿತ್ರವನ್ನು ಹಾಕಬೇಕು. ಸಾಧಕರು ಯವಾಗಲೂ ಗುರುವನ್ನು ಪೂಜೆ ಮಾಡಬೇಕು. ಈ ಪ್ರಕಾರ ಮಾಡದಿದ್ದರೆ ಎಲ್ಲ ಪೂಜೆಗಳು ವ್ಯರ್ಥವಾಗುತ್ತವೆ.

ಗುರುವು ಇರದಿದ್ದಾಗ, ಅವರ ಪುತ್ರ ಅಥವಾ ಅವರು ಇರದಿದ್ದರೆ, ಮೊಮ್ಮಗನ ಅಥವಾ ಅವರೂ ಇರದಿದ್ದರೆ ಅವರ ದೌಹಿತ್ರ ಅಂದರೆ ಮಗಳ ಮಕ್ಕಳು, ಅವರೂ ಯಾರೂ ಇರದಿದ್ದರೆ ಗುರುವಿನ ಕುಟುಂಬದವರನ್ನಾಗಲಿ ಅಥವಾ ಗೋತ್ರದ ವ್ಯಕ್ತಿಗಳನ್ನಾಗಲಿ ಪೂಜೆ ಮಾಡಬೇಕು.

ಇವೆಲ್ಲವುಗಳನ್ನು ಮಾಡಿದ ನಂತರ, ಸ್ವಯಂ ಪವಿತ್ರವನ್ನು ಧರಿಸಿ ಬ್ರಾಹ್ಮಣೋತ್ತಮರಿಗೆ ಭೋಜನ ಮಾಡಿಸಿ ಅವರ ಆಜ್ಞೆಯಿಂದ ತನ್ನ ಬಂಧುಗಳು ಮತ್ತು ಪುತ್ರರೊಂದಿಗೆ ಸ್ವಯಂ ಭೋಜನ ಸ್ವೀಕರಿಸಬೇಕು.

ಈ ವಿಧಾನದಿಂದ ಪವಿತ್ರಾರ್ಪಣ ಮಾಡುವುದರಲ್ಲಿ ಅಸಮರ್ಥರಾದ ವ್ಯಕ್ತಿಗಳು ವಾರ್ಷಿಕ ಪೂಜೆಯನ್ನು ಪೂರ್ಣಗೊಳಿಸಲು ಯಾವುದೇ ವಿಧಾನದಿಂದ ಪವಿತ್ರಗಳಿಂದ ಇಷ್ಟದೇವತೆಯ ಅರ್ಚನೆ ಮಾಡಬೇಕು.

ಯಸ್ಯಾಂ ಕಸ್ಯಾಂ ತಿಥೌ ಕುರ್ಯಾತ್ ತಿಥಾವಕ್ತೆ ಕೃತಂ ನ ಚೇತ್ ।
ಸರ್ವಥಾ ಶ್ರಾವಣೆ ಚೈವ ಪವಿತ್ರಂ ತು ನಿವೇದಯೇತ್ ॥ 86 ॥

ಪ್ರತ್ಯಬ್ದಂ ಯಃ ಪವಿತ್ರೇಣ ಪೂಜಾಂ ಕುರ್ವೀತ ದೈವತೆ ।
ಐಶ್ವರ್ಯಾರೋಗ್ಯಸಂಯುಕ್ತೋ ನೈಕವರ್ಷಾಣಿ ಜೀವತಿ ॥ 87 ॥

ಸಂಪೂರ್ಣಹಾಯನಾಂ ಪೂಜಾ ದೇವತಾನಾಂ ಕೃತಾ ತು ಯಾ ।
ಸರ್ವಾ ಸಂಪೂರ್ಣತಾಮೇತಿ ಪವಿತ್ರದಮನಾರ್ಪಣಾತ್ ॥ 88 ॥

ಕಾರಣಾಂತರಗಳಿಂದ ನಿರ್ಧಾರಿತ ತಿಥಿಯಲ್ಲಿ ಪವಿತ್ರ ಪೂಜೆಯನ್ನು ಮಾಡುವುದಾಗದಿದ್ದರೆ ಬೇರೆ ಯಾವುದಾದರೂ ಉತ್ತಮ ತಿಥಿಯಂದು ಪವಿತ್ರಾರ್ಪಣ ಮಾಡಬೇಕು. ಶ್ರಾವಣ ಮಾಸದಲ್ಲಿ ಮಾತ್ರ ತಪ್ಪದೆ ಪವಿತ್ರಾರ್ಪಣ ಮಾಡಬೇಕು.

ಯಾರು ಈ ಪ್ರಕಾರ ಪ್ರತಿ ವರ್ಷ ಪವಿತ್ರಗಳಿಂದ ದೇವರ ಪೂಜೆಯನ್ನು ಮಾಡುತಾರೆಯೊ ಅವರು ಆರೋಗ್ಯ ಮತ್ತು ಐಶ್ವರ್ಯ ಯುಕ್ತರಾಗಿ ದೀರ್ಘಕಾಲ ಬಾಳುತ್ತಾರೆ. ದೇವರ ಪೂರ್ಣ ವರ್ಷದ ಪೂಜೆಯು ಪವಿತ್ರ ಮತ್ತು ದಮನಕಗಳನ್ನು ಅರ್ಪಿಸುವವರೊಂದಿಗೆ ಪೂರ್ಣವಾಗುತ್ತದೆ.

ಅನ್ಯೇಷ್ವಪ್ಯುಪರಾಗೋದಯಸೌಮ್ಯಾಯನಾದಿಷು ।
ಕುರ್ಯಾದಲಭ್ಯಯೋಗೇಷು ವಿಶೇಷಾದ್ ದೇವತಾರ್ಚನಮ್ ॥ 89 ॥

ಯಥಾಯಥೇಷ್ಟ ದೇವೇಷು ನೃಣಾಂ ಭಕ್ತಿಃ ಸಮೇಧತೆ ।
ಪ್ರಾಪ್ಯತೆ ತದಯತ್ನೇನ ಮನೋಭಿಷ್ಟಂ ತಥಾ ತಥಾ ॥ 90 ॥

ಶುಚೌ ತತ್ತದಹೆ ಕುರ್ಯಾದ್ ದೇವಪ್ರಸ್ವಾಪನೋತ್ಸವಮ್ ।
ಊರ್ಜೆ ತಥೈವ ದೇವಾನಾಮುತ್ಥಾಪನಾವಿಧಿಂ ಸುಧಿಃ ॥ 91 ॥

ಸೂರ್ಯ ಮತ್ತು ಚಂದ್ರರ ಗ್ರಹಣ, ಪುಷ್ಯ ಮತ್ತು ಮಾಘ ತಿಂಗಳಿನಲ್ಲಿ ರವಿವಾರ ಅಮಾವಾಸ್ಯೆ ತಿಥಿಯಂದು ಆ ಅರ್ಧೋದಯ ಕಾಲದಲ್ಲಿ, ಮಕರ ಸಂಕ್ರಾಂತಿಯಲ್ಲಿ ಮತ್ತು ಅನ್ಯ ಅಲಭ್ಯವಾದ ಯೋಗಗಳು, ಯುಗಾದಿ ಮತ್ತು ಮನ್ವಾದಿ ತಿಥಿಗಳಲ್ಲಿ ವಿಶೇಷರೂಪದಿಂದ ಇಷ್ಟದೇವನ ಮಹೋತ್ಸವವನ್ನು ಆಚರಿಸಬೇಕು.

ಯಾವ ಯಾವ ಕ್ರಮದಿಂದ ಅನಾಯಾಸವಾಗಿ ಅವರ ಮನೋರಥಗಳು ಕೂಡಾ ಸಿದ್ಧಿಸುತ್ತವೆ.

ಆಷಾಢ ಮಾಸದಲ್ಲಿ ಆಯಾ ದೇವತೆಗಳ ಶಯನ ತಿಥಿಗಳಲ್ಲಿ ಆಯಾ ದೇವತೆಗಳ ಶಯನೋತ್ಸವ ಮತ್ತು ಕಾರ್ತಿಕದಲ್ಲಿ ಆಯಾ ತಿಥಿಗಳಲ್ಲಿ ದೇವೋತ್ಥಾನ ಮಹೋತ್ಸವಗಳನ್ನು ಆಚರಿಸಬೇಕು.





ಮಾಘಕೃಷ್ಣಚತುರ್ದಶ್ಯಾಂ ವಿಶೇಷಾಚ್ಛಿವ ಪೂಜನಮ್ ।
ಆಶ್ವಿನಾದ್ಯ ನವಾಹೇಷು ದುರ್ಗಾಪೂಜ್ಯಾ ಯಥಾವಿಧಿ ॥ 92 ॥

ಗೋಪಾಲಂ ಪೂಜಯೇದ್ವಿದ್ವಾನ್ನಭಃ ಕೃಷ್ಣಾಷ್ಟಮಿದಿನೆ ।
ರಾಮಂ ಚೈತ್ರಸಿತೆ ಪಕ್ಷೆ ನವಮ್ಯಾಮರ್ಚಯೇತ್ ಸುಧಿಃ ॥ 93 ॥

ವೈಶಾಖಾದ್ಯ ಚತುರ್ದಶ್ಯಾಂ ನರಸಿಂಹ ಪ್ರಪೂಜಯೇತ್ ।
ಯಜೇಚ್ಛುಕ್ಲಚತುರ್ಥ್ಯಾಂ ತು ಗಣೇಶಂ ಭಾದ್ರಮಾಘಯೋಃ ॥ 94 ॥

ಮಹಾಲಕ್ಷ್ಮೀಂ ಯಜೇದ್ವಿದ್ವಾನ ಭಾದ್ರಕೃಷ್ಣಾಷ್ಟಮಿದಿನೆ ।
ಮಾಘಸ್ಯ ಶುಕ್ಲಸಪ್ತಮ್ಯಾಂ ವಿಶೇಷಾದ್ದಿನನಾಯಕಮ್ ॥ 95 ॥

ಯಾ ಕಾಚಿತ್ಸಪ್ತಮಿ ಶುಕ್ಲಾ ರವಿವಾರಯುತಾ ಯದಿ ।
ತಸ್ಯಾಂ ದಿನೇಶಂ ಸಂಪೂಜ್ಯ ದಧ್ಯಾದರ್ಘ್ಯ ಪುರೋದಿತಮ್ ॥ 96 ॥

ಮಾಘ ಕೃಷ್ಣ ಚತುರ್ದಶಿ ಶಿವರಾತ್ರಿಯಂದು ವಿಶೇಷರೂಪದಿಂದ ಭಗವಾನ್ ಸದಾಶಿವನನ್ನು ಪೂಜಿಸಬೇಕು. ಅಶ್ವಿನ ಮಾಸ ಪ್ರಾರಂಭದ ಒಂಬತ್ತು ದಿನಗಳು ಅಂದರೆ ನವರಾತ್ರಿಯಲ್ಲಿ ಭಗವತಿ ದುರ್ಗೆಯನ್ನು ವಿಧಿವತ್ತಾಗಿ ಪೂಜೆ ಮಾಡಬೇಕು.

ಶ್ರಾವಣ ಕೃಷ್ಣ ಅಷ್ಟಮಿ ಅಂದರೆ ಜನ್ಮಾಷ್ಟಮಿಯಂದು ಶ್ರೀಗೋಪಾಲನನ್ನು ಪೂಜಿಸಬೇಕು. ಚೈತ್ರಶುಕ್ಲ ನವಮಿಯಂದು ಶ್ರೀ ರಾಮನ ಪೂಜೆಮಾಡಬೇಕು. ವೈಶಾಖ ಕೃಷ್ಣ ಚತುರ್ದಶಿಯಿಂದ ಶ್ರೀ ನೃಸಿಂಹನ, ಭಾದ್ರಪದ ಶುಕ್ಲ ಚತುರ್ಥಿಯಂದು ಮತ್ತು ಮಾಘ ಶುಕ್ಲ ಚತುರ್ಥಿಯಂದು ಗಣಪತಿಯ, ಭಾದ್ರಪದ ಕೃಷ್ಣ ಅಷ್ಟಮಿಯಂದು ಮಹಾಲಕ್ಷ್ಮಿಯನ್ನು ಪೂಜೆ ಮಾಡಬೇಕು. ಇದೇ ಪ್ರಕಾರ ಮಾಘ ಶುಕ್ಲ ಸಪ್ತಮಿಯಂದು ಸೂರ್ಯ ಭಗವಾನನ್ನು ಪೂಜಿಸಬೇಕು. ಶುಕ್ಲ ಪಕ್ಷದ ಯಾವುದೇ ತಿಂಗಳಿನ ಸಪ್ತಮಿಯು ರವಿವಾರವಾಗಿದ್ದರೆ ಆ ದಿನವೂ ಕೂಡಾ ಬಗವಾನ್ ಭಾಸ್ಕರನಿಗೆ ಪೂರ್ವೋಕ್ತ ವಿಧಾನದಿಂದ ಅರ್ಘ್ಯದಾನ ಮಾಡಬೇಕು.

ತತ್ತತ್ಕಲ್ಪೋದಿತಾನನ್ಯಾನ್ ದೇವತಾಪ್ರೀತಿವರ್ಧನಾನ್ ।
ವಿಶೇಷನಿಯಮಾ ಜ್ಞಾತ್ವಾ ಭಜೇದ್ದೇವಮನನ್ಯಧಿಃ ॥ 97 ॥

ಆಷಾಢಿಕಾರ್ತಿಕಾಮಧ್ಯೆ ಕಿಂಚಿನ್ನಿಯಮಮಾಚರೇತ್ ।
ದೇವಸಂಪ್ರೀತಯೆ ವಿದ್ವಾನ್ ಜಪಪೂಜಾದಿತತ್ಪರಃ ॥ 98 ॥

ಏವಂ ಯೋ ಭಜತೆ ವಿಷ್ಣುಂ ರುದ್ರಂ ದುರ್ಗಾ ಗಣಾಧಿಪಮ್ ।
ಭಾಸ್ಕರಂ ಶ್ರದ್ಧಯಾ ನಿತ್ಯಂ ಸ ಕದಾಚಿನ್ನ ಸೀದತಿ ॥ 99 ॥

ಸ ಧರ್ಮಮಾಚರನ್ನಿತ್ಯಂ ದೇವಪೂಜಾ ಪರಾಯಣಃ ।
ಜಿತೇಂದ್ರಿಯೋಖಿಲಾನ್ ಭೋಗಾನ್ ಪ್ರಾಪ್ಯೆಹಾನಂತತಾಂ ವ್ರಜೇತ್ ॥100॥

ದೇವತೆಗಳ ಉಪಾಸನೆಯಲ್ಲಿ ಆಸಕ್ತಿಯನ್ನು ಹೆಚ್ಚಿಸುವ ಅನೇಕ ಅನ್ಯ ಕಲ್ಪಗಳು ಗ್ರಂಥಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಕಾರಣ ಸಾಧಕರು ಆಯಾ ನಿಯಮಗಳನ್ನು ಅರಿತುಕೊಂಡು ಅನನ್ಯ ಭಕ್ತಿಯಿಂದ ಅವರ ಉಪಾಸನೆಯನ್ನು ಮಾಡಬೇಕು.

ಆಷಾಢದ ಪೂರ್ಣಿಮೆಯಿಂದ ಪ್ರಾರಂಭಿಸಿ ಕಾರ್ತಿಕ ಮಾಸದ ಪೂರ್ಣಿಮೆಯ ಪರ್ಯಂತ ಅಂದರೆ ಚಾತುರ್ಮಾಸದಲ್ಲಿ ಯಾವುದೇ ವಿಶೇಷ ನಿಯಮವನ್ನು ಪಾಲಿಸಬೇಕು. ಆ ಸಮಯದಲ್ಲಿ ವಿದ್ವಾನ ಸಾಧಕರು ಜಪ ಮತ್ತು ಪೂಜೆಯಲ್ಲಿ ತತ್ಪರರಾಗಿದ್ದು ಇಷ್ಟದೇವರನ್ನು ಪ್ರಸನ್ನಗೊಳಿಸಬೇಕು.

ಈ ಪ್ರಕಾರ ಯಾವ ಮಾನವರು ಭಗವಾನ್ ವಿಷ್ಣು, ರುದ್ರ, ದುರ್ಗಾ, ಗಣೇಶ ಅಥವಾ ಸೂರ್ಯದೇವರ ಉಪಾಸನೆಯನ್ನು ಮಾಡುತ್ತಾರೆಯೊ ಅವರು ಎಂದು ದುಃಖಿಗಳಾಗಿರುವುದಿಲ್ಲ.

ಧರ್ಮವನ್ನು ಆಚರಿಸುವವರು ಮತ್ತು ದೇವಪೂಜೆಯಲ್ಲಿ ಪರಾಯಣರಾಗಿರುವವರು ಮತ್ತು ಜಿತೇಂದ್ರಿಯ ವ್ಯಕ್ತಿಗಳು ಈ ಲೋಕದಲ್ಲಿ ಸಮಸ್ತ ಭೋಗಗಳನ್ನು ಪಡೆದುಕೊಂಡು ಅಂತದಲ್ಲಿ ಅನಂತದಲ್ಲಿ ಲೀನವಾಗುತ್ತಾರೆ.

[ಈ ಪ್ರಕಾರ ಶ್ರೀಮನ್ ಮಹೀಧರ ವಿರಚಿತ ಮಂತ್ರಮಹೋದಧಿಯ ಇಪ್ಪತ್ಮೂರನೆಯ ತರಂಗ ಸಮಾಪ್ತವು]







# ॥ ಚತುರ್ವಿಂಶ ತರಂಗ ॥



## ಸಿದ್ಧಾದಿಚಕ್ರ ಕಥನ

ಸಾಧಕಾನಾಂ ಶೀಘ್ರ ಸಿದ್ಧ್ಯೈ ಮಂತ್ರಶುದ್ಧಿಮಥೋ ಬ್ರುವೆ ।
ಸಾಧಕಸ್ಯ ತು ನಾಮಾದಿವರ್ಣಮಾರಭ್ಯ ಶೋಧಯೇತ್ ॥ 1 ॥

ಮಂತ್ರಾದ್ಯಕ್ಷರಪರ್ಯಂತಂ ಚಕ್ರೆ ಸಿದ್ಧಾದಿಕೆ ಕ್ರಮಾತ್ ।
ಜನ್ಮರ್ಕ್ಷೋತ್ಥಂ ಪ್ರಸಿದ್ಧಂ ವಾ ನಾಮಗ್ರಾಹ್ಯಂ ವಿಶೋಧನೆ ॥ 2 ॥

ಈಗ ಸಾಧಕರಿಗೆ ಶೀಘ್ರ ಸಿದ್ಧಿ ಪ್ರಾಪ್ತಿಗಾಗಿ ಮಂತ್ರಶೋಧನದ ಪ್ರಕಾರಗಳನ್ನು ಹೇಳಲಾಗುತ್ತದೆ.

ಪೂರ್ವದಲ್ಲಿ ಹೇಳಿದ ಸಿದ್ಧಾದಿ ಚಕ್ರಗಳಲ್ಲಿ ಸಾಧಕರು ತಮ್ಮ ನಾಮದ ಪ್ರಥಮಾಕ್ಷರದಿಂದ ಮಂತ್ರದ ಪ್ರಥಮಾಕ್ಷರದವರೆಗೆ ಗಣನೆ ಮಾಡಿ ಸಾಧನೆಯಲ್ಲಿ ಪ್ರವೃತ್ತರಾಗಬೇಕು. ಮಂತ್ರೋಶೋಧನದ ಪ್ರಕ್ರಿಯೆಯಲ್ಲಿ ಜನ್ಮ ನಕ್ಷತ್ರದ ಅನುಸಾರ ನಾಮ ಅಥವಾ ಪ್ರಸಿದ್ಧನಾಮವು ಗ್ರಾಹ್ಯವಾಗುತ್ತದೆ.

ಸಿದ್ಧಾದಿಚಕ್ರ ಕಥನ

ಊರ್ಧ್ವಗಾಃ ಪಂಚರೇಖಾಃ ಸ್ಯು ಪಂಚತಿರ್ಯಗ್ಗತಾ ಪುನಃ ।
ಕೋಷ್ಠಾನಿ ತತ್ರ ಜಾಯಂತೆ ಷೋಡಶೈವಾತ್ರ ಸಂಲಿಖೇತ್ ॥ 3 ॥

ಮೇಲೆ ಕ್ರಮವಾಗಿ ಶ್ವೇತಪೀತ ಮತ್ತು ಕೆಂಪು ವರ್ಣದ ಸೂರ್ಯ, ಸೋಮ ಮತ್ತು ಅಗ್ನಿ ಸಂಜ್ಞಕ ಮೂರು ವೃತ್ತಗಳನ್ನು ನಿರ್ಮಾಣ ಮಾಡಬೇಕು. ನಂತರ ಅದರ ಹೊರಗೆ ಕೆಂಪು ಅಥವಾ ಶ್ವೇತ ವರ್ಣದಿಂದ ರಂಜಿತವಾದ ಅಷ್ಟದಳ ಕಮಲವನ್ನು ನಿರ್ಮಾಣ ಮಾಡಬೇಕು.

ಈ ಪ್ರಕಾರ ಯಂತ್ರ ನಿರ್ಮಾಣ ಮಾಡಿದ ನಂತರ ಹೂಗಳಿಂದ ಅದನ್ನು ಪೂಜೆ ಮಾಡಿ ಅದರ ಮೇಲೆ ಸುಂದರವಾದ ಕಟ್ಟು ಹಾಕಿಸಬೇಕು. ನಂತರ ಮಂಡಲದ ಮೇಲೆ ಇಷ್ಟ ದೇವನ ಪ್ರತಿಮೆ ಅಥವಾ ಸಚಿತ್ರ ಪಟವನ್ನು ಸ್ಥಾಪನೆ ಮಾಡಿ ನಂತರ ಅದನ್ನು ಪೂಜೆ ಮಾಡಿ ಪಾಯಸದ ನೈವೇದ್ಯ ಸಮರ್ಪಿಸಬೇಕು. ನಂತರ ದೇವತೆಗಳ ಮುಂದೆ ಪವಿತ್ರಗಳ ಎರಡೂ ಪಾತ್ರೆಗಳನ್ನು ಇಟ್ಟು ಅಧಿವಾಸಿತ ಮಾಡಬೇಕು.

ಉಕ್ತಸಂಖ್ಯಸ್ಯ ಸೂತ್ರಸ್ಯಾಲಾಭೆ ತಾನಿ ಯಥಾರುಚಿ ।
ಜೇಷ್ಠಾದೀನಿ ಪವಿತ್ರಾಣಿ ವಿದಧ್ಯಾತ್ಸರ್ವಥಾ ಸುಧಿಃ ॥ 57 ॥

ಪೂರ್ವೋಕ್ತ ಸಂಖ್ಯೆಗಳಲ್ಲಿ ಸೂತ್ರಗಳು ಪ್ರಾಪ್ತವಾಗದಿದ್ದರೆ ಸಿಕ್ಕಿದಷ್ಟೇ ಸೂತ್ರಗಳಿಂದ ಜೇಷ್ಠ ಮುಂತಾದ ಪವಿತ್ರಗಳನ್ನು ತಯಾರಿಸಬೇಕು.

ತತ್ರ ದ್ವಾವಿಂಶತಿರ್ದೇವಾನಾಹೂಯ ಪ್ರತಿಪೂಜಯೇತ್ ।
ಬ್ರಹ್ಮವಿಷ್ಣುಮಹೇಶಾನಾಸ್ತ್ರಿಸೂತ್ರ್ಯಾ ದೇವತಾಃ ಸ್ಮೃತಾಹ ॥ 58 ॥

ಓಂಕಾರಚಂದ್ರಮೊ ವಹ್ನಿಬ್ರಹ್ಮಾನಾಗಶಿಖಿಧ್ವಜಾಃ ।
ಸೂರ್ಯಃ ಸದಾಶಿವೊ ವಿಶ್ವೆ ನವಸೂತ್ರಾಧಿದೇವತಾಃ ॥ 59 ॥

ಕ್ರಿಯಾ ಚ ಪೌರುಷಿ ವೀರಾ ಚತುರ್ಥಿ ತ್ವಪರಾಜಿತಾ ।
ವಿಜಯಾ ಜಯಯಾ ಯುಕ್ತಾ ಮುಕ್ತಿದಾ ಚ ಸದಾಶಿವಾ ॥ 60 ॥

ಮನೋನ್ಮನಿ ತು ನವಮಿ ದಶಮಿ ಸರ್ವತೋಮುಖಿ ।
ಏತಾಃ ಪವಿತ್ರಗ್ರಂಥಿನಾಂ ದೇವತಾಃ ಪರೀಕೀರ್ತಿತಃ ॥ 61 ॥

ಎರಡೂ ಪಾತ್ರೆಗಳ್ಲಿ ಸ್ಥಾಪಿತ ಪವಿತ್ರಗಳ ಮೇಲೆ ವಕ್ಷಮಾಣ 22 ದೇವತೆಗಳನ್ನು ಆವಾಹನೆ ಮಾಡಿ ಅವುಗಳನ್ನು ಪೂಜೆ ಮಾಡಬೇಕು. ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಈ ಮೂರು ಸೂತ್ರೀಯ ದೇವತೆಗಳಿರುತ್ತಾರೆ. ಓಂ ಕಾರ, ಚಂದ್ರ, ಅಗ್ನಿ, ಬ್ರಹ್ಮ, ನಾಗ, ಕಾರ್ತಿಯೇಯ, ಸೂರ್ಯ, ಸದಾಶಿಚ ಮತ್ತು ವಿಶ್ವೇಶ್ವರ





ಈ ನವಸೂತ್ರಿಕಾಗಳ ಅಧಿದೇವತೆಗಳಾಗಿರುತ್ತಾರೆ. ಕ್ರಿಯಾ, ಪೌರುಷಿ, ವೀರಾ, ಅಪರಾಜಿತಾ, ವಿಜಯಾ, ಜಯಾ ಮುಕ್ತಿದಾ, ಸದಾಶಿವಾ ಮತ್ತು ಮನೋನ್ಮನಿ, ಸರ್ವತೋಮುಖಿ ಇವರು ಪವಿತ್ರಿಯ ಗ್ರಂಥಿಗಳ ದೇವತೆಗಳೆಂದು ಹೇಳಲಾಗಿದೆ.

ಆವಾಹನ್ಯಾದಿ ಮುದ್ರಾಭಿರ್ನವಭಿಃ ಸಾಧಕೋತ್ತಮಃ ।
ತದಾಹ್ವಾನಾದಿಕಂ ತತ್ರ ಕೃತ್ವಾರ್ಚ್ಯೆಚ್ಚಂದನಾದಿಭಿಃ ॥ 62 ॥

ಏವಂ ಪವಿತ್ರಾಣ್ಯಭ್ಯರ್ಚ್ಯ ದಧ್ಯಾದ್ ಗಂಧ ಪವಿತ್ರಕಮ್ ।
ತದ್‌ಧೂಪಯಿತ್ವಾ ತಾರೇಣ ಹೃದಯೇನಾಭಿಮಂತ್ರಯೇತ್ ॥ 63 ॥

ಪ್ರಣಮ್ಯ ಪ್ರಾರ್ಥಯೆದ್ದೇವಂ ಶ್ಲೋಕಯುಗ್ಮಮಿದಂ ಪಠನ್ ।
ಆಮಂತ್ರಿತೋಸಿ ದೇವೇಶ ಸಾರ್ಧ್ವ ದೇವ್ಯಾ ಗಣೇಶ್ವರೈಃ ॥ 64 ॥

ಮಂತ್ರೈರ್ಲೋಕಪಾಲೈಶ್ಚ ಸಹಿತಃ ಪರಿವಾರಕೈಃ ।
ಆಗಚ್ಛ ಭಗವನ್ನೀಶ ವಿಧಿ ಸಂಪೂರ್ತಿಕಾರಕ ॥ 65 ॥

ಪ್ರಾತಸ್ತ್ವಾಂ ಪೂಜಯಿಷ್ಯಾಮಿ ಸಾನಿಧ್ಯಂ ಕುರು ಕೇಶವ ।
ತತೋ ಗಂಧಪವಿತ್ರಂ ತತ್ಪಾದಯೋರ್ವಿನ್ಯಸೇತ್ಪ್ರಭೋಃ ॥ 66 ॥

ಕೇಶವೇತಿಪದಸ್ಥಾನೆ ಕಾರ್ಯ ಊಹೋನ್ಯದೈವತಃ ।
ಭಗವತ್ಯಾಃ ಪದೇಷ್ವತ್ರ ಲಿಂಗೋಹೊ ಮಂತ್ರವಿತ್ತಮೆ ॥ 67 ॥

ಅಧಿವಾಸಂ ವಿಧಾಯೇತ್ಥಂ ನಿಶಿ ಜಾಗರಣಂ ಚರೇತ್ ।
ದೇವಸ್ಯ ಸ್ತುತಿನಾಮಾನಿ ವದಗ್ನಾಯಂಶ್ಚ ತದ್ಗುಣಾನ್ ॥ 68 ॥

ಆವಾಹನೆ ಆದಿ ಪೂರ್ವೋಕ್ತ ಒಂಭತ್ತು ಮುದ್ರೆಗಳಿಂದ ಆವಾಹನೆ ಮಾಡಿ ಚಂದನಾದಿಗಳಿಂದ ಅವುಗಳನ್ನು ಪೂಜೆ ಮಾಡಬೇಕು. ಈ ಪ್ರಕಾರ ಪವಿತ್ರಗಳನ್ನು ಗಂಧಾದಿ ಮೂಲಕ ಪೂಜೆ ಮಾಡಬೇಕು. ಮತ್ತು ಅವುಗಳನ್ನು ಪ್ರಣವದಿಂದ ಧೂಪ ತೋರಿಸಿ 'ನಮಃ'ದಿಂದ ಅಭಿಮಂತ್ರಿತಗೊಳಿಸಬೇಕು.

ನಂತರ ಇಷ್ಟದೇವತೆಗೆ ನಮಸ್ಕರಿಸಿ 'ಆಮಂತ್ರಿತೋಸಿ ದೇವೇಶಂ'ದಿಂದ ಸಾನಿಧ್ಯಂ ಕುರು ಕೇಶವ (64ರಿಂದ 66) ಎರಡು ಶ್ಲೋಕಗಳನ್ನು ಪಠಿಸುತ್ತ ಇಷ್ಟದೇವನ ಪ್ರಾರ್ಥನೆ ಮಾಡಬೇಕು.

'ಇದರ ನಂತರ ಗಂಧಪವಿತ್ರವನ್ನು ಇಷ್ಟದೇವರ ಚರಣದಲ್ಲಿ ಏರಿಸಬೇಕು. ಪ್ರಾರ್ಥನೆಯ ಈ ಶ್ಲೋಕದಲ್ಲಿ ಇಷ್ಟದೇವತೆ ಶಂಕರ, ಗಣೇಶ, ಶಕ್ತಿ ಅಥವಾ ಸೂರ್ಯರಾಗಿದ್ದರೆ ಅವರ ನಾಮಗಳನ್ನು ಕಲ್ಪಿಸಿಕೊಂಡು ಸೇರಿಸಿಕೊಳ್ಳಬೇಕು.

ತದರ್ದ್ಧೇನ ತದರ್ದ್ಧೇನ ಜಾನೂರೂನಾಭಿಮಾನತಃ ।
ದೇವೇಶಸ್ಯ ಪವಿತ್ರಾಣಿ ಶುಚೌ ದೇಶೇ ಪ್ರಸನ್ನಧೀಃ ॥ 44 ॥

ಜೇಷ್ಠಮಧ್ಯ ಕನಿಷ್ಠಾನಿ ತೇಷು ಗ್ರಂಥೀನ ದಧೀತ ಚ ।
ಷಟ್‌ತ್ರಿಂಶತ್ತತ್ತ್ವಮಾರ್ತಂಡಮಿತಾಂಜ್ಯೇಷ್ಠಾದಿಷು ಕ್ರಮಾತ್ ॥ 45 ॥

ಅಷ್ಟೋತ್ತರಸಹಸ್ರೇಣ ನವಸೂತ್ರ್ಯಾ ವಿನಿರ್ಮಿತಮ್ ।
ಅಷ್ಟೋತ್ತರಶತಗ್ರಂಥಿನ್ ವನಮಾಲಾಪವಿತ್ರಕಮ್ ॥ 46 ॥

ಕೃತ್ವಾತಾನ್ ರಂಜಯೇದ್ ಗ್ರಂಥಿನ ರೋಚನಾಕುಂಕುಮಾದಿಭಿ ।
ವೈಷ್ಣವೆ ಪಟಲೆ ತಾನಿ ಸಂಭಾವ್ಯ ಸಿತವಾಸಸಾ ॥ 47 ॥

ಸ್ಥಾಪಯಿತ್ವಾ ವಿನಿರ್ಮಾಯಾದನ್ಯಾನ್ಯಾವರಣಾರ್ಚನೆ ।
ಸಪ್ತವಿಂಶತ್ಯಪ್ಸು ರವಿ ನವಸೂತ್ರಿ ಕೃತಾನಿ ತು ॥ 48 ॥

ಅದ್ರಿನೇತ್ರಮಿತಾಭಿಸ್ತು ಕುರ್ಯಾದ್ ಗುರು ಪವಿತ್ರಕಮ್। ತಾವತೀಭಿಃ
ಕೃಶಾನೋಸ್ತತ್ಷಡ್‌ವಿಂಶಾತ್ಯಾ ತದಾತ್ಮನಃ ॥ 49 ॥

ತತ್ರಗ್ರಂಥೀನ ಯಥಾಶೋಭಂ ದತ್ತ್ವಾ ಸಂರಂಜಯೇದಪಿ ।
ತಾನಿ ಪಾತ್ರಾಂತರೆ ನ್ಯಸ್ಯ ಕುರ್ಯಾದ್ ಗಂಧಪವಿತ್ರಕಮ್ ॥ 50 ॥

ಯಾವುದಾದರೊಂದು ಶುದ್ಧವಾದ ಸ್ಥಾನದಲ್ಲಿ ಪ್ರಸನ್ನತಾ ಪೂರ್ವಕ ಕುಳಿತುಕೊಂಡು 108 ಅಥವಾ ಅದರ ಅರ್ಧ 54. ಅಥವಾ ಅದರ ಅರ್ಧ 27 ನವಸೂತ್ರಿಕೆಗಳಿಂದ ಜಾನುಪರ್ಯಂತ, ಊರು ಪರ್ಯಂತ ಅಥವಾ ನಾಭಿ ಪರ್ಯಂತ ಪ್ರಮಾಣದ ಪವಿತ್ರಗಳನ್ನು ತಯಾರಿಸಬೇಕು.

ಇವುಗಳು ಕ್ರಮವಾಗಿ ಜೇಷ್ಠ, ಮಧ್ಯಮ ಮತ್ತು ಕನಿಷ್ಠ ಸಂಜ್ಞಕಗಳಾಗಿರುತ್ತವೆ. ನಂತರ ಅವುಗಳಲ್ಲಿ ಕ್ರಮವಾಗಿ 36,24,ಮತ್ತು 12 ಗಂಟುಗಳನ್ನು ಹಾಕಬೇಕು. ಒಂದು ಸಾವಿರ ಎಂಟರಿಂದ ತಯಾರಾದ ನವಸೂತ್ರಿಕಾದಲ್ಲಿ 108 ಗಂಟುಗಳಿಂದ ನಿರ್ಮಿತ ಪವಿತ್ರಾವನ್ನು ವನಮಾಲಾ ಎಂದು ಕರೆಯುತ್ತಾರೆ.

ಈ ಪ್ರಕಾರ ಪವಿತ್ರವನ್ನು ನಿರ್ಮಾಣ ಮಾಡಿ ಅವರವರ ಗಂಟುಗಳನ್ನು ಗೋರೋಚನದ ಕಿನೆಯಿಂದ ಬಣ್ಣ ಹಾಕಬೇಕು. ನಂತರ ವೈಷ್ಣವ ಪಟಲದ ಮೇಲೆ ಅವುಗಳನ್ನು ಬಿಳಿಯ ಬಟ್ಟೆಯಲ್ಲಿ ಕಟ್ಟಿ ಸ್ಥಾಪನೆ ಮಾಡಿ ಪುನಃ 27,16 ಮತ್ತು 12 ನವಸೂತ್ರಿಕಾಗಳಿಂದ ಆವರಣ ಪೂಜೆಗಾಗಿ ಬೇರೆ ಬೇರೆ ಪವಿತ್ರಗಳನ್ನು





ತಯಾರಿಸಬೇಕು. ಗುರುವಿಗಾಗಿ 27 ನವಸೂತ್ರಿಕಾದ, ಅಗ್ನಿಗಾಗಿ ಅಷ್ಟೇ ಸಂಖ್ಯೆಯ ಮತ್ತು 26 ನವಸೂತ್ರಿಗಳನ್ನು ತನಗಾಗಿ ಪವಿತ್ರಗಳನ್ನು ನಿರ್ಮಿಸಬೇಕು.

ದ್ವಾದಶಗ್ರಂಥಿ ತಿಗ್ಮಾಂಶು ನವಸೂತ್ರಿ ವಿನಿರ್ಮಿತಮ್ ।
ನಿರ್ಮಾಯೈವಂ ಪವಿತ್ರಾಣಿ ಕುರ್ಯಾತ್ ಪೂಜಾರ್ಥಮಂಡಲಮ್ ॥ 51 ॥

ಪಂಕಜಂ ಷೋಡಶದಲಂ ಪೂರಯೇದಷ್ಟವರ್ಣಕೈಃ ।
ನೀಲಹಾರಿದ್ರಶೋಣಾಪ್ಯಮಾಂಜಷ್ಠಶ್ವೇತಸಂಜ್ಞಕೈಃ ॥ 52 ॥

ಸಿಂಧೂರಧೂಮ್ರಕೃಷ್ಣಾಖ್ಯೈಸದ್ ಬಹಿರ್ಮಂಡಲತ್ರಯಮ್ ।
ಸೂರ್ಯಸೋಮಾಗ್ನಿಸಂಜ್ಞಂ ತತ್ಸಿತಪೀತಾರುಣಂ ಕ್ರಮಾತ್ ॥ 53 ॥

ತದ್‌ಬಾಹ್ಯಾಷ್ಟದಲಂ ಕುರ್ಯಾದರುಣಂ ಯದಿವಾದಿಸಿತಮ್ ।
ಏವಂ ಮಂಡಲಮಾಲಿಖ್ಯ ಪೂಜಯೇತ್ಕುಸುಮಾದಿಭಿಃ ॥ 54 ॥

ಏವಂ ಮಂಡಲಮಾಲಿಖ್ಯ ಪೂಜಯೇತ್ಕುಸುಮಾದಿಭಿಃ ॥ 54 ॥
ತಸ್ಯೋಪರಿ ನಿಬದ್ಧ್ನಿಯಾದ್ವಿತಾನ ಸಮಲಂಕೃತಮ್ ।
ಮಂಡಲೆ ಸ್ಥಾಪಯೆದ್ದೇವಂ ಪ್ರತಿಮಾಂ ಯದಿ ವಾ ಘಟಮ್ ॥ 55 ॥

ತತ್ರೇಷ್ಟದೇವಂ ಸಂಪೂಜ್ಯ ಪಾಯಸಂ ವಿನಿವೇದಯೇತ್ ।
ದೇವತಾಗ್ರೇ ಪವಿತ್ರಾಣಾಂ ಪಾತ್ರೆ ನ್ಯಸ್ಯಾಧಿವಾಸಯೇತ್ ॥ 56 ॥

ಪವಿತ್ರಗಳಲ್ಲಿ ಎಷ್ಟು ಗಂಟುಗಳು ಶೋಭೆಗಾಗಿ ಅಪೇಕ್ಷಿತವಾಗುರುವವೋ ಅಷ್ಟು ಗ್ರಂಥಿಗಳನ್ನು ಮಾತ್ರ ಮಾಡಿ ಅವುಗಳಿಗೆ ಬಣ್ಣ ಹಾಕಬೇಕು. ನಂತರ ಅವುಗಳನ್ನು ಯಾವುದಾದರೊಂದು ಪಾತ್ರೆಯಲ್ಲಿ ಸ್ಥಾಪಿಸಿ 12 ನವಸೂತಿಕಾಗಳಲ್ಲಿ, ಯಾವುದರಲ್ಲಿ 12 ಗಂಟುಗಳು ಇರುವವೋ ಅವುಗಳ ಒಂದು ಅನ್ಯ ಗಂಧಪವಿತ್ರಾವನ್ನು ತಯಾರಿಸಬೇಕು. ಈ ರೀತಿಯಿಂದ ಪವಿತ್ರಗಳನು ತಯಾರಿಸಿ ಪೂಜೆಗಾಗಿ ಮಂಡಲವನ್ನು ಬರೆಯಬೇಕು.




ಷೋಡಶ (16) ದಳಗಳ ಕಮಲವನ್ನು ಬರೆದು ಅದರಲ್ಲಿ ನೀಲಿ, ಹಳದಿ, ಕೆಂಪು, ಬೂದು, ಶ್ವೇತ, ಸಿಂಧೂರಿ, ಧೂಮ್ರವರ್ಣ ಮತ್ತು ಕಪ್ಪು ಬಣ್ಣಗಳನ್ನು ತುಂಬಬೇಕು. ಅದರ

ಪೂಜೆಯನ್ನು ಸಮಾಪ್ತಗೊಳಿಸಿ, ದೇವತೆಯ ಅಪ್ಪಣೆ ಪಡೆದುಕೊಂಡು, 'ವರ್ಷಪೂಜಾ ಸಾಂಗತ್ವಾಯ ದಮನಾರ್ಚಾ ಕರಿಷ್ಯೆ' ಎಂದು ಸಂಕಲ್ಪ ಮಾಡಬೇಕು.

ನಂತರ ಎರಡೂ ಕೈಗಳಲ್ಲಿ ದಮನಕದ ಶುಭ ಮಂಜರಿಗಳನ್ನು ತೆಗೆದುಕೊಂಡು ನಮಃ ಮಂತ್ರದಿಂದ ಅಭಿಮಂತ್ರಿಸಿ, 'ಸರ್ವ ರತ್ನಮಯಿಂ ದಿವ್ಯಾ.........ನಮಸ್ತೇಸ್ತು ಕೃಪಾನಿಧೆ' ಪರ್ಯಂತ ಶ್ಲೋಕವನ್ನು ಹೇಳುತ್ತ ಮೂಲಮಂತ್ರದಿಂದ ಘಂಟಾದಿ ಜಯಘೋಷಗಳೊಂದಿಗೆ ಆ ಮಂಜರಿಗಳನ್ನು ದೇವತೆಯ ಶಿರದ ಮೇಲೆ ಏರಿಸಿ ದಮನಕದ ಮಾಲೆಯಿಂದ 'ನಮಃ' ಪದದೊಂದಿಗೆ 'ಸರ್ವರತ್ನಮಯಿಂ ನಾಮ....ವಿಭೊ' ಪರ್ಯಂತ ಮಂತ್ರವನ್ನು ಪಠಿಸುತ್ತ ಅಭಿಮಂತ್ರಿಸಬೇಕು.

ದಮನನೇಷ್ಟದೇವಸ್ಯ ಪರಿವಾರಾನ್ ಸಮರ್ಚಯೇತ್
ತತೊ ನೈವೇದ್ಯತಾಂಬೂಲೆ ದತ್ವಾ ನತ್ವಾ ಚ ದಂಡವತ್ । ॥ 33 ॥
ದಮನಾರ್ಚಾ ಕೃತಾಂ ತಸ್ಮೈ ಶ್ಲೋಕೇನ ವಿನಿವೇದಯೇತ್ ॥ 34 ॥

ದೇವ ದೇವ ಜಗನ್ನಾಥ ವಾಂಛಿತಾರ್ಥಪ್ರದಾಯಕ ।
ಕೃತ್ಸ್ನಾನ ಪೂರಯ ಮೇತ್ವರ್ಥ ಕಾಮಾನ್ ಕಾಮೇಶ್ವರಿ ಪ್ರಿಯ ॥ 35 ॥

ಜಪ್ತ್ವಾ ಮೂಲಮನುಂ ವಹ್ನಿಂ ಹುತ್ವಾ ದೇವಂ ವಿಸೃಜ್ಯಚ ।
ಗುರು ಗತ್ವಾ ದಮನಕೈರ್ಯಜೇತ್ತಾಂ ತೋಷಯೇದ್ಧನೈಃ ॥ 36 ॥

ಇಷ್ಟ ದೇವತೆಯ ಪರಿವಾರವನ್ನು ಕೂಡಾ ದಮನಕ ಮೂಲಕ ಪೂಜೆ ಮಾಡಬೇಕು. ನಂತರ ನೈವೇದ್ಯ ಮತ್ತು ತಾಂಬೂಲಗಳನ್ನು ಸಮರ್ಪಿಸಿ ದಂಡವತ್ ನಮಸ್ಕಾರ ಮಾಡಿ 'ದೇವದೇವ ಜಗನ್ನಾಥ.....ಕಾಮೇಶ್ವರಿ ಪ್ರಿಯ' ಶ್ಲೋಕವನ್ನು ಪಠಿಸುತ್ತ ಪೂಜೆ ಮಾಡಲ್ಪಟ್ಟ ದಮನಕವನ್ನು ದೇವಾಧಿದೇವನಿಗೆ ನಿವೇದಿಸಬೇಕು.

ನಂತರ ಮೂಲಮಂತ್ರದ ಜಪ ಮಾಡುತ್ತ ಅಗ್ನಿಯಲ್ಲಿ ಹೋಮ ಮಾಡಿ ದೇವತೆಯನ್ನು ವಿಸರ್ಜನೆ ಮಾಡಿ ಗುರುವಿನ ಸನ್ನಿಧಿಗೆ ತೆರಳಿ ದಮನಕದಿಂದ ಗುರುವಿನ ಪೂಜೆಯನ್ನು ಮಾಡಬೇಕು. ಮತ್ತು ಧನವನ್ನು ಅರ್ಪಿಸಿ ಅವರನ್ನು ಸಂತುಷ್ಟಗೊಳಿಸಬೇಕು.

ವಿಪ್ರಾನ್ ಸಂಭೊಜ್ಯ ಭುಂಜೀತ ಸ್ವದೇವಾಯ ನಿವೇದಿತಮ್ ।
ಏವಂ ಕೃತೆ ಕೃತಾರ್ಥಃ ಸ್ಯಾದ್ವರ್ಷಾರ್ಚಾ ಫಲಭಾಂ ನರಃ ॥ 37 ॥
ಕಥಿತಾ ದಮನಾರ್ಚೈಷಾ ಪವಿತ್ರಯಜನಂ ಬ್ರುವೆ ।





ನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಸ್ವಯಂ ಇಷ್ಟದೇವನ ಪ್ರಸಾದವನ್ನು ಸ್ವೀಕರಿಸಬೇಕು. ಈ ಪ್ರಕಾರ ಮಾಡುವುದರಿಂದ ಮಾನವರು ಕೃತಾರ್ಥರಾಗುತ್ತಾರೆ. ಮತ್ತು ಅವರಿಗೆ ಪೂರ್ತಿವರ್ಷದ ಪೂಜೆಯ ಫಲವು ದೊರೆಯುತ್ತದೆ.

ಪವಿತ್ರ ಪೂಜಾ ವಿಧಾನ

ಪವಿತ್ರಯಜನಾಹಾತ್ತು ಪೂರ್ವಸ್ಮಿನ್ವಾಸರೆ ಸುಧಿಃ
ವಿದಧ್ಯಾನ್ನಿತ್ಯಪೂಜಾಂತೆ ಪವಿತ್ರಾಣಿ ಯಥಾವಿಧಿ । ॥ 38 ॥
ಹೇಮದುರ್ವರ್ಣತಾಮ್ರೋತ್ಥಂತುಭಿಃ ಪಟ್ಟಸೂತ್ರತಃ ॥ 39 ॥

ಯದ್ವಾ ಕಾರ್ಪಾಸಸೂತ್ರೈಸ್ತು ನಿರ್ಮಿತ್ತೈರ್ವಿಪ್ರಭಾರ್ಯಯಾ ।
ಅನ್ಯಯಾ ವಾ ಸಧವಯಾ ಸದಾಚಾರಪ್ರಸಕ್ತಯಾ ॥ 40 ॥

ಕರ್ತಿತೈಸ್ತಾನಿ ಕುರ್ವೀತ ನ ಪುಂಶ್ಚಲ್ಯಾದಿರ್ನಿರ್ಮಿತೈಃ ।
ತ್ರಿಗುಣಂ ತ್ರಿಗುಣೀಕೃತ್ಯ ನಿರ್ಮಾಯಾನ್ನವಸೂತ್ರಿಕಾಮ್ ॥ 41 ॥

ತಾಂ ಪ್ರೋಕ್ಷ ಪಂಚಗವ್ಯೇನ ಕ್ಷಾಲಯೇದುಷ್ಣವಾರಿಣಾ ।
ಪ್ರಣವೇನಾಭಿಷಿಂಚೇತ್ತಾಂ ಮೂಲೇನಾಷ್ಟೋತ್ತರಂ ಶತಮ್ ॥ 42 ॥

ಮಂತ್ರಯೇನ್ಮೂಲಗಾಯತ್ರ್ಯಾಃ ತಾವದೇವ ತತಃ ಸುಧಿಃ ।
ರಚಯೇನ್ನವಸೂತ್ರಿಭಿರಷ್ಟೋತ್ತರಶತೇನ ಚ ॥ 43 ॥

ಈಗ ಪವಿತ್ರ ಪೂಜಾ ಕ್ರಮವನ್ನು ಹೇಳಲಾಗುತ್ತದೆ. ಪವಿತ್ರ ಪೂಜೆಯ ಹಿಂದಿನ ದಿವಸ, ಸಾಧಕರು ನಿತ್ಯ ಪೂಜಾದಿಗಳನ್ನು ಪೂರೈಸಿ ವಿಧಿಪೂರ್ವಕವಾಗಿ ಪವಿತ್ರಗಳನ್ನು ತಯಾರಿಸಿ ಬಂಗಾರ, ಬೆಳ್ಳಿ, ತಾಮ್ರ, ರೇಶ್ಮೆ ಅಥವಾ ಬ್ರಾಹ್ಮಣರ ಮೂಲಕ ಅಥವಾ ಸದಾಚಾರಣಿಯಾದ ಮುತ್ತೈದೆ ಸ್ತ್ರೀಯು ನೂತ ಹತ್ತಿಯ ನೂಲಿನ ಪವಿತ್ರಕವನ್ನು ತಯಾರಿಸಬೇಕು. ವ್ಯಭಿಚಾರಿಣಿ, ವೇಶ್ಯಾ ಸ್ತ್ರೀಯರಿಂದ ನೂಲಲ್ಪಟ್ಟ ನೂಲಿನಿಂದ ಪವಿತ್ರಕವನ್ನು ಎಂದೂ ತಯಾರಿಸಬಾರದು. ಮೂರು ಎಳೆಗಳ ಮೂರು, ಈ ಪ್ರಕಾರ ಒಂಭತ್ತು ಸೂತ್ರಗಳನ್ನು ನಿರ್ಮಾಣ ಮಾಡಿ ಪಂಚಗವ್ಯದಿಂದ ಅದನ್ನು ಪ್ರೋಕ್ಷಣ ಮಾಡಿ ಬೆಚ್ಚಗಿನ ನೀರಿನಿಂದ ಅದನ್ನು ಪ್ರಕ್ಷಾಳನ ಮಾಡಬೇಕು.

ನಂತರ ಪ್ರಣವ (ಓಂ)ದಿಂದ ಅವುಗಳ ಅಭಿಷೇಕ ಮಾಡಬೇಕು. ಮತ್ತು 108 ಇಷ್ಟದೇವತೆಯ ಮೂಲಮಂತ್ರವನ್ನು ಮತ್ತು ಅವರ 108 ಗಾಯತ್ರಿಯಿಂದ ಅಭಿಮಂತ್ರಿಸಬೇಕು.

### ಕಾಮಗಾಯತ್ರಿ ಮಂತ್ರ

ಕಾಮದೇವಾಯ ವರ್ಣಾಂತೆ ವಿದ್ಮಹೇಪದಮುಚ್ಚರೇತ್ ।
ಪುಷ್ಪಬಾಣಾಯ ಚ ಪದಂ ಧೀಮಹಿತಿ ತತೋ ವದೇತ್ ॥ 20 ॥

ತನ್ನೋನಂಗಃ ಪ್ರಚೋದಯಾದ್ ದಯಾದಿತಿ ಮನೋಭವಃ ।
ಗಾಯತ್ರೇಷಾ ಬುಧೈರುಕ್ತಾ ಜಪ್ತಾ ಜನವಿಮೋಹಿನಿ ॥ 21 ॥

'ಕಾಮದೇವಾಯ' ಪದದ ನಂತರ 'ವಿದ್ಮಹೆ' ಹೇಳಬೇಕು. ನಂತರ 'ಪುಷ್ಪಬಾಣಾಯ' ಪದ, 'ಧೀಮಹಿ' ಪದವನ್ನು ಉಚ್ಚರಿಸಬೇಕು. ನಂತರ 'ತನ್ನೋನಂಗಃ ಪ್ರಚೋ' ಮತ್ತು 'ದಯಾತ್' ವರ್ಣಗಳನ್ನು ಹೇಳಬೇಕು. ಜಪ ಮಾತ್ರದಿಂದ ಜನರನ್ನು ಮೋಹಿತಗೊಳಿಸುವ ಈ ಮಂತ್ರವನ್ನು ಕಾಮಗಾಯತ್ರಿ ಎನ್ನುತ್ತಾರೆ. "ಕಾಮದೇವಾಯ ವಿದ್ಮಹೆ ಪುಷ್ಪಬಾಣಾಯ ಧೀಮಹಿ / ತನ್ನೋನಂಗಃ ಪ್ರಚೋದಯಾತ್"

ಹೃದಾಪುಷ್ಪಾಂಜಲಿಂ ದತ್ವಾ ಮನುನಾನೇನ ತುಂ ನಮೇತ್ ।
ನಮೋಸ್ತು ಪುಷ್ಪಬಾಣಾಯ ಜಗದಾನಂದಕಾರಿಣೆ ॥ 22 ॥

ಮನ್ಮಥಾಯ ಜಗನ್ನೇತ್ರರತಿಪ್ರೀತಿಪ್ರದಾಯಿನೆ ।
ತತೋ ನಿಮಂತ್ರಯೇದ್ ದೇವಮನೇನ ಮನುನಾ ಸುಧಿಃ ॥ 23 ॥

ಆಮಂತ್ರಿತೋಸಿ ದೇವೇಶ ಪ್ರಾತಃ ಕಾಲೆ ಮಯಾ ಪ್ರಭೋ ।
ಕರ್ತವ್ಯಂ ತು ಯಥಾಲಾಭಮ ಪೂರ್ಣ ಸ್ಯಾತ್ತು ತವಜ್ಞಯಾ ॥ 24 ॥

ದೇವೇ ಪುಷ್ಪಾಂಜಲಿಂ ದತ್ವಾ ದಂಡವತ್ಪ್ರಣಿಪತ್ಯ ಚ ।
ದಮನೆ ವರ್ಮಣಾಸ್ತ್ರೇನ ವಿದಧ್ಯಾದವಗುಂಠನಮ್ ॥ 25 ॥

ರಕ್ಷಣ ಚಂ ಕ್ರಮಾದೇತದಧಿವಾಸನಮಿರಿತಮ್ ।
ತತೋ ಜಾಗರಣಂ ಕುರ್ಯಾದ್ದೇವಂ ಗಾಯಂಸ್ತುವಂಜಪನ್ ॥ 26 ॥

ಸರ್ವಾಧಿವಾಸನಂ ಚಾಪಿ ಕುರ್ಯಾನ್ನರ್ತನಜಾಗರೌ ।
ಪ್ರಾತಃ ಸ್ನಾನಾದಿನಿರ್ವರ್ತ್ಯ ಕೃತ್ವಾ ನಿತ್ಯಾರ್ಚನಂ ವಿಭೋ ॥ 27 ॥

ನಮಃ ಮಂತ್ರದಿಂದ ಪುಷ್ಪಾಂಜಲಿಯನ್ನು ಕೊಟ್ಟು 'ನಮೋಸ್ತು ಪುಷ್ಪಬಾಣಾಯ....ರತಿಪ್ರೀತಿಪ್ರದಾಯಿನೆ' ಪರ್ಯಂತ ಮಂತ್ರ ಪಠಣ ಮಾಡುತ್ತ ನಮಸ್ಕರಿಸಬೇಕು.





ನಂತರ 'ಆಮಂತ್ರಿತೋಸಿದೇವೇಶ....ತವಾಜ್ಞಯಾ' ಪರ್ಯಂತ ಮಂತ್ರ ಹೇಳುತ್ತ ಇಷ್ಟದೇವತೆಯನ್ನು ಆಮಂತ್ರಿಸಬೇಕು.

ಆಮೇಲೆ ಪುಷ್ಪಾಂಜಲಿಯನ್ನು ಅರ್ಪಿಸಿ ದಂಡವತ್ ಪ್ರಣಾಮ ಮಾಡಿ, ವರ್ಮ (ಹುಂ) ಮಂತ್ರದಿಂದ ಅದನ್ನು ರಕ್ಷಣೆ ಮಾಡಬೇಕು. ಈ ಎಲ್ಲ ವಿಧಾನಗಳನ್ನು ದಮನಕದ ಸ್ಥಾಪನ ಸಂಸ್ಕಾರ ಅರ್ಥಾತ್ ಅಧಿವಾಸನವೆಂದು ಕರೆಯಲಾಗುತ್ತದೆ.

ನಂತರ ಇಷ್ಟ ದೇವತೆಯ ಗುಣಗಾನ ಮಾಡುತ್ತ ಅವರ ಮಂತ್ರ ಜಪ ಮಾಡುತ್ತ ಜಾಗರಣೆ ಮಾಡಬೇಕು. ಎಲ್ಲ ಪ್ರಕಾರದ ಅಧಿವಾಸನದಲ್ಲಿ ನೃತ್ಯ ಮತ್ತು ಜಾಗರಣೆಯನ್ನು ಮಾಡಬೇಕು. ಇದು ವಿಧಾನ.

ಎಂಟೂ ಜನ ಕಾಮರ ನಾಮಮಂತ್ರಗಳು ಈ ಪ್ರಕಾರವಾಗಿವೆ–

ಓಂ ಕ್ಲೀಂ ಕಾಮಾಯ ನಮಃ, ಓಂ ಕ್ಲೀಂ ಭಸ್ಮಶರೀರಾಯ ನಮಃ ।
ಓಂ ಕ್ಲೀಂ ಅನಂಗಾಯ ನಮಃ, ಓಂ ಕ್ಲೀಂ ಮನ್ಮಥಾಯ ನಮಃ ।
ಓಂ ಕ್ಲೀಂ ವಸಂತಸಖಾಯ ನಮಃ, ಓಂ ಕ್ಲೀಂ ಸ್ಮರಾಯ ನಮಃ ।
ಓಂ ಕ್ಲೀಂ ಇಕ್ಷುಧನುರ್ಧರಾಯ ನಮಃ, ಓಂ ಕ್ಲೀಂ ಪುಷ್ಪಬಾಣಾಯ ನಮಃ

ಸಂಕಲ್ಪಂ ದಮನಾರ್ಚಾಯಾ ವಿದಧ್ಯಾದ್ದೇವತಾಜ್ಞಯಾ ।
ಗೃಹಿತ್ವಾ ದಮನಸ್ಯಾಥ ಹಸ್ತಾಭ್ಯಾಂ ಮಂಜರಿಂ ಶುಭಾಮ್ ॥ 28 ॥

ಹೃದಾಭಿಮಂತ್ರಯೇನ್ಮಂತ್ರಿ ತತಃ ಶ್ಲೋಕಮಿಮ ಪಠೇತ್ ।
ಸರ್ವರತ್ನಮಯಿಂ ದಿವ್ಯಾಂ ಸರ್ವಗಂಧಮಯಿಂ ಶುಭಾಮ್ ॥ 29 ॥

ಗೃಹಾಣ ಮಂಜರಿಂ ದೇವ ನಮಸ್ತೇಸ್ತು ಕೃಪಾನಿಧೆ ।
ಮೂಲಮಂತ್ರೇಣ ಘಂಟಾದಿಘೋಷೈರ್ದೇವಸ್ಯ ಮಸ್ತಕೆ ॥ 30 ॥

ಸಮರ್ಪ್ಯ ತಾಂ ತತಃ ಕುರ್ಯಾನ್ಮಾಲಾಂ ದಮನನಿರ್ಮಿತಾಮ್ ।
ಹೃದಾಭಿಮನ್ಯ ಚಾನೇನ ಶ್ಲೋಕೇನಾಪ್ಯಭಿಮಂತ್ರಯೇತ್ ॥ 31 ॥

ಸರ್ವರತ್ನಮಯಿಂ ನಾಥ ದಾಮಿನಿಂ ವನಮಾಲಿಕಾಮ್ ।
ಗೃಹಾಣ ದೇವಪೂಜಾರ್ಥ ಸರ್ವಗಂಧಮಯಿಂ ವಿಭೋ ॥ 32 ॥
ಮೂಲಮಂತ್ರಂ ಜಪನ್ನೇವ ಮುಕುಟೆ ತಾಂ ಸಮರ್ಪಯೇತ್ ।

ಪ್ರಾತಃ ಕಾಲದಲ್ಲಿ ಸ್ನಾನಾದಿ ನಿತ್ಯ ಕರ್ಮಗಳನ್ನು ಪೂರೈಸಿ ಇಷ್ಟ ದೇವತೆಯ

ಯಥಾಜ್ಞಾನಂ ಪರಾರ್ಚಾಸೌ ದೌರ್ಬೋಧಿ ಕೀರ್ತಿತಾ ಬುಧೈಃ ।
ಸೂತಕಿ ತು ನರಃ ಸ್ನಾತ್ವಾ ಸಂಧ್ಯಾಂ ಸ್ವಾಂ ಮಾನಸಿಂ ಚರೇತ್ ॥ 172 ॥

ಮಾನಸೈರ್ವಾರ್ಚಯೇತ್ಕಾಮಿ ನಿಷ್ಕಾಮಃ ಸರ್ವಮಾಚರೇತ್ ।
ಸೌತಕ್ಯಕ್ತಾತುರಿ ರೋಗಾನ್ನಸ್ನಾಯಾನ್ನ ಚ ಪೂಜಯೇತ್ ॥ 173 ॥

ವಿಲೋಕ್ಯ ಮೂರ್ತಿಂ ದೇವಸ್ಯ ಯದಿ ವಾ ಸೂರ್ಯಮಂಡಲಮ್ ।
ಸಕೃನ್ಮೂಲಮನುಂ ಜಪ್ತ್ವಾ ತತ್ರ ಪುಷ್ಪಂ ವಿನಿಕ್ಷಿಪೇತ್ ॥ 174 ॥

ಅಭಾವಿನಿ, ತ್ರಾಸಿ, ದೌರ್ಬೋಧಿ, ಸೌತಕಿ ಮತ್ತು ಆತುರಿ ಈ ಪ್ರಕಾರ ಸಾಧನೆಯ ಐದು ಭೇದಗಳನ್ನು ಹೇಳಲಾಗಿದೆ.

ಪೂಜಾ ಸಾಮಗ್ರಿಗಳ ಅಭಾವದಲ್ಲಿ ಮನಸ್ಸಿನಿಂದ ಅಥವಾ ಜಲ ಮಾತ್ರದಿಂದ ಮಾಡುವ ಪೂಜೆಯನ್ನು ಅಭಾವಿನಿ ಸಾಧನಾ ಎಂದು ಕರೆಯುತ್ತಾರೆ. ತ್ರಸ್ತ ವ್ಯಕ್ತಿಯು ತತ್ಕಾಲದಲ್ಲಿ ಉಪಲಬ್ಧ ಅಥವಾ ಮಾನಸೋಪಚಾರಗಳಿಂದ ಯಾವ ಪೂಜೆಯನ್ನು ಮಾಡುತ್ತಾರೆಯೊ ಅದನ್ನು 'ತ್ರಾಸಿ ಸಾಧನಾ' ಎಂದು ಕರೆಯಲಾಗುತ್ತದೆ. ಇಂಥ ಸಾಧನೆಯು ಎಲ್ಲ ಪ್ರಕಾರದ ಸಿದ್ಧಿಗಳನ್ನು ಕೊಡುತ್ತದೆ.

ಬಾಲಕ, ವೃದ್ಧ, ಸ್ತ್ರೀಯರು, ಮೂರ್ಖ ಮತ್ತು ಅನಭಿಜ್ಞರು ತಮ್ಮ ತಮ್ಮ ತಿಳಿವಳಿಕೆಯ ಪ್ರಕಾರ ಯಥಾಶಕ್ತಿಗೆ ಅನುಸಾರವಾಗಿ ಮಾಡುವ ಪೂಜೆಯು ದೌರ್ಬೋಧಿ ಸಾಧನಾ ಎಂದು ಕರೆಯಲ್ಪಡುತ್ತವೆ. ಸೂತಕದಲ್ಲಿರುವ ವ್ಯಕ್ತಿಯು ಸ್ನಾನ ಮಾಡಿ ಕೇವಲ ಮಾನಸಿಕ ಸಂಧ್ಯಾ ಮಾಡಬೇಕು.

ಸಕಾಮವಾಗಿದ್ದರೆ ಮಾನಸಿಕ ಪೂಜೆ ಮಾಡಬಹುದು. ನಿಷ್ಕಾಮವಾಗಿದ್ದರೆ ಎಲ್ಲ ಕಾರ್ಯಗಳನ್ನು ಮಾಡಬೇಕು. ಇದು ಸೌತಿಕಿ ಸಾಧನಾ ಆಗುತ್ತದೆ. ರೋಗಿ ವ್ಯಕ್ತಿಗೆ ಸ್ನಾನ ಮತ್ತು ಪೂಜೆ ಎರಡೂ ವರ್ಜಿತವಾಗಿವೆ. ಅವನು ಕೇವಲ ದೇವತೆಯು ಅಥವಾ ಸೂರ್ಯ ಮಂಡಲದ ದರ್ಶನ ಮಾಡಿ ಒಂದು ಸಲ ಮೂಲಮಂತ್ರವನ್ನು ಜಪ ಮಾಡಿ ಕೇವಲ ಹೂಗಳನ್ನು ಎರಿಸಬೇಕು.

ತತೋ ರೋಗೆ ಗತೆ ಸ್ನಾತ್ವಾ ಪೂಜಯಿತ್ವಾ ಗುರು ನ್ದ್ವಿಜಾನ್ ।
ಪೂಜಾವಿಚ್ಛೇದದೋಷೋ ಮೆ ಮಾಸ್ತ್ವಿತಿ ಪ್ರಾರ್ಥಯೇತ್ ತಾನ್ ॥ 175 ॥

ತೆಭ್ಯಾಶ್ಚಾಶೀಪಮಾದಾಯ ದೇವೇಶಂ ಪೂರ್ವವದ್ಯಜೇತ್ ।
ಆತುರಿ ಕೀರ್ತಿತಾ ಪೂಜಾಃ ಪಂಚೈವಂ ನಾರದೋದಿತಾ ॥ 176 ॥





ಸ್ವಯಂ ಸಂಪಾದ್ಯ ಸರ್ವಾಣಿ ಶ್ರದ್ಧಯಾ ಸಾಧನಾನಿ ಯಃ ।
ಪೂಜಯೇತ್ತತ್ಪರೊ ದೇವಂ ಸ ಲಭೇತಾಖಿಲಂ ಫಲಮ್ ॥ 177 ॥

ಪೂಜನೇನ ಫಲಾರ್ಧೆ ಸ್ಯಾದನ್ಯದತ್ತೈಸ್ತು ಸಾಧನೈಃ ।
ತಸ್ಮಾತ್ಸ್ವಯಂ ಸಮಾನೀಯ ಸಾಧನಾನ್ಯರ್ಚನಂ ಚರೇತ್ ॥ 178 ॥

ದೇವಪೂಜಾವಿಹೀನೋ ಯಃ ಸ ನರೋ ನರಕೆ ಪಚೇತ್ ।
ಯಥಾಕಥಂಚಿದ್ದೇವಾರ್ಚ್ಯಾ ವಿಧೇಯಾ ಶ್ರದ್ಧಯಾನ್ವಿತೈಃ ॥ 179 ॥

ರೋಗ ಗುಣವಾದ ನಂತರ ಸ್ನಾನ ಮಾಡಿ, ಗುರು ಮತ್ತು ಬ್ರಾಹ್ಮಣರನ್ನು ಪೂಜೆ ಮಾಡಿ 'ಪೂಜಾ ವಿಚ್ಛೇಧದ ದೋಷವು ನನಗೆ ತಾಗದಿರಲಿ' ಎಂದು ಪ್ರಾರ್ಥನೆ ಮಾಡಬೇಕು. ಗುರುಜನರಿಂದ ಆಶೀರ್ವಾದ ಪಡೆದುಕೊಂಡು ಪೂರ್ವೋಕ್ತ ವಿಧಾನದಿಂದ ಇಷ್ಟದೇವನ ಪ್ರಾರ್ಥನೆ ಮಾಡಬೇಕು. ಈ ಸಾಧನೆಯನ್ನು 'ಆತುರೀ ಸಾಧನಾ'ವೆಂದು ಕರೆಯಲಾಗುತ್ತದೆ. ಈ ಐದು ಸಾಧನೆಗಳು ಮಹರ್ಷಿ ನಾರದರ ಮೂಲಕ ಹೇಳಲ್ಪಟ್ಟಿರುತ್ತವೆ.

ಪೂಜೆಯ ಸಕಲ ಸಾಮಗ್ರಿಗಳನ್ನು ಸ್ವಯಂ ಸಂಗ್ರಹಿಸಿ, ತನ್ಮಯನಾಗಿ ತನ್ನ ಇಷ್ಟದೇವತೆಯ ಪೂಜೆ ಮಾಡುವವರಿಗೆ ಸಂಪೂರ್ಣ ಫಲಗಳು ಪ್ರಾಪ್ತವಾಗುತ್ತವೆ. ಅನ್ಯ ವ್ಯಕ್ತಿಗಳ ಮೂಲಕ ಸಂಗ್ರಹಿತ ಸಾಮಗ್ರಿ, ಉಪಚಾರಗಳಿಂದ ಪೂಜೆ ಮಾಡುವುದರಿಂದ ಅರ್ಧ ಫಲ ಮಾತ್ರ ಪ್ರಾಪ್ತವಾಗುತ್ತವೆ. ಕಾರಣ ಪೂಜಾ ಸಾಮಗ್ರಿಗಳನ್ನು ಸ್ವತಃ ತಂದು ಪೂಜೆ ಮಾಡಬೇಕು. ದೇವ ಪೂಜೆ ಮಾಡದಿದ್ದರೆ ನರಕ ಪ್ರಾಪ್ತಿಯಾಗುತ್ತದೆ. ಕಾರಣ ದೇವರ ಬಗೆಗೆ ಶ್ರದ್ಧಾ ಮತ್ತು ಭಕ್ತಿಗಳಿಂದ ದೇವರ ಪೂಜೆಯನ್ನು ಮಾಡಬೇಕು.

[ಈ ಪ್ರಕಾರ ಶ್ರೀಮನ್ ಮಹೀಧರ ವಿರಚಿತ ಮಂತ್ರಮಹೋದಧಿಯ
ಇಪ್ಪತ್ತೆರಡನೆಯ ತರಂಗ ಸಮಾಪ್ತವು]

# || ತ್ರಯೋವಿಂಶ ತರಂಗ ||



## ಸರ್ವ ದೇವತೆಗಳಿಗೆ ಪವಿತ್ರ ಮತ್ತು ದಮನಕ ಅರ್ಪಣ ವಿಧಾನ

ವಕ್ಷ್ಯೇಥೋ ಸರ್ವದೇವಾನಾಂ ಪವಿತ್ರದಮನಾರ್ಪಣಮ್ ।
ಪವಿತ್ರೈಃ ಶ್ರಾವಣೇ ಪೂಜಾ ದಮನಕೈರಪಿ || 1 ||

ಪ್ರತ್ಯಬ್ದಂ ವಿಧಿವತ್ಕುರ್ಯಾದ್ವರ್ಷಾರ್ಚಾ ಫಲಸಿದ್ಧಯೇ ।
ಚೈತ್ರೇ ಶುಕ್ಲಚತುರ್ದಶ್ಯಾಂ ದಮನೈಃ ಪೂಜಯೇದ್ಧರಿಮ್ || 2 ||

ನಾರಾಯಣಂ ತು ದ್ವಾದಶ್ಯಾಮಷ್ಟಮ್ಯಾಂ ಗಿರಿನಂದಿನೀಮ್ ।
ಸಪ್ತಮ್ಯಾಂ ಭಾಸ್ಕರಂ ದೇವಂ ಚತುರ್ಥ್ಯಾಂ ಗಣನಾಯಕಮ್ || 3 ||
ಏವಂ ತತ್ತತ್ತಿಥೌ ತಂ ತಂ ಪವಿತ್ರೈಃ ಶ್ರಾವಣೇರ್ಚಯೇತ್ ।
ಪೂರ್ವಾಹ್ಣೇ ದಮನಾರ್ಚಾಯಾಃ ಕೃತ್ವಾ ನಿತ್ಯಾರ್ಚನಂ ವಿಭೋ || 4 ||

ಗತ್ವಾ ದಮನಕಾರಾಮಂ ಗೃಹೀಣೇಯಾತ್ತಂ ಕ್ರಯಾರ್ಪಣಾತ್ ।
ಉಪವಿಶ್ಯ ಶುಚೌ ದೇಶೇ ಮನುನಾನೇನ ಚಾರ್ಚಯೇತ್ || 5 ||





ಅಶೋಕಾಯ ನಮಸ್ತುಭ್ಯಂ ಕಾಮಸ್ತ್ರೀಶೋಕನಾಶನ ।
ಶೋಕಾರ್ತಿಂ ಹರ ಮೇ ನಿತ್ಯಮಾನಂದಂ ಜನಯಸ್ವ ಮೇ
ಇತಿ ಸಂಪ್ರಾರ್ಥ್ಯ ತತ್ರಾಚ್ಯೈದ್ರತಿಕಾಮ್ ಸ್ವಮಂತ್ರತಃ । || 6 ||

ಈಗ ಎಲ್ಲ ದೇವತೆಗಳಿಗೆ ಪವಿತ್ರ ಮತ್ತು ದಮನಕ ಅರ್ಪಣ ವಿಧಾನವನ್ನು ಹೇಳಲಾಗುತ್ತದೆ. ವರ್ಷ ಪೂರ್ತಿ ಪೂಜೆಯ ಫಲ ಪ್ರಾಪ್ತಿಗಾಗಿ ಶ್ರಾವಣದಲ್ಲಿ ಪವಿತ್ರಿ ಮತ್ತು ಚೈತ್ರ ಮಾಸದಲ್ಲಿ ದಮನಕಗಳನ್ನು ಸಮರ್ಪಿಸಿ ವಿಧಿವತ್ ವಿಷ್ಣು ದೇವನ ಪೂಜೆ ಮಾಡಬೇಕು.

ಚೈತ್ರಶುಕ್ಲ ಚತುರ್ದಶಿಯಂದು ದಮನಕದಿಂದ ಶ್ರೀ ವಿಷ್ಣುವಿನ ಚೈತ್ರ ಶುಕ್ಲ ದ್ವಾದಶಿಯಂದು ನಾರಾಯಣನ, ಅಷ್ಟಮಿಯಂದು ಪಾರ್ವತಿಯ, ಸಪ್ತಮಿಯಂದು ಸೂರ್ಯನ ಮತ್ತು ಚತುರ್ಥಿಯಂದು ಶ್ರೀ ಗಣೇಶನ ಪೂಜೆ ಮಾಡಬೇಕು. ಈ ಪ್ರಕಾರ ಶ್ರಾವಣದ ಆಯಾ ತಿಥಿಗಳಂದು ಪವಿತ್ರಕದಿಂದ ಆಯಾ ದೇವತೆಗಳನ್ನು ಪೂಜೆ ಮಾಡಬೇಕು.

ದಮನಕ ಪೂಜೆಯ ಹಿಂದಿನ ದಿವಸ ತನ್ನ ಇಷ್ಟ ದೇವತೆಯನ್ನು ಪೂಜೆ ಮಾಡಿ ದಮನಕ (ಅಶೋಕ)ದ ಉಪವನಕ್ಕೆ ಹೋಗಿ ಬೆಲೆ ಕೊಟ್ಟು ದಮನಕವನ್ನು ಖರೀದಿಸಬೇಕು. ನಂತರ ಶುದ್ಧವಾದ ಸ್ಥಾನದಲ್ಲಿ ಕುಳಿತುಕೊಂಡು 'ಅಶೋಕಾಯ ನಮಸ್ತುಭ್ಯಂ....ಜನವಶ್ಯಮೆ' ಪರ್ಯಂತ ಶ್ಲೋಕವನ್ನು ಓದುತ್ತ ಪ್ರಾರ್ಥನೆ ಮಾಡಿ ಅದರ ಮೇಲೆ ರತಿ ಮತ್ತು ಕಾಮರನ್ನು ಅವರವರ ಮಂತ್ರಗಳಿಂದ ಪೂಜಿಸಬೇಕು.

### ರತಿಕಾಮಮಂತ್ರ ಕಥನ

ಕಾಮದೇವಾಯ ಕಾಮಾದಿ ಹೃದಂತೋಷ್ಟಾಕ್ಷರೋ ಮನುಃ || 7 ||
ಕಾಮಾಸ್ಯ ಛಾಯಾರತ್ಯೈ ಹೃತ್ವಂಚಾರ್ಣಸ್ತು ರತೇರ್ಮನುಃ ।
ಇಷ್ಟದೇವಸ್ಯ ಪೂಜಾರ್ಥಂ ನೇಷ್ಯಾಮಿ ತ್ವಾಮಿತಿ ಬ್ರುವನ್ || 8 ||
ಉತ್ಪಾಟ್ಯ ಪಂಚಗವ್ಯೇನಾಭಿಷಿಚ್ಯ ಕ್ಷಾಲಯೇಜ್ಜಲೈಃ ।
ಗಂಧಾದಿಭಿರ್ಹ್ಯದಾಭ್ಯರ್ಚ್ಯ ಛಾದಯೇತ್ ಪೀತವಾಸಸಾ || 9 ||
ನಿಧಾಯ ವಂಶಪಾತ್ರೆ ತಂ ಗೀತವಾದಿತ್ರನಿಃ ಸ್ವನೈಃ ।
ಗೃಹಮಾನೀಯೋ ತದ್ದೇಶೆ ಸ್ಥಾಪಯೇದ್ ದೇವತಾಂ ಸ್ಮರನ್ || 10 ||
ತತೋ ದೇವಸ್ಯ ಪುರತಃ ಕೃತ್ವಾಷ್ಟದಲಮಂಬುಜಮ್ ।
ಸಿತಕೃಷ್ಣರಕ್ತಪೀತವರ್ಣೈಃ ಸಂಪೂರಯೇತ್ತು ತಮ್ || 11 ||

ಪ್ರಾರಂಭದಲ್ಲಿ ಕಾಮ (ಕ್ಲೀಂ) ನಂತರ ಕಾಮದೇವಾಯ, ಕೊನೆಯಲ್ಲಿ ಹೃದಯ

(ನಮಃ) ಸೇರಿಸುವುದರಿಂದ ಎಂಟು ಅಕ್ಷರಗಳ ಕಾಮದೇವ ಮಂತ್ರವು ರಚನೆಯಾಗುತ್ತದೆ. ಮಾಯಾ (ಹ್ರೀಂ) ನಂತರ ರತ್ಯೈ ಮತ್ತು ಕೊನೆಯಲ್ಲಿ ಹೃದಯ (ನಮಃ) ಸೇರಿಸುವುದರಿಂದ ಐದು ಅಕ್ಷರಗಳ ರತಿ ಮಂತ್ರವು ಸಿದ್ಧವಾಗುತ್ತದೆ.

**ಕಾಮದೇವ ಮಂತ್ರ :** ಕ್ಲೀಂ ಕಾಮದೇವಾಯ ನಮಃ

**ರತಿ ಮಂತ್ರ :** ಹ್ರೀಂ ರತ್ಯೈ ನಮಃ

ಇದರ ನಂತರ 'ಇಷ್ಟದೇವಸ್ಯಪೂಜಾರ್ಥ ತ್ವಾಂ ನೇಷ್ಯಾಮಿ' ಎಂದು ಹೇಳಿ ಕಿತ್ತು ಪಂಚಗವ್ಯದಿಂದ ಅಭಿಷೇಕ ಮಾಡಿ ನೀರಿನಿಂದ ಪ್ರಕ್ಷಾಳನ ಮಾಡಬೇಕು. ನಂತರ ಗಂಧಾದಿಗಳಿಂದ ಪೂಜೆ ಮಾಡಿ ಹಳದಿ ಬಟ್ಟೆಯನ್ನು ಸುತ್ತಿ ಬಿದಿರಿನ ಬುಟ್ಟಿಯಲ್ಲಿ ಸ್ಥಾಪನೆ ಮಾಡಿ, ಗೀತ-ವಾದ್ಯ ಸಂಗೀತದೊಂದಿಗೆ ಮನೆಗೆ ತೆಗೆದುಕೊಂಡು ಬಂದು ಇಷ್ಟದೇವನ ಸ್ಮರಣೆ ಮಾಡುತ್ತ ಪೂಜಾಸ್ಥಾನದಲ್ಲಿ ಸ್ಥಾಪನೆ ಮಾಡಬೇಕು.

**ಭೂಪುರಂ ತದ್‌ಬಹಿಃ ಕೃತ್ವಾ ಪೀತವರ್ಣೇನ ಪೂರಯೇತ್ ।**
**ಸಿತರಕ್ತಪೀತವರ್ಣಾ ತದ್‌ಬಹಿರ್ವರ್ತುಲತ್ರಯಮ್ ॥ 12 ॥**

**ರಕ್ತವರ್ಣೇನ ತದ್‌ಬಾಹಯೇ ವಿದಧ್ಯಾಚ್ಚತುರಸ್ರಕಮ್ ।**
**ಏಂ ವಿರಚಿತೆ ರಮ್ಯೆ ಮಂಡಲೆ ಸಾರ್ವಕಾಮಿಕೆ ॥ 13 ॥**

**ಯದಿ ವಾ ಸರ್ವತೋಭದ್ರೆ ಮುಂಚೇದ್ದಮನಭಾಜನಮ್ ।**
**ಸಾಯಂಕಾಲೀನ ಪೂಜಾಂತೆ ಕುರ್ಯಾತ್ತ್‌ಸ್ಯಾಧಿವಾಸನಮ್ ॥ 14 ॥**

**ತಾರಾಧ್ಯಾಭ್ಯಾಂ ಕಾಮರತಿ ಮಂತ್ರಾಭ್ಯಾಂ ತತ್ರ ತೌ ಯಜೇತ್ ।**
**ದಲೇಷ್ವಷ್ಟಸು ರತ್ಯಾಧ್ಯಾನಷ್ಟೌ ಕಾಮಾನ್ಸ್ವಥಗ್ವಿಧೈಃ ॥ 15 ॥**

**ದಮನ ಪೂಜನ ಯಂತ್ರ**



ಇದರ ನಂತರ ಇಷ್ಟ ದೇವತೆಯ ಎದುರಿಗೆ ಅಷ್ಟದಳ ಕಮಲವನ್ನು ಮಾಡಿ ಶ್ವೇತ, ಕಪ್ಪು, ರಕ್ತ ಮತ್ತು ಹಳದಿ ವರ್ಣಗಳಿಂದ ಅದನ್ನು ಅಲಂಕರಿಸಬೇಕು.ನಂತರ ಭೂಪುರದವನ್ನು ರಚಿಸಿ ಅದನ್ನು ಹಳದಿ ವರ್ಣದಿಂದ ತುಂಬಬೇಕು. ಪುನಃ ಅದರ ಮೇಲೆ ಬಿಳಿ, ಕೆಂಪು ಮತ್ತು ಹಳದಿ ಬಣ್ಣದ ಮೂರು ವೃತ್ತಗಳನ್ನು ನಿರ್ಮಿಸಬೇಕು. ನಂತರ ಅದರ ಹೊರಗೆ ಚತುರಸ್ರವನ್ನು ಬರೆದು ಕೆಂಪು ಬಣ್ಣದಿಂದ ತುಂಬಬೇಕು.





ಈ ಪ್ರಕಾರ ನಿರ್ಮಿತ ಸುಂದರವಾದ ಸಾರ್ವಕಾಮಿಕ ಮಂಡಲದ ಮೇಲೆ ಅಥವಾ ಸರ್ವತೋಭದ್ರ ಮಂಡಲದ ಮೇಲೆ ದಮನಕದ ಪೆಟ್ಟಿಗೆಯನ್ನು ಇಡಬೇಕು.

ಸಾಯಂಕಾಲದ ಪೂಜೆಯ ನಂತರ ದಮಕನದ ಅಧಿವಾಸನ ಮಾಡಬೇಕು. ಪ್ರಣವ ಸಹಿತ ಕಾಮಮಂತ್ರ (ಓಂ ಕ್ಲೀಂ ಕಾಮದೇವಾಯ ನಮಃ) ಮತ್ತು ರತಿಮಂತ್ರ (ಹ್ರೀಂ ರತ್ಯೈ ನಮಃ)ದಿಂದ ಇಬ್ಬರನ್ನು ಪೂಜೆ ಮಾಡಿ ರತಿಸಹಿತ ಕಾಮದೇವನ ಎಂಟು ಹೆಸರುಗಳ ಮಂತ್ರದಿಂದ ಅಷ್ಟದಳಗಳಲ್ಲಿ ಬೇರೆ ಬೇರೆಯಾಗಿ ಪೂಜೆ ಮಾಡಬೇಕು.

**ಕಾಮೋ ಭಸ್ಮಶರೀರಶ್ಚ ತತೋನಂಗಸ್ಯ ಮನ್ಮಥಃ ।**
**ವಸಂತಸಖಿಸಂಜ್ಞಶ್ಚ ಸ್ಮರ ಇಕ್ಷುಧನುರ್ಧರಃ ॥ 16 ॥**

**ಪುಷ್ಪಬಾಣ ಇಮೆ ಕಾಮಾಸ್ತಾನ ಯಜೇನ್ನಾಮಭಿರ್ನಿಜೈಃ ।**
**ಪ್ರಣವಾನಂಗಬೀಜಾಧ್ಯೈಶ್ಚತುರ್ಥಿ ಹೃದಯಾನ್ವಿತೈಃ ॥ 17 ॥**

**ಕರ್ಪೂರರೋಚನನ್ಯಂ ಕುನಾಭಿಜಾಗುರುಂಕುಂಕುಮೈಃ ।**
**ಧಾತ್ರಿಫಲೈಶ್ಚಂದನೇನ ಪುಷ್ಪೈಃ ಕಾಮಾನ್ ಕ್ರಮಾದ್ಯಜೇತ್ ॥ 18 ॥**

**ದಮನಂ ಗಂಧಪುಷ್ಪಾದ್ಯೈರಭಿಪೂಜ್ಯಾಭಿಮಂತ್ರಯೇತ್ ।**
**ಅಷ್ಟೋತ್ತರಶತಂ ಕಾಮಗಾಯತ್ರ್ಯಾ ಮಂತ್ರವಿತ್ತಮಃ ॥ 19 ॥**

ಕಾಮ, ಭಸ್ಮಶರೀರ, ಅನಂಗ, ಮನ್ಮಥ, ವಸಂತಸಖಾ, ಸಮರ, ಇಕ್ಷುಧನುರ್ಧರ ಮತ್ತು ಪುಷ್ಪಬಾಣ ಇವು ಕಾಮದೇವನ ಎಂಟು ಹೆಸರುಗಳಾಗಿವೆ.

ಈ ಹೆಸರುಗಳ ಚತುರ್ಥ್ಯಂತ ರೂಪಗಳ ಪ್ರಾರಂಭದಲ್ಲಿ ಪ್ರಣವ ಸಹಿತ ಕಾಮಬೀಜ ಮತ್ತು ಕೊನೆಯಲ್ಲಿ ಹೃದಯ (ನಮಃ) ಸೇರಿಸಿ ನಾಮ ಮಂತ್ರಗಳಿಂದ ಕರ್ಪೂರ, ಗೋರೋಚನ, ಕಸ್ತೂರಿ, ಅಗರ, ಕುಂಕುಮ, ನೆಲ್ಲಿ, ಚಂದನ ಮತ್ತು ಪುಷ್ಪಗಳಿಂದ ಎಂಟು ಕಾಮದೇವರನ್ನು ಪೂಜೆ ಮಾಡಬೇಕು. ನಂತರ ಗಂಧ-ಪುಷ್ಪಾದಿಗಳ ಮೂಲಕ ದಮನಕವನ್ನು ಪೂಜೆ ಮಾಡಿ ಮಂತ್ರವೇತ್ತರಾದ ಸಾಧಕರು ಕಾಮಗಾಯತ್ರಿ ಮಂತ್ರದಿಂದ ಅದನ್ನು 108 ಬಾರಿ ಅಭಿಮಂತ್ರಿಸಬೇಕು.

ಮನಃ ಪ್ರಗ್ರಹರೂಪೇಣ ಬುದ್ಧಿಃ ಸಾರಥಿರೂಪತಃ

ಸರ್ವಮನ್ಯತ್ತಥಾ ಕ್ಲೃಪ್ತಂ ತವೋಪಕರಣಾತ್ಮನಾ । ॥ 149 ॥
ಶ್ಲೋಕಾನೇತಾನ ಪಠಿತ್ವಾ ತು ಮೂಲಮಂತ್ರಮನನ್ಯಧೀಃ

ಶಬ್ದರೂಪಿ ವಾದ್ಯದೊಂದಿಗೆ ವಿವಿಧ ಧ್ವನಿ ರೂಪದ ಗೀತೆ, ನವೀನ ವಿಕಸಿತ ॥ 150 ॥ ಪದ್ಮದ ರೂಪದ ಛತ್ರ, ಸುಷುಮ್ನಾರೂಪದ ಧ್ವಜ, ನಿನಗೆ ಮತ್ತು ನನ್ನ ಪಂಚ ಪ್ರಾಣಗಳನ್ನು ದೇವರೂಪದಿಂದ ನಿನಗೆ ಅರ್ಪಿಸುತ್ತೇನೆ.

ಅಹಂಕಾರ ರೂಪದ ಗಜದ ಮನೋವೇಗ ರೂಪದ ರಥಕ್ಕೆ ಇಂದ್ರಿಯ ರೂಪಿ ಕುದುರೆಗಳು ಕಟ್ಟಲ್ಪಟ್ಟಿದ್ದು, ಶಬ್ದಾದಿ ರೂಪದ ಮಾರ್ಗದಲ್ಲಿ ಚಲಿಸಬೇಕಾಗಿದ್ದು, ಅದಕ್ಕೆ ಮನಸ್ಸಿನ ರೂಪದ ಲಗಾಮು ಮತ್ತು ಬುದ್ಧಿರೂಪದ ಸಾರಥಿ ಇರುತ್ತಾರೆ. ಅವುಗಳನ್ನು ನಿನಗೆ ಸಮರ್ಪಿಸುತ್ತಿದ್ದೇನೆ. ಇದಲ್ಲದೆ, ನನ್ನ ಸರ್ವಸ್ವವನ್ನು ಉಪಕರಣದ ರೂಪದಲ್ಲಿ ನಾನು ನಿನಗೆ ಸಮರ್ಪಿಸುತ್ತೇನೆ.

**ಯಥಾಶಕ್ತಿ ಜಪಿತ್ವಾ ತಂ ಮಂತ್ರೇಣ ವಿನಿವೇದಯೇತ್ ।**
**ಕ್ಷಿಪನ್ನರ್ಘಸ್ಯ ಪಾನೀಯಂ ದೇವತಾ ದಕ್ಷಿಣೆ ಕರೆ** ॥ 151 ॥

**ಗುಹ್ಯಾತಿಗುಹ್ಯಗೋಪ್ತಾ ತ್ವಂ ಗೃಹಾಣಾಸ್ಮತ್ಕೃತಂ ಜಪಮ್ ।**
**ಸಿದ್ಧಿರ್ಭವತು ಮೇ ದೇವ ತ್ವತ್ಪ್ರಸಾದಾತ್ವಯಿ ಸ್ಥಿತಿಃ** ॥ 152 ॥

**ಕೀರ್ತಿತಃ ಶ್ಲೋಕರೂಪೋಯಂ ಮಂತ್ರೋಜಪನಿವೇದನೆ ।**
**ದತ್ವಾಪರಾಂಮುಖಂ ಚಾರ್ಘ್ಯ ಪುಷ್ಪೈಃ ಶಂಖಂ ಪ್ರಪೂಜಯೇತ್** ॥153॥
**ದಂಡವತ್ಪ್ರಣಿಪತ್ಯೇಶಂ ದೇವೆ ಕುರ್ಯಾತ್ಪ್ರದಕ್ಷಿಣಾಃ ।**

ಈ ಪ್ರಕಾರ ಶ್ಲೋಕಗಳನ್ನು ಹೇಳುತ್ತ ಸ್ತುತಿ ಮಾಡಿದ ನಂತರ ಸಾಧಕರು ಯಥಾಶಕ್ತಿ ಜಪ ಮಾಡಿ ದೇವತೆಯ ಬಲಗೈಯಲ್ಲಿ ವಿಶೇಷಾರ್ಘ್ಯ ಜಲವನ್ನು ಕೊಟ್ಟು 'ಗುಹ್ಯಾತಿ...........ತ್ವಯಿಸ್ಥಿತಿ' ಶ್ಲೋಕವನ್ನು ಪಠಿಸುತ್ತ ಜಲವನ್ನು ನಿವೇದನೆ ಮಾಡಬೇಕು. ನಂತರ ಹಿಂಭಾಗದಲ್ಲಿ ಅರ್ಘ್ಯವನ್ನು ಕೊಟ್ಟು ಶಂಖವನ್ನು ಪೂಜೆ ಮಾಡಬೇಕು.

**ಅಜೇಶ ಶಕ್ತಿ ಗಣಪಭಾಸ್ಕರಾಣಾಂ ಕ್ರಮಾದಿಮಾಃ** ॥ 154 ॥
**ವೇದಾರ್ಧಚಂದ್ರವಹ್ನ್ಯಹ್ಯಾದ್ರಿ ಸಂಖ್ಯಾಃ ಸ್ಯುಃ ಸರ್ವಸಿದ್ಧಯೆ ।**
**ಸ್ತುತ್ವಾ ಬ್ರಹ್ಮಾರ್ಪಣಾಖ್ಯೇನ ಮನುನಾತ್ಮಾನರ್ಪಯೇತ್** ॥ 155 ॥





ಇಷ್ಟ ದೇವತೆಗೆ ದಂಡವತ್ ಪ್ರಣಾಮ ಮಾಡಿ ಪ್ರದಕ್ಷಿಣೆ ಹಾಕಬೇಕು. ವಿಷ್ಣುವಿಗೆ ನಾಲ್ಕು, ಶಿವನಿಗೆ ಅರ್ಧ, ಶಕ್ತಿಗೆ ಒಂದು ಗಣೇಶನಿಗೆ ಮೂರು ಮತ್ತು ಸೂರ್ಯನಾರಾಯಣನಿಗೆ ಏಳು ಪ್ರದಕ್ಷಿಣೆಗಳನ್ನು ಸರ್ವಸಿದ್ಧಿ ಲಾಭಾರ್ಥ ಹಾಕಬೇಕು.

## ಬ್ರಹ್ಮಾರ್ಪಣ ಮಂತ್ರ

ಇತಃ ಪೂರ್ವ ಪ್ರಾಣಬುದ್ಧಿ ದೇಹಧರ್ಮಾಧಿಕಾರತಃ ।
ಜಾಗ್ರತ್ಸ್ವಪ್ನಸುಷುಪ್ತ್ಯಂತೇವಸ್ಥಾಸು ಮನಸಾ ವದೇತ್ ॥ 156 ॥

ವಾಚಾ ಚ ಹಸ್ತಾಭ್ಯಾಂ ಪದ್ಭ್ಯಾಮುದರೇಣ ಶಿಶ್ನತಸ್ತಥಃ ।
ಮೇಷೋನಂತಾನ್ವಿತೊ ಯತ್ಸ್ಮೃತಂ ಯದುಕ್ತಂ ಚಯತ್ಕೃತಮ್ ॥ 157 ॥

ತತ್ಸರ್ವ ಪ್ರೋಚ್ಯ ಬ್ರಹ್ಮಾರ್ಪಣಂ ಭವತ್ವಗ್ನಿವಲ್ಲಭಾ ।
ಮಾಂ ಮದೀಯಂ ಚ ಸಕಲಂ ಹರಯೆ ತೆ ಸಮರ್ಪಯೆ ॥ 158 ॥

ತಾರಸ್ತತ್ಸದಿತಿ ಪ್ರೋಕ್ತೊ ಬ್ರಹ್ಮಾರ್ಪಣಮನುರ್ಬುಧೈಃ ।
ಪ್ರಣವಾದಿರ್ದ್ವಯಶೀತ್ಯರ್ಣೊ ದೇವತಾತ್ಮ ಸಮರ್ಪಣೆ ॥ 159 ॥

ಪ್ರದಕ್ಷಿಣೆ ಹಾಕಿದ ನಂತರ ಸ್ತುತಿ ಮಾಡಿ ಬ್ರಹ್ಮಾರ್ಪಣ ಮಂತ್ರದಿಂದ ಆತ್ಮ ನಿವೇದನೆ ಮಾಡಬೇಕು. 'ಇತಃ ಪೂರ್ವ ಪ್ರಾಣಬುದ್ಧಿ ದೇಹಧರ್ಮಾಧಿಕಾರತಃ ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥಾಸು ಮನಸಾ ವಾಚಾ ಹಸ್ತಾಭ್ಯಾಂ ಪದಭ್ಯಾಮುದರೇಣ ಶಿಶ್ನ' ದ ನಂತರ ಅನಂತಾನ್ವಿತ (ಎ) ದಿಂದ ಯುಕ್ತ ಮೇಷ (ನ) ನಂತರ 'ಯಂ ಯತ್ಸ್ಮೃತಂ ಯದುಕ್ತಂ ಯತ್ಕೃತಂ ತತ್ಸರ್ವ ಬ್ರಹ್ಮಾರ್ಪಣಂ ಭವತು ಸ್ವಾಹಾ ನಂತರ ಮಾಂ ಮದೀಯಂ ಚ ಸಕಲಂ ಹರಯೇ ತೆ ಸಮರ್ಪಯೆ' ಮತ್ತು ಕೊನೆಯಲ್ಲಿ ತಾರ (ಓಂ) ಮತ್ತು ತತ್ಸತ್, ಪ್ರಾರಂಭದಲ್ಲಿ ಪ್ರಣವ ಸೇರಿಸುವುದರಿಂದ 82 ಅಕ್ಷರಗಳ ಬ್ರಹ್ಮಾರ್ಪಣ ಮಂತ್ರವನ್ನು ದೇವತೆಗೆ ಆತ್ಮಸಮರ್ಪಣೆ ಮಾಡುವುದಕ್ಕಾಗಿ ಹೇಳಲಾಗಿದೆ.

'ಓಂ ಇತಃ ಪೂರ್ವ ಪ್ರಾಣಬುದ್ಧಿ ದೇಹ ಧರ್ಮಾಧಿಕಾರತೋ ಜಾಗತ್ಸ್ವಪ್ನಸುಷುಪ್ತ್ಯವಸ್ಥಾಸು ಮನಸಾ ವಾಚಾ ಹಸ್ತಾಭ್ಯಾಂ ಪದ್ಭ್ಯಾಮುದರೇಣ ಶಿಶ್ನೇನ ಯತ್ಸ್ಮೃತಂ ಯದುಕ್ತಂ ಯತ್ಕೃತಂ ತತ್ಸರ್ವ ಬ್ರಹ್ಮಾರ್ಪಣಂ ಭವತು ಸ್ವಾಹಾ ಮಾಂ ಮದೀಯಂ ಚ ಸಕಲಂ ಹರಯೆ ತೆ ಸಮರ್ಪಯೆ ಓಂ ತತ್ಸತ್'

ಸಂಹಾರಮುದ್ರಯಾ ದೇವಂ ಸಂಹರೇದ್ಧೃದಯೆ ನಿಜೆ ।
ಅನ್ಯಸ್ಮಿಂದೈವತೆ ಕಾರ್ಯ ಊಹೋ ಹರಿಪದೆಬುಧೈಃ ॥ 160 ॥

**ಹುತ್ವಾ ವ್ಯಸ್ತ ಸಮಸ್ತಾಭಿರಾಹುತೀನಾಂ ಚತುಷ್ಟಯಮ್ ।**
**ಅನ್ನೈರ್ಮೂಲೇನ ಜುಹುಯಾತ್ಪಂಚವಿಂಶತಿ ಸಂಖ್ಯಯಾ ॥ 140 ॥**

ಮುದ್ರೆಗಳನ್ನು ಪ್ರದರ್ಶಿಸಿದ ನಂತರ ಪರದೆಯನ್ನು ಎಳೆದು "ಬ್ರಹೇಶಾದ್ಯೈ ಪರಿತ ಊರುಭಿಃ ಸೃಪವಿಷ್ಟೈ ಸಮೇತೈರ್ಲಕ್ಷ್ಮಾಶಿಂಜದ್ವಲಯಕರಯಾ ಸಾದರಂ ವಿಜ್ಞಮಾನ ಲೀಲಾನರ್ಮಪ್ರಹಸನಮುಖ್ಯೈರ್ವ್ಯಾಪ್ನುವನ್ಪಂಕ್ತಿ ಮಧ್ಯಂ ಭುಕ್ತ್ವಾ ಪಾತ್ರೇಕನಕಘಾಟಿತೆ ಷಡ್ರಸಂ ಶ್ರೀ ರಮೇಶಃ 1. ಶಾಲೇರ್ಭಕ್ತಂ ಸುಪಕ್ವಂ ಶಿಶಿರರುಚಿಂ ಪಾಯಸಾಪೂಪಸೂಪಂ ಲಕೇಹ್ಯಂ ಪೇಯಂ ಚ ಚೋಷ್ಯಂ ಸಿತಮಮೃತಫಲಂ ಪೂರಿಕಾಧ್ಯಂ ಸುಖಾಧ್ಯಮ್ ಆಜ್ಯಂ ಪ್ರಾಜ್ಯಂ ಸಭೋಜ್ಯಂ ನಯನರುಚಿಕರಂ ರಜಿಕೈಲಾಮರೀಚ ಸ್ವಾದೀಯಃ ಶಾಕರಾಜಿ ಪರಿಕರಮಮೃತಾಹಾರ ಜೋಷಂಜುಷಸ್ವ'। ಇದರ ನಂತರ ಪರದೆಯನ್ನು ಮೇಲಕ್ಕೆತ್ತಿ 'ಸಮಸ್ತ ದೇವ ದೇವೇಶ ಸರ್ವತೃಪ್ತಿಕರಂ ಪರಮ್ । ಅಖಂಡಾನಂದ ಸಂಪೂರ್ಣ ಗೃಹಾಣ ಜಲಮುತ್ತಮಮ್" ಈ ಶ್ಲೋಕದಿಂದ ಆಚಮನಕ್ಕಾಗಿ ನೀರು ಕೊಡಬೇಕು.

ವೇದಿಯ ಮೇಲೆ ಅಗ್ನಿಯನ್ನು ಸ್ಥಾಪಿಸಿ ವೈಶ್ವದೇವವನ್ನು ಮಾಡಬೇಕು. ಮೂಲಮಂತ್ರದಿಂದ ಅಗ್ನಿಯನ್ನು ನೋಡುತ್ತ ಅಸ್ತ್ರ (ಫಟ್) ಮಂತ್ರದಿಂದ ಪ್ರೋಕ್ಷಣ ಮತ್ತು ದರ್ಭೆಯಿಂದ ತಾಡನ ಮಾಡಬೇಕು. 'ಹುಂ' ಮಂತ್ರದಿಂದ ಸೇಚನ ಮಾಡಿ ಪೂರ್ವವತ್ ಅಲ್ಲಿ ಅಗ್ನಿಯನ್ನು ಸ್ಥಾಪನೆ ಮಾಡಬೇಕು.

ವೈಶ್ವಾನರ ಮಂತ್ರದಿಂದ ಅವುಗಳನ್ನು ಪೂಜಿಸಬೇಕು. ನಂತರ ಇಷ್ಟದೇವನನ್ನು ಆವಾಹನೆ ಮಾಡಿ ಗಂಧ ಮತ್ತು ಪುಷ್ಪಗಳಿಂದ ಪೂಜೆ ಮಾಡಬೇಕು. ನಂತರ ಮಹಾವ್ಯಾಹೃತಿಯಿಂದ ಹೋಮ ಮಾಡಿ ಬೇರೆ ಬೇರೆಯಾಗಿ ಮತ್ತು ಸಮಸ್ತ (ಜೊತೆಯಾಗಿ) ವ್ಯಾಹೃತಿಗಳಿಂದ ನಾಲ್ಕು ಆಹುತಿಗಳನ್ನು ಕೊಡಬೇಕು. ಇದರ ನಂತರ ಮೂಲಮಂತ್ರದಿಂದ ಅನ್ನದ 25 ಆಹುತಿಗಳನ್ನು ಕೊಡಬೇಕು.

**ಪುನರ್ವ್ಯಾಹೃತಿಭಿರ್ಹುತ್ವಾ ಮೂರ್ತಾ ದೇವಂ ನಿಯೋಜಯೇತ್ ।**
**ವಹ್ನಿಂ ವಿಸೃಜ್ಯ ದೇವಾಯ ದಧ್ಯಾದಾಚಮನೋದಕಮ್ ॥ 141 ॥**

**ತೇಜಃ ಸಂಯೋಜ್ಯ ದೇವಸ್ಯ ನಿರ್ಗತಂ ದೇವವಕ್ತ್ರತಃ ।**
**ನೈವೇಧ್ಯಾಂಶಂ ತದುಚ್ಛಿಷ್ಟಭೋಜಿನೆ ವಿನಿವೇದಯೇತ್ ॥ 142 ॥**

**ವಿಷ್ವಕ್ಸೇನೋ ಹರೇರುಕ್ತಶ್ಚಂಡೇಶ್ವರ ಉಮಾಪತೇಃ ।**
**ವಿಕರ್ತನಸ್ಯ ಚಂಡಾಂಶುರ್ವಕ್ರತುಂಡೊ ಗಣೇಶಿತುಃ ॥ 143 ॥**





**ಶಕ್ತೇರುಚ್ಛಿಷ್ಟಚಾಂಡಾಲಿ ಸ್ಮೃತಾ ಉಚ್ಛಿಷ್ಟಭೋಜಿನಃ ।**

ನಂತರ ವ್ಯಾಹೃತಿಗಳಿಂದ ಹೋಮ ಮಾಡಿ ಇಷ್ಟದೇವನ ಮೂರ್ತಿಯಲ್ಲಿ ಇಷ್ಟದೇವನನ್ನು ನಿಯೋಜಿತಗೊಳಿಸಬೇಕು. ನಂತರ ಅಗ್ನಿಯಲ್ಲಿ ವಿಸರ್ಜನ ಮಾಡಿ ಇಷ್ಟದೇವನಿಗೆ ಆಚಮನಕ್ಕಾಗಿ ನೀರು ಕೊಡಬೇಕು.

ಇಷ್ಟದೇವನ ಮುಖದಿಂದ ಹೊರಟ ತೇಜವನ್ನು ನೈವೇದ್ಯದಲ್ಲಿ ಸಂಯೋಜಿಸಿ ಅದರ ಸ್ವಲ್ಪ ಭಾಗವನ್ನು ಉಚ್ಛಿಷ್ಟ ಭೋಜಿ (ತಿನ್ನುವವರು) ಗಳಿಗಾಗಿ ಕೊಡಬೇಕು.

ಆಯಾ ದೇವತೆಗಳ ಉಚ್ಛಿಷ್ಟ (ಎಂಜಲು) ಭೋಜಿಗಳು ಈ ರೀತಿ ಇರುತ್ತಾರೆ. ವಿಷ್ಣುವಿಗೆ ವಿಷ್ವಕ್ಸೇನ, ಶಿವನ ಚಂಡೇಶ್ವರ, ರವಿಯ ಚಂಡಾಂಶು, ಗಣೇಶನಿಗೆ ವಕ್ರತುಂಡ ಮತ್ತು ಶಕ್ತಿಗೆ ಉಚ್ಛಿಷ್ಟಚಾಂಡಾಲಿಗಳು ಉಚ್ಛಿಷ್ಟ ಭೋಜಿಗಳಾಗಿರುವರು.

**ತತೋ ಲವಣಮುಕ್ತಾರ್ಯ ಕುರ್ಯಾದಾರಾರ್ತಿಕಂ ಸುಧಿಃ ॥ 144 ॥**
**ಅಥೋ ನಿವೇದ್ಯ ತಾಂಬೂಲಂ ದರ್ಶಯೇಚ್ಛತ್ರಚಾಮರೆ ।**
**ಪಠೇದ್ ದೇವಮನ ಭುತ್ವಾ ಸಾದ್ಧಶ್ಲೋಕಚತುಷ್ಟಯಮ್ ॥ 145 ॥**

**ಬುದ್ಧಿಃ ಸವಾಸನಾಕ್ಲ್ಪಪ್ತಾ ದರ್ಪಣಂ ಮಂಗಲಾನಿ ಚ ।**
**ಮನೋವೃತ್ತಿರ್ವಿಇತ್ರಾ ತೆ ನೃತ್ಯರೂಪೇಣ ಕಲ್ಪಿತಾ ॥ 146 ॥**

**ಧ್ವನಯೊ ಗೀತರೂಪೇಣ ಶಬ್ದವಾದ್ಯ ಪ್ರಭೇದತಃ ।**
**ಛತ್ರಾಣೆ ನವಪದ್ಮಾನಿ ಕಲ್ಪಿತಾನಿಮಯಾ ಪ್ರಭೋ ॥ 147 ॥**

ಇದರ ನಂತರ ಸಾಧಕರು ಆರತಿ ಮಾಡಬೇಕು. ನಂತರ ತಾಂಬೂಲವನ್ನು ಕೊಟ್ಟು ಛತ್ರ ಮತ್ತು ಚಾಮರಗಳನ್ನು ತೋರಿಸಬೇಕು. ಮತ್ತು ತನ್ಮಯರಾಗಿ, 'ಬುದ್ಧಿ ಸವಾಸನಾ.....ತವೋ ಪಕರಣಾತ್ಮನಾ' ಪರ್ಯಂತ ನಾಲ್ಕು ಶ್ಲೋಕಗಳನ್ನು ಪಠಿಸುತ್ತ ದೇವಾಧಿದೇವನ ಸ್ತುತಿ ಮಾಡಬೇಕು.

ಹೇ ಪ್ರಭೋ! ನಾನು ಬುದ್ಧಿರೂಪ ದರ್ಪಣ ಮತ್ತು ವಾಸನಾರೂಪಿ ಮಂಗಳ ಮತ್ತು ವಿಚಿತ್ರ ಮನೋವೃತ್ತಿಗಳನ್ನು ನೃತ್ಯರೂಪದಲ್ಲಿ ನಾನು ನಿಮಗೆ ಸಮರ್ಪಿಸುತ್ತೇನ.

**ಸುಷುಮ್ನಾ ಧ್ವಜರೂಪೇಣ ಪ್ರಾಣಾಧ್ಯಾಶ್ಚಾಮರಾತ್ಮನಾ ।**
**ಅಹಂಕಾರೊ ಗಜತ್ವೇನ ವೇಗಃ ಕ್ಲೃಪ್ತೋರಥಾತ್ಮನಾ ॥ 148 ॥**

**ಇಂದ್ರಿಯಾಣ್ಯಶ್ವರೂಪಾಣಿ ಶಬ್ದಾದಿರಥವರ್ತ್ಮನಾ ।**

ನಂತರ ಚಕ್ರಮುದ್ರಾ ಪ್ರದರ್ಶಿಸುತ್ತ ಮೂಲಮಂತ್ರದಿಂದ ಅಭಿಮಂತ್ರಿಸಿ ವಿಶೇಷಾರ್ಘ್ಯ ಜಲದಿಂದ ಅಭಿಮಂತ್ರಿಸಿ ವಾಯುಬೀಜ (ಯಂ)ದಿಂದ ಹನ್ನೆರಡು ಬಾರಿ ಜಲದಿಂದ ಪುನಃ ಆ ನೈವೇದ್ಯದ ಮೇಲೆ ಪ್ರೋಕ್ಷಣೆ ಮಾಡಬೇಕು. ಈ ಪ್ರಕಾರ ನೈವೇದ್ಯದ ದೋಷಗಳನ್ನು ನಿವಾರಿಸಿ ಬಲಗೈಯ ಅಂಗೈ ಮೇಲೆ ಅಗ್ನಿಬೀಜ (ರಂ) ದ ಧ್ಯಾನ ಮಾಡಬೇಕು.

ನಂತರ ಆ ಕರತಲದಲ್ಲಿ ತನ್ನ ಎಡಗೈಯನ್ನು ಇಡಬೇಕು. ಈ ಮುದ್ರೆಯನ್ನು ತೋರಿಸಿ ಅದರಿಂದ ಉತ್ಪನ್ನ ಅಗ್ನಿದ್ವಾರಾ ನೈವೇದ್ಯದ ಸಕಲ ದೋಷಗಳನ್ನು ದಹನ ಮಾಡಿ, ನಂತರ ಎಡಗೈ ಅಂಗೈಯಲ್ಲಿ ಅಮೃತ ಬೀಜ (ವಂ) ದ ಧ್ಯಾನ ಮಾಡಬೇಕು. ಮತ್ತು ಆ ಅಂಗೈಯ ಹಿಂದೆ ಕೈಯಿಟ್ಟು ನೈವೇದ್ಯವನ್ನು ತೋರಿಸಿ ಆ ಅಮೃತ ಬೀಜದಿಂದ ಉತ್ಪನ್ನ ಅಮೃತ ಧಾರಾದಿಂದ ನೈವೇದ್ಯವನ್ನು ಆಪ್ಲಾವಿತಗೊಳಿಸಬೇಕು.

ನಂತರ ಎಂಟು ಬಾರಿ ಮೂಲಮಂತ್ರವನ್ನು ಜಪ ಮಾಡುತ್ತ ನೈವೇದ್ಯವನ್ನು ಸ್ಪರ್ಶ ಮಾಡುತ್ತ ಧೇನುಮುದ್ರಾ ಪ್ರದರ್ಶಿಸುತ್ತ ಗಂಧ ಮತ್ತು ಪುಷ್ಪಗಳನ್ನು ಏರಿಸಬೇಕು. ಈ ಪ್ರಕಾರ ಇಷ್ಟದೇವತೆಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ ಅದರ ಬಾಯಿಯಿಂದ ಹೊರಡುವ ತೇಜವನ್ನು ಧ್ಯಾನ ಮಾಡುತ್ತ, ಎಡ ಹೆಬ್ಬೆರಳಿನಿಂದ ನೈವೇದ್ಯ ಪಾತ್ರೆಯನ್ನು ಸ್ಪರ್ಶ ಮಾಡಬೇಕು. ಈಗ ಬಲಗೈಯಲ್ಲಿ ನೀರು ತೆಗೆದುಕೊಂಡು ಮೂಲ ಮಂತ್ರದೊಂದಿಗೆ 'ಸತ್ಪಾತ್ರ ಸಿದ್ಧ.........ಗೃಹಾಣ ತತ್' ಪರ್ಯಂತ ಶ್ಲೋಕ ಪಠಣ ಮಾಡುತ್ತ 'ಸಾಂಗಾಯ ನಮಃ' ಹೇಳುತ್ತ ಭೂಮಿ ಮೇಲೆ ನೀರನ್ನು ಬಿಟ್ಟು ಅಂಗುಷ್ಠ ಮತ್ತು ಅನಾಮಿಕ ಬೆರಳುಗಳನ್ನು ಸೇರಿಸಿ ನೈವೇದ್ಯ ಮುದ್ರೆಯನ್ನು ಪ್ರದರ್ಶಿಸಬೇಕು.

**ಸಪುಷ್ಪಾಭ್ಯಾಂ ಕರಾಭ್ಯಾಂ ತ್ರಿಃ ಪ್ರೋದ್ಧರಂಭಕ್ಷ್ಯಭಾಜನಮ್ ।**
**ನಿವೇದಯಾಮಿ ಭವತೇ ಜುಷಾಣೇದಂ ಹವಿರ್ಹರೇ** ॥ 130 ॥
**ಷೋಡಶಾರ್ಣಾನಿಮಾನ ಪ್ರೋಚ್ಯ ಗ್ರಾಸಮುದ್ರಾಂ ಪ್ರದರ್ಶಯೇತ್ ॥**
**ವಾಮಹಸ್ತೇನ ಪದ್ಮಾಭಾಂ ಪ್ರಾಣಾಧ್ಯಾ ದಕ್ಷಿಣೇನ ತು** ॥ 131 ॥

ಕೈಯಲ್ಲಿ ಹೂವು ತೆಗೆದುಕೊಂಡು ನೈವೇದ್ಯವನ್ನು ಮೂರು ಬಾರಿ ಮೇಲಕ್ಕೆ ಎತ್ತುತ್ತ 'ನಿವೇದಯಾಮಿ ಭವತೇ ಜುಷಾಣೇದಂ ಹವಿರ್ಹರರೆ' ಈ ಷೋಡಶಾಕ್ಷರ ಮಂತ್ರದ ಉಚ್ಚಾರಣೆ ಮಾಡುತ್ತ ಎಡಗೈಯಿಂದ ಕಮಲದ ಹಾಗೆ ಗ್ರಾಸಮುದ್ರೆ ಮತ್ತು ಬಲಗೈಯಿಂದ ಪ್ರಾಣಾದಿ ಮುದ್ರೆಗಳನ್ನು ಪ್ರದರ್ಶಿಸಬೇಕು.





## ಪ್ರಾಣಾದಿ ಮುದ್ರೆಗಳು

**ಕನಿಷ್ಠಾನಾಮಿಕಾಂಗುಷ್ಠೈರ್ಮುದ್ರಾ ಪ್ರಾಣಸ್ಯ ಕೀರ್ತಿತಾ ।**
**ತರ್ಜನಿ ಮಧ್ಯಮಾಂಗುಷ್ಠೈರಪಾನಸ್ಯ ತು ಸಾ ಸ್ಮೃತಾ** ॥ 132 ॥
**ಅನಾಮಾ ಮಧ್ಯಮಾಂಗುಷ್ಠೈರುದಾನಸ್ಯ ಚ ಮುದ್ರಿಕಾ ।**
**ತರ್ಜನ್ಯನಾಮಾಮಧ್ಯಾಭಿಃ ಸಾಂಗುಷ್ಠಾಭಿಶ್ಚತುರ್ಥಿಕಾ** ॥ 133 ॥
**ಸರ್ವಾಭಿಃ ಸಸಮಾನಸ್ಯ ಪ್ರಾಣಾಧ್ಯಾನ ಡೆದ್ವಿಶಾನ್ವಿತಾನ್ ।**
**ತಾರಪೂರ್ವಾಂಜಪನ್ಮುದ್ರಾಃ ಪ್ರಾಣಾದೀನಾಂ ಪ್ರದರ್ಶಯೇತ್** ॥ 134 ॥

ಕನಿಷ್ಠಿಕಾ, ಅನಾಮಿಕಾ ಮತ್ತು ಹೆಬ್ಬೆರಳುಗಳನ್ನು ಸೇರಿಸುವುದರಿಂದ ಪ್ರಾಣಮುದ್ರಾ, ತರ್ಜನಿ ಮಧ್ಯಮಾ ಮತ್ತು ಹೆಬ್ಬೆರಳುಗಳನ್ನು ಸೇರಿಸುವುದರಿಂದ ಅಪಾನ ಮುದ್ರಾ, ಅನಾಮಿಕಾ, ಮಧ್ಯಮಾ ಮತ್ತು ಹೆಬ್ಬೆರಳುಗಳನ್ನು ಸೇರಿಸುವುದರಿಂದ ಉದಾನಮುದ್ರಾ, ತರ್ಜನಿ ಅನಾಮಿಕಾ ಮಧ್ಯಮಾ ಮತ್ತು ಹೆಬ್ಬೆರಳುಗಳನ್ನು ಸೇರಿಸುವುದರಿಂದ ಸಮಾನ ಮುದ್ರೆಯಾಗುತ್ತದೆ. ಚತುರ್ಥ್ಯಂತ ಪ್ರಾಣ ಆದಿ (ಪ್ರಾಣಾಯ, ಅಪಾನಾಯ, ಉದಾನಾಯ, ವ್ಯಾನಾಯ ಮತ್ತು ಸಮಾನಾಯ)ಗಳ ಕೊನೆಯಲ್ಲಿ ಸ್ವಾಹಾ ಮತ್ತು ಪ್ರಾರಂಭದಲ್ಲಿ ಪ್ರಣವ ಸೇರಿಸುವುದರಿಂದ ಮಂತ್ರಗಳನ್ನು ಜಪಿಸುತ್ತ ಪ್ರಾಣಾದಿ ಮುದ್ರೆಗಳನ್ನು ಪ್ರದರ್ಶಿಸಬೇಕು.

**ತತೋ ಜವನಿಕಾಂ ಕೃತ್ವಾ ಬ್ರಹ್ಮೇಶಾದ್ಯೈರಿದಂ ಪಠೇತ್ ।**
**ಪದ್ಮಂ ಶಾಲೇರ್ಭಕ್ತಮಿತಿ ಮೂಲಮಂತ್ರಂ ಚ ಸಪ್ತಧಾ** ॥ 135 ॥
**ಪ್ರತೀಸೀರಾಮಪಾಕೃತ್ಯ ದಧ್ಯಾಚ್ಚಲೋಕಂ ಪತಂಜಲಮ್ ।**
**ಸಮಸ್ತದೇವ ದೇವೇಶ ಸರ್ವತೃಪ್ತಿಕರಂ ಪರಮ್** ॥ 136 ॥
**ಅಖಂಡಾನಂದ ಸಂಪೂರ್ಣ ಗೃಹಾಣ ಜಲಮುತ್ತಮಮ್ ।**
**ಸ್ಥಂಡಿಲೇಗ್ನಿಮುಪಾಧಾಯ ವೈಶ್ವದೇವಕ್ರಿಯಾಂ ಚರೇತ್** ॥ 137 ॥
**ಮೂಲೇನ ವೀಕ್ಷ್ಯ ಚಾಸ್ತ್ರೇಣ ಕೃತ್ವಾ ಪ್ರೋಕ್ಷಣತಾಡನೇ ।**
**ಕುಶೈಸ್ತದ್ವರ್ಮಣಾಭ್ಯುಕ್ಷ ಪೂರ್ವವತ್ಸ್ಥಾಪಯೇಚ್ಛುಚಿಮ್** ॥ 138 ॥
**ತನ್ಮಂತ್ರೇಣ ತಮಭ್ಯರ್ಚ್ಯಾಹೂಯ ತತ್ರೇಷ್ಟದೇವತಾಮ್ ।**
**ಪೂಜಯೇದ್ ಗಂಧಪುಷ್ಪೈಸ್ತಾಂ ಮಹಾವ್ಯಾಹೃತಿಭಿಸ್ತತಃ** ॥ 139 ॥

ಈ ಮಂತ್ರವನ್ನು ಹೇಳುತ್ತ 'ಸಾಂಗಾಯ' 'ಸಪರಿವಾರಾಯ' 'ಅಮುಕದೇವತಾಯೈ ಧೂಪಂ ಸಮರ್ಪಯಾಮಿ ನಮಃ' ಮಂತ್ರವನ್ನು ಉಚ್ಚಾರ ಮಾಡುತ್ತ ಶಂಖದ ನೀರನ್ನು ಭೂಮಿಯ ಮೇಲೆ ಬಿಡಬೇಕು. ಮತ್ತು ಬಲಗೈಯ ತರ್ಜನಿ ಮತ್ತು ಅಂಗುಷ್ಠಗಳನ್ನು ಸೇರಿಸಿ ಧೂಪ ಮುದ್ರಾ ಪ್ರದರ್ಶಿಸಬೇಕು. ನಂತರ ತನ್ನ ಮಂತ್ರದಿಮದ ಘಂಟೆಯನ್ನು ಪೂಜೆ ಮಾಡಬೇಕು. ನಂತರ ಧೂಪವನ್ನು ಕೊಡಬೇಕು.

'ಜಯಧ್ವನಿ ಮಂತ್ರ ಮಾತಃ ಸ್ವಾಹಾ' ಈ ದಶಾಕ್ಷರ ಮಂತ್ರದಿಂದ ಗಂಟೆಯ ಪೂಜೆಯನ್ನು ಮಾಡಬೇಕು. ನಂತರ ಎಡಗೈಯಿಂದ ಗಂಟೆಯನ್ನು ಬಾರಿಸುತ್ತ ಇಷ್ಟದೇವತೆಯ ಸ್ತುತಿ ಮಾಡುತ್ತ ಬಲಗೈಯಿಂದ ದೇವತೆಯ ನಾಭಿಯವರೆಗೆ ಧೂಪವನ್ನು ಕೊಡಬೇಕು. ನಂತರ ಶಂಖಜಲ ಮತ್ತು ಪುಷ್ಪಾಂಜಲಿ ಕೊಡಬೇಕು. ದೀಪದಾನದಲ್ಲಿ ಕೂಡಾ ಇದೇ ಪ್ರಕಾರ ಪ್ರೋಕ್ಷಣಾದಿಗಳನ್ನು ಮಾಡಬೇಕು.

**ವಾಮಮಧ್ಯಯಾ ಸ್ಪರ್ಶೋ ಮೂಲಶ್ಲೋಕಸ್ಯ ಕೀರ್ತನಮ್ ।**
**ಸುಪ್ರಕಾಶೋ ಮಹಾದೀಪಃ ಸರ್ವತಸ್ತಿಮಿರಾಪಹಃ ॥ 116 ॥**
**ಸಬಾಹ್ಯಾಂಭ್ಯಂತರಂ ಜ್ಯೋತಿರ್ದೀಪೋಯಂ ಪ್ರತಿಗೃಹ್ಯತಾಮ್ ।**
**ಧೂಪಸ್ಥಾನೇ ದೀಪಪದಂ ಮಧ್ಯಮಾಂಗುಷ್ಠಯೋಗತಃ ॥ 117 ॥**
**ದೀಪಮುದ್ರಾ ದರ್ಶನಂ ಚ ತದ್ದಾನಂ ನೇತ್ರದೇಶತಃ ।**
**ಭೂರಿಪಕ್ಷೇ ತು ವರ್ತಿನಾಂ ವಿಷಮಾವರ್ತಿಕಾ ಮತಾಃ ॥ 118 ॥**
**ಘೃತದೀಪೋ ದಕ್ಷಿಣೇ ಸ್ಯಾತ್ ತೈಲದೀಪಸ್ತು ವಾಮತಃ ।**
**ಸಿತವರ್ತಿಯುತೋ ದಕ್ಷೇ ವಾಮಾಂಗೇ ರಕ್ತವಾರ್ತಿಕಃ ॥ 119 ॥**
**ಅತ್ರಾನ್ಯದ್ಧೂಪವಜ್ಞೇಯಂ ತತೋ ನೈವೇದ್ಯಮರ್ಪಯೇತ ।**

ಎಡಗೈಯ ಮಧ್ಯಮ ಬೆರಳಿನಿಂದ ದೀಪವನ್ನು ಸ್ಪರ್ಶಿಸುತ್ತ ಮೂಲಮಂತ್ರದ ಜೊತೆಗೆ 'ಸುಪ್ರಕಾಶೊ ಮಹಾದೀಪ....ಪ್ರತಿಗೃಹ್ಯತಾಮ್' ಮಂತ್ರವನ್ನು ಹೇಳುತ್ತ ಪೂರ್ವೋಕ್ತ ಧೂಪ ಮಂತ್ರದ ಧೂಪ ಸ್ಥಾನದಲ್ಲಿ 'ದೀಪ' ಪದವನ್ನು ಸೇರಿಸಿ, 'ಸಾಂಗಾಯ ಸಪರಿವಾರಾಯ' 'ಅಮುಕ ದೇವತಾಯೈ ದೀಪಂ ದರ್ಶಯಾಮಿ ನಮಃ' ದಿಂದ ದೀಪ ಪ್ರದರ್ಶನ ಮಾಡಬೇಕು. ನಂತರ ಮಧ್ಯಮಾ ಮತ್ತು ಅಂಗುಷ್ಠಗಳನ್ನು ಸೇರಿಸಿ ದೀಪಮುದ್ರೆ ಪ್ರದರ್ಶಿಸಬೇಕು. ದೇವತೆಯ ನೇತ್ರಗಳ ಹತ್ತಿರ ದೀಪವನ್ನು ಎತ್ತರಿಸಿ ಪ್ರದರ್ಶಿಸಬೇಕು. ದೀಪದಲ್ಲಿ ಅನೇಕ ಬತ್ತಿಗಳಿದ್ದರೂ ಅವುಗಳ ಸಂಖ್ಯೆಯು ವಿಷಮವಾಗಿರಬೇಕು. ತುಪ್ಪದ ದೀಪವನ್ನು ಬಲಭಾಗದಲ್ಲಿ ಮತ್ತು ಎಣ್ಣೆಯ ದೀಪವನ್ನು ಎಡಭಾಗದಲ್ಲಿ ಸ್ಥಾಪನೆ ಮಾಡಬೇಕು. ಬಲಭಾಗದ





ದೀಪದಲ್ಲಿ ಬಿಳಿಯ ಬತ್ತಿ ಮತ್ತು ಎಡಭಾಗದ ದೀಪದಲ್ಲಿ ರಕ್ತವರ್ಣ ಬತ್ತಿಯನ್ನು ಹಚ್ಚಬೇಕು. ಜಲಪ್ರೋಕ್ಷಣಾದಿ ಕ್ರಿಯೆಗಳು ಧೂಪದಾನದ ತರಹವೇ ಇರುತ್ತದೆ. ಇದರ ನಂತರ ನೈವೇದ್ಯವನ್ನು ಸಮರ್ಪಣೆ ಮಾಡಬೇಕು.

**ನೈವೇದ್ಯ ಸಮರ್ಪಣ**

**ಸ್ವರ್ಣಾದಿಭಾಜನೇ ಸಾಜ್ಯಂ ಪಾಯಸಂ ಶರ್ಕರಾದಿಕಮ್ ॥ 120 ॥**
**ಪರಿವೇಷುಯ ಯಥಾಶಕ್ತಿ ಪ್ರೋಕ್ಷೇತ್ ಕೈರಸ್ತ್ರಮಂತ್ರಿತೈಃ ।**
**ಚಕ್ರಮುದ್ರಾಮಥಾರಚ್ಯ ಪ್ರೋಕ್ತೇತ್ತನ್ಮಂತ್ರಿತೈರ್ಜಲೈಃ ॥ 121 ॥**
**ವಾಯುಬೀಜೇನಾರ್ಕವಾರಂ ತತಸ್ತಜ್ಜಾತಮಾರುತೈಃ ।**
**ನೈವೇದ್ಯದೋಷಂ ಸಂಶೋಷ್ಯ ಚಿಂತಯೆದ್ ದಕ್ಷಿಣೆ ಕರೆ ॥ 122 ॥**
**ಅಗ್ನಿಬೀಜಂ ತಸ್ಯ ಪೃಷ್ಠೇ ವಾಮಂ ಕರತಲಂ ನ್ಯಸೇತ್ ।**
**ತಂ ದರ್ಶಯಿತ್ವಾ ನೈವೇದ್ಯೇತದುತ್ಥೇನಾಗ್ನಿನಾಖಿಲಮ್ ॥ 123 ॥**
**ನೈವೇದ್ಯಂ ದೋಷಂ ಸಂದಹ್ಯಾ ಧ್ಯಾಯೇದ್ವಾಮಕರೇಮೃತಮ್ ।**
**ತತ್ಪೃಷ್ಠೆ ದಕ್ಷಿಣಂ ಹಸ್ತಂ ಕೃತ್ವಾ ತತ್ರ ಪ್ರದರ್ಶಯೇತ್ ॥ 124 ॥**
**ಆಪ್ಲಾವಿತಂ ಸ್ಮರೇದ್ ಭೋಜ್ಯಂ ಬೀಜೋತ್ಥಾಮೃತಧಾರಯಾ ।**
**ಪ್ರೋಕ್ಷ್ಯ ಮೂಲೇನ ತತ್ತ್ವಷ್ಟವಾಷ್ಟಶೋ ಮೂಲಮನುಂಜಪನ್ ॥ 125 ॥**
**ದರ್ಶಯಿತ್ವಾ ಧೇನುಮುದ್ರಾಂ ಗಂಧಪುಷ್ಪೈಸ್ತದರ್ಚಯೇತ್ ।**
**ದೇವೆ ಪುಷ್ಪಾಂಜಲಿಂ ದತ್ವಾ ತೇಜೋ ದೇವಮುಖೋತ್ಥಿತಮ್ ॥126॥**
**ವಿಚಿಂತ್ಯ ವಾಮಾಂಗುಷ್ಠೇನ ಸ್ಪಶೇನ್ನೈವೇದ್ಯಭಾಜನಮ್ ।**
**ದಕ್ಷಹಸ್ತೇ ಜಲಂ ಧೃತ್ವಾ ಮೂಲಶ್ಲೋಕಂ ಶಿರಃ ಪಠೇತ್ ॥ 127 ॥**
**ಸತ್ಪಾತ್ರಸಿದ್ಧಂ ಸುಹವಿರ್ವಿವಿಧಾನೇಕಭಕ್ಷಣಮ್ ।**
**ನಿವೇದಯಾಮಿ ದೇವೇಶ ಸಾನುಗಾಯ ಗೃಹಾಣತತ್ ॥ 128 ॥**
**ಸಾಮಗಾಯೇತ್ಯಾದಿಕಂ ಪ್ರೋಚ್ಯ ಜಲಮುತ್ಸೃಜ್ಯ ಭೂತಲೆ ।**
**ನೈವೇದ್ಯ ಮುದ್ರಾಮಂಗುಷ್ಠನಾಮಿಕಾಭ್ಯಾಂ ಪ್ರದರ್ಶಯೇತ್ ॥ 129 ॥**

ಬಂಗಾರ ಇತ್ಯಾದಿ ಪಾತ್ರೆಗಳಲ್ಲಿ ಯಥಾಶಕ್ತಿ ತುಪ್ಪದ ಜೊತೆಗೆ ಪಾಯಸ ಮತ್ತು ಶರ್ಕರೆಗಳನ್ನು ಹಾಕಿ 'ಫಟ್' ಮಂತ್ರದಿಂದ ನೀರನ್ನು ಪ್ರೋಕ್ಷಣೆ ಮಾಡಬೇಕು.

ಮೂಲಮಂತ್ರದ ಜೊತೆಗೆ 'ಉಚ್ಚಿಷ್ಟೋ....ಪುನರಾಚಮನೀಯಕಮ್' ಪರ್ಯಂತ ಶ್ಲೋಕವನ್ನು ಹೇಳುತ್ತ ಪುನರಾಚಮನೀಯವನ್ನು ಸಮರ್ಪಿಸಬೇಕು.

ಸ್ನಾನವಸ್ತ್ರೋಪವೀತಾಂತೆ ನೈವೇಧ್ಯಾಂತೇಪಿ ತತ್ಸ್ಮೃತಮ್
ಪಾಧ್ಯಾದಿವಸ್ತ್ವಭಾವೆ ತು ತತ್ಸ್ಮರನ್ನಕ್ಷತಾಂ ಕ್ಷಿಪೇತ್ । ॥ 70 ॥
ಗಂಧತೈಲಂ ತತೋ ದಧ್ಯಾನ್ಮೂಲಶ್ಲೋಕಂ ಪಠನ್ಸುಧೀಃ

ಸ್ನೇಹಂ ಗೃಹಾಣ ಸ್ನೇಹೇನ ಲೋಕನಾಥ ಮಹಾಶಯ । ॥ 71 ॥
ಸರ್ವಲೋಕೇಷು ಶುದ್ಧಾತ್ಮನ್ ದದಾಮಿ ಸ್ನೇಹಮುತ್ತಮಮ್

ಹರಿದ್ರಾಧ್ಯೈಸ್ತಮುದ್ವರ್ತ್ಯ ಸ್ನಾಪಯೇದುಭಯಂ ಪಠನ್ । ॥ 72 ॥
ಪರಮಾನಂದಬೋಧಾಬ್ಧಿ ನಿಮಗ್ನನಿಜಮೂರ್ತಯೆ

ಸಾಂಗೋಪಾಂಗಮಿದಂ ಸ್ನಾನಂ ಕಲ್ಪಯಾಮ್ಯಹಮೀಶತೆ । ॥ 73 ॥
ತತಃ ಸಹಸ್ರಂ ಶಂಖೇನ ಶತಂ ವಾಶಕ್ತಿತೋಪಿ ವಾ ॥ 74 ॥

ಈ ಪ್ರಕಾರ ಸ್ನಾನ, ವಸ್ತ್ರ, ಯಜ್ಞೋಪವೀತ ಮತ್ತು ನೈವೇದ್ಯದ ನಂತರವೂ ಪುನರಾಚಮನ ಮಾಡಬೇಕು. ಪಾದ್ಯ ಆದಿ ವಸ್ತುಗಳ ಅಭಾವದಲ್ಲಿ ಅವುಗಳ ಸ್ಮರಣೆ ಮಾಡುತ್ತ ಅಕ್ಷತೆಯನ್ನು ಏರಿಸಬೇಕು.

ಮೂಲಮಂತ್ರದ ಜೊತೆಗೆ "ಸ್ನೇಹಂ ಗೃಹಾಣ..............ಸ್ನೇಹಮುತ್ತಮಮ್" ಪರ್ಯಮತ ಶ್ಲೋಕವನ್ನು ಹೇಳುತ್ತ ಸುಗಂಧಿತ ತೈಲವನ್ನು ಹಚ್ಚಬೇಕು.

ಹರಿದ್ರಾಲೇಪನದ ನಂತರ ನಿಜ ಇಷ್ಟದೇವನನ್ನು ಮೂಲ ಮಂತ್ರದ ಜೊತೆ, "ಪರಮಾನಂದ....ಕಲ್ಪಯಾಮ್ಯಮೀಶತೆ" ಶ್ಲೋಕ ಪಠಣ ಮಾಡುತ್ತ ಸ್ನಾನ ಮಾಡಿಸಬೇಕು.

ಸ್ನಾನದ ನಂತರ ಒಂದು ಸಾವಿರ ಅಥವಾ 1 ನೂರು ಅಥವಾ ಯಥಾ ಶಕ್ತಿ ಶಂಖದಿಂದ ಸುಗಂಧಿತ ಜಲವನ್ನು ಮೂಲಮಂತ್ರ ಹೇಳುತ್ತ ಇಷ್ಟ ದೇವತೆಯ ಅಭಿಷೇಕ ಮಾಡಬೇಕು.

ಗಂಧಯುಕ್ತೋದಕೈರೀಶಮಭಿಷಿಂಚೇನ್ಮನುಂ ಸ್ಮರನ್ । ॥ 75 ॥
ಪಠನ್ಮೂಲಂ ತತಃ ಶ್ಲೋಕೌ ದಧ್ಯಾದ್ವಸ್ತ್ರೋತ್ತರೀಯಕೆ

ಮಾಯಾಚಿತ್ರ ಪಟಚ್ಛನ್ನನಿಜಗುಹ್ಯೋರುತೇಜಸೆ ।





ನಿರಾವರಣ ವಿಜ್ಞಾನವಾಸಸ್ತೆ ಕಲ್ಪಯಾಮ್ಯಹಮ್ ॥ 76 ॥

ಯಮಾಶ್ರಿತ್ಯ ಮಹಾಮಾಯಾ ಜಗತ್ಸಮ್ಮೋಹಿನಿ ಸದಾ ।
ತಸ್ಮೈ ತೆ ಪರಮೇಶಾಯ ಕಲ್ಪಯಾಮುತ್ತರೀಯಕಮ್ ॥ 77 ॥

ಪೀತಂ ವಿಷ್ಣೋ ಸಿತಂ ಶಂಭೌ ರಕ್ತಂ ವಿಘ್ನಾರ್ಕಶಕ್ತಿಷು ।
ಸಚ್ಛಿದ್ರಂ ಮಲಿನಂ ಜೀರ್ಣ ತ್ಯಜೇತ್ತೈಲಾದಿದೂಷಿತಮ್ ॥ 78 ॥

ಉಪವೀತಂ ಭೂಷಣಾನಿ ಪ್ರಯಚ್ಛೇದುಭಯಂ ಪಠನ್ ।
ಯಸ್ಯ ಶಕ್ತಿತ್ರಯೇಣೇದಂ ಸಂಪ್ರೋತಮಖಿಲಂ ಜಗತ್ ॥ 79 ॥

ಯಜ್ಞ ಸೂತ್ರಾಯ ತಸ್ಮೈ ತೆ ಯಜ್ಞಸೂತ್ರಂ ಪ್ರಕಲ್ಪಯೆ ।
ಸ್ವಭಾವಸುಂದರಾಂಗಾಯ ನಾನಾಶಕ್ತ್ಯಾಶ್ರಯಾಯ ತೆ ॥ 80 ॥

ಭೂಷಣಾನಿ ವಿಚಿತ್ರಾಣಿ ಕಲ್ಪಯಾಮ್ಯಮರಾರ್ಚಿತಮ್ ।
ಮೂಲಮಂತ್ರೇಣ ಪುಟಿತಮೇಕೈಕಂ ಮಾತೃಕಾಕ್ಷರಮ್ ॥ 81 ॥

ವಿನ್ಯಸೇದ್ ದೇವತಾಂಗೇಷು ಯೋಗೋಯಂ ಲೋಕಮೋಹನಃ ।
ಕನಿಷ್ಠಯಾ ಪಾತ್ರಸಂಸ್ಥಂ ಪೂರ್ವವದ್ ಗಂಧಮರ್ಪಯೇತ್ ॥ 82 ॥

ಮೂಲಮಂತ್ರದ ಜೊತೆಗೆ "ಮಾಯಾಚಿತ್ರ...ಕಲ್ಪಯಾಮ್ಯಹಮ್" ಶ್ಲೋಕವನ್ನು ಹೇಳುತ್ತ ವಸ್ತ್ರವನ್ನು ಸಮರ್ಪಿಸಬೇಕು. ನಂತರ ಮೂಲಮಂತ್ರದ ಜೊತೆಗೆ 'ಯಮಾಶ್ರಿತ್ಯ...ಉತ್ತರೀಯಕಮ್' ಶ್ಲೋಕವನ್ನು ಹೇಳುತ್ತ ಇಷ್ಟದೇವತೆಗೆ ಉತ್ತರೀಯವನ್ನು ಅರ್ಪಿಸಬೇಕು. ವಿಷ್ಣುವಿಗೆ ಪೀತವರ್ಣ, ಸದಾಶಿವನಿಗೆ ಶ್ವೇತವರ್ಣ, ಗಣಪತಿ, ಸೂರ್ಯ, ಮತ್ತು ಶಕ್ತಿ ದೇವತೆಗಳಿಗೆ ರಕ್ತವರ್ಣದ ವಸ್ತ್ರಪ್ರಿಯವಾಗಿರುತ್ತದೆ. ಹರಿದ, ಹೊಲಸಾದ, ಹಳೆಯದಾದ ಮತ್ತು ಎಣ್ಣೆ ಇತ್ಯಾದಿಗಳಿಂದ ದೂಷಿತವಾದ ವಸ್ತ್ರವು ಪೂಜೆಯಲ್ಲಿ ಸರ್ವಥಾ ತ್ಯಾಜ್ಯವಾಗಿರುತ್ತದೆ.

ಮೂಲಮಂತ್ರದ ಜೊತೆಗ 'ಯಸ್ಯ.........ಯಜ್ಞ ಸೂತ್ರಂ ಪ್ರಕಲ್ಪಯೆ' ಶ್ಲೋಕವನ್ನು ಪಠನ ಮಾಡುತ್ತ ಯಜ್ಞೋಪವೀತವನ್ನು ಸಮರ್ಪಿಸಬೇಕು. ಇದರ ನಂತರ ಪುನಃ ಮೂಲಮಂತ್ರದ ಜೊತೆಗೆ 'ಸ್ವಭಾವ...ಕಲ್ಪಯಾಮ್ಯಮರಾರ್ಚಿತಮ್' ಶ್ಲೋಕವನ್ನು ಹೇಳುತ್ತ ಇಷ್ಟದೇವತೆಗ ವಿವಿಧ ಆಭೂಷಣಗಳನ್ನು ಸಮರ್ಪಣೆ ಮಾಡಬೇಕು.

ಮೂಲಮಂತ್ರದಿಂದ ಸಂಪುಟಿತ ಮಾತೃಕಾಕ್ಷರಗಳು (ವರ್ಣಮಾಲೆ)

ಒಂದೊಂದು ಅಕ್ಷರದ ದೇವತೆಯ ಒಂದೊಂದು ಅಂಗದ ಮೇಲೆ ನ್ಯಾಸ ಮಾಡಬೇಕು. ಇದನ್ನು ಲೋಕಮೋಹನನ್ಯಾಸವೆಂದು ಕರೆಯುತ್ತಾರೆ.

ಪರಮಾನಂದ ಸೌಭಾಗ್ಯ ಪರಿಪೂರ್ಣದಿಗಂತರಮ್ ।
ಗೃಹಾಣ ಪರಮಂ ಗಂಧಮ ಕೃಪಯಾ ಪರಮೇಶ್ವರ ॥ 83 ॥

ತತಃ ಕನಿಷ್ಠಾಂಗುಷ್ಠಾಭ್ಯಾಂ ಗಂಧಮುದ್ರಾಂ ಪ್ರದರ್ಶಯೇತ್ ।
ಮೂಲಶ್ಲೋಕಂ ಪಠನ್ನಾನಾಪುಷ್ಪಾಣಿ ವಿನಿವೇದಯೇತ್ ॥ 84 ॥

ತುರೀಯವನಸಂಭೂತಂ ನಾನಾಗುಣಮನೋಹರಮ್ ।
ಅಮಂದಸೌರಭಂ ಪುಷ್ಪಂ ಗೃಹ್ಯತಾಮಿದಮುತ್ತಮಮ್ ॥ 85 ॥
ತರ್ಜನ್ಯಂಗುಷ್ಠಯೋಗೇನ ಪುಷ್ಪಮುದ್ರಾಂ ಪ್ರದರ್ಶಯೇತ್ ।

ಮೂಲಮಂತ್ರದ ಜೊತೆಗೆ 'ಪರಮಾನಂದ ಸೌಭಾಗ್ಯ......ಕೃಪಯಾ ಪರಮೇಶ್ವರ' ಶ್ಲೋಕವನ್ನು ಉಚ್ಚರಿಸುತ್ತ ಕನಿಷ್ಠ ಬೆರಳಿನಿಂದ ಬೆರಳಿನಿಂದ ಪಾತ್ರೆಯಲ್ಲಿರುವ ಗಂಧವನ್ನು ತೆಗೆದುಕೊಂಡು ಗಂಧವನ್ನು ಸಮರ್ಪಿಸಬೇಕು. ನಂತರ ಕನಿಷ್ಠ ಮತ್ತು ಅಂಗುಷ್ಠ ಬೆರಳುಗಳನ್ನು ಸೇರಿಸಿ ಗಂಧ ಮುದ್ರೆಯನ್ನು ಪ್ರದರ್ಶಿಸಬೇಕು.

ಮೂಲಮಂತ್ರದ ಜೊತೆಗೆ 'ತುರೀಯವನ...ಗೃಹ್ಯತಾಮಿದ ಮುತ್ತಮಮ್'. ಶ್ಲೋಕವನ್ನು ಹೇಳುತ್ತ ನಾನಾವಿಧವಾದ ಹೂಗಳನ್ನು ಸಮರ್ಪಿಸಬೇಕು. ನಂತರ ತರ್ಜನಿ ಮತ್ತು ಹೆಬ್ಬೆರಳುಗಳನ್ನು ಸೇರಿಸಿ ಪುಷ್ಪ ಮುದ್ರೆಯನ್ನು ಪ್ರದರ್ಶಿಸಬೇಕು.

### ವರ್ಜಿತ ಪುಷ್ಪ ಕಥನ

ಅಕ್ಷತಾನಾರ್ಕಧತ್ತೂರೌ ವಿಷ್ಣೌ ನೈವಾರ್ಪಯೇತ್ಸುಧಿಃ ॥ 86 ॥

ಬಂಧೂಕಂ ಕೇತಕಿಂ ಕುಂದಂ ಕೇಸರಂ ಕುಟಜಂ ಜಪಾಮ್ ।
ಶಂಕರೆ ನಾರ್ಪಯೇದ್ವಿದ್ವಾನ್ಮಾಲತಿಂ ಯುಧಿಕಾಮಪಿ ॥ 87 ॥

ಶಕ್ತೌ ದೂರ್ವಾರ್ಕಮಂದಾರಾನ್ ಮಾಲೂರು ತಗರಂ ರವೌ ।
ವಿನಾಯಕೆ ತು ತುಲಸಿಂ ನಾರ್ಪಯೇಜ್ಞಾತುಚಿದ್ ಬುಧಃ ॥ 88 ॥

ಶ್ವೇತಂ ಪೀತಂ ಹರೇರಿಷ್ಟಂ ರಕ್ತಂ ರವಿಗಣೇಶಯೋಃ ।
ನಿರ್ಗಂಧಃ ಕೇಶಕೀಟಾದಿ ದೂಷಿತಂ ಚೋಗ್ರಗಂಧಕಮ್ ॥ 89 ॥

ಬುದ್ಧಿವಂತ ಸಾಧಕರು ವಿಷ್ಣುವಿಗೆ ಅಕ್ಷತೆ, ಎಕ್ಕೆ ಮತ್ತು ಧತ್ತೂರದ





ಹೂವುಗಳನ್ನು ಏರಿಸಬಾರದು. ಶಿವನಿಗೆ ಮಧ್ಯಾಹ್ನ ಮಲ್ಲಿಗೆ, ಕೇದಿಗೆ, ಕಮಲ, ದಟ್ಟದ ಮಲ್ಲಿಗೆ, ಮೌಲಶ್ರೀ, ಜಯಪರ್ಣ, ಕುಟಜ, ಮಾಲತಿ ಮತ್ತು ಜಾಜಿಮಲ್ಲಿಗೆ ಹೂಗಳನ್ನು ಏರಿಸಬಾರದು. ಗರಿಕೆ, ಎಕ್ಕೆ, ಮಂದಾರ, ಬಿಲ್ವಪತ್ರೆ, ಪಾರಿಜಾತ ಹೂಗಳನ್ನು ದೇವಿಗೆ ಏರಿಸಬಾರದು. ಇದೇ ಪ್ರಕಾರ ಸೂರ್ಯನಿಗೆ ತಗರ ಮತ್ತು ಗಣೇಶನಿಗೆ ತುಲಸಿಯನ್ನು ಎಂದು ಏರಿಸಬಾರದು. ಶ್ವೇತ ಮತ್ತು ಪೀತ ವರ್ಣದ ಪುಷ್ಪಗಳು ವಿಷ್ಣುವಿಗೆ ಪ್ರಿಯವಾದರೆ, ರಕ್ತವರ್ಣದ ಪುಷ್ಪಗಳು ಸೂರ್ಯ ಮತ್ತು ಗಣೇಶರಿಗೆ ಪ್ರಿಯವಾಗಿರುತ್ತವೆ.

ಮಲಿನಂ ತುಚ್ಛಸಂಸ್ಪೃಷ್ಟಮಾಘ್ರಾತಂ ಸ್ವವಿಕಾಸಿತಮ್ ।
ಅಶುದ್ಧಭಾಜನಾನೀತಂ ಸ್ನಾತ್ವಾನೀತಂ ಚ ಯಾಚಿತಮ್ ॥ 90 ॥

ಶುಷ್ಕಂ ಪರ್ಯುಷಿತಂ ಕೃಷ್ಣಂ ಭೂಮಿಗಂ ನಾರ್ಪಯೇತ್ಸುಮಮ್ ।
ಚಂಪಕಂ ಕಮಲಂ ತ್ಯಕ್ತ್ವಾ ಕಲಿಕಾಮಪಿ ವರ್ಜಯೇತ್ ॥ 91 ॥

ಕುರಂಟಕಂ ಕಾಂಚನಾರಂ ವರ್ಜಯೇದ್ ಬೃಹತೀಯುಗಮ್ ।
ಪುಷ್ಪಂ ಪತ್ರಂ ಫಲಂ ದೇವೆ ನ ಪ್ರದದ್ಯಾದಧೋಮುಖಮ್ ॥ 92 ॥

ಪುಷ್ಪಾಂಜಲೌ ನ ತದ್ದೋಷಸ್ತಥಾ ಪರ್ಯುಷಿತಸ್ಯ ಚ ।
ತುಲಸೀ ಬಕುಲೋ ವೃಕ್ಷಶ್ಚಂಪಕಶ್ಚ ಸರೋಜಿನಿ ॥ 93 ॥

ಬಿಲ್ವಕಲ್ಹಾರದಮನಾಸ್ತಥಾಮರೂಬಕಃ ಕುಶಃ ।
ದೂರ್ವಾಹಿವಲ್ಯಪಾಮಾರ್ಗವಿಷ್ಣುಕ್ರಾಂತಾಮುನಿದ್ರುಮಾಃ ॥ 94 ॥

ಈಗ ನಿಷಿದ್ಧ ಪುಷ್ಪಗಳನ್ನು ಕುರಿತು ಹೇಳಲಾಗುತ್ತದೆ. ಗಂಧ ರಹಿತ, ಕೇಶ ಮತ್ತು ಕೀಟ ದೂಷಿತ, ಉಗ್ರವಾಸನೆಯ, ಮಲಿನ, ನೀಚ ವ್ಯಕ್ತಿಯಿಂದ ತೆಗೆಯಲ್ಪಟ್ಟ, ಮೂಸಿ ನೋಡಲ್ಪಟ್ಟ, ತನ್ನ ಪ್ರಯತ್ನದಿಂದ ಅರಳಿಸಿದ, ಅಶುದ್ಧ ಪಾತ್ರೆಯಲ್ಲಿ ಸಂಗ್ರಹಿಸಿದ, ಸ್ನಾನ ಮಾಡಿ ಒದ್ದೆಬಟ್ಟೆಯಿಂದ ತಂದ, ಯಾಚನೆ ಮಾಡಿ ತಂದ, ಒಣಗಿದ, ಕೊಳೆತ, ಕಪ್ಪು ವರ್ಣಕ್ಕೆ ತಿರುಗಿದ, ನೆಲದ ಮೇಲೆ ಬಿದ್ದ ಹೂಗಳನ್ನು ದೇವರಿಗೆ ಏರಿಸಬಾರದು.

ಚಂಪಾ ಮತ್ತು ಕಮಲದ ಮೊಗ್ಗುಗಳನ್ನು ಬಿಟ್ಟು ಅನ್ಯ ಹೂಗಳ ಮೊಗ್ಗುಗಳು ಪೂಜೆಯಲ್ಲಿ ನಿಷಿದ್ಧವಾಗಿವೆ. ಕುರಂಟಕ, ಕಚನಾರ ಮತ್ತು ಎರಡೂ ಪ್ರಕಾರದ ಬೃಹತಿ ಪುಷ್ಪಗಳು, ಪೂಜೆಯಲ್ಲಿ ವರ್ಜಿತವಾಗಿವೆ. ಹೂವು, ಪತ್ರ ಮತ್ತು ಫಲಗಳನ್ನು ಅಧೋಮುಖವಾಗಿ ದೇವರಿಗೆ ಅರ್ಪಿಸಬಾರದು. ಪುಷ್ಪಾಂಜಲಿಯಲ್ಲಿ

ಪರ್ಯುಷಿತ ಮತ್ತು ಅಧೋಮುಖಿ ಪುಷ್ಪಗಳ ದೋಷವಿರುವುದಿಲ್ಲ.

ತುಲಸಿ, ಮೌಲಸಿರಿ, ಚಂಪಾ, ಕಮಲಿನಿ, ಬಿಲ್ವಶ್ವೇತಕಮಲ, ದಮನಕ, ಮಹುವಾ, ದರ್ಭೆ, ಗರಿಕೆ, ನಾಗವಲ್ಲಿ, ಉತ್ತರಾಗ, ವಿಷ್ಣುಕ್ರಾಂತಾ ಅಗಸ್ತ್ಯ ಮತ್ತು ನೆಲ್ಲಿ ಪತ್ರಗಳನ್ನು ದೇವತೆಗಳ ಪೂಜೆಗೆ ಪ್ರಶಸ್ತವಾದ ಗ್ರಾಹ್ಯ ಪತ್ರಗಳೆಂದು ಹೇಳಲಾಗಿದೆ.

ಧಾತ್ರಿಯುತಾನಾಮೇತೇಷಾಂ ಪತ್ರೈಃ ಕುರ್ಯಾತ್ಸುರಾರ್ಚನಮ್ ।
ಜಂಬುದಾಡಿಮಜಂಬೀರತಿಂತಿಣಿ ಬೀಜಪೂರಕಾಃ ॥ 95 ॥

ರಂಭಾಧಾತ್ರಿ ಚ ಬದರೀರ ಸಾಲಃ ಪನಸೋಪಿ ಚ ।
ಏಷಾಂ ಫಲೈರ್ಯಜೇದ್ದೇವಂ ತುಲಸಿ ತು ಹರೇ ಪ್ರಿಯಾಃ ॥ 96 ॥

ಸುವರ್ಣಪುಷ್ಪಂ ತುಲಸಿ ನೈವನಿರ್ಮಾಲ್ಯತಾಂ ವ್ರಜೇತ್ ।
ಪುಷ್ಪಪೂಜಾ ವಿಧಾಯೇತ್ಥಂ ಕುರ್ಯಾದಾವರಣಮಾರ್ಚನಮ್ ॥ 97 ॥

ನೇರಳೆ, ದ್ರಾಕ್ಷಿ, ನಿಂಬೆ, ಹುಣಸೆ, ಬಿಜೌರಾ, ಬಾಳೆ, ನೆಲ್ಲಿ, ಬಾರೆ, ಮಾವು ಮತ್ತು ಹಲಸಿನ ಹಣ್ಣುಗಳನ್ನು ದೇವರ ಪೂಜೆಯಲ್ಲಿ ಉಪಯೋಗಿಸಬಹುದು. ತುಲಸಿಯು ವಿಷ್ಣುವಿಗೆ ಪ್ರಿಯವಾದದ್ದು. ಅಮಲತಾಸದ ಪುಷ್ಪ ಮತ್ತು ತುಳಸಿ ಪತ್ರಗಳು ಎಂದೂ ನಿರ್ಮಾಲ್ಯವಾಗುವುದಿಲ್ಲ. ಈ ಪ್ರಕಾರ ಪುಷ್ಪಪೂಜೆ ಮಾಡಿದ ನಂತರ ಆವರಣ ಅರ್ಚನೆ ಮಾಡಬೇಕು.

ಅಂಗಾದಿ ದಿಕ್ಷಹೇತ್ಯಂತಂ ತತೋ ಧೂಪಾದಿಕಂ ಚರೇತ್ ।
ಅಗ್ನಿನೈರ್ಋತಿವಾಯ್ವೀಶಕೋಣೇಷು ಹೃದಯಂ ಶಿರಃ ॥ 98 ॥

ಶಿಖಾಂ ಕವಚಮಾರಾಧ್ಯ ನೇತ್ರಮಗ್ರೇ ಪ್ರಪೂಜಯೇತ್ ।
ದಿಕ್ಷಸ್ತ್ರಮಂಗ್ಗೇವ್ಯಸ್ತಾ ಧಾತವ್ಯಾ ವಾಮಲೋಚನಾಃ ॥ 99 ॥

ಸಿತಾಶ್ವೇತಾಸಿತಾಸ್ತಿಸ್ರೋ ರಕ್ತಾಇಷ್ಟಾಭಯಾನ್ವಿತಾಃ ।
ಸ್ವದಿಕ್ಷು ಪ್ರಯಜೇದ್ ದಿಕ್ಪಾಂಜ್ಞಾತಿ ಹೇತ್ಯಾದಿ ಸಂಯುತಾನ್ ॥ 100 ॥

ಪುಷ್ಪ ಪೂಜೆಯ ನಂತರ ಷಡಂಗಪೂಜೆಯಿಂದ ಪ್ರಾರಂಭಿಸಿ ದಿಕ್ಪಾಲರು ಮತ್ತು ಅವರ ಆಯುಧಗಳ ಪೂಜಪರ್ಯಂತ ಆವರಣ ಪೂಜೆ ಮಾಡಬೇಕು. ಇದರ ನಂತರ ಧೂಪ, ದೀಪ ಮುಂತಾದ ಉಪಚಾರಗಳಿಂದ ಇಷ್ಟ ದೇವತೆಯ ಪೂಜೆ ಮಾಡಬೇಕು. ಆಗ್ನೇಯ, ನೈಋತ್ಯ, ವಾಯುವ್ಯ, ಮತ್ತು ಈಶಾನ್ಯ





ಕೋನಗಳಲ್ಲಿ ಹೃದಯ, ಶಿರ, ಶಿಖಾ ಮತ್ತು ಕವಚಗಳನ್ನು ಪೂಜೆ ಮಾಡಿ ಅಗ್ರಭಾಗದಲ್ಲಿ ನೇತ್ರ ಮತ್ತು ಪೂರ್ವಾದಿ ದಿಶೆಗಳಲ್ಲಿ ಅಸ್ತ್ರ ಪೂಜೆಯನ್ನು ಮಾಡಬೇಕು. ಅಂಗ ಪೂಜೆ ಮಾಡುವ ಸಮಯದಲ್ಲಿ ಮೂರು ಶ್ವೇತ ವರ್ಣವುಳ್ಳ ಮತ್ತು ಮೂರು ರಕ್ತವರ್ಣದ ಈ ಪ್ರಕಾರ ಒಟ್ಟು ಆರು ಅಂಗದೇವಿಯರನ್ನು ಧ್ಯಾನ ಮಾಡಬೇಕು. ಈ ಅಂಗ ದೇವಿಯರು ಅತ್ಯಂತ ಮನೋಹರ ಸ್ತ್ರೀವೇಷದಲ್ಲಿ ಸುಶೋಭಿತರಾಗಿರುತ್ತಾರೆ. ಮತ್ತು ಕೈಗಳಲ್ಲಿ ವರ ಅಭಯ ಮುದ್ರೆ ಧರಿಸಿರುತ್ತಾರೆ. ಇದರ ನಂತರ ತಮ್ಮ ತಮ್ಮ ದಿಕ್ಕುಗಳಲ್ಲಿ ಜಾತಿ (ವಾಹನ) ಮತ್ತು ಆಯುಧಗಳ ಜೊತೆಗೆ ದಿಕ್ಪಾಲರನ್ನು ಪೂಜೆ ಮಾಡಬೇಕು. ಇವರ ಪೂಜಾ ಮಂತ್ರಗಳ ಪ್ರಾರಂಭದಲ್ಲಿ ತಾರ (ಓಂ) ಮತ್ತು ಅವರವರ ಬೀಜಾಕ್ಷರಗಳನ್ನು (ಲಂ, ರಂ, ಮಂ, ಕ್ಷಂ, ವಂ, ಯಂ, ಸಂ,ಹಂ ಹ್ರೀಂ,ಆಂ) ಜೋಡಿಸಬೇಕು.

ಆವರಣ ಪೂಜಾ ಪ್ರಯೋಗ

ತಾರಾದಿ ನಿಜಬೀಜಾಧ್ಯಾಂಸ್ತತ್ರಯೋಗೋಧುನೋಚ್ಯತೆ ।
ತಾರಂ ಬೀಜಮಥೇಂದ್ರಾಯಾಮುಕಾಧಿ ಪತಯೆ ತತಃ ॥ 101 ॥

ಸಾಯೂಧಾಯ ಸವಾಹಾಂತೆ ನಾಯಸಾಂತೆ ಪರೀತಿ ಚ ।
ವಾರಾಯಾಂತೆ ಸಶಕ್ತೀತಿ ಕಾಯಾಮುಕಪದಂ ತತಃ ॥ 102 ॥

ಪಾರ್ಷದಾಯ ನಮೋಂತೋಯಂ ದಿಕ್ಪಾಲಾನಾಂ ಮನುಃ ಸ್ಮೃತಿಃ ।
ಇಂದ್ರಾಯೇತಿ ಪದಸ್ಥಾನೆ ವಹ್ನ್ಯಾದಿಪದಮುಚ್ಚರೇತ್ ॥ 103 ॥

ಆಧ್ಯಾಮುಕಪದಸ್ಥಾನ ಕ್ರಮಾದ್ಬ್ರಾತೀರ್ವದೇತ್ಸುಧಿಃ ।
ಸುರತೇಜಃ ಪ್ರೇತರಕ್ಷಃ ಸಲಿಲಪ್ರಾಣತಾರಕಾಃ ॥ 104 ॥

ಭೂತಾಹಿಲೋಕಾ ವಿಜ್ಞೇಯಾ ಆಶಾಪಾಲಕಜಾತಯಃ ॥
ಪಾರ್ಷದಾತ್ ಪೂರ್ವಮಮುಕಸ್ಥಾನೆ ಸ್ಯಾತ್‌ಸ್ವೇಷ್ಟದೇವತಾ ॥ 105 ॥

ಬೀಜಾನಿ ಪೂರ್ವಮುಕ್ತಾನಿ ವಾಹನಾನ್ಯಾಯುಧಾನ್ಯಪಿ ।
ಯಾತು ತೋಯಪಯೋರ್ಮಧ್ಯೆ ನಂತಂ ಪೂರ್ವೇಶಯೋಸ್ತ್ರಕಮ್ ॥106॥

ತಾರ (ಓಂ) ನಂತರ ಬೀಜಾಕ್ಷರ, ಇಂದ್ರಾಯ ಇತ್ಯಾದಿ, ಆಮೇಲೆ 'ಅಮುಕಾಧಿಪತಯೆ ಸಾಯುಧಾಯ ಸವಾಹನಾಯ ಸಪರಿವಾರಾಯ ಸಶಕ್ತಿಕಾಯ'ದ ನಂತರ 'ಅಮುಕ ಪದಾಯ', 'ಅಮುಕಪಾರ್ಷದಾಯ' ಕೊನೆಯಲ್ಲಿ ನಮಃ ಸೇರಿಸುವುದರಿಂದ ದಿಕ್ಪಾಲಕರ ಪೂಜಾ ಮಂತ್ರ

ರಚನೆಯಾಗುತ್ತದೆ. ಇಂದ್ರಾಯದ ನಂತರ ಅನ್ಯ ದಿಕ್ಪಾಲರನ್ನು ಪೂಜೆ ಮಾಡುವಾಗ ಅವರ ಸ್ಥಾನದಲ್ಲಿ ಆಗ್ನೇಯಾದಿ ಪದವನ್ನು ಕಲ್ಪಿಸಬೇಕು. ಅಮುಕ ಪದದ ಸ್ಥಾನದಲ್ಲಿ ಅವರ ಜಾತಿಯನ್ನು ಹೇಳಬೇಕು. ಸುರತೇಜ, ಪ್ರೇತ, ರಕ್ಷ, ಜಲ, ಪ್ರಾಣ, ನಕ್ಷತ್ರ, ಭೂತ, ನಾಗ ಮತ್ತು ಲೋಕ ಇವು ದಶದಿಕ್ಪಾಲರ ವಾಹನಗಳಾಗಿವೆ. ಪಾರ್ಷದಾಯದ ಮೊದಲು ಬರುವ ಅಮುಕದ ಸ್ಥಾನದಲ್ಲಿ ಇಷ್ಟದೇವರ ಹೆಸರನ್ನು ಉಚ್ಚರಿಸಬೇಕು. ಇದರ ಬೀಜ, ವಾಹನ ಮತ್ತು ಆಯುಧಗಳನ್ನು ಪ್ರಾರಂಭದಲ್ಲಿ ಉಚ್ಚರಿಸಬೇಕು.ನಿಋತಿ ಮತ್ತು ವರುಣರ ಮಧ್ಯದಲ್ಲಿ ಅನಂತದ ಮತ್ತು ಪೂರ್ವ ಹಾಗೂ ಈಶಾನದ ಮಧ್ಯದಲ್ಲಿ ಬ್ರಹ್ಮನ ಪೂಜೆಯಿಂದ ದಶದಿಕ್ಪಾಲರ ಸಂಖ್ಯೆಯು ಪೂರ್ಣವಾಗುತ್ತವೆ.

ಪ್ರತ್ಯಾವೃತ್ತಿ ಕ್ಷಿಪೇದ್ ದೇವೇ ಪುಷ್ಪಂ ಮಂತ್ರಮಿಮಂ ಜಪನ್ ।
ಅಭೀಷ್ಟಸಿದ್ಧಿಂ ಮೇ ದೇಹಿ ಶರಣಾಗತವತ್ಸಲ ॥ 107 ॥

ಭಕ್ತ್ಯಾ ಸಮರ್ಪಯೇ ತುಭ್ಯಾಮಿದಮಾವರಣಾರ್ಚನಮ್ ।
ಆಹ್ವಾನಾದ್ಯುಪಚಾರೇಷು ಪ್ರತ್ಯೇಕಂ ಪುಷ್ಪಪಾಥಸಿ ॥ 108 ॥
ದತ್ವಾ ಪ್ರಕ್ಷಾಲ್ಯ ಚ ಕರಮುಪಚಾರಾಂತರಂ ಚರೇತ್ ।

ದಿಕ್ಪಾಲರ ಪೂಜಾ ಮಂತ್ರಗಳು :

ಓಮ ಲಂ ಇಂದ್ರಾಯ ಸುರಾಧಿಪತಯೆ ಸಾಯುಧಾಯ ಸವಾಹನಾಯ ಸಪರಿವಾರಾಯ ಸಶಕ್ತಿಕಾಯ ಮಮಾಮುಕೇಷ್ಟದೇವತಾ ಪಾರ್ಷದಾಯ ನಮಃ

ಓಂ ರಂ ಅಗ್ನಯೆ ತೇಜೋಧಿತಯೆ ಸಾಯೂಧಾಯ ಸವಾಹನಾಯ ಸಪರಿವಾರಾಯ ಸಶಕ್ತಿಕಾಯ ಮಮಾಮಕೇಷ್ಟದೇವತಾ ಪಾರ್ಷದಾಯ ನಮಃ

ಓಂ ಮಂ ಯಮಾಯ ಪ್ರೇತಾಧಿಪತಯೆ ..................ನಮಃ ।
ಓಂ ಕ್ಷಂ ನಿಋತಯೆ ರಕ್ಷೋಧಪತಯೆ ..................ನಮಃ ।
ಓಂ ವಂ ವರುಣಾಯ ಜಲಾಧಿಪತಯೆ ..................ನಮಃ ।
ಓಂ ಯಂ ವಾಯುವೆ ಪ್ರಾಣಾಧಿಪತಯೆ ..................ನಮಃ ।
ಓಂ ಸಂ ಸೋಮಾಯ ನಕ್ಷತ್ರಾಧಿಪತಯೆ ..................ನಮಃ ।





ಓಂ ಹಂ ಈಶಾನಾಯ ಭೂತಾಧಿಪತಯೆ ..................ನಮಃ ।
ಓಂ ಹ್ರೀಂ ಅನಂತಾಯ ನಾಗಾಧಿಪತಯೆ ..................ನಮಃ ।
ಓಂ ಆಂ ಬ್ರಹ್ಮಣೆ ಲೋಕಾಧಿಪತಯೆ ..................ನಮಃ ।

ಪ್ರತ್ಯೇಕ ದೇವತೆಯ ಆವಾಹನಾದಿ ಪ್ರತ್ಯೇಕ ಉಪಚಾರದಲ್ಲಿ ಜಲ ಅಥವಾ ಪುಷ್ಪಗಳನ್ನು ಎರಿಸಬೇಕು. ನಂತರ ಕೈಗಳನ್ನು ತೊಳೆದುಕೊಂಡು ಅನ್ಯ ಉಪಚಾರಗಳಿಂದ ಪೂಜೆ ಮಾಡಬೇಕು.

ಧೂಪ-ದೀಪದಾನ ವಿಧಾನ

ಧೂಪಪಾತ್ರಸ್ಥಿತಾಂಗಾರೆ ಕ್ಷಿಪ್ತ್ವಾಗುರುಪುರಾದಿಕಮ್ ॥ 109 ॥

ಪಾತ್ರಮಸ್ತ್ರೇಣ ಸಂಪ್ರೋಕ್ಷ್ಯ ಹೃದಾ ಪುಷ್ಪಂ ಸಮರ್ಪಯೇತ್ ।
ಸಂಸ್ಪೃಶನ್ವಾಮತರ್ಜನ್ಯಾ ಮೂಲಶ್ಲೋಕಂ ಚ ಸಂಪಠೇತ್ ॥ 110 ॥

ವನಸ್ಪತಿರಸೋಪೇತೋ ಗಂಧಾಢ್ಯಃ ಸುಮನೋಹರಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಯಂ ಪ್ರತಿಗೃಹ್ಯತಾಮ್ ॥111 ॥

ಸಾಂಗಾಯ ಸಪರೀತ್ಯಂತೆ ವಾರಾಯ ಡೆಂತದೇವತಾ ।
ಧೂಪಂ ಸಮರ್ಪಯಾಮೀತಿ ನಮೋಂತಂ ಮಂತ್ರಮುಚ್ಚರನ್ ॥ 112 ॥

ಶಂಖಾಂಬು ಪ್ರಕ್ಷಿಪೇದ್ ಭೂಮೌ ಧೂಪಮುದ್ರಾಂ ಪ್ರದರ್ಶಯೇತ್ ।
ತರ್ಜನ್ಯಂಗುಷ್ಠಯೋಗೇನ ಘಂಟಾಮರ್ಚೇತ್ ಸ್ವಮಂತ್ರತಃ ॥ 113 ॥

ಜಯಧ್ವನಿ ಮಂತ್ರಮಾತಃ ಸ್ವಾಹಾಂತಃ ಸದಶಾಕ್ಷರಃ ।
ವಾದಯನ್ವಾಮಹಸ್ತೇನ ಕೀರ್ತಯಂದೇವತಾಗುಣಾನ್ ॥ 114 ॥

ಧೂಪಯೇದ್ ದಕ್ಷಹಸ್ತೇನ ದೇವತಾನಾಭಿದೇಶತಃ ।
ಜಲಂ ಪುಷ್ಪಾಂಜಲಿಂ ದದ್ಯಾದ್ದೀಪದಾನಮಪೀದೃಶಮ್ ॥ 115 ॥

ಧೂಪ ಪಾತ್ರದಲ್ಲಿ ಇರುವ ಅಂಗಾರದ ಮೇಲೆ ಅಗರ ಮತ್ತು ಗುಗ್ಗುಳಗಳನ್ನು ಹಾಕಿ ಫಟ್ ಮಂತ್ರದಿಂದ ಪಾತ್ರೆಯನ್ನು ಪ್ರಕ್ಷಾಳನ ಮಾಡಿ ನಮಃ ಮಂತ್ರದಿಂದ ಪುಷ್ಪ ಸಮರ್ಪಿಸಬೇಕು. ನಂತರ ಎಡಗೈಯ ತರ್ಜನಿಯಿಂದ ಧೂಪ ಪಾತ್ರದ ಸ್ಪರ್ಶ ಮಾಡುತ್ತ ಮೂಲಮಂತ್ರದ ಜೊತೆಗೆ 'ವನಸ್ಪತಿರಸೋಪೇತೋ ಗಂಧಾಢ್ಯಃ ಸುಮನೋಹರಃ' ಆಘ್ರೇಯಃ ಸರ್ವದೇವಾನಾಂ ಧೂಪೋಯಂ ಪ್ರತಿಗೃಹ್ಯತಾಮ್'

ಯಸ್ಯ ದರ್ಶನಮಿಚ್ಛಂತಿ ದೇವಾಃ ಸಾಭಿಷ್ಟಸಿದ್ಧಯೆ ।
ತಸ್ಮೈ ತೆ ಪರಮೇಶಾಯ ಸ್ವಾಗತಂ ಸ್ವಾಗತಂ ಚ ತೆ ॥ 58 ॥

ತತಃ ಸುಸ್ವಾಗತಂ ಕುರ್ಯಾನ್ಮೂಲಶ್ಲೋಕೌ ಸಮುಚ್ಚರನ್ ।
ಕೃತಾರ್ಥೋನುಗೃಹೀತೋಸ್ಮಿ ಸಫಲಂ ಜೀವಿತಂ ಮಮ
ಆಗತೊ ದೇವದೇವೇಶ ಸುಸ್ವಾಗತ ಮಿದಂ ಪುನಃ । ॥ 59 ॥

ಮೂಲಮಂತ್ರದ ಜೊತೆಗೆ 'ಅವ್ಯಕ್ತ..........ಸರ್ವತಃ' ಪರ್ಯಂತ ಶ್ಲೋಕವನ್ನು ಹೇಳುತ್ತ ಅವಗುಂಠನ ಮಾಡಬೇಕು.

ಧೇನು ಮುದ್ರಾದಿಂದ ಅಮೃತೀಕರಣ ಮಾಡಿದ ನಂತರ ಮಹಾಮುದ್ರಾ ಪ್ರದರ್ಶನ ಮಾಡುತ್ತ ಪರಮೀಕರಣ ಮಾಡಬೇಕು. ನಂತರ ಇಷ್ಟದೇವತೆಯ ಸ್ವಾಗತ ಮಾಡಬೇಕು.

ಸ್ವಾಗತ ಮತ್ತು ಸುಸ್ವಾಗತ ಮೂಲಮಂತ್ರದ ಜೊತೆಗೆ 'ಯಸ್ಯ....ಸ್ವಾಗತಂ ಚ ತೆ' ಪರ್ಯಂತ ಶ್ಲೋಕವನ್ನು ಹೇಳುತ್ತ ನಿಜ ಇಷ್ಟ ದೇವನನ್ನು ಸ್ವಾಗತಿಸಬೇಕು. ನಂತರ ಮೂಲ ಮಂತ್ರದ ಜೊತೆಗೆ 'ಕೃತಾರ್ಥೊ......ಸುಸ್ವಾಗತಮಿದಂ ಪುನಃ' ಪರ್ಯಂತ ಶ್ಲೋಕವನ್ನು ಪಠಿಸುತ್ತ ಇಷ್ಟದೇವನ ಸುಸ್ವಾಗತ ಮಾಡಬೇಕು.

### ಪಾದ್ಯ ಸಮರ್ಪಣ

ಶ್ಯಾಮಾಕವಿಷ್ಣುಕ್ರಾಂತಾಬ್ಜದೂರ್ವಾಃ ಪಾದ್ಯಜಲೆ ಕ್ಷಿಪೇತ್ ॥ 60 ॥

ಮೂಲಶ್ಲೋಕನಮೋಮಂತ್ರೈಃ ಪಾದ್ಯಂ ಪಾದಾಂಬುಜೇಂರ್ಪಯೇತ್ ।
ಯದ್‌ಭಕ್ತಿಲೇಶ ಸಂಪರ್ಕಾ ಪರಮಾನಂದ ವಿಗ್ರಹಮ್ ॥ 61 ॥
ತಸ್ಮೈ ತೆ ಚರಣಾಬ್ಜಾಯ ಪಾದ್ಯಂ ಶುದ್ಧಾಯ ಕಲ್ಪಯೆ ।

ಶ್ಯಾಮಕ, ವಿಷ್ಣುಕ್ರಾಂತಾ, ಕಮಲ ಮತ್ತು ಗರಿಕೆಗಳನ್ನು ಪಾದ್ಯಜಲದಲ್ಲಿ ಸೇರಿಸಬೇಕು. ನಂತರ ಮೂಲಮಂತ್ರದೊಂದಿಗೆ, ಯದ್ಭಕ್ತಿಲೇಶ ಶುದ್ಧಾಯ...ಕಲ್ಪಯೆ ಪರ್ಯಂತ ಶ್ಲೋಕವನ್ನು ಹೇಳಿ ಕೊನೆಯಲ್ಲಿ ನಮಃ ಸೇರಿಸಿ ಇಷ್ಟದೇವತೆಯ ಚರಣ ಕಮಲಗಳಲ್ಲಿ ಪಾದ್ಯವನ್ನು ಅರ್ಪಿಸಬೇಕು.

### ಆಚಮನ

ಲವಂಗಜಾತಿಕಂಕೋಲಂ ಪ್ರಕಿಪ್ಯಾಚಮನೀಯಕೆ ॥ 62 ॥
ದಧ್ಯಾದಾಚಮನಂ ವಕ್ತ್ರೆ ಮೂಲಶ್ಲೋಕಸುಧಾಕ್ಷರೈಃ ।
ವೇದಾನಾಮಪಿ ವೇದ್ಯಾಯ ದೇವಾನಾಂ ದೇವತಾತ್ಮನೆ ॥ 63 ॥

ಆಚಾಮಂ ಕಲ್ಪಯಾಮೀಶ ಶುದ್ಧಾನಾಂ ಶುದ್ಧಿಹೇತವೆ ।





ಲವಂಗ, ಜಾಜಿಕಾಯಿ, ಕಂಕೋಲಗಳನ್ನು ಆಚಮನ ಜಲದಲ್ಲಿ ಸೇರಿಸಬೇಕು. ನಂತರ ಮೂಲಮಂತ್ರವನ್ನು ಹೇಳಿ 'ವೇದಾನಾಮಪಿ....ಶುದ್ಧಿಹೇತವೆ' ಪರ್ಯಂತ ಶ್ಲೋಕವನ್ನು ಹೇಳಿ ಇಷ್ಟದೇವತೆಗೆ ಆಚಮನವನ್ನು ಸಮರ್ಪಿಸಬೇಕು.

### ಅರ್ಘ್ಯ ದಾನ

ಅರ್ಘ್ಯ ಪಾತ್ರೆ ಕ್ಷಿಪೇದ್ ದೂರ್ವಾಸ್ತಿಲದರ್ಭಾಗ್ರಸರ್ಷಪಾನ್ ॥ 64 ॥
ಯವಪುಷ್ಪಾಕ್ಷತಾನ್ಗಂಧಂ ತೇನಾರ್ಘ್ಯ ಮೂರ್ಧ್ನಿ ಚಾಚರೇತ್ ।
ಮೂಲಶ್ಲೋಕಶಿರೋಮಂತ್ರೈಃ ದೇವಸ್ಯ ಮನುವಿತ್ತಮಃ ॥ 65 ॥

ತಾಪತ್ರಯಹರಂ ದಿವ್ಯಂ ಪರಮಾನಂದ ಲಕ್ಷಣಮ್ ।
ತಾಪತ್ರಯ ವಿನಿರ್ಮುಕ್ತಂ ತವಾರ್ಘ್ಯ ಕಲ್ಪಯಾಮ್ಯಹಮ್ ॥ 66 ॥

ಅರ್ಘ್ಯಪಾತ್ರೆಯಲ್ಲಿ ಗರಿಕೆ, ಎಳ್ಳು, ಹುಲ್ಲಿನ ಎಸಳು, ಸರ್ಷಪ, ಜವೆ, ಗೋಧಿ, ಪುಷ್ಪ, ಅಕ್ಷತೆ, ಕುಂಕುಮಗಳನ್ನು ಹಾಕಬೇಕು. ನಂತರ ಮೂಲಮಂತ್ರದ ಜೊತೆಗೆ 'ತಾಪತ್ರಯಹರಂ......ಕಲ್ಪಯಾಮ್ಯಹಮ್' ಶ್ಲೋಕದ ಕೊನೆಯಲ್ಲಿ 'ಸ್ವಾಹಾ' ಸೇರಿಸಿ ದೇವತೆಯ ಶಿರದ ಮೇಲೆ ಅರ್ಘ್ಯ ಕೊಡಬೇಕು.

### ಮಧುಪರ್ಕ

ಪಾತ್ರೆ ತು ಮಧುಪರ್ಕಸ್ಯ ದಧ್ಯಾಜ್ಯಮಧು ಚ ಕ್ಷಿಪೇತ್ ।
ಮೂಲಶ್ಲೋಕಸುಧಾಮಂತ್ರೈರ್ದಧ್ಯಾತ್ತಂ ವದನೆ ಪ್ರಭೋ ॥ 67 ॥

ಸರ್ವಕಾಲುಷ್ಯಹೀನಾಯ ಪರಿಪೂರ್ಣಸುಖಾತ್ಮನೆ ।
ಮಧುಪರ್ಕಮಿದಂ ದೇವ ಕಲ್ಪಯಾಮಿ ಪ್ರಸೀದ ಮೆ ॥ 68 ॥

ಮಧುಪರ್ಕ ಪಾತ್ರೆಯಲ್ಲಿ ಮೊಸರು, ತುಪ್ಪ, ಜೇನುತುಪ್ಪಗಳನ್ನು ಹಾಕಬೇಕು. ನಂತರ ಮೂಲಮಂತ್ರದ ಜೊತೆಗೆ 'ಸರ್ವಕಾಲುಷ್ಯ.......ಪ್ರಸೀದ ಮೆ' ಪರ್ಯಂತ ಶ್ಲೋಕವನ್ನು ಓದುತ್ತ ಕೊನೆಯಲ್ಲಿ 'ವಂ' ಸುಧಾಬೀಜವನ್ನು ಹೇಳುತ್ತ ಇಷ್ಟದೇವನ ಬಾಯಿಯಲ್ಲಿ ಮಧುಪರ್ಕ ಸಮರ್ಪಿಸಬೇಕು.

### ಪುನರಾಚಮನ

ಪುನರಾಚಮನಂ ದಧ್ಯಾನ್ಮೂಲಶ್ಲೋಕಾಂತರಂ ಪಠನ್ ।
ಉಚ್ಛಿಷ್ಟೋಪ್ಯಶುಚಿರ್ವಾಪಿ ಯಸ್ಯ ಸ್ಮರಣಮಾತ್ರತಃ ॥ 69॥
ಶುದ್ಧಿಮಾಪ್ನೋತಿ ತಸ್ಮೈ ತೆ ಪುನರಾಚಮನೀಯಕಮ್ ।

ಪೂಜಾ ವಿಧಾನ

ವಿಧಾಯಾವಾಹನಂ ಚೇತ್ಥಮಾವಾಹನ್ಯಾ ತು ಮುದ್ರಯಾ:
ಸಂಸ್ಥಾಪಿನ್ಯಾ ಸ್ಥಾಪಯೇತ್ತ ಮೂಲಾಂತೇ ಶ್ಲೋಕಮುಚ್ಚರನ್ । ॥ 43 ॥
ತವೇಯಂ ಮಹಿಮಾ ಮೂರ್ತಿಸ್ತಸ್ಯಾಂ ತ್ವಾಂ ಸರ್ವಗಂ ಪ್ರಭೋ ॥ 44 ॥
ಭಕ್ತಿಸ್ನೇಹಸಮಾಕೃಷ್ಟಂ ದೀಪವತ್ಸ್ಥಾಪಯಾಮ್ಯಹಮ್ ।
ಊಹಃ ಕಾರ್ಯೋ ಭವಾನ್ಯಾದ್ ಶ್ಲೋಕೇಷ್ವಾವಾಹನಾದಿಷು

ಮೂಲಶ್ಲೋಕೋ ಪಠನ್ ಕುರ್ಯಾದಾಸನಂ ಚಾಪವೇಶನಮ್ । ॥ 45 ॥
ಸರ್ವಾಂತರ್ಯಾಮಿಣೇ ದೇವ ಸರ್ವಬೀಜಮಯಂ ಶುಭಮ್ ।
ಸ್ವಾತ್ಮಸ್ಥಾಯ ಪರಂ ಶುದ್ಧಮಾಸನಂ ಕಲ್ಪಯಾಮ್ಯಹಮ್ । ॥ 46 ॥
ಅಸ್ಮಿನ್ವರಾಸನೇ ದೇವ ಸುಖಾಸೀನೋಕ್ಷರಾತ್ಮಕ ॥ 47 ॥

ಆವಾಹನಿ ಮುದ್ರೆಯಿಂದ ಇಷ್ಟದೇವನನ್ನು ಆವಾಹನೆ ಮಾಡಿ ಮೂಲಮಂತ್ರದ ಜೊತೆಗೆ.

ತವೇಯಂ ಮಹಿಮಾಮೂರ್ತಿಸ್ತಸ್ಯಾಂ ತ್ವಾಂ ಸರ್ವಗಂ ಪ್ರಭೋ ।
ಭಕ್ತಿಸ್ನೇಹಸಮಾಕೃಷ್ಟಂ ದೀಪವತ್ಸ್ಥಾಪಯಾಮ್ಯಹಮ್ ॥

ಈ ಶ್ಲೋಕವನ್ನು ಪಠಿಸುತ್ತ ಸಂಸ್ಥಾಪನಿ ಮುದ್ರೆಯಿಂದ ಮೂರ್ತಿಯನ್ನು ಸ್ಥಾಪನೆ ಮಾಡಬೇಕು. ಇಷ್ಟದೇವ ಪೂಜೆ ಮಾಡುವಾಗ ಆವಾಹನಾದಿಗೆ ಭವಾನಿ, ಗಣೇಶ, ರವಿ ಮತ್ತು ವಿಷ್ಣುಗಳನ್ನು ಕಲ್ಪನೆ ಮಾಡಿಕೊಳ್ಳಬೇಕು.

ಮೂಲಮಂತ್ರದ ಜೊತೆಗೆ 'ಸರ್ವಾಂತರ್ಯಾಮಿಣೇ ದೇವ ಸರ್ವಬೀಜಮಯಂ ಶುಭಮ್, ಸ್ವಾತ್ಮಸ್ಥಾಯ ಪದಂ ಶುದ್ಧಮಾನಸಂ ಕಲ್ಪಯಾಮ್ಯಹಮ್' ಈ ಶ್ಲೋಕವನ್ನು ಹೇಳುತ್ತ ಆಸನವನ್ನು ಕೊಡಬೇಕು. ಪುನಃ ಮೂಲಮಂತ್ರದ ಜೊತೆಗೆ, "ಅಸ್ಮಿನ್ವರಾಸನೇ ದೇವ ಪ್ರತಿಷ್ಠಿತೋ ಭವೇಶ ತ್ವಂ ಪ್ರಸೀದ ಪರಮೇಶ್ವರ" ಈ ಶ್ಲೋಕವನ್ನು ಹೇಳುತ್ತ ಕುಳ್ಳಿರಿಸಬೇಕು.

ಪ್ರತಿಷ್ಠಿತೋ ಭವೇಶ ತ್ವ ಪ್ರಸೀದ ಪರಮೇಶ್ವರ ।
ಮೂಲಂ ಶ್ಲೋಕಂ ತತಃ ಕುರ್ಯಾತ್ ಸನ್ನಿಧಾನಂ ಸ್ವಮುದ್ರಯಾ ॥ 48 ॥
ಅನನ್ಯಾ ತವ ದೇವೇಶ ಮೂರ್ತಿಶಕ್ತಿರಿಯಂ ಪ್ರಭೋ ।
ಸಾನಿಧ್ಯಂ ಕುರು ತಸ್ಯಾಂ ತ್ವಂ ಭಕ್ತಾನುಗ್ರಹತತ್ಪರಃ ॥ 49 ॥
ಪಠನ್ಮೂಲಂ ತಥಾ ಶ್ಲೋಕಂ ಸನ್ನಿರುಧ್ಯಾತ್ ಸ್ವಮುದ್ರಯಾ ।





ಅಜ್ಞಯಾ ತವ ದೇವೇಶ ಕೃಪಾಂಭೋಧಿಗುಣಾಂಬುಧೇ
ಆತ್ಮಾನಂದೈಕ ತೃಪ್ತಂ ತ್ವಾಂ ನಿರುಣಚ್ಮಿ ಪಿತರ್ಗುರೋ । ॥ 50 ॥
ಅಜ್ಞಾನಾದ್ ದುರ್ಮನಸ್ತ್ವಾದ್ವಾ ವೈಕಲ್ಯಾತ್ ಸಾಧನಸ್ಯ ಚ ।
ಯದಪೂರ್ಣಂ ಭವೇತ್ ಕೃತ್ಯ ತದಪ್ಯಭಿಮುಖೋಭವ

ಕುರ್ವೀತ ಮೂಲಶ್ಲೋಕಾಭ್ಯಾಂ ಪ್ರಾರ್ಥನ್ಯಾ ಮುದ್ರಯಾರ್ಚನೇ । ॥ 52 ॥
ದೃಶಾಪೀಯೂಷವರ್ಷಿಣ್ಯಾ ಪೂರಯನ್ಯಜ್ಞವಿಷ್ಟರಮ್
ಮೂರ್ತೌ ವಾ ಯಜ್ಞಸಂಪೂರ್ತೆಃ ಸ್ಥಿರೋ ಭವ ಮಹೇಶ್ವರ । ॥ 53 ॥
ನ್ಯಸೇತ್ ಷಡಂಗ ದೇವಾಂಗೇ ಸಕಲೀಕರಣಂ ಸುಧಿಃ ॥ 54 ॥

ಸನ್ನಿಧಾನ ಮೂಲಮಂತ್ರದ ಜೊತೆಗೆ "ಅನನ್ಯಾ ತವ ದೇವೇಶ ಮೂರ್ತಿಶಕ್ತಿರಿಯಂ ಪ್ರಭೋ ಸಾನಿಧ್ಯಂ ಕುರು ತಸ್ಯಾಂ ತ್ವಂ ಭಕ್ತಾನುಗ್ರಹ ತತ್ಪರಃ" ಈ ಶ್ಲೋಕವನ್ನು ಹೇಳುತ್ತ ಸನ್ನಿಧಾನ ಮುದ್ರಾದಿಂದ ಸನ್ನಿಧಾನ ಮಾಡಬೇಕು.

ಮೂಲಮಂತ್ರದಿಂದ ಜೊತೆಗೆ 'ಅಜ್ಞಯಾ ತವ....ನಿರುಣಚ್ಮಿ ಪಿತರ್ಗುರೋ" ಪರ್ಯಂತ ಶ್ಲೋಕವನ್ನು ಹೇಳುತತ ಸನ್ನಿರೋಧನ ಮುದ್ರೆಯ ಮೂಲಕ ಸನ್ನಿರೋಧನ ಮಾಡಬೇಕು.

ಮೂಲಮಂತ್ರದ ಜೊತೆಗೆ 'ಅಜ್ಞಾನಾದ ದುರ್ಮನಸ್ತ್ವಾದವಾ ಭವ" ಪರ್ಯಂತ ಶ್ಲೋಕ ಪಠಿಸುತ್ತ ಸಮ್ಮುಖೀ ಮುದ್ರಾ ದ್ವಾರಾ ಸಮ್ಮುಖೀರಣ ಮಾಡಬೇಕು.

ಮೂಲಮಂತ್ರದ ಜೊತೆಗೆ 'ದೃಶಪೀಯೂಷ..........ಮಹೇಶ್ವರಂ' ಪರ್ಯಂತ ಶ್ಲೋಕ ಪಠಿಸುತ್ತ ಪ್ರಾರ್ಥಿನಿ ಮುದ್ರಾ ಮೂಲಕ ಇಷ್ಟದೇವರನ್ನು ಪೂಜೆ ಮಾಡಬೇಕು. ದೇವತೆಯ ಅಂಗಗಳಲ್ಲಿ ಷಡಂಗನ್ಯಾಸ ಮಾಡುವುದನ್ನು ಸಕಲೀಕರಣ ವೆನ್ನುತ್ತಾರೆ.

ಮೂಲಂ ಶ್ಲೋಕಂ ಪಠನ್ ಕುರ್ಯಾದವಗುಂಠಂ ಸ್ವಮುದ್ರಯಾ ।
ಅವ್ಯಕ್ತವಾಙ್ಮನಶ್ಚಕ್ಷುಃ ಶ್ರೋತ್ರದೂರಾಮಿತದ್ಯುತೆ ॥ 55 ॥
ಸ್ವತೇಜಃ ಪಂಜರೇಣಾಶು ವೇಷ್ಟಿತೋ ಭವ ಸರ್ವತಃ ।
ಗೋಮುದ್ರಯಾಮೃತೀಕೃತ್ಯ ವಿದಧ್ಯಾತ್ ಪರಮಾಕೃತಿಮ್ ॥ 56 ॥
ಮಹಾಮುದ್ರಾಂ ವಿರಚಯಂಸ್ತತಃ ಸ್ವಾಗತಮಾಚರೇತ್ ।
ಮೂಲಮಂತ್ರಂ ತಥಾ ಶ್ಲೋಕಂ ಪಠಂಸ್ತದ್ಗತಮಾನಸಃ ॥ 57 ॥

ಕುಂಡಲೀಮಥ ಚೋತ್ಥಾಪ್ಯ ದ್ವಾದಶಾಂತೇ ಪರಂ ನಯೇತ್
ತದುತ್ಥಾಮೃತಧಾರಾಭಿಃ ಪ್ರೀಣಯೇತ್ ಸ್ವೇಷ್ಟದೇವತಾಮ್ । ॥ 22 ।
ಜಪಂ ಕೃತ್ವಾ ನಿವೇದ್ಯಾಸ್ಮೈ ಮನಸಾ ನ ವಿಸರ್ಜಯೇತ್
ಮೂರ್ಧಹೃತ್ವಾದಗುಹ್ಯೇಷು ತನೌ ಪುಷ್ಪಾಂಜಲೀನ್ ಕ್ಷಿಪೇತ್ । ॥ 23 ।
ಅಂತರ್ಯಾಗಂ ವಿಧಾಯೇತ್ಥಂಬಾಹ್ಯಾಪೂಜನಮಾಚರೇತ್ ॥ 24 ।

ಶ್ರದ್ಧಾವಾನ್ ಸಾಧಕರು ತಮ್ಮ ದೇಹಮಯ ಪೀಠದ ಮೇಲೆ ಅಂತರ್ಯಾಗ ಮಾಡಬೇಕು. ಪೀಠನ್ಯಾಸದಲ್ಲಿ ಹೇಳಲಾದ ಸ್ಥಾನಗಳ ಮೇಲೆ ಮಾತೃಕಾದಿ ದೇವತೆಗಳನ್ನು ಗಂಧಾದಿ ಉಪಚಾರಗಳಿಂದ ಪೂಜೆ ಮಾಡಬೇಕು. ನಂತರ ಪೀಠ ಮಂತ್ರದಿಂದ ತನ್ನ ಹೃದಯದಲ್ಲಿ ಇಷ್ಟ ದೇವತೆಯ ಪೂಜೆ ಮಾಡಬೇಕು.

ನಂತರ ಆಧಾರ ಚಕ್ರದಿಂದ ಕುಂಡಲಿಯನ್ನು ಮೇಲಕ್ಕೆ ಕರೆದೊಯ್ದು ಬ್ರಹ್ಮರಂಧ್ರಸ್ಥಿತ ಪರಬ್ರಹ್ಮದೆಡೆಗೆ ಕರೆದೊಯ್ಯಬೇಕು. ಮತ್ತು ಅಲ್ಲಿಂದ ಸ್ರವಿಸುವ ಅಮೃತಧಾರೆಯಿಂದ ಇಷ್ಟದೇವತೆಗಳನ್ನು ತೃಪ್ತಿಪಡಿಸಬೇಕು. ಮತ್ತು ಜಪ ಮಾಡಿ ಎಲ್ಲ ಜಪವನ್ನು ಇಷ್ಟದೇವತೆಗೆ ಸಮರ್ಪಿಸಬೇಕು. ಮನಸ್ಸಿನಿಂದ ಅವರನ್ನು ಎಂದಿಗೂ ವಿಸರ್ಜಿಸಬಾರದು.

ಆಮೇಲೆ, ಶಿರ,ಹೃದಯ, ಪಾದ, ಗುಹ್ಯಾಂಗ ಮತ್ತು ಸಮಗ್ರ ಶರೀರದ ಮೇಲೆ ಪುಷ್ಪಾಂಜಲಿಯನ್ನು ಸಮರ್ಪಣೆ ಮಾಡಬೇಕು. ಈ ಪ್ರಕಾರ ಅಂತರ್ಯಾಗ ಮಾಡಿದ ನಂತರ ಬಾಹ್ಯಪೂಜನ ಮಾಡಬೇಕು.

ಅಂತರ್ಯಾಗಬಹಿರ್ಯಾಗೌ ಗೃಹಸ್ಥಃ ಸರ್ವಮಾಚರೇತ್ ।
ಅಥ್ಯಾಮೇವ ಬ್ರಹ್ಮಚಾರಿ ವಾನಪ್ರಸ್ಥೋ ಯತಿಸ್ತಥಾ ॥ 25 ।

ವರ್ಧನ್ಯಾಂ ಪ್ರಕ್ಷಿಪೇತ್ ಕಿಂಚಿದರ್ಘೋದಕಮನನ್ಯಧೀಃ ।
ಪ್ರಾಣಾನಾಯಮ್ಯ ಮೂಲೇನ ವಾಮೇ ಗುರುಚಯಂ ನಮೇತ್ ॥ 26 ॥

ದಕ್ಷಿಣೇ ಚ ಗಣೇಶಾನಂ ಪೀಠಪೂಜಾಮಥಾಚರೇತ್ ।
ಸ್ವರ್ಣಾದಿನಿರ್ಮಿತೇ ಯಂತ್ರೇ ಯದ್ವಾ ಚಂದನನಿರ್ಮಿತೇ ॥ 27 ।

ಮಂಡೂಕಾತ್ಪರತತ್ವಾಂತಂ ದಿಜಮಧ್ಯೇ ಪೀಠಶಕ್ತಯಃ ।
ಪೃಥಿವ್ಯನಂತರಂ ಪೂಜ್ಯಃ ಕ್ಷೀರಾಬ್ಧಿರ್ಮಾಧವೇ ಶ್ರಿಯಾ ॥ 28 ।

ಇಕ್ಷುಸಿಂಧು ಗಣೇಶೇಸ್ಯಾದನ್ಯತ್ರಾಮೃತಸಾಗರಃ ।
ಅಗ್ನಿರಾಕ್ಷಸವಾಯ್ವೀಶ ಕೋಣೇ ಧರ್ಮಾದಯಃ ಸ್ಮೃತಾಃ ॥ 29 ।





ಇಂದ್ರೇನಾಶವರುಣಸೋಮಾಶಾಸು ನಂಜಾದಿಕಾಃ ।
ಧರ್ಮಾದಿಪೂಜನೇ ಪ್ರಾಚಿ ತಥೈವಾವಾರಣಾರ್ಚನೇ ॥ 30 ॥
ಪೂಜಕಸ್ಯ ಪುರಃ ಕಲ್ಪ್ಯಾಃ ಶಕ್ರಾದಿಷು ಯಥಾಷ್ಟಕಮ್ ।

ಗೃಹಸ್ಥರು ಅಂತರ್ಯಾಗ ಮತ್ತು ಬಹಿರ್ಯಾಗ ಎರಡನ್ನೂ ಮಾಡುವ ಅಧಿಕಾರ ಹೊಂದಿರುತ್ತಾರೆ. ಆದರೆ ಬ್ರಹ್ಮಚಾರಿಗಳು, ವಾನಪ್ರಸ್ಥ ಮತ್ತು ಯತ್ಯಾಶ್ರಮಿಗಳು ಮಾತ್ರ ಅಂತರ್ಯಾಗ ಮಾಡಬೇಕು.

ಪ್ರಾರಂಭದಲ್ಲಿ ಸಾಧಕರು ಏಕಾಗ್ರಚಿತ್ತರಾಗಿ ಅರ್ಘ್ಯಾದಿಯ ಜಲವನ್ನು ವರ್ಧನಿಯಲ್ಲಿ ಹಾಕಬೇಕು. ನಂತರ ಮೂಲಮಂತ್ರದಿಂದ ಪ್ರಾಣಾಯಾಮ ಮಾಡಿ ತನ್ನ ಎಡ ಭಾಗದಲ್ಲಿ ಗುರುಪಂಕ್ತಿಯನ್ನು ಮತ್ತು ಬಲಭಾಗದಲ್ಲಿ ಗಣಪತಿಗೆ ನಮಸ್ಕರಿಸಿ ಪೀಠಪೂಜೆ ಪ್ರಾರಂಭಿಸಬೇಕು.

ಬಂಗಾರ ಮುಂತಾದವುಗಳಿಂದ ನಿರ್ಮಿತ ಅಥವಾ ಚಂದನದಿಂದ ಲಿಖಿತ ಯಂತ್ರದ ಮೇಲೆ ಮಂಡೂರದಿಂದ ಪರತತ್ವಾಂತ ದೇವತೆಗಳನ್ನು ಪೂಜೆ ಮಾಡಿ ಎಂಟೂ ದಿಕ್ಕುಗಳಲ್ಲಿ ಮತ್ತು ಮಧ್ಯದಲ್ಲಿ ಪೀಠಶಕ್ತಿಗಳನ್ನು ಪೂಜೆ ಮಾಡಬೇಕು. ಲಕ್ಷ್ಮಿ ಸಹಿತ ವಿಷ್ಣುವಿನ ಪೂಜೆ ಮಾಡುವಾಗ ಕ್ಷೀರಸಾಗರದ, ಗಣೇಶ ಪೂಜೆಯ ಕಾಲದಲ್ಲಿ ಇಕ್ಷುಸಾಗರದ ಮತ್ತು ಅನ್ಯ ದೇವತೆಗಳ ಪೂಜೆಯಲ್ಲಿ ಅಮೃತ ಸಾಗರದ ಪೂಜೆ ಮಾಡಬೇಕು.

ನಂತರ ಯಂತ್ರದ ಆಗ್ನೇಯ, ನೈಋತ್ಯ, ವಾಯುವ್ಯ ಮತ್ತು ಈಶಾನ ಕೋನಗಳಲ್ಲಿ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳನ್ನು ಪೂಜೆ ಮಾಡಬೇಕು. ಮತ್ತು ನಂತರ ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಅಧರ್ಮ, ಅಜ್ಞಾನ, ಅವೈರಾಗ್ಯ ಮತ್ತು ಅನೈಶ್ವರ್ಯಗಳನ್ನು ಪೂಜೆ ಮಾಡಬೇಕು. ಸಾಧಕನು ಧರ್ಮಾದಿಗಳ ಪೂಜೆ ಮತ್ತು ಆವರಣ ಪೂಜೆಗಳಲ್ಲಿ ಪೂರ್ವದಿಕ್ಕಿನಿಂದ ಪ್ರಾರಂಭ ಮಾಡಬೇಕು. "ಪೂಜ್ಯ ಪೂಜಕಯೋರ್ಮಧ್ಯೇ ಪ್ರಾಚೀಕಲ್ಪ....ಈ ಧರ್ಮಶಾಸ್ತ್ರ ವಚನದಂತೆ ಮತ್ತು ಇಂದ್ರಾದಿ ದಿಕ್ಪಾಲಕರ ಪೂಜೆ ಕೂಡಾ ಪೂರ್ವದಿಕ್ಕಿನ ಕ್ರಮದಲ್ಲಿಯೇ ಇರುತ್ತದೆ.

ಶ್ವೇತಾಕೃಷ್ಣಾರುಣಾಪೀತಾ ಶ್ಯಾಮಾ ರಕ್ತಾಸಿತಾಂಸಿತಾ ॥ 31 ॥
ರಕ್ತಾಂಬರಾಭಯಧರಾ ಧ್ಯೇಯಾಃ ಸ್ಯು ಪೀಠಶಕ್ತಯಃ ।
ಶಾಲಗ್ರಾಮೇ ಮಣೌ ಯಂತ್ರೇ ನಿತ್ಯಪೂಜಾಂ ಸಮಾಚರೇತ್ ॥ 32 ॥
ಹೇಮಾದಿಪ್ರತಿಮಾಯಾಂ ವಾ ಸ್ಥಾಪಿತಾಯಾಂ ಯಥಾವಿಧಿ ।

ಓಂ ಅಂ ಪೂರ್ಣಾಯೈ ನಮಃ, ಓಂ ಅಃ ಪೂರ್ಣಾಮೃತಾಯೈ ನಮಃ।
ಪುನಸ್ತ್ರೈವ –

ಓಂ ರಂ ವಹ್ನಿಮಂಡಲಾಯ ದಶಕಲಾತ್ಮನೆ ನಮಃ ।
ಓಂ ಯಂ ಧೂಮ್ರಾರ್ಚಿಷೇ ನಮಃ, ಓಂ ರಂ ಉಷ್ಮಾಯೈ ನಮಃ । ಓಂ
ಲಂ ಜ್ವಾಲಿನ್ಯೈ ನಮಃ, ಓಂ ವಂ ಜ್ವಾಲಿನ್ಯೈ ನಮಃ ।
ಓಂ ಶಂ ವಿಸ್ಫುಲಿಂಗಿನ್ಯೈ ನಮಃ, ಓಂ ಷಂ ಸುಶ್ರಿಯೈ ನಮಃ ।
ಓಂ ಸಂ ಸ್ವರೂಪಾಯೈ ನಮಃ, ಓಂ ಹಂ ಕಪಿಲಾಯೈ ನಮಃ ।
ಓಂ ಳಂ ಹವ್ಯವಾಹನಾಯೈ ನಮಃ

ಪುನಸ್ತ್ರೈವ – ಓಂ ಸಂ ಸತ್ವಾಯ ನಮಃ, ಓಂ ರಂ ರಜಸೇ ನಮಃ । ಓಂ ತಂ ತಮಸೆ ನಮಃ, ಓಂ ಅಂ ಆತ್ಮನೇ ನಮಃ, ಓಂ ಅಂ ಅಂತರಾತ್ಮನೆ, ಓಂ ಪಂ ಪರಮಾತ್ಮನೆ ನಮಃ, ಓಂ ಹ್ರೀಂ ಜ್ಞಾನಾತ್ಮನೆ ನಮಃ, ಓಂ ಮಾಂ ಮಾಯಾತತ್ವಾಯ ನಮಃ, । ಓಂ ಕಂ ಕಲಾತತ್ವಾಯ ನಮಃ, ಓಂ ವಿಂ ವಿದ್ಯಾತತ್ವಾಯ ನಮಃ, ಓಂ ಪಂ ಪರತತ್ವಾಯ ನಮಃ ।

ಈ ಪ್ರಕಾರದ ನ್ಯಾಸಗಳು ಎಲ್ಲ ದೇವತೆಗಳ ಉಪಾಸನೆಯಲ್ಲಿ ಇರುತ್ತವೆ. ಇದರ ನಂತರ ಹೃತ್ಪದ್ಮದ ಪೂರ್ವಾದಿ ಕೇಸರಗಳ ಮೇಲೆ ಆಯಾದೇವತೆಗಳ ಕಲ್ಪೋಕ್ತ ಪೀಠಶಕ್ತಿಗಳ ನ್ಯಾಸ ಮಾಡಬೇಕು. ನಂತರ ಪುನಃ ಹೃದಯದ ಮಧ್ಯದಲ್ಲಿ ಪೀಠಮಂತ್ರದಿಂದ ನ್ಯಾಸ ಮಾಡಬೇಕು.

**ಇತಿ ದೇಹಮಯೆ ಪೀಠೆ ಧ್ಯಾಯೇತ್ಸಾಭಿಷ್ಟದೇವತಾಮ್ ।**
**ತತ್ತನ್ಮುದ್ರಾಂ ಪ್ರದರ್ಶಾಥ ಕುರ್ಯಾನ್ಮಾನಸಪೂಜನಮ್** ॥ 166 ॥
**ಅಥಾರ್ಚಯೇತ್ತತೊ ದೇವಂ ಮಂತ್ರೇಣಾನೇನ ತನ್ಮನಾಃ ।**
**ಸ್ವಾಗತಂ ದೇವದೇವೇಶ ಸನ್ನಿಧೌ ಭವ ಕೇಶವ** ॥ 167 ॥
**ಗೃಹಾಣ ಮಾನಸಿಂ ಪೂಜಾಂ ಯಥಾರ್ಥಪರಿಭಾವಿತಾಮ್ ।**
**ಕೇಶವೇತಿಪದಸ್ಥಾನೆ ಕಾರ್ಯ ಊಹೋನ್ಯದೈವತೆ** ॥ 168 ॥
**ಮನಸ ಪೂಜಯಿತ್ವೈವಂ ಕ್ಷಣಂ ತದ್ಗತಮನಸಃ ।**
**ಸ್ಥಿತ್ವಾಮೂಲಮನುಂ ವಿದ್ವಾಂಜಪೇದಷ್ಟೋತ್ತರಂ ಶತಮ್** ॥ 169 ॥
**ಜಪಂ ನಿವೇದ್ಯ ದೇವಾಯ ಸ್ಥಾಪಯೇದರ್ಘ್ಯಮುತ್ತುಮಮ್ ।**
**ಬಾಹ್ಯಾಸಂ ಪೂಜ್ಯನಾಥ ತಚ್ಚ್ರಕಾರೊ ನಿಗದ್ಯತೆ** ॥ 170 ॥





ಈ ಪ್ರಕಾರ ತನ್ನ ದೇಹಮಯ ಪೀಠದ ಮೇಲೆ ತನ್ನ ಇಷ್ಟ ದೇವತೆಯ ಧ್ಯಾನ ಮಾಡಬೇಕು. ನಂತರ ಮುದ್ರೆಗಳನ್ನು ಪ್ರದರ್ಶಿಸುತ್ತ ಮಾನಸ ಪೂಜೆ ಮಾಡಬೇಕು.

ಸ್ವಾಗತಂ ದೇವದೇವೇಶ ಸನ್ನಿಧೋ ಭವ ಕೇಶವ ।
ಗೃಹಾಣ ಮಾನಸಿಂ ಪೂಜಾಂ ಯಥಾರ್ಥಪರಿಭಾವಿತಾಮ್ ॥

ಈ ಪ್ರಕಾರ ಅನ್ಯ ದೇವತೆಗಳ ಮಾನಸ ಪೂಜೆಯಲ್ಲಿ ಕೇಶವನ ಸ್ಥಾನದಲ್ಲಿ ಶಂಕರ, ಪಾರ್ವತಿ, ಗಣೇಶ, ಇತ್ಯಾದಿ ಪದಗಳನ್ನು ಊಹೆ ಮಾಡಿ ಉಚ್ಚರಿಸಬೇಕು.

**ಮಾನಸ ಪೂಜಾ ವಿಧಾನ :**

ಸರ್ವ ಪ್ರಥಮ ತನ್ನ ಇಷ್ಟದೇವತೆಯ ಸ್ವರೂಪದ 'ಧ್ಯಾನ' ಮಾಡಿ ಮುದ್ರೆಗಳನ್ನು ಪ್ರದರ್ಶಿಸಬೇಕು. ನಂತರ ತನ್ಮಯನಾಗಿ 'ಸ್ವಾಗತಂ' ಮಂತ್ರದಿಂದ ಅವರನ್ನು ಸ್ವಾಗತ ಮಾಡಿ ಸನ್ನಿಧಿಕರಣ ಮಾಡಬೇಕು. ನಂತರ ಮಾನಸೋಪಚಾರಗಳಿಂದ ಅವರ ಪೂಜೆ ಮಾಡಬೇಕು. ಈ ಪ್ರಕಾರ ಮಾನಸಪೂಜೆ ಮಾಡಿದ ನಂತರ ಸಾಧಕರು ಶ್ರದ್ಧೆಯಿಂದ ಇಷ್ಟದೇವತೆಯ ಮೂಲಮಂತ್ರದ 108 ಜಪ ಮಾಡಬೇಕು.

ನಂತರ ದೇವತೆಗೆ ಎಲ್ಲ ಜಪ ಸಮರ್ಪಿಸಿ ವಿಶೇಷಾರ್ಘ್ಯ ಸ್ಥಾಪನೆ ಮಾಡಬೇಕು. ಇಲ್ಲಿಯವರೆಗೆ ಮಾನಸಪೂಜೆಯನ್ನು ಹೇಳಲಾಗಿದ್ದು ಈಗ ಬಾಹ್ಯ ಪೂಜೆಗಾಗಿ ಅದರ ವಿಧಾನವನ್ನು ನಿರೂಪಿಸಲಾಗುವುದು.

[ ಈ ಪ್ರಕಾರ ಶ್ರೀಮನ್ ಮಹೀಧರ ವಿರಚಿತ ಮಂತ್ರ ಮಹೋದಧಿಯ ಇಪ್ಪತ್ತೊಂದನೆಯ ತರಂಗ ಸಮಾಪ್ತವು]



# ॥ ದ್ವಾವಿಂಶ ತರಂಗ ॥



## ನಿತ್ಯಾರ್ಚನ ವಿಧಾನ

ಸ್ವವಾಮಾಗ್ರೇ ತು ಷಟ್ಕೋಣ ವೃತ್ತಭೂಪುರವೇಷ್ಟಿತಮ್ ।
ಕೃತ್ವಾ ತ್ರಿಕೋಣಮೂರ್ಧ್ವಾಗ್ರಂ ಸ್ತಂಭಯೇಚ್ಛಖಮುದ್ರಯಾ ॥ 1 ॥

ಪುಷ್ಪಾಕ್ಷತೈಃ ಷಡಂಗಾನಿ ತತ್ರಾಗ್ನ್ಯಾದಿಷು ಪೂಜಯೇತ್ ।
ಅಸ್ತ್ರಕ್ಷಾಲಿತಮಾಧಾರಂ ತತ್ರಾದಧ್ಯಾನ್ಮನುಂ ಜಪನ್ ॥ 2 ॥

ತನ್ನ ವಾಮಾಗ್ರ ಭಾಗದಲ್ಲಿ ತ್ರಿಕೋಣ, ಅದರ ನಂತರ ಷಟ್ಕೋಣ, ನಂತರ ವೃತ್ತ, ಚತುರಸ್ರರೂಪ ಯಂತ್ರ ಬರೆದು ಶಂಖ ಮುದ್ರೆಯಿಂದ ಅದನ್ನು ಸ್ತಂಭಿತಗೊಳಿಸಬೇಕು.

ಯಂತ್ರದ ಆಗ್ನೇಯಾದಿ ಕೋನಗಳಲ್ಲಿ ಪುಷ್ಪ ಮತ್ತು ಅಕ್ಷತೆಗಳಿಂದ ಷಡಂಗ ಪೂಜೆ ಮಾಡಬೇಕು. ನಂತರ 'ಫಟ್' ಈ ಅಸ್ತ್ರ ಮಂತ್ರದಿಂದ ಪ್ರಕ್ಷಾಲಿತ ಆಧಾರ ಪಾತ್ರೆಯನ್ನು ವಕ್ಷಮಾಣ ಮಂತ್ರ ಉಚ್ಚರಿಸುತ್ತ ತ್ರಿಕೋಣದ ಮೇಲೆ ಸ್ಥಾಪನೆ ಮಾಡಬೇಕು.



ಮಂ ವಹ್ನಿಮಂಡಲಾಯೇತಿ ತತೋ ದಶಕಲಾತ್ಮನೆ
ಅಮುಕಾರ್ಘ್ಯೇತಿ ಪಾತ್ರಾಂತೆ ಸನಾಯ ನಮ ಇತ್ಯಪಿ
ಚತುರ್ವಿಂಶತಿ ವರ್ಣೋಯ ಮಾಧಾರ ಸ್ಥಾಪನೆ ಮನುಃ ॥3॥
ಆಧಾರೇ ಪೂರ್ವಕಾಪ್ಯಾದಿ ದಶಾರ್ಚೆತ್ವಾವಕಃ ಕಲಾ
ಸ್ವಮಂತ್ರ ಕ್ಷಾಲಿತಂ ಶಂಖ ಸ್ಥಾಪಯೇನ್ಮನು ಮುಚ್ಚರನ್ । ॥4॥
ಅಂ ಸೂರ್ಯ ಮಂಡಲಾಯಾಂತೆ ದ್ವಾದಶೇತಿ ಕಲಾತ್ಮನೆ
ಅಮುಕಾರ್ಘ್ಯೇತಿ ಪಾತ್ರಾಯ ನಮೋಂತಸ್ತ್ರಾಕ್ಷಿವರ್ಣವಾನ್ । ॥5॥
ಶಂಖ ಸ್ಥಾಪನ ಮಂತ್ರೋಽಯಂ ತಾರಃ ಕಾಮೊ ಮಹಾಜಲಃ ॥ 6 ॥

ಚರಾಯ ವರ್ಮಫಟ್ ಸ್ವಾಹಾ ಪಾಂಚಜನ್ಯಾಯ ಹೃನ್ಮನುಃ ।
ಶಂಖಸ್ಯ ವಿಂಶಾತ್ಯರ್ಣಾಢ್ಯಸ್ತೇನ ಪ್ರಕ್ಷಾಲಯೇತ್ತು ತಮ್ ॥ 7 ॥

ಕಲಾದ್ವಾದಶ ಸೂರ್ಯಸ್ಯ ಶಂಖೋಪರಿ ಯಜೇತ್ ಕ್ರಮಾತ್ ।
ವಿಲೋಮಾಂ ಮಾತೃಕಾಂ ಮೂಲಂ ವಿಲೋಮಂ ಚ ಪಠಂಜಲ್ಪೈಃ ॥ 8॥

ಆಧಾರ ಪಾತ್ರೆಯ ಮೇಲೆ ಪೂರ್ವಾದಿ ದಿಶೆಗಳಲ್ಲಿ ಧೂಮ್ರಾರ್ಚಿಷ ಆದಿ ಅಗ್ನಿಕಲೆಗಳ ಹೆಸರುಗಳಿಂದ ಪೂಜೆ ಮಾಡಬೇಕು. ನಂತರ ಆಧಾರ ಪಾತ್ರೆಯ ಮೇಲೆ ಅಸ್ತ್ರ ಮಂತ್ರದಿಂದ ಪ್ರಕ್ಷಾಲಿತ ಶಂಖವನ್ನು "(ಓಂ) ಅಂ ಸೂರ್ಯಮಂಡಲಾಯ ದ್ವಾದಶಕಲಾತ್ಮನೆ ದೇವಾರ್ಘ್ಯ ಪಾತ್ರಾಯ ನಮಃ" ಈ 23 ಅಕ್ಷರಗಳ ಮಂತ್ರದಿಂದ ಸ್ಥಾಪನೆ ಮಾಡಬೇಕು.

ಅಮುಕ ದೇವದ ಸ್ಥಾನದಲ್ಲಿ ತನ್ನ ಇಷ್ಟ ದೇವತೆಯ ಚತುರ್ಥ್ಯಂತ ನಾಮದ ಚತುರ್ಥ್ಯಂತ ಉಚ್ಚಾರಣೆ ಮಾಡಬೇಕು. ಪುನಃ ತಾರ (ಓಂ), ಕಾಮ (ಕ್ಲಿಂ) ಮತ್ತು "ಮಹಾಜಲಚರಾಯ ಹುಂ ಫಟ್ ಸ್ವಾಹಾ ಪಾಂಚಜನ್ಯಾಯ ನಮಃ" ಈ ಇಪ್ಪತ್ತು ಅಕ್ಷರಗಳ ಮಂತ್ರದಿಂದ ಶಂಖವನ್ನು ಪ್ರಕ್ಷಾಳನ ಮಾಡಬೇಕು.

ಆಪೂರ್ಯ ಮನುನೇಷ್ವಾ ತಂ ತತ್ರಾರ್ಚ್ಯೆದ್ಯೆಂದವಿಃ ಕಲಾ ।
ಓಂ ಸೋಮಮಂಡಲಾಯಾಂತೆ ಷೋಡಶಾಂತೆ ಕಲಾತ್ಮನೆ ॥ 9 ॥

ಅಮುಕಾರ್ಘ್ಯಾಮೃತಾಯೇತಿ ಹೃನ್ಮನುಶ್ಚಾರ್ಘ್ಯ ಪೂಜನೆ ।
ಆವಾಹ್ಯೇತ್ತತ್ರ ತೀರ್ಥಾನಿ ತನ್ಮಂತ್ರೈಃ ಸೃಣಿ ಮುದ್ರಯಾ ॥ 10 ॥

ರವಿಮಂಡಲತಃ ಸ್ವೀಯಹೃದೊ ದೇವಮತಾಹ್ವಯೇತ್ ।
ಅಷ್ಟಕೃತ್ವೋ ಜಪೇನ್ಮಂತ್ರಂ ಸ್ಪೃಷ್ಟ್ವಾ ಜಲಮನನ್ಯಧಿಃ ॥ 11 ॥

ಅಪ್ಸು ವಿನ್ಯಸ್ಯ ಚಾಂಗಾನಿ ಹೃದಾ ಸಂಪೂಜಯೇದಪಃ ।
ಮೂಲಂ ಜಪೇದಷ್ಟಶತಂ ಛಾದಯನ್ ಮತ್ಸ್ಯಮುದ್ರಯಾ ॥ 12 ॥

ನಂತರ ಶಂಖದ ಮೇಲೆ ತಾಪಿನಿ ಆದಿ ದ್ವಾದಶ ಸೂರ್ಯಕಲೆಗಳ ಪೂಜೆ ಮಾಡಬೇಕು. ನಂತರ ವಿಲೋಮ ಮಾತೃಕೆಗಳು ಮತ್ತು ವಿಲೋಮ ಮೂಲಮಂತ್ರ **"ಓಂ ಸೋಮಮಂಡಲಾಯ ಷೋಡಶಕಲಾತ್ಮನೆ ದೇವಾರ್ಘ್ಯಾಮೃತಾಯ ನಮಃ"** ಉಚ್ಚರಿಸುತ್ತ ಅದರಲ್ಲಿ ನೀರು ತುಂಬಿ ಈ ಮಂತ್ರದಿಂದ ಜಲವನ್ನು ಪೂಜೆ ಮಾಡಿ ಅದರಲ್ಲಿ ಚಂದ್ರನ ಅಮೃತಾದಿ ಹದಿನಾರು ಕಲೆಗಳನ್ನು ಪೂಜೆ ಮಾಡಬೇಕು.

ಪುನಃ ಆ ಅರ್ಘ್ಯಾದಿಕದಲ್ಲಿ ಅಂಕುಶ ಮುದ್ರೆ ಪ್ರದರ್ಶಿಸುತ್ತ 'ಗಂಗೇಚ ಯಮುನೇ ಚೈವ' ಈ ಮಂತ್ರದಿಂದ ತೀರ್ಥಗಳನ್ನು ಆವಾಹನೆ ಮಾಡಬೇಕು. ನಂತರ ನೀರನ್ನು ಸ್ಪರ್ಶ ಮಾಡುತ್ತ ಏಕಾಗ್ರಚಿತ್ತನಾಗಿ ಮೂಲಮಂತ್ರವನ್ನು ಎಂಟು ಬಾರಿ ಜಪಿಸಬೇಕು. ನಂತರ ಜಲದಲ್ಲಿ ಅಂಗನ್ಯಾಸ ಮಾಡಿ ಹೃದಯ (ನಮಃ) ಮಂತ್ರದಿಂದ ಪುನಃ ಅದನ್ನು ಪೂಜೆ ಮಾಡಬೇಕು. ನಂತರ ಮತ್ಸ್ಯ ಮುದ್ರಾದಿಂದ ಆಚ್ಛಾದಿತ ಮಾಡಿ 108 ಬಾರಿ ಮೂಲಮಂತ್ರವನ್ನು ಜಪಿಸಬೇಕು.

ಸಂರಕ್ಷೇದಸ್ತ್ರಮಂತ್ರೇಣ ಚ್ಛೋಟಿಕಾಮುದ್ರಯಾ ಜಲಮ್ ।
ಮುದ್ರಯಾ ಚಾವಗುಂಠಿನ್ಯಾ ವರ್ಮಣಾ ತ್ವವಗುಂಠಯೇತ್ ॥ 13 ॥

ಅಮೃತೀಕೃತ್ಯ ಗೋಮುದ್ರಾಂ ಕುರ್ವನ್ನಮೃತಬೀಜತಃ ।
ಸಂರೋಧಿನ್ಯಾ ಸನ್ನಿರುಧ್ಯ ತತ್ರ ಮುದ್ರಾಃ ಪ್ರದರ್ಶಯೇತ್ ॥ 14 ॥

ಶಂಖಮೌಸಲ ಚಕ್ರಾಖ್ಯಾ ಪರಮೀಕೃತ್ಯ ತತ್ಪುನಃ ।
ಮಹಾಮುದ್ರಾಂ ವಿರಚಯನ್ಯೋನಿ ಮುದ್ರಾಂ ಚ ದರ್ಶಯೇತ್ ॥ 15 ॥

ಕೃಷ್ಣಮಂತ್ರೇ ಗಾಲಿನಿಂ ಚ ರಾಮೇ ಗರುಡ ಮುದ್ರಿಕಾಮ್ ।
ಶಂಖಾದ್ ದಕ್ಷಿಣ ದಿಗ್ಭಾಗೆ ಪ್ರೋಕ್ಷಣೀಪಾತ್ರಪೂರಣಮ್ ॥ 16 ॥

ಕೃತ್ವಾಧ್ಯಾಂಬ್ವತ್ರ ನಿಷಿಪ್ಯ ತೇನೋಕ್ಷೇತ್ರಿರ್ನಿಜಾಂ ತನುಮ್ ।
ಪ್ರಜಪನ್ ಮೂಲಗಾಯತ್ರಿಂ ಪೂಜಾವಸ್ತು ಚ ಯಂ ತಥಾ ॥ 17 ॥

ಪಾದ್ಯಾಚಮನಪಾತ್ರೇ ಚ ದಧ್ಯಾದರ್ಘ್ಯಸ್ತಥೋತ್ತರೆ ।
ಏವಮರ್ಘ್ಯವಿಧಿಃ ಪ್ರೋಕ್ತಃ ಸರ್ವಸಾಧಾರಣೋ ಮಯಾ ॥ 18 ॥





ನಂತರ ಅಸ್ತ್ರ (ಫಟ್) ಮಂತ್ರದಿಂದ ಛೋಟಿಕಾ ಮುದ್ರಾದ್ವಾರಾ ಅದರ ರಕ್ಷಣೆ ಮಾಡಬೇಕು. ವರ್ಮ (ಹುಂ) ಮಂತ್ರದಿಂದ ಅವಗುಂಠನಿ ಮುದ್ರಾದ್ವಾರಾ ಅದನ್ನು ಸುತ್ತಬೇಕು. ಪುನಃ ಧೇನು ಮುದ್ರಾದಿಂದ ಅಮೃತೀಕರಣ ಮಾಡಿದ ನಂತರ ಅಮೃತಬೀಜ (ಬಂ)ದಿಂದ ಸಂರೋಧಿನಿ ಮುದ್ರೆಯನ್ನು ಪ್ರದರ್ಶಿಸುತ್ತ ತದೆಗಟ್ಟಿ, ಶಂಖ, ಮುಶಲ ಮತ್ತು ಚಕ್ರಮುದ್ರೆಗಳನ್ನು ಪ್ರದರ್ಶಿಸಿ ಮಹಾಮುದ್ರೆಯಿಂದ ಪರಮೀಕರಣ ಮಾಡಬೇಕು. ನಂತರ ಯೋನಿಮುದ್ರಾ ಪ್ರದರ್ಶಿಸಬೇಕು.

ಕೃಷ್ಣ ಮಂತ್ರದ ಅನುಷ್ಠಾನದಲ್ಲಿ ಗಾಲಿನಿ ಮುದ್ರೆ ಮತ್ತು ರಾಮಮಂತ್ರದ ಅನುಷ್ಠಾನದಲ್ಲಿ ಗರುಡ ಮುದ್ರೆಯನ್ನು ಪ್ರದರ್ಶಿಸಬೇಕು.

ಶಂಖದ ದಕ್ಷಿಣ ದಿಶೆಯಲ್ಲಿ ಪ್ರೋಕ್ಷಣಿ ಪಾತ್ರೆಯಲ್ಲಿ ನೀರು ತುಂಬಿ ಅರ್ಘ್ಯ ಪಾತ್ರೆಯಿಂದ ಅದರಲ್ಲಿ ಸ್ವಲ್ಪ ನೀರು ಹಾಕಿ ತನ್ನ ಶರೀರವನ್ನು ಮೂರು ಬಾರಿ ಪ್ರೋಕ್ಷಣ ಮಾಡಬೇಕು. ನಂತರ ಮೂಲಮಂತ್ರ ಮತ್ತು ಗಾಯತ್ರಿ ಮಂತ್ರಗಳನ್ನು ಉಚ್ಚಾರಣೆ ಮಾಡುತ್ತ ಪೂಜಾ ಸಾಮಗ್ರಿಗಳಿಗೂ ಕೂಡಾ ಪ್ರೋಕ್ಷಣೆ ಮಾಡುತ್ತಿರಬೇಕು. ಸ್ಥಾಪಿತ ಅರ್ಘ್ಯ ಪಾತ್ರೆಯ ಉತ್ತರ ದಿಕ್ಕಿನಲ್ಲಿ ಪಾದ್ಯ ಮತ್ತು ಆಚಮನ ಪಾತ್ರೆಗಳನ್ನು ಸ್ಥಾಪಿಸಬೇಕು.

ವಿಹಾಯ ಶಂಖರಂ ಸೂರ್ಯಮರ್ಘ್ಯೆ ಶಂಖಃ ಪ್ರಶಸ್ಯತೆ ।
ಹೇಮರೂಪ್ಯೋ ದುಂಬರಾಬ್ಜರೀತಿದಾರುಮೃದುದ್‌ಭವಮ್ ॥ 19 ॥

ಪಾಲಾಶಂ ಪದ್ಮಪತ್ರಂ ವಾಸ್ಮತಂ ಪಾದ್ಯಾದಿಭಾಜನಮ್ ।
ಅಶಕ್ತಾವನ್ಯಪಾತ್ರೇಣ ಪಾದ್ಯಾದೀನಿ ನಿವೇದಯೇತೆ ॥ 20 ॥

ಈವರೆಗೆ ಎಲ್ಲ ದೇವತೆಗಳ ಪೂಜೆಯಲ್ಲಿ ಪ್ರಯುಕ್ತ ವಿಶೇಷಾರ್ಘ್ಯ ಸ್ಥಾಪನೆಯ ಸಾಮಾನ್ಯ ವಿಧಾನವನ್ನು ಹೇಳಲಾಗಿದೆ. ಭಗವಾನ್ ಶಂಕರ ಮತ್ತು ಸೂರ್ಯ ಭಗವಾನ್‌ರ ಹೊರತಾಗಿ ಅನ್ಯ ಸಮಸ್ತ ದೇವತೆಗಳ ಅರ್ಘ್ಯಕ್ಕಾಗಿ ಶಂಖಪಾತ್ರೆಯು ಪ್ರಶಸ್ತವೆಂದು ಮಾನ್ಯ ಮಾಡಲಾಗಿದೆ.

## ಅರ್ಘ್ಯ ಪಾತ್ರ ಸ್ಥಾಪನ ವಿಧಾನ

ಪೂರ್ವದಲ್ಲಿ ಆಧಾರ ಪಾತ್ರೆಯ ಸ್ಥಾಪನೆಯ ವಿಧಾನವನ್ನು ಹೇಳಲಾಗಿದೆ. ಈ ಪ್ರಕಾರ ಸ್ಥಾಪಿತ ಆಧಾರ ಪಾತ್ರದಲ್ಲಿ ಪೂರ್ವಾದಿ ಹತ್ತು ದಿಕ್ಕುಗಳಲ್ಲಿ ಅಗ್ನಿಯ ದಶಕಲೆಗಳನ್ನು ಈ ಪ್ರಕಾರ ಪೂಜೆ ಮಾಡಬೇಕು.

ಓಂ ರಂ ವಹ್ನಿಮಂಡಲಾಯ ದಶಕಲಾತ್ಮನೆ ನಮಃ ।

ಓಂ ಯಂ ಧೂಮ್ರಾರ್ಚಿಷೆ ನಮಃ, ಓಂ ರಂ ಉಷ್ಮಾಯೈ ನಮಃ ।
ಓಂ ಲಂ ಜ್ವಾಲಿನ್ಯೈ ನಮಃ, ಓಂ ವಂ ಜ್ವಾಲಿನ್ಯೈ ನಮಃ ।
ಓಂ ಶಂ ವಿಸ್ಫುಲಿಂಗ್ಯೈ ನಮಃ, ಓಂ ಷಂ ಸುಶ್ರಿಯೈ ನಮಃ
ಓಂ ಸಂ ಸ್ವರೂಪಾಯೈ ನಮಃ, ಓಂ ಹಂ ಕಪಿಲಾಯೈ ನಮಃ ।
ಓಂ ಳಂ ಹವ್ಯವಾಹಾಯೈ ನಮಃ

**ಪಾತ್ರ ಸ್ಥಾಪನ ಯಂತ್ರ**



ನಂತರ, "ಓಂ ಕ್ಲೀಂ ಮಹಾಜಲಚರಾಯ **ಹುಂ ಫಟ್ ಸ್ವಾಹಾ ಪಾಂಚಜನ್ಯಾಯ ನಮಃ"** ಈ ಮಂತ್ರದಿಂದ ಸಾಮಾನ್ಯ ಅರ್ಘ್ಯ ಜಲದಿಂದ ಶಂಖವನ್ನು ಪ್ರಕ್ಷಾಳಿತಗೊಳಿಸಬೇಕು. ನಂತರ 'ಅಂ ಸೂರ್ಯಮಂಡಲಾಯ ದ್ವಾದಶಕಲಾತ್ಮನೆ ಅಮುಕ ಅರ್ಘ್ಯ ಪಾತ್ರಾಯ ನಮಃ' ಮಂತ್ರದಿಂದ ಆಧಾರ ಪಾತ್ರೆಯ ಮೇಲೆ ಶಂಖವನ್ನು ಸ್ಥಾಪನೆ ಮಾಡಬೇಕು.

ನಂತರ, ಆ ಶಂಖದ ಮೇಲೆ ಸೂರ್ಯನ ದ್ವಾದಶ ಕಲೆಗಳನ್ನು ನಾಮಮಂತ್ರಗಳಿಂದ ಪೂಜೆ ಮಾಡಬೇಕು.

ಓಂ ಕಂ ಭಂ ತಪಿನ್ಯೈ ನಮಃ, ಓಂ ಖಂ ಬಂ ತಾಪಿನ್ಯೈ ನಮಃ ।
ಓಂ ಗಂ ಫಂ ದೂಮ್ರಾಯೈ ನಮಃ, ಓಂ ಘಂ ಪಂ ಮರೀಚ್ಯೈ ನಮಃ ।
ಓಂ ಙಂ ನಂ ಜ್ವಾಲಿನ್ಯೈ ನಮಃ, ಓಂ ಚಂ ಧಂ ರೂಚ್ಯೈ ನಮಃ ।
ಓಂ ಛಂ ದಂ ಸುಷುಮ್ಣಾಯೈ ನಮಃ, ಓಂ ಜಂ ಥಂ ಭೋಗದಾಯೈ ನಮಃ
ಓಂ ಝಂ ತಂ ವಿಶ್ವಾಯೈ ನಮಃ, ಓಂ ಞಂ ಣಂ ಬೋಧಿನ್ಯೈ ನಮಃ ।
ಓಂ ಟಂ ಡಂ ಧಾರಿಣ್ಯೈ ನಮಃ, ಓಂ ಠಂ ಡಂ ಕ್ಷಮಾಯೈ ನಮಃ

ನಂತರ ಕ್ಷಂ, ಳಂ, ಹಂ, ಶಂ.....ಆಂ ಅಂ ಪರ್ಯಂತ ವಿಲೋಮ ಮಾತೃಕಾದಿಂದ ಮತ್ತು ವಿಲೋಮ ಮೂಲಮಂತ್ರವನ್ನು ಹೇಳುತ್ತ ಶಂಖದಲ್ಲಿ ನೀರು ತುಂಬುತ್ತ "ಓಂ ಸೋಮಮಂಡಲಾಯ ಷೋಡಶಕಲಾತ್ಮನೆ ಅಮುಕಾರ್ಘ್ಯಾಮೃತಾಯ ನಮಃ" ಯಂತ್ರದಿಂದ ಕೆಂಪು ಚಂದನ ಮತ್ತು ಪುಷ್ಪಗಳಿಂದ ಆ ಜಲವನ್ನು ಪೂಜೆ ಮಾಡಬೇಕು. ನಂತರ ಚಂದ್ರನ ಹದಿನಾರು ಕಲೆಗಳ ನಾಮವನ್ನು ಅವುಗಳ ಮಂತ್ರಗಳೊಂದಿಗೆ ಪೂಜೆ ಮಾಡಬೇಕು.





ಓಂ ಅಂ ಅಮೃತಾಯೈ ನಮಃ, ಓಂ ಆಂ ಮಾನದಾಯೈ ನಮಃ,
ಓಂ ಇಂ ಪುಷ್ಪಾಯೈ ನಮಃ, ಓಂ ಈಂ ತುಷ್ಟ್ಯೈ ನಮಃ,
ಓಂ ಉಂ ಪುಷ್ಟ್ಯೈ ನಮಃ, ಓಂ ಊಂ ರತ್ಯೈ ನಮಃ,
ಓಂ ಋಂ ಧೃತ್ಯೈ ನಮಃ, ಓಂ ೠಂ ಶಶಿನ್ಯೈ ನಮಃ,
ಓಂ ಌಂ ಚಂಡಿಕಾಯೈ ನಮಃ, ಓಂೡಂ ಕಾಂತ್ಯೈ ನಮಃ,
ಓಂ ಎಂ ಜ್ಯೋತ್ಸ್ನಾಯೈ ನಮಃ, ಓಂ ಏಂ ಶ್ರಿಯೈ ನಮಃ,
ಓಂ ಓಂ ಪ್ರೀತ್ಯೈ ನಮಃ, ಓಂ ಔಂ ಅಂಗದಾಯೈ ನಮಃ,
ಓಂ ಅಂ ಪೂರ್ಣಾಯೈ ನಮಃ, ಓಂ ಅಃ ಪೂರ್ಣಾಮೃತಾಯೈ ನಮಃ

ನಂತರ, ಓಂ ಗಂಗೇಚ ಯಮುನೇಚೈವ ಗೋದಾವರಿ ಸರಸ್ವತಿ ನರ್ಮದೆ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು

ಓಂ ಬ್ರಹ್ಮಾಂಡೋದರತೀರ್ಥಾನಿ ಕರಸ್ಪೃಷ್ಟಾನಿ ತೆ ರವೆ ತೇನ ಸತ್ಯೇನ ಮೆ ದೇವ ತೀರ್ಥ ದೇಹಿ ದಿವಾಕರ ॥

ಈ ಮಂತ್ರವನ್ನು ಹೇಳುತ್ತ ಅಂಕುಶ ಮುದ್ರಾ ದ್ವಾರಾ ಸೂರ್ಯಮಂಡಲದಿಂದ ಅರ್ಘ್ಯೋದಕದಲ್ಲಿ ತೀರ್ಥಗಳನ್ನು ಆವಾಹನೆ ಮಾಡಿ ಹೃದಯದಲ್ಲಿಯೂ ತನ್ನ ಇಷ್ಟ ದೇವತೆಗಳನ್ನು ಆವಾಹನೆ ಮಾಡಬೇಕು. ನಂತರ ಜಲವನ್ನು ಸ್ಪರ್ಶ ಮಾಡಿ ಏಕಾಗ್ರಚಿತ್ತದಿಂದ ಎಂಟು ಬಾರಿ ಮೂಲಮಂತ್ರದ ಜಪ ಮಾಡುತ್ತ ಜಲದಲ್ಲಿ ಷಡಂಗನ್ಯಾಸ ಮಾಡಿ ನಮಃ ಮಂತ್ರದಿಂದ ಜಲವನ್ನು ಪೂಜೆ ಮಾಡಬೇಕು.

ಆಮೇಲೆ ಮತ್ಸ್ಯ ಮುದ್ರಾದಿಂದ ಅದನ್ನು ಆಚ್ಛಾದಿತಗೊಳಿಸಿ ಮೂಲ ಮಂತ್ರದ 108 ಬಾರಿ ಜಪ ಮಾಡಬೇಕು.

ಬಂಗಾರ, ಬೆಳ್ಳಿ, ತಾಮ್ರ, ಶಂಖ, ಹಿತ್ತಾಳೆ, ಮುತ್ತುಗದ ಎಲೆ ಅಥವಾ ಕಮಲ ಪತ್ರಗಳಿಂದ ತಯಾರಿಸಲಾದ ಅರ್ಘ್ಯ ಪಾತ್ರೆಗಳು ಶ್ರೇಷ್ಠವೆಂದು ಹೇಳಲಾಗಿದೆ. ಇದು ಸಾಧ್ಯವಾಗದಿದ್ದರೆ, ಶಕ್ತ್ಯಾನುಸಾರ ಅನ್ಯ ಪಾದ್ಯ ಪಾತ್ರೆಗಳನ್ನು ಇಷ್ಟ ದೇವತೆಗೆ ನಿವೇದನೆ ಮಾಡಬೇಕು.

### ಅಂತರ್ಯಾಗ ವಿಧಾನ

ಅಂತರ್ಯಾಗಂ ತತಃ ಕುರ್ಯಾತ್ ಪೀಠೆ ದೇಹಮಯೆ ಸುಧಿಃ ।
ನ್ಯಾಸಸ್ಥಾನೇಷು ಮಂಡೂಕಮುಖ್ಯಾಂಗಂಧಾದಿಭಿರ್ಯಜೇತ್ ॥ 21 ॥
ಪೀಠಮಂತ್ರಾಂತಮಂತ್ರೇಣ ಹದಯೆ ಸ್ವೇಷ್ಟದೇವತಾಮ್ ।

ಪೀಠವೆಂದು ಭಾವಿಸಿ ಅದರ ವಿವಿಧ ಅಂಗಗಳ ಮೇಲೆ ಪೀಠ ದೇವತೆಗಳ ನ್ಯಾಸ ಮಾಡಬೇಕು.

ಓಂ ಮಂಡೂಕಾಯ ನಮಃ ಮೂಲಾಧಾರೆ ।
ಓಂ ಕಾಲಾಗ್ನಿರುದ್ರಾಯ ನಮಃ ಸ್ವಾಧಿಷ್ಠಾನೆ ।
ಓಂ ಕಚ್ಛಪಾಯ ನಮಃ ನಾಭೌ ।
ಓಂ ಆಧಾರಶಕ್ತ್ಯೈ ನಮಃ ಹೃದಿ ।
ಓಂ ಪ್ರಕೃತಯೆ ನಮಃ ಹೃದಿ ।
ಓಂ ಕೂರ್ಮಾಯ ನಮಃ ಹೃದಿ ।
ಓಂ ಅನಂತಾಯ ನಮಃ ಹೃದಿ ।
ಓಂ ಪೃಥಿವ್ಯೈ ನಮಃ ಹೃದಿ ।
ಓಂ ಕ್ಷೀರಸಾಗರಾಯ ನಮಃ ಹೃದಿ ।
ಓಂ ರತ್ನದ್ವೀಪಾಯ ನಮಃ ಹೃದಿ ।
ಓಂ ಮಣಿಮಂಡಪಾಯ ನಮಃ ಹೃದಿ ।
ಓಂ ಕಲ್ಪವೃಕ್ಷಾಯ ನಮಃ ಹೃದಿ ।
ಓಂ ಮಣಿವೇದಿಕಾಯ್ಯೈ ನಮಃ ಹೃದಿ ।
ಓಂ ಹೇಮಪೀಠಾಯ ನಮಃ ಹೃದಿ ।

ಆಮೇಲೆ ಧರ್ಮ ಆದಿಗಳನ್ನು ಆಯಾ ಸ್ಥಾನಗಳಲ್ಲಿ ನ್ಯಾಸ ಮಾಡಬೇಕು.

ಓಂ ಧರ್ಮಾಯ ನಮಃ ದಕ್ಷಿಣಸ್ಕಂಧೆ,
ಓಂ ಜ್ಞಾನಾಯ ನಮಃ ವಾಮಸ್ಕಂಧೆ,
ಓಂ ವೈರಾಗ್ಯಾಯ ನಮಃ ವಾಮೋರೌ,
ಓಂ ಐಶ್ವರ್ಯಾಯ ನಮಃ ದಕ್ಷಿಣೋರೌ,
ಓಂ ಅಧರ್ಮಾಯ ನಮಃ ಮುಖೆ,
ಓಂ ಅಜ್ಞಾನಾಯ ನಮಃ ವಾಮಪಾರ್ಶ್ವೆ,
ಓಂ ಅವೈರಾಗ್ಯಾಯ ನಮಃ ನಾಭೌ,
ಓಂ ಅನೈಶ್ವರ್ಯಾಯ ನಮಃ ದಕ್ಷಿಣಪಾರ್ಶ್ವೆ

ನಂತರ ಹೃದಯದಲ್ಲಿ ಅನಂತಾದಿ ದೇವತೆಗಳನ್ನು ನಿಮ್ನ ಲಿಖಿತ ಮಂತ್ರಗಳಿಂದ ನ್ಯಾಸ ಮಾಡಬೇಕು.

ಓಂ ತಲ್ಪಾಕಾರಾಯನಂತಾಯ ನಮಃ ಹೃದಿ ।
ಓಂ ಆನಂದಕಂದಾಯ ನಮಃ ಹೃದಿ ।





ಓಂ ಸಂವಿನ್ನಾಲಾಯ ನಮಃ ಹೃದಿ ।
ಓಂ ಸರ್ವತತ್ವಾತ್ಮಕಾಪದ್ಮಾಯ ನಮಃ ಹೃದಿ ।
ಓಂ ಪ್ರಕೃತಮಯಪತ್ರೇಭ್ಯೋ ನಮಃ ಹೃದಿ ।
ಓಂ ವಿಕಾರಮಯಕೇಸರೇಭ್ಯೋ ನಮಃ ಹೃದಿ ।
ಓಂ ಪಂಚಾಶದ್ಬೀಜಾಢ್ಯ ಕರ್ಣಿಕಾಯ್ಯೈ ನಮಃ ಹೃದಿ ।
ಓಂ ಅಂ ಸೂರ್ಯಮಂಡಲಾಯ ದ್ವಾದಶಕಲಾತ್ಮನೆ ಹೃದಿ ।

ಪುನಃ ಹೃತ್ಪದ್ಮದ ಮೇಲೆ –

ಓಂ ಕಂ ಭಂ ತಪಿನ್ಯೈ ನಮಃ ।
ಓಂ ಖಂ ಬಂ ತಾಪಿನ್ಯೈ ನಮಃ,
ಓಂ ಗಂ ಫಂ ಧೂಮ್ರಾಯ್ಯೈ ನಮಃ ।
ಓಂ ಘಂ ಪಂ ಮರೀಚ್ಯೈ ನಮಃ,
ಓಂ ಙ ನಂ ಜ್ವಾಲಿನ್ಯೈ ನಮಃ ।
ಓಂ ಚಂ ಧಂ ರುಚ್ಯೈ ನಮಃ,
ಓಂ ಛಂ ದಂ ಸುಷುಮ್ನಾಯ್ಯೈ ನಮಃ ।
ಓಂ ಜಂ ಥಂ ಭೋಗದಾಯ್ಯೈ ನಮಃ,
ಓಂ ಝಂ ತಂ ವಿಶ್ವಾಯ್ಯೈ ನಮಃ ।
ಓಂ ಞಂ ಣಂ ಬೋಧಿನ್ಯೈ ನಮಃ,
ಓಂ ಟಂ ಢಂ ಧಾರಿಣ್ಯೈ ನಮಃ ।
ಓಂ ಠಂ ಡಂ ಕ್ಷಮಯ್ಯೈ ನಮಃ

ಪುನಶ್ಚೈವ –

ಓಂ ಉಂ ಸೋಮಮಂಡಲಾಯ ದಶಕಾಲಾತ್ಮನೆ ನಮಃ ।
ಓಂ ಅಂ ಅಮೃತಾಯ್ಯೈ ನಮಃ, ಓಂ ಆಂ ಮಾನದಾಯ್ಯೈ ನಮಃ ।
ಓಂ ಇಂ ಪೂಷಾಯ್ಯೈ ನಮಃ, ಓಂ ಈಂ ತುಷ್ಟಯ್ಯೈ ನಮಃ ।
ಓಂ ಉಂ ಪುಷ್ಟಯ್ಯೈ ನಮಃ, ಓಂ ಊಂ ರತ್ಯೈ ನಮಃ ।
ಓಂ ಋಂ ಧೃತ್ಯೈ ನಮಃ, ಓಂ ೠಂ ಶಶಿನ್ಯೈ ನಮಃ ।
ಓಂ ಌಂ ಚಂಡಿಕಾಯ್ಯೈ ನಮಃ, ಓಂ ೡಂ ಕಾಂತ್ಯೈ ನಮಃ ।
ಓಂ ಏಂ ಜ್ಯೋತ್ಸ್ನಾಯ್ಯೈ ನಮಃ, ಓಂ ಐಂ ಶ್ರಿಯ್ಯೈ ನಮಃ ।
ಓಂ ಓಂ ಪ್ರೀತ್ಯೈ ನಮಃ, ಓಂ ಔಂ ಅಂಗದಾಯ್ಯೈ ನಮಃ ।

ಹೆಬ್ಬೆರಳನ್ನು ಬಿಟ್ಟು ಕಟ್ಟಿದ ಮುಷ್ಟಿಯ ಮುದ್ರಾದಿಂದ ಹೃದಯದ ಮೇಲೆ, ತರ್ಜನಿ ಮತ್ತು ಹೆಬ್ಬೆರಳನ್ನು ಬಿಟ್ಟು ಉಳಿದ ಬೆರಳುಗಳನ್ನು ಸೇರಿಸಿ ಕಟ್ಟಿದ ಮುಷ್ಟಿಯಿಂದ ಶಿರದ ಮೇಲೆ ನ್ಯಾಸ ಮಾಡಬೇಕು. ಹೆಬ್ಬೆರಳು ಮತ್ತು ಕನಿಷ್ಠ ರಹಿತ ಮುಷ್ಟಿಯಿಂದ ಶಿಖೆಯ ಮೇಲೆ, ಹೆಬ್ಬೆರಳು ಮತ್ತು ತರ್ಜನಿ ರಹಿತ ಮುಷ್ಟಿಯಿಂದ ಕವಚದ ಮೇಲೆ, ತರ್ಜನಿಯಾದಿ ಮೂರು ಬೆರಳುಗಳಿಂದ ನೇತ್ರದ ಮೇಲೆ ನ್ಯಾಸ ಮಾಡಬೇಕು. ಎರಡೂ ಕೈಗಳಿಂದ ಚಪ್ಪಾಳೆ ಕಟ್ಟುವುದರಿಂದ ಅಸ್ತ್ರ ಮುದ್ರೆಯಾಗುತ್ತದೆ. ಇವು ಶಿವನ ಷಡಂಗನ್ಯಾಸ ಮುದ್ರೆ ಎಂದು ಹೇಳಲಾಗಿದೆ.

ಇದರ ನಂತರ ವರ್ಣನ್ಯಾಸ ಮಾಡಬೇಕು. ನ್ಯಾಸ ಮಾಡದ ಹೊರತು ಮಂತ್ರ ಜಪವು ನಿಷ್ಫಲ ಮತ್ತು ವಿಘ್ನದಾಯಕವಾಗುತ್ತದೆ.

### ಪೀಠದೇವತಾ ನ್ಯಾಸ

ಪೀಠಸ್ಯ ದೇವತಾನ್ಯಾಸಾದ್ದೇಹೆ ಪೀಠಂ ಪ್ರಕಲ್ಪಯೇತ್ ।
ನ್ಯಸೇನ್ಮಂಡೂಕಮಾಧಾರೇ ಸ್ವಾಧಿಷ್ಠಾನೇ ತತಹ ಸುಧಿಃ ॥ 158 ॥
ಕಾಲಾಗ್ನಿರುದ್ರಂ ನಾಭೌ ತು ಕಚ್ಛಪಂ ಹೃದಯೇ ತತಃ ।
ಆಧಾರಶಕ್ತಿಮಾರಭ್ಯ ಹೇಮಪೀಠಾವಧಿ ನ್ಯಸೇತ್ ॥ 159 ॥
ದಕ್ಷವಾಮಾಂಸವಾಮೇರುದಕ್ಷೋರುಷು ಯಥಾಕ್ರಮತ್ ।
ಧರ್ಮೋಜ್ಞಾನಂ ಚ ವೈರಾಗ್ಯಮೈಶ್ವರ್ಯ ವಿನ್ಯಸೇತ್ತತಃ ॥ 160 ॥
ವದನೆ ವಾಮಪಾರ್ಶ್ವೆ ಚ ನಾಭೌ ದಕ್ಷಿಣ ಪಾರ್ಶ್ವಕೆ ।
ಅಧರ್ಮಾದಿನ್ಪ್ರವಿನ್ಯಸ್ಯ ಹೃದ್ಯನಂತಮಿತೋಂಬುಜಮ್ ॥ 161 ॥
ಪದ್ಮೆ ಸೂರ್ಯೆಂದು ವಹ್ನಿಂಶ್ಚ ತೇಷ್ವರ್ಣಾಧ್ಯಾನಿಜಾಃ ಕಲಾಃ ।
ತತ್ತನ್ನಾಮಾದಿ ವರ್ಣಾಧ್ಯಾನ್ಸತ್ವಧ್ಯಾಂಸ್ತ್ರೀನ್ಗುಣಾನ್ನ್ಯಸೇತ್ ॥ 162 ॥
ತತ್ರಾತ್ಮತ್ರಯಮಾಧ್ಯರ್ಣಪೂರ್ವ ತುರ್ಯ ಪರಾದಿಕಮ್ ।
ಮಾಯಾತತ್ತ್ವಂ ಕಲಾತತ್ತ್ವಂ ವಿದ್ಯಾತತ್ತ್ವಂ ತತೋ ನ್ಯಸೇತ್ ॥ 163 ॥

ಪೀಠ ದೇವತೆಗಳ ನ್ಯಾಸ ಮಾಡಲು ತಮ್ಮ ಶರೀರವನ್ನೇ ಪೀಠವೆಂದು ಭಾವಿಸಬೇಕು. ಸಾಧಕರು, ಮೂಲಾಧಾರದ ಮೇಲೆ ಮಂಡೂಕದ, ಸ್ವಾಧಿಷ್ಠಾನದ ಮೇಲೆ ಕಾಲಾಗ್ನಿಯ, ನಾಭಿಯ ಮೇಲೆ ಕಚ್ಛಪ ಮತ್ತು ಹೃದಯದಲ್ಲಿ ಆಧಾರಶಕ್ತಿಯಿಂದ ಪ್ರಾರಂಭಿಸಿ, (ಕೂರ್ಮ, ಅನಂತ, ಪೃಥ್ವಿ, ಸಾಗರ, ರತ್ನದೀಪ, ಪ್ರಾಸಾದ ಮತ್ತು) ಹೇಮಪೀಠದ ವರೆಗೆ ನ್ಯಾಸ ಮಾಡಬೇಕು.





ನಂತರ ಬಲ ಹೆಗಲು, ಎಡಹೆಗಲು, ಎಡತೊಡೆ, ಬಲತೊಡೆಗಳ ಮೇಲೆ ಕ್ರಮವಾಗಿ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳ ನ್ಯಾಸ ಮಾಡಬೇಕು. ನಂತರ ಮುಖ, ವಾಮಪಾರ್ಶ್ವ, ನಾಭಿ ಮತ್ತು ಬಲ ಪಾರ್ಶ್ವಗಳ ಮೇಲೆ ಕ್ರಮವಾಗಿ ಅಧರ್ಮ, ಅಜ್ಞಾನ, ಅವೈರಾಗ್ಯ ಮತ್ತು ಅನೈಶ್ವರ್ಯಗಳ ನ್ಯಾಸ ಮಾಡಬೇಕು.

ಇದರ ನಂತರ ಪುನಹ ಹೃದಯದಲ್ಲಿ, ಅನಂತದಿಂದ ಪದ್ಮದವರೆಗೆ ತಲ್ಪಾಕಾರ ಅನಂತ, ಆನಂದಕಂದ, ಸವಿನ್ನಾಲ, ಪದ್ಮ ಪ್ರಕೃತಿಮಯ ಪತ್ರ, ವಿಕಾರಮಯ ಕೇಸರ ಮತ್ತು ರತ್ನಮಯ ಪಞ್ಚಾಶದ್ಬೀಜಾಢ್ಯ ಕರ್ಣಿಕೆಯ ನ್ಯಾಸ ಮಾಡಬೇಕು. ಪದ್ಮದ ಮೇಲೆ ಸೂರ್ಯನ ತಪಿನಿಯಾದಿ ಹನ್ನೆರಡು ಕಲೆಗಳ, ಚಂದ್ರಮಂಡಲದ ಅಮೃತಾದಿ ಷೋಡಶ ಕಲೆಗಳ ಮತ್ತು ವಹ್ನಿಮಂಡಲದ ಧೂಮ್ರಾರ್ಚಿಷ ಮುಂತಾದ ದಶಕಲೆಗಳ ಹೆಸರು ಮತ್ತು ಆ ಕಲೆಗಳ ಆದಿಯಲ್ಲಿ ವರ್ಣಗಳ ಪ್ರಾರಂಭದ ಅಕ್ಷರಗಳನ್ನು ಸೇರಿಸಿ ನ್ಯಾಸ ಮಾಡಬೇಕು. ನಂತರ ತನ್ನ ಹೆಸರಿನ ಆದಿ ಅಕ್ಷರ ಸಹಿತ ಸತ್ವಾದಿ ಮೂರು ಗುಣಗಳ ನ್ಯಾಸ ಮಾಡಬೇಕು. ನಂತರ ತನ್ನ ಹೆಸರಿನ ಆದಿ ವರ್ಣ ಸಹಿತ ಆತ್ಮಾ ಅಂತರಾಳ ಮತ್ತು ಪರಮಾತ್ಮರ ಮತ್ತು ಆದಿಯಲ್ಲಿ ಪರಾ (ಹ್ರೀಂ) ಸೇರಿಸಿ ಜ್ಞಾನಾತ್ಮದ ನ್ಯಾಸ ಮಾಡಬೇಕು.

ಪರತತ್ತ್ವಂ ಚ ನಾಮಾದಿವರ್ಣಪೂರ್ವಾಣಿ ವಿನ್ಯಸೇತ್ ।
ಪೀಠಶಕ್ತಿರ್ವಿನ್ಯಸ್ಯ ನ್ಯಸೇತ್ಪೀಠಮನುಂ ನಿಜಮ್ ॥ 164 ॥
ಹೃದಿ ನ್ಯಸ್ಯಾನಂತಮುಖಂ ದೇವಾನಾಮುತ್ತರೋತ್ತರಮ್ ।
ಪ್ರತ್ಯಾಧಾರತ್ವಮುದಿತಂ ಪೂರ್ವಪೂರ್ವಸ್ಯ ಸತ್ತಮೈಃ ॥ 165 ॥

ಪುನಃ ಮಾಯಾತತ್ತ್ವ, ಕಲಾತತ್ತ್ವ, ವಿದ್ಯಾತತ್ತ್ವ ಮತ್ತು ಪರತತ್ತ್ವದ ತನ್ನ ಹೆಸರಿನ ಆದಿ ವರ್ಣ ಸಹಿತ ನ್ಯಾಸ ಮಾಡಬೇಕು. ನಂತರ ಪೀಠಶಕ್ತಿಗಳ ನ್ಯಾಸ ಮಾಡಿ ತನ್ನ ಪೀಠ ಮಂತ್ರದ ನ್ಯಾಸವನ್ನೂ ಕೂಡಾ ಮಾಡಬೇಕು. ಹೃದಯದಲ್ಲಿ ಅನಂತಾದಿ ದೇವತೆಗಳನ್ನು ಉತ್ತರೋತ್ತರ ಪರಸ್ಪರ ಆಧಾರವೆಂದು ತಿಳಿಯಲಾಗಿದೆ. ಏಕೆಂದರೆ ಪೂರ್ವವು ಪೂರ್ವದ ಉತ್ತರೋತ್ತರ ಆಧಾರವೆಂದು ಬಲ್ಲಿದರು ಹೇಳುತ್ತಾರೆ.

### ಪೀಠನ್ಯಾಸ ಪ್ರಯೋಗವಿಧಿ

ವೈಷ್ಣವ, ಶೈವ, ಶಾಕ್ತ, ಗಾಣಪತ್ಯ ಮತ್ತು ಸೌರ ಸಂಪ್ರದಾಯದ ಸಾಧಕರು ತಮ್ಮ ತಮ್ಮ ಸಾಂಪ್ರದಾಯಕ್ಕೆ ಅನುಸಾರ ಕಲ್ಪೋಕ್ತ ಕರನ್ಯಾಸ, ಅಂಗನ್ಯಾಸ ಮತ್ತು ವರ್ಣನ್ಯಾಸಗಳನ್ನು ಮಾಡಿದ ನಂತರ ತನ್ನ ಶರೀರವನ್ನೇ ಇಷ್ಟ ದೇವತೆಯ

# ॥ ಏಕವಿಂಶ ತರಂಗ ॥



## ನಿತ್ಯಪೂಜಾ ವಿಧಾನ

ನಿತ್ಯಪೂಜಾವಿಧಿಂ ಸರ್ವದೇವಸಾಧಾರಣಂ ಬ್ರುವೇ ।
ಬ್ರಾಹ್ಮೇ ಮಹೂರ್ತೇ ಉತ್ಥಾಯ ಕೃತ್ವಾ ಶೌಚಾದಿಕಂ ಸುಧಿಃ ॥1॥
ಪರಿಧ್ಯಾಯಾಂಬರಂ ಶುದ್ಧಂ ಮಂತ್ರಸ್ನಾನಂ ವಿಧಾಯ ಚ ।
ಪ್ರವಿಶ್ಯ ದೇವತಾಗಾರಂ ಕುರ್ಯಾತ್ ಸಮ್ಮಾರ್ಜನಾದಿಕಮ್ ॥2॥
ಮಂಗಲಾರಾರ್ತಿಕಂ ಕೃತ್ವಾ ನಿರ್ಮಾಲ್ಯಮಪಸಾರಯೇತ್ ।
ದಧ್ಯಾತ್ ಪುಷ್ಪಾಂಜಲಿಂ ದಂತಧಾವನಾಚಮನೇ ಅಪಿ ॥3॥
ನಮಸ್ಕೃತ್ವಾಸನೇ ಶುದ್ಧೇ ಉಪವಿಶ್ಯ ಗುರುಂ ಸ್ಮರೇತ್ ।
ಶಿರಃ ಸ್ಥಶುಕ್ಲಪದ್ಮಸ್ಥಂ ಪ್ರಸನ್ನಂ ದ್ವಿಭುಜಾಕ್ಷಿಕ್ ॥4॥
ಅಹಂ ಬ್ರಹ್ಮಾಸ್ಮಿ ಸದ್ರೂಪಂ ನಿತ್ಯಮುಕ್ತಂ ನ ಶೋಕಭಾಕ್ ।
ಗುರುದೇವಾತ್ಮನಾಮಿತ್ಥಮೈಕ್ಯಂ ಸ್ಮೃತ್ವಾರ್ಚಯೇತ್ ತಮ್ ॥5॥

ಈಗ ದೇವತೆಗಳ ಸಾಧಾರಣ ನಿತ್ಯ ಪೂಜಾ ವಿಧಾನವನ್ನು ಇಲ್ಲಿ ವರ್ಣಿಸಲಾಗುತ್ತಿದೆ.





ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಶೌಚಾದಿ ಕ್ರಿಯೆಗಳಿಂದ ನಿವೃತ್ತರಾಗಿ ಶುದ್ಧ ವಸ್ತ್ರಗಳನ್ನು ಧರಿಸಿ ಮಂತ್ರಸ್ನಾನವನ್ನು ಮಾಡಿ ದೇವ ಪೂಜಾ ಗೃಹವನ್ನು ಪ್ರವೇಶಿಸಬೇಕು. ನಂತರ ದೇವರ ಕೋಣೆಯನ್ನು ಶುದ್ಧ ಮಾಡಬೇಕು. ನಂತರ ಮಂಗಳಾರತಿ ಮಾಡಿ ನಿರ್ಮಾಲ್ಯವನ್ನು ತೆಗೆದು ಹಾಕಬೇಕು. ನಂತರ ದೇವರಿಗೆ ಪುಷ್ಪಾಂಜಲಿ ಸಮರ್ಪಿಸಿ ಅವರಿಗೆ ದಂತ ಧಾವನ ಮತ್ತು ಆಚಮನಾರ್ಥ ನೀರನ್ನು ಕೊಡಬೇಕು.

ನಂತರ ದೇವರಿಗೆ ನಮಸ್ಕರಿಸಿ ಶುದ್ಧವಾದ ಆಸನದ ಮೇಲೆ ಕುಳಿತು ಗುರುವಿನ ಸ್ಮರಣೆ ಮಾಡಬೇಕು. ಪ್ರಸನ್ನ ಮುದ್ರೆಯಲ್ಲಿ ಶಿರದ ಮೇಲಿನ ಶ್ವೇತಕಮಲದ ಮೇಲೆ ಆಸೀನನಾಗಿ, ಎರಡು ಭುಜ ಎರಡು ನೇತ್ರವುಳ್ಳ, 'ಅಹಂ ಬ್ರಹ್ಮಾಸ್ಮಿ' ಭಾವನೆಯಲ್ಲಿ ಲೀನನಾದ, ನಿತ್ಯಮುಕ್ತ, ಸಕಲ ಶೋಕರಹಿತನಾದ ಗುರುವನ್ನು ಸ್ಮರಣೆ ಮಾಡಿ ಅವನ ಸ್ವರೂಪದಲ್ಲಿ ತನ್ನ ಏಕತೆಯ ಭಾವನೆಯನ್ನು ಮಾಡುತ್ತ ಪೂಜೆ ಮಾಡಬೇಕು.

ಇಷ್ಟದೇವತಾ ಪ್ರಾರ್ಥನೆ

ತ್ರೈಲೋಕ್ಯಚೈತನ್ಯ ಮಯಾದಿ ದೇವ ಶ್ರೀನಾಥವಿಷ್ಣೋ ಭವದಾಜ್ಞಯೈವ ।
ಪ್ರಾತಃ ಸಮುತ್ಥಾಯ ತವಪ್ರಿಯಾರ್ಥಂ ಸಂಸಾರಯಾತ್ರಾ ಮನುವರ್ತಯಿಷ್ಯೇ॥6॥
ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿ ರ್ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿಃ । ಕೇನಾಪಿ ದೇವೇನ ಹೃದಿಸ್ಥಿತೇನ ಯಥಾ ನಿಯುಕ್ತೋಸ್ಮಿ ತಥಾ ಕರೋಮಿ ॥7॥
ಏತಚ್ಛಲೋಕದ್ವಯೇನೇಷ್ಟದೇವತಾಂ ಪ್ರಾರ್ಥಯೇದ್ ಬುಧಃ ।
ಶ್ರೀನಾಥವಿಷ್ಣೋ ಸ್ಥಾನೇ ತು ಕಾರ್ಯ ಊಹೋನ್ಯ ದೈವತಃ ॥8॥
ದೇವತಾಗುಣನಾಮಾದಿ ಸ್ಮರನ್ ಸ್ನಾತುಮಥೋ ವ್ರಜೇತ್ ।
ಸ್ನಾನಮಾಂತರಬಾಹ್ಯಾಖ್ಯಂ ದ್ವಿವಿಧಂ ಕಥಿತಂ ಬುಧೈಃ ॥9॥

ನಂತರ, ತ್ರೈಲೋಕ್ಯಚೈತನ್ಯಮಯಾದಿದೇವಶ್ರೀನಾಥವಿಷ್ಣೋಭವದಾಜ್ಞಯೈವ। ಪ್ರಾತಃ ಸಮುತ್ಥಾಯ ತವಪ್ರಿಯಾರ್ಥಂ ಸಂಸಾರಯಾತ್ರಾ ಮನುವರ್ತಯಿಷ್ಯೇ॥ ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿರ್ಜಾನಾಮ್ಯಧರ್ಮಂನ ಚ ಮೇ ನಿವೃತ್ತಿಃ। ಕೇನಾಪಿ ದೇವೇನ ಹೃದಿಸ್ಥಿತೇನ ಯಥಾನಿಯುಕ್ತೋಸ್ಮಿ ತಥಾ ಕರೋಮಿ ॥

ಈ ಎರಡು ಶ್ಲೋಕಗಳಿಂದ ತನ್ನ ಇಷ್ಟದೇವತೆಯನ್ನು ಪ್ರಾರ್ಥಿಸಬೇಕು. ಯಾರ ಇಷ್ಟದೇವತೆ ವಿಷ್ಣುವಾಗಿರುವನೋ ಅವರು ಈ ಪ್ರಕಾರ ಪ್ರಾರ್ಥನೆ ಮಾಡಬೇಕು. ಅನ್ಯ ಇಷ್ಟ ದೇವತೆಗಳಿದ್ದ ಪಕ್ಷದಲ್ಲಿ, "ವಿಶ್ವೇಶ ಶಂಭೋ

**ಪೂರ್ವವತ್ಪೂಜಿತಂ ಚೈತತ್ ಬದ್ಧಂ ಕಂಠೆ ಭುಜೆ ಶಿಶೋಃ ।**
**ಶಾಕಿನಿಭೂತವೇತಾಲ ಗ್ರಹಾನ್ ಸಧ್ಯೋ ನಿವರ್ತಯೇತ್** ॥ 113 ॥

ಅಷ್ಟದಳ ಪದ್ಮದ ಒಳಗೆ, ಯಾರ ಮೇಲೆ ಶಾಕಿನಿಯ ಪ್ರಭಾವವಿದೆಯೊ ಆ ಸಾಧ್ಯನ ಹೆಸರನ್ನು ಮತ್ತು ದಳಗಳಲ್ಲಿ ವಿಸರ್ಗ ಯುಕ್ತ ಸ ಕಾರ (ಸಃ) ಹಿಂದೆ ಹೇಳಿದ ವಿಧಾನದಂತೆ ಭೋಜಪತ್ರದ ಮೇಲೆ ಗೋರೋಚನ, ಕಸ್ತೂರಿ, ಕೇಶರ ಮತ್ತು ಶ್ರೀಗಂಧದಿಂದ ಮಲ್ಲಿಗೆಯ ಲೇಖನಿಯಿಂದ ಬರೆಯಬೇಕು.

ನಂತರ ಪೂರ್ವೋಕ್ತ ವಿಧಾನದಿಂದ ಚಂಡೀಪಾಠ, ಬ್ರಾಹ್ಮಣಭೋಜನ ಮತ್ತು ಭೂಮಿಶಯನ ಮಾಡುತ್ತ ವಿಧಿವತ್ ಯಂತ್ರ ಪೂಜೆ ಮಾಡುತ್ತಿರಬೇಕು. ಮೂರು ದಿನಗಳವರೆಗೆ ಈ ಪ್ರಕಾರ ಪೂಜೆ ಮಾಡಿದ ನಂತರ ಯಂತ್ರವನ್ನು ಶಿಶುವಿನ ಕೊರಳಲ್ಲಿ ಮತ್ತು ಭುಜದಲ್ಲಿ ಕಟ್ಟಬೇಕು. ಈ ಯಂತ್ರದ ಪ್ರಭಾವದಿಂದ ಶಾಕಿನಿ, ಭೂತ, ವೇತಾಳ ಮತ್ತು ಬಾಲಗ್ರಹಾದಿ ಬಾಧೆಗಳು ದೂರವಾಗುವುದು.

### ಜ್ವರ ನಿವಾರಕ ಯಂತ್ರ

**ಧತ್ತೂರ ರಸತೋ ಲೇಖ್ಯಂ ಪಿತೃಕಾಂತಾರವಾಸಸಿ ।**
**ಕೃಷ್ಣೆ ವಸುತಿಥೌ ಭೂತೆ ಪುಟಿತಂ ಭೂಪುರದ್ವಯಮ್**
**ಕೋಣಾಂತರಾಲೆ ಕೋಣೇಷು ರೇಫಷೋಢಶಕಂ ಲಿಖೇತ್ ।** ॥ 114 ॥
**ದಿಕ್ಷು ರೇಫಚತುಷ್ಕೋಣಯುತಂ ನಾಮಾಪಿ ಮಧ್ಯತಃ** ॥ 115 ॥
**ಪೂಜಿತಂ ತತ್ಪಿತೃವನೆ ನಿಖಾತಂ ಜ್ವರಶಾಂತಿಕೃತೆ ।**

ಕೃಷ್ಣ ಪಕ್ಷದ ಅಷ್ಟಮಿ ಅಥವಾ ಚತುರ್ದಶಿ ದಿನದಂದು ಸ್ಮಶಾನದ (ಶವದ) ಬಟ್ಟೆಯ ಮೇಲೆ ಧತ್ತೂರದ ರಸದಿಂದ ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ಎರಡು ಚತುರ್ಭುಜಗಳನ್ನು ಬರೆದು ಅವುಗಳ ಎಂಟು ಕೋನಗಳಲ್ಲಿ ಮತ್ತು ನಾಲ್ಕು ದಿಕ್ಕುಗಳ ಕೋಣಗಳಲ್ಲಿ, ಅದರ ಎರಡೂ ಪಾರ್ಶ್ವಗಳಲ್ಲಿ ಒಟ್ಟು ಹದಿನಾರು 'ರಂ' ಬರೆದು ಮಧ್ಯದಲ್ಲಿ ರಂ ವೇಷ್ಟಿತ ಸಾಧ್ಯ ನಾಮ ಬರೆಯಬೇಕು. ನಂತರ ಅಗ್ನಿ ಬೀಜದಿಂದ ಅದನ್ನು ಪೂಜೆ ಮಾಡಿ ಸ್ಮಶಾನದಲ್ಲಿ ಅದನ್ನು ಹೂಳಿದರೆ ಜ್ವರವು ಶಾಂತವಾಗುತ್ತದೆ.








### ಸರ್ಪ ಭಯಹರ ಯಂತ್ರ

**ಭೂರ್ಜೆ ಸುಗಂಧೈರ್ವಿಲಿಖೇತ್ ಪದ್ಮಮಷ್ಟದಲಾನ್ವಿತಮ್** ॥ 116 ॥
**ನಾಮಾನ್ವಿತಂ ಕರ್ಣಿಕಾಯಾಂ ದಲೇಷ್ವಜಪಯಾಯುತಮ್ ।**
**ಪೂಜಿತಂ ವಿಧೃತಂ ಬಾಹೌ ಸರ್ಪಭೀತಿನಿವಾರಕಮ್** ॥ 117 ॥

ಭೋಜಪತ್ರದ ಮೇಲೆ ಗೋರೋಚನಾದಿ ಸುಗಂಧಿತ ಅಷ್ಟಗಂಧ'ದಿಂದ ಅಷ್ಟದಳ ಬರೆಯಬೇಕು. ಅದರ ಮಧ್ಯದಲ್ಲಿ ಸಾಧ್ಯನ ಹೆಸರು ಮತ್ತು ದಳಗಳ ಮೇಲೆ ಅಜಪಾ ಮಂತ್ರ (ಹಂಸಃ) ಬರೆಯಬೇಕು. ನಂತರ ಅಜಪಾ ಮಂತ್ರದಿಂದ ಯಂತ್ರವನ್ನು ವಿಧಿವತ್ ಪೂಜೆ ಮಾಡಿ ಭುಜದಲ್ಲಿ ಧರಿಸಿದರೆ ಸರ್ಪಬಾಧೆಯನ್ನು ದೂರ ಮಾಡುತ್ತದೆ.

ಸರ್ಪಭಯಹರ ಯಂತ್ರ




### ಬಂಧಮೋಕ್ಷಕರ ಯಂತ್ರ

**ರೋಚನಾಹಿಮಕರ್ಪೂರ ಕುಂಕುಮೈಃ ಪದ್ಮಮಾಲಿಖೇತ್ ।**
**ಷೋಡಶಾರಂ ಸ್ವರೈರ್ಯುಕ್ತಂ ದಲಂ ಮಾಯಾಢ್ಯಕರ್ಣಿಕಮ್** ॥ 118 ॥
**ತಸ್ಮೋ ಪರಿಷ್ಟಾದ್ ದ್ವಾಂತ್ರಿಶದ್ದಲಂ ವ್ಯಂಜನಯುಗ್ದಲಮ್ ।**
**ಪದ್ಮಂ ದಿಗ್ವಿದಿಶಾಹಕ್ಷಯುಕ್ತಂ ಕ್ಷ್ಮಾಪುರವೇಷ್ಟಿತಮ್** ॥ 119 ॥
**ಏತದ್ಯಂತ್ರಂ ಕಾಂಸ್ಯಪತ್ರೆ ಲಿಖಿತಂ ಸಪ್ತವಾಸರಾನ್ ।**
**ಪೂಜಿತಂ ಭೂರ್ಜಲಿಖಿತಂ ಧೃತಂ ವಾ ಬದ್ಧಮೋಕ್ಷಕೃತ್** ॥ 120 ॥

ಗೋರೋಚನ, ಚಂದನ, ಕರ್ಪೂರ ಮತ್ತು ಕೇಶರಗಳಿಂದ ಷೋಡಶದಳ ಕಮಲವನ್ನು ಬರೆದು ದಳಗಳಲ್ಲಿ ಹದಿನಾರು ಸ್ವರಗಳನ್ನು ಮತ್ತು ಕರ್ಣಿಕಾದಲ್ಲಿ ಮಾಯಾಬೀಜ (ಹ್ರೀಂ) ಬರೆಯಬೇಕು. ನಂತರ ಅದರ ಮೇಲೆ ಮೂವತ್ತೆರಡು ದಳಗಳ ಕಮಲವನ್ನು ಬರೆದು ಕಕಾರದಿಂದ ಸಕಾರ ಪರ್ಯಂತ ಮೂವತ್ತೆರಡು ವ್ಯಂಜನ ವರ್ಣಗಳನ್ನು ಬರೆಯಬೇಕು. ನಂತರ ಈ ಕಮಲದ ನಾಲ್ಕೂ ಪಾರ್ಶ್ವದಲ್ಲಿ ರಚಿಸಲಾದ ಭೂಪುರದ ಒಳಭಾಗದಲ್ಲಿ ನಾಲ್ಕೂ ದಿಕ್ಕುಗಳಲ್ಲಿ ಕ್ರಮವಾಗಿ 'ಹ' ಮತ್ತು ನಾಲ್ಕೂ ಕೋನಗಳಲ್ಲಿ ಕ್ಷ ಬರೆಯಬೇಕು.

ಈ ಯಂತ್ರವನ್ನು ಕಂಚಿನ ತಟ್ಟೆಯಲ್ಲಿ ಬರೆಯಬೇಕು. ಮತ್ತು ಮಾತೃಕಾ

ಪರ್ಯಂತ ಪೂಜೆ ಮತ್ತು ಕುಮಾರಿಯರ ಭೋಜನ ಮಾಡಿ, ಕೊನೆಯ ದಿನ ಯಂತ್ರವನ್ನು ಚೂರು ಚೂರು ಮಾಡಿ ಎಂಜಲು ಅನ್ನದ ಜೊತೆಗೆ ಕಾಗೆಗಳಿಗೆ ತಿನ್ನಿಸಿದರೆ ಶತ್ರುವಿನ ಉಚ್ಚಾಟನೆಯಾಗುತ್ತದೆ.

## ಶಾಂತಿಕಾರಕ ಯಂತ್ರ

ರೋಚನಾಮೃಗಕರ್ಪೂರಕುಂಕುಮೈಃ ಶೋಭನೇ ದಿನೇ ।
ಭೂರ್ಜೆ ಪ್ರವಿಲಿಖೇದ್ಯಂತ್ರಂ ಲೇಖಿನ್ಯಾ ಜಾತಿಜಾತಯಾ
ಪ್ರಾಕ್ಪ್ರತ್ಯಗ್ದಕ್ಷಿಣೋದಕ್ಷ ಕುರ್ಯಾದ್ರೇಖಾಷ್ಟಕಂ ಸಮಮ್ । ॥ 105 ॥
ಏವಮೇಕೋನಪಂಚಾಶಜ್ಜಾಯಂತೆ ಕೋಷ್ಠಕಾಸ್ತಃ
ದಿಗ್ಗತಾಂತಿಮ ಪಂಕ್ತಿಸ್ಥಾಂಶ್ಚತುರ್ವಿಂಶತಿವರ್ಣಕಾನ್ । ॥ 106 ॥
ಅಕಾರಾದಿ ಜಕಾರಾಂತಾಲ್ಲಿಖೇಚ್ಚಂದ್ರ ಸಮನ್ವಿತಾನ್
ತದಂತರ್ಗತ ಪಂಕ್ತಿಸ್ಥಾಂಋಋಾದಿಭಾಂತಾಂಶ್ಚ ಷೋಡಶ । ॥ 107 ॥
ತದಂತಃ ಸ್ಥಾನ್ಮಾದಿ ಸಾಂತಾನ್ ಹಕಾರಂ ಶಿಷ್ಟಕೋಷ್ಠಕೆ
ರೇಖಾಗ್ರೇಷು ತ್ರಿಶೂಲಾನಿ ಕುರ್ವೀತ ರದಸಂಖ್ಯಯಾ । ॥ 108 ॥
ಉಪರ್ಯಧಸ್ತ್ರಿಶೂಲಾಂತಹೃಲ್ಲೇಖಾಸಪ್ತಕಂ ಲಿಖೇತ್
ಏವಂ ವಿಲಿಖ್ಯಂ ತದ್ಯಂತ್ರಂ ಪೂಜಯೇದಿವಸತ್ರಯಮ್ । ॥ 109 ॥
ಚಂಡೀಪಾಠಕರೋ ವಿಪ್ರಭೋಜಕೋ ಭೂಮಿಶಾಯಕಃ
ತತೋ ಲೋಹತ್ರಯಾವಿಷ್ಟಂ ಧಾರಯೇದ್ದೋಷ್ಣಿ ವಾಗಲೇ । ॥ 110 ॥
ಉಪಸರ್ಗಾಃ ಕಲಿಃ ಕೃತ್ಯಾಃ ಶಮಂ ಯಾಂತಿ ವಿಧಾರಣಾತ್ ॥ 111 ॥

ಶುಭಮುಹೂರ್ತದಲ್ಲಿ ಗೋರೋಚನ, ಕಸ್ತೂರಿ, ಕರ್ಪೂರ ಮತ್ತು ಕುಂಕುಮಗಳಿಂದ ಮಲ್ಲಿಗೆಯ ಲೇಖನಿಯಿಂದ ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ಪೂರ್ವದಿಂದ ಪಶ್ಚಿಮ ಮತ್ತು ದಕ್ಷಿಣದಿಂದ ಉತ್ತರ 7–7 ರೇಖೆಗಳನ್ನು ಬರೆಯಬೇಕು. ಈ ಪ್ರಕಾರ 49 ಅಂಕಣ ಗಳಾಗುತ್ತವೆ. ನಂತರ ಈಶಾನ ಕೋಣದಿಂದ ಆರಂಭಿಸಿ ಪುನಃ ಈಶಾನ ಪರ್ಯಂತ ಅಂಕಣಗಳಲ್ಲಿ ಅಕಾರದಿಂದ ಪ್ರಾರಂಭಿಸಿ ಓಕಾರದವರೆಗೆ ಸಾನುಸ್ವಾರ ಇಪ್ಪತ್ನಾಲ್ಕು ವರ್ಣಗಳನ್ನು ಬರೆಯಬೇಕು. ನಂತರ ಅದರ ಕೆಳಗಿನ ಸಾಲುಗಳಲ್ಲಿನ ಅಂಕಣಗಳಲ್ಲಿ ಅನುಸ್ವಾರ ಸಹಿತ ಋಕಾರದಿಂದ ಭಕಾರದ ಪರ್ಯಂತ 16 ವರ್ಣಗಳನ್ನು ಬರೆದು ಅದರ ಕೆಳಗಿನ ಸಾಲುಗಳ ಪಂಕ್ತಿಗಳ ಕೋಷ್ಟಕದಲ್ಲಿ ಅನುಸ್ವಾರ ಸಹಿತ ಮಕಾರದಿಂದ ಸಕಾರ ಪರ್ಯಂತ ಎಂಟು ವರ್ಣಗಳನ್ನು ಬರೆಯಬೇಕು.





ಪುನಃ ರೇಖೆಗಳ ಅಗ್ರಭಾಗದಲ್ಲಿ 32 ತ್ರಿಶೂಲ ಬರೆಯಬೇಕು. ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ತ್ರಿಶೂಲಗಳಲ್ಲಿ ಏಳರಂತೆ ಮಾಯಾ ಬೀಜ (ಹ್ರೀಂ) ಬರೆಯಬೇಕು.

| | | | | | | |
|---|---|---|---|---|---|---|
| ಅ | ಆ | ಇ | ಈ | ಉ | ಊ | ಋ |
| ಜ | ಝ | ಞ | ಟ | ಠ | ಡ | ೠ |
| ಛ | ಭ | ಮ | ಯ | ರ | ಢ | ಌ |
| ಚ | ಬ | ಮ | ಹ | ಲ | ಣ | ೡ |
| ಙ | ಫ | ಥ | ಶ | ಯ | ತ | ಏ |
| ಘ | ಪ | ನ | ಧ | ದ | ಯ | ಐ |
| ಗ | ಖ | ಕ | ಅಃ | ಅಂ | ಔ | ಓ |

ಈ ಪ್ರಕಾರ ಯಂತ್ರವನ್ನು ರಚನೆ ಮಾಡಿ ಸಾಧಕನು ಮೂರು ದಿನ ಪರ್ಯಂತ ಚಂಡೀಪಾಠ ಮತ್ತು ಬ್ರಾಹ್ಮಣ ಭೋಜನ ಮಾಡಿಸುತ್ತ, ಭೂಮಿ ಶಯನ ಮಾಡಬೇಕು ಮತ್ತು ಪ್ರತಿದಿನ ಯಂತ್ರವನ್ನು ಪೂಜಿಸಬೇಕು. ನಂತರ ಬಂಗಾರ, ಬೆಳ್ಳಿ ಅಥವಾ ತಾಮ್ರದಿಂದ ತಯಾರಿಸಿದ ತಾಯಿತದಲ್ಲಿ ಈ ಯಂತ್ರವನ್ನು ಇಟ್ಟು ಭುಜ ಅಥವಾ ಕೊರಳಲ್ಲಿ ಧರಿಸಬೇಕು. ಇದರಿಂದ ಎಲ್ಲ ಪ್ರಕಾರದ ಉಪದ್ರವ, ಕ್ಲೇಶ ಮತ್ತು ಅನ್ಯರ ಅಭಿಚಾರ ಕೃತ್ಯಗಳು, ಮುಂತಾದವುಗಳು ಶಾಂತವಾಗುತ್ತವೆ.

## ಶಾಕಿನಿ ನಿವರ್ತಕ ಯಂತ್ರ

ಪೂರ್ವೋಕ್ತವಿಧಿನಾ ಕುರ್ಯಾತ್ ಪದ್ಮಷ್ಟದಲಾನ್ವಿತಮ್ ।
ಮಧ್ಯೇ ನಾ ಮ್ನಾಯುತಂ ಸರ್ಗಿ ಭೃಗುಣಾಷ್ಟದಲೇಷ್ವಪಿ ॥ 112 ॥

ನಂತರ ರಾತ್ರಿಯಲ್ಲಿ ಮಾಯಾಬೀಜದಿಂದ ಯಂತ್ರವನ್ನು ವಿಧಿವತ್ ಪೂಜೆ ಮಾಡಿ ಆಡಿನ ರಕ್ತದಿಂದ ಮಿಶ್ರಿತ ಅನ್ನವನ್ನು ನಿವೇದಿಸಿ ಸ್ತ್ರೀಗೆ ಭೋಜನ ಮಾಡಿಸಬೇಕು. ನಂತರ ಶ್ಮಶಾನ, ನಿರ್ಜನ ಸ್ಥಳ ಅಥವಾ ಶಿವಾಲಯದಲ್ಲಿ ಅದನ್ನು ಹೂಳಿದರೆ, ಆ ಈರ್ವರೂ ಮಿತ್ರರಲ್ಲಿ ಶೀಘ್ರವಾಗಿ ಪರಸ್ಪರ ವಿದ್ವೇಷಣ ಉಂಟಾಗುತ್ತದೆ.

### ಮಾರಣ ಯಂತ್ರ

ಲಿಖೇದಷ್ಟದಲೆ ಪದ್ಮೆ ನಾಮವರ್ಮಾಸ್ತ್ರಸಂಪುಟಿಮ್ ।
ದಿಗ್ದಲೇಷ್ವಥ ವರ್ಮೈವ ವಿದಿಗ್ದಲಗಮಸ್ತ್ರಕಮ್
ವೃತ್ತೇನ ಪದ್ಮಂ ಸಂವೇಷ್ಟ್ಯ ವರ್ಮಣಾವೇಷ್ಟಯೇಚ್ಚ ತತ್ । ॥ 97 ॥
ಶ್ಮಶಾನಾಂಗಾರಮೇಷಾಸೃಗ್ವಿಷೈಃ ಕಾಕಚ್ಛದೋತ್ಥಯಾ
ಲೇಖನ್ಯಾ ಲಿಖಿತಂ ಯಂತ್ರಂ ಕಪಾಲನರಸಂಭವೇ । ॥ 98 ॥
ಸಂಚಾದ್ಯ ಭಸ್ಮನಾ ತಸ್ಯೋಪರಿ ಪ್ರಜ್ವಲಯೇದ್ವಸುಮ
ಪ್ರತ್ಯಹಂ ಪ್ರದಹೇತ್ಸ್ತೋಕಂ ಸ್ತೋಕಂ ವಿಂಶದ್ದಿನಾವಧಿ । ॥ 99 ॥
ವಿಂಶೇಹನ್ಯಖಿಲಂ ದಗ್ಧಂ ಶತ್ರೋರ್ಲೋಕಾಂತರಪ್ರದಮ್ ॥ 100 ॥



ಅಷ್ಟದಳ ಒಳಗೆ ವರ್ಮ ಮತ್ತು ಅಸ್ತ್ರ ಅರ್ಥಾತ್ ಹುಂ ಫಟ್ ದಿಂದ ಸಂಪುಟಿತ ಸಾಧ್ಯನ ಹೆಸರನ್ನು ಬರೆಯಬೇಕು. ನಂತರ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ದಳಗಳಲ್ಲಿ ವರ್ಮ (ಹುಂ) ಮತ್ತು ಕೋನಗಳಲ್ಲಿ ನಾಲ್ಕು ದಳಗಳಲ್ಲಿ ಅಸ್ತ್ರ (ಫಟ್) ಬರೆಯಬೇಕು. ನಂತರ ಅಷ್ಟದಳವನ್ನು ವೃತ್ತದಿಂದ ವೇಷ್ಟಿತಗೊಳಿಸಿ ಅದನ್ನು ವರ್ಮ (ಹುಂ) ಬರೆದು ವೇಷ್ಟಿತಗೊಳಿಸಬೇಕು.

ಈ ಯಂತ್ರವನ್ನು, ಸ್ಮಶಾನದ ಬೆಂಕಿಯ ಬೂದಿ, ಕುರಿಯ ರಕ್ತ ಮತ್ತು ವಿಷದಿಂದ ಮಿಶ್ರಿತ ಮಸಿಯಿಂದ ಕಾಗೆಯ ಪುಕ್ಕದ ಲೇಖನಿಯಿಂದ ನರ ಕಪಾಲದ ಮೇಲೆ ಬರೆಯಬೇಕು. ನಂತರ ಅಸ್ತ್ರಬೀಜ (ಹುಂ) ದಿಂದ ಪೂಜೆ ಮಾಡಿ





ಕಪಾಲವನ್ನು ಭಸ್ಮದಲ್ಲಿಟ್ಟು ಅದರ ಮೇಲೆ ಅಗ್ನಿಯನ್ನು ಪ್ರಜ್ವಲಿಸಬೇಕು. ಈ ಪ್ರಕಾರ ಇಪ್ಪತ್ತು ದಿನಗಳವರೆಗೆ ಸ್ವಲ್ಪ ಸ್ವಲ್ಪ ಇಂಧನದಿಂದ ಸ್ವಲ್ಪ ಸ್ವಲ್ಪ ಸುಡುತ್ತಿರಬೇಕು. 20ನೆಯ ದಿನ ಸಂಪೂರ್ಣವಾಗಿ ಸುಡಬೇಕು. ಈ ಪ್ರಕಾರ ಮಾಡುವುದರಿಂದ ಶತ್ರುವು ಇಪ್ಪತ್ತು ದಿನದೊಳಗೆ ಮರಣ ಹೊಂದುವನು.

### ಉಚ್ಚಾಟನ ಯಂತ್ರ

ಚತುರ್ದಲ ಲಿಖೇನ್ನಾಮದಲಗಂ ಸರ್ಗಿಮಾರುತಮ್ ।
ಉಲ್ಲೂಕಕಾಕರಕ್ತೇನ ಭೂರ್ಜೆ ಭೂತದಿನೆ ನಿಶಿ ॥ 101 ॥
ರಕ್ತವಸ್ತ್ರಧರೋ ರಕ್ತಪುಷ್ಪಮಾಲ್ಯಾನುಲೇಪನಃ ।
ಲಿಖಿತ್ವಾ ಪೂಜಯೇದ್ಯಂತ್ರಂ ರಕ್ತೈಃ ಪುಷ್ಪೈಶ್ಚ ಚಂದನೈಃ ॥ 102 ॥
ಕುಮಾರಿಂ ಭೋಜಯೇನ್ನಿತ್ಯಂ ದದ್ಯಾತ್ತಸ್ಯೈ ಚ ದಕ್ಷಿಣಾಮ್ ।
ಏವಂ ವಿಂಶತಿಘಸ್ರಾಂತಂ ವಿಧಾಯ ಚರಮೇ ದಿನೆ ॥ 103 ॥
ಯಂತ್ರಂ ತತ್ಖಂಡಶಃ ಕೃತ್ವಾ ಕ್ಷಿಪೇದುಚ್ಛಿಷ್ಟಜದನೆ ।
ದತ್ತಂ ತಸ್ಮಿನ್ನಾಯಸೇಭ್ಯ ಉಚ್ಚಾಟೋ ಜಾಯತೆ ರಿಪೋಃ ॥ 104 ॥

ಉಚ್ಚಾಟನ ಯಂತ್ರ




ಕೃಷ್ಣ ಪಕ್ಷದ ಚತುರ್ದಶಿಯ ದಿನ ರಾತ್ರಿಯಲ್ಲಿ ಸಾಧಕನು ಕೆಂಪು ಬಟ್ಟೆಗಳನ್ನು ಧರಿಸಿ, ಹಣೆಯಲ್ಲಿ ಕೆಂಪು ಚಂದನದ ತಿಲಕ ಧರಿಸಿ ಮತ್ತು ಕೊರಳಲ್ಲಿ ಕೆಂಪು ಹೂಗಳ ಹಾರವನ್ನು ಧರಿಸಿ, ಭೋಜಪತ್ರದ ಮೇಲೆ ಗೂಬೆ ಮತ್ತು ಕಾಗೆಗಳ ರಕ್ತದಿಂದ ಚತುರ್ದಲ ಪದ್ಮವನ್ನು ಬರೆಯಬೇಕು. ಮತ್ತು ಅದರ ಮಧ್ಯದಲ್ಲಿ ಸಾಧ್ಯನ ಹೆಸರು ಮತ್ತು ನಾಲ್ಕೂ ದಳಗಳಲ್ಲಿ ವಿಸರ್ಗ ಸಹಿತ ಮಾರುತ (ಯಃ) ಬರೆಯಬೇಕು.

ಈ ಯಂತ್ರವನ್ನು ಬರೆದು ಕೆಂಪು ಚಂದನ ಮತ್ತು ಕೆಂಪು ಪುಷ್ಪಗಳಿಂದ, ವಾಯುಬೀಜ ಯಂ ದಿಂದ ಪ್ರತಿದಿನ ಪೂಜೆ ಮಾಡಬೇಕು ಮತ್ತು ಪ್ರತಿದಿನ ಒಬ್ಬೊಬ್ಬರಂತೆ ಕುಮಾರಿಯರಿಗೆ ಭೋಜನ ಮಾಡಿಸಿ ದಕ್ಷಿಣೆ ಕೊಡಬೇಕು. ಈ ಪ್ರಕಾರ ನಿರಂತರವಾಗಿ ಇಪ್ಪತ್ತು ದಿನ

ಮುಖಮುದ್ರಣ ಯಂತ್ರ

ಹರಿದ್ರಯಾ ಲಿಖೇದಷ್ಟದಲಂ ವಹ್ನಿಸ್ತ್ರಿಕರ್ಣಿಕಮ್ ।
ಶಿಲಾಯಾಂ ಮಧ್ಯತೋ ನಾಮ ಭೂಬೀಜಂ ದಲಮಧ್ಯತಃ
ತದಭ್ಯರ್ಚ್ಯ ಪಿಧಾಯಾಥ ಶಿಲಯಾ ನಿಖನೇತ್ಕ್ಷಿತೌ । ॥ 88 ॥

ಮುಖಮುದ್ರಣ ಯಂತ್ರ

ದೇವದತ್ತ
ಗ್ಲೌಂ ಗ್ಲೌಂ ಗ್ಲೌಂ ಗ್ಲೌಂ ಗ್ಲೌಂ ಗ್ಲೌಂ ಗ್ಲೌಂ ಗ್ಲೌಂ

ವಾದೆ ವಿವಾದೆ ಜಾಯೇತ
ಪ್ರತಿವಾದ್ಯಾಸ್ಯ ಮುದ್ರಣಮ್ ॥ 89 ॥

ಶಿಲೆಯ ಮೇಲೆ ಅರಿಶಿಣದಿಂದ ತ್ರಿಕೋಣ ಗರ್ಭಿತ ಅಷ್ಟದಲ ಬರೆಯಬೇಕು. ತ್ರಿಕೋಣದ ಮಧ್ಯದಲ್ಲಿ ಸಾಧ್ಯನ ಹೆಸರು ಮತ್ತು ಅಷ್ಟದಳ ಗಳಲ್ಲಿ ಭೂಬೀಜ (ಗ್ಲೌಂ) ಬರೆಯಬೇಕು. ನಂತರ ಭೂಬೀಜದಿಂದ ಅದನ್ನು ಪೂಜೆ ಮಾಡಿ ಮತ್ತೊಂದು ಕಲ್ಲಿನಿಂದ ಅದನ್ನು ಮುಚ್ಚಿ ಭೂಮಿಯಲ್ಲಿ ಹೂತು ಹಾಕಬೇಕು. ಈ ಪ್ರಕಾರ ಮಾಡುವುದರಿಂದ ವಾದವಿವಾದಗಳಲ್ಲಿ ಪ್ರತಿವಾದಿಯ ಬಾಯಿಯು ಸ್ತಂಭನ ವಾಗುತ್ತದೆ.

ಅಗ್ನಿಭಯಹರ ಯಂತ್ರ

ವೃತ್ತೆ ನಾಮ ಸಮಾಲಿಖ್ಯ ಕ್ರಿಯಾಕರ್ಮಸಮನ್ವಿತಮ್ ।
ದಿಕ್ಷು ವೃತ್ತಾದ್ ಬಹಿರ್ಲೇಖ್ಯಂ ವಕಾರಾಣಾಂ ಚತುಷ್ಟಯಮ್ ॥ 90 ॥
ವೇಷ್ಟಿತಂ ಚತುರಸ್ರೇಣ ಯಂತ್ರಮೇತತ್ಸುಸಾಧಿತಮ್ ।
ಗೋರೋಚನಾ ಚಂದನಾಭ್ಯಾಂ ಭೂರ್ಜೆ ಲಿಖಿತಮುತ್ತಮಮ್ ॥ 91 ॥
ಏತದ್ಯಂತ್ರಂ ವೃತಂ ಲೋಹತ್ರಯೇಣ ಭುಜಯಾ ಧೃತಮ್ ।
ನಿವರ್ತಯೇದಗ್ನಿಭಯಂ ಸದನೇಽಪಿ ಚ ಸಂಸ್ಥಿತೌ ॥ 92 ॥

ವೃತ್ತದ ಒಳಗೆ ಹೆಸರು, ಕರ್ಮ, ಕ್ರಿಯಾ (ದೇವದತ್ತಸ್ಯ ಅಗ್ನಿಭಯಂ ಹರ) ಬರೆದು ವೃತ್ತದ ಹೊರಗೆ ನಾಲ್ಕೂ ಕಡೆಗಳಲ್ಲಿ ನಾಲ್ಕು ವಕಾರ ಬರೆಯಬೇಕು. ನಂತರ ಈ ಯಂತ್ರವನ್ನು ಚತುರಸ್ರದಿಂದ ವೇಷ್ಟಿತಗೊಳಿಸಬೇಕು. ಭೋಜಪತ್ರದ





ಅಗ್ನಿಭಯಹರ ಯಂತ್ರ




ಮೇಲೆ ಗೋರೋಚನ ಮತ್ತು ಚಂದನದಿಂದ ಯಂತ್ರವನ್ನು ಬರೆದು ಮಾತೃಕಾ ಮಂತ್ರದಿಂದ ಪೂಜೆ ಮಾಡಿ ಬೆಳ್ಳಿ-ಬಂಗಾರ ಅಥವಾ ತಾಮ್ರದ ತಾಯಿತದಲ್ಲಿ ಹಾಕಿ ಭುಜದಲ್ಲಿ ಧರಿಸುವುದರಿಂದ ಮನೆಯಲ್ಲಿ ಅಥವಾ ಅನ್ಯ ಸ್ಥಾನಗಳಲ್ಲಿ ಪ್ರಜ್ವಲಿತ ಅಗ್ನಿಯ ಭಯವು ದೂರವಾಗುತ್ತದೆ.

ವಿದ್ವೇಷಣ ಯಂತ್ರ

ಮಾಯಾ ಪುಟಿತಮಂಕಾರಂ ನಾಮಕರ್ಮಯುತಂ ಲಿಖೇತ್ ।
ಚತುರ್ದಲೇಬ್ಜೆ ಲೇಖನ್ಯಾ ವಾಯಸಚ್ಛದಜಾತಯಾ ॥ 93 ॥
ದಲೇಷ್ವಪಿ ತಥಾ ಲೇಖ್ಯಂ ವಿರೋಧಿಕ್ಷತಜೇನ ತತ್ ।
ನಿಶಿ ಸಂಪೂಜ್ಯ ತದ್ಯಂತ್ರಮೋದನಂ ವಿನಿ ವೇದಯೇತ್ ॥ 94 ॥
ಅಜಾರುಧಿರಸಂಯುಕ್ತಂ ನಾರಿಮೇಕಾಂ ಚ ಭೋಜಯೇತ್ ।
ತತಃ ಸ್ಮಶಾನೆ ಶರ್ವಸ್ಯ ಗೇಹೆ ವಾ ಶೂನ್ಯ ಮಂದಿರೆ ॥ 95 ॥
ನಿಖಾತಂ ತದ್ವಿದ್ವೇಷೋದ್ವೇಷಂ ಜನಯೇದಚಿರಾದ್ ಧ್ರುವಮ್ ।
ವಿದ್ವೇಷಣಮಿದಂ ಯಂತ್ರಮಥೋ ಮಾರಣಮುಚ್ಯತೆ ॥ 96 ॥

ವಿದ್ವೇಷಕರ ಯಂತ್ರ




ಭೋಜಪತ್ರದ ಮೇಲೆ ಶತ್ರುವಿನ ರಕ್ತದಿಂದ ಕಾಗೆಯ ಪುಚ್ಛದಿಂದ ಲೇಖನಿ ಮಾಡಿ ಚತುರ್ದಲ ಬರೆಯಬೇಕು. ನಂತರ ಅದರ ಮಧ್ಯದಲ್ಲಿ ಮತ್ತು ಚತುರ್ದಲ ಗಳಲ್ಲಿ ಮಾಯಾಬೀಜದಿಂದ ಸಂಪುಟಿತ ಅಕಾರ ಅರ್ಥಾತ್ (ಹ್ರೀಂ ಅಂ ಹ್ರೀಂ) ಬರೆದು ಸಾಧ್ಯನಾಮ ಮತ್ತು ಕರ್ಮ (ಅಮುಕೌ ವಿದ್ವೇಷಂಯ) ಬರೆಯಬೇಕು.

### ದುರ್ಭಾಗ್ಯನಾಶನ ಯಂತ್ರ

**ಭೃಗ್ವಾಕಾಶವಿಧಿಕ್ಷ್ಮಾಖಿವಹ್ನಿಂ ಭಾಂತಿಂದು ಭೂಷಿತಾನ್ ।**
**ಲಿಖೇದಷ್ಟಾರಪದ್ಮಸ್ಯ ಕರ್ಣಿಕಾಯಾಂ ದಲೇಷ್ವಪಿ**
**ಗೋರೋಚನಾ ಚಂದನಾಭ್ಯಾಂ ಭೂರ್ಜಭ್ಯರ್ಚ್ಯದ್ದಿನತ್ರಯಮ್ ।** ॥ 82 ॥
**ಧೃತಂ ಹೇಮಗತಂ ಕಂಠೆ ನಾರ್ಯಾ ಬಾಹ್ವೋರ್ನರೇಣ ವಾ**
**ಸೌಭಾಗ್ಯದಂ ಬೀಜಯಂತ್ರಂ ಪ್ರೋಕ್ತಂ ದೌರ್ಭಾಗ್ಯನಾಶನಮ್ ।** ॥ 83 ॥

### ದೌರ್ಭಾಗ್ಯನಾಶಕ ಯಂತ್ರ




ಭೃಗು (ಸ) ಆಕಾಶ (ಹೂ) ವಿಧಿ (ಕ) ಕ್ಷ್ಮಾ (ಲ್) ಖ (ಹೂ) ವಹ್ನಿ (ರ್) ಈ ವರ್ಣಗಳನ್ನು ಶಾಂತಿ (ಈ) ಇಂದು ಅನುಸ್ವಾರದಿಂದ ಯುಕ್ತ ಗೊಳಿಸಬೇಕು. ಈ ಪ್ರಕಾರ 'ಸಿಂ ಹಿಂ ಕಿಂ ಲಿಂ ಹಿಂ ರಿಂ' ಈ ಆರು ವರ್ಣ ಗಳಿಂದ ಅಷ್ಟದಳದ ಕರ್ಣಿಕಾದಲ್ಲಿ ಮತ್ತು ಅದರ ಪ್ರತ್ಯೇಕ ದಳಗಳಲ್ಲಿ ಬರೆಯಬೇಕು.

ಭೋಜಪತ್ರದ ಮೇಲೆ ಗೋರೋಚನ ಮತ್ತು ಚಂದನದಿಂದ ಮಲ್ಲಿಗೆಯ ಲೇಖನಿಯಿಂದ ಈ ಯಂತ್ರವನ್ನು ಬರೆಯಬೇಕು. ನಂತರ ಸುಂದರಿ ಮಂತ್ರದಿಂದ ಮೂರು ದಿನಗಳವರೆಗೆ ಯಂತ್ರವನ್ನು ವಿಧಿವತ್ ಪೂಜೆ ಮಾಡಬೇಕು. ನಂತರ ಬಂಗಾರದ ತಾಯಿತದಲ್ಲಿ ಯಂತ್ರವನ್ನು ಹಾಕಿ ಕಂಠದಲ್ಲಿ ಮತ್ತು ಪುರುಷರು ತಮ್ಮ ಭುಜದಲ್ಲಿ ಧರಿಸಬೇಕು. ಈ ಯಂತ್ರವು ದೌರ್ಭಾಗ್ಯವನ್ನು ನಾಶ ಮಾಡಿ ಸೌಭಾಗ್ಯವನ್ನು ಕೊಡುತ್ತದೆ.

### ಅಕರ್ಷಣ ಯಂತ್ರ

**ಚತುರ್ದಲಂ ಲಿಖೇದ್ ಭೂರ್ಜೆ ಸ್ವಾಸೃಗ್ಯುಗ್ರಕ್ತಚಂದನೈಃ** ॥ 84 ॥
**ಕರ್ಣಿಕಾಯಾಂ ಸಾಧ್ಯನಾಮ ಕ್ರೋಧಬೀಜದಲೇಷ್ವಪಿ ।**
**ತದ್ಯಂತ್ರಂ ಪೂಜಯಿತ್ವಾಜ್ಯೆ ಕ್ಷಿಪ್ತಮವೃಷ್ಟಿಕೃದ್‌ಭವೇತ್** ॥ 85 ॥





### ಆಕರ್ಷಣ ಯಂತ್ರ




ತನ್ನ ರಕ್ತದಿಂದ ಮಿಶ್ರಿತ ಕೆಂಪು ಚಂದನದಿಂದ ಭೋಜಪತ್ರದ ಮೇಲೆ ಚತುರ್ದಲ ಕಮಲವನ್ನು ಬರೆಯಬೇಕು. ಅದರ ಕರ್ಣಿಕಾದಲ್ಲಿ ಸಾಧ್ಯನ ಹೆಸರನ್ನು ಬರೆಯಬೇಕು. ಮತ್ತು ನಾಲ್ಕೂ ದಳಗಳಲ್ಲಿ ಕ್ರೋಧ ಬೀಜ (ಹುಂ) ಬರೆಯಬೇಕು. ನಂತರ ದಶಾಕ್ಷರ ರುದ್ರ ಮಂತ್ರದಿಂದ ಅದನ್ನು ಪೂಜೆ ಮಾಡಿ ತುಪ್ಪದಲ್ಲಿ ಹಾಕುವುದರಿಂದ ಸಾಧ್ಯನು ಖಚಿತವಾಗಿ ಆಕರ್ಷಿತನಾಗುತ್ತಾನೆ.

### ಆಕರ್ಷಣಕಾರಕ ತ್ರಿಪುರಾ ಯಂತ್ರ

**ಷಟ್‌ಕೋಣೆ ವಿಲಿಖೇನ್ನಾಮವಾಙ್ಮನೋಭವ ಮಧ್ಯತಃ ।**
**ಕೋಣೇಷು ಭೃಗುರೌಸರ್ಗಿ ಭೂರ್ಜೆ ರೋಚನಯಾರ್ಪಿತಮ್** ॥ 86 ॥
**ಪೂಜಿತಂ ತ್ರಿಪುರಾಯಂತ್ರಂ ಘೃತಾಂತರ್ವಿನಿವೇಶಿತಮ್ ।**
**ಇಷ್ಟಸ್ಯಾಕರ್ಷಣಂ ತೇನ ಭವೇತ್ಸಪ್ತಾಹ ಮಧ್ಯತ :** ॥ 87 ॥




ಷಟ್ಕೋನದ ಒಳಗೆ ವಾಗ್ಬೀಜ (ಐಂ) ಮತ್ತು ಕಾಮಬೀಜ (ಕ್ಲೀಂ)ಗಳ ಮಧ್ಯದಲ್ಲಿ ಸಾಧ್ಯನ ಹೆಸರು ಮತ್ತು ಷಟ್ಕೋನಗಳಲ್ಲಿ ಜೌ ಮತ್ತು ವಿಸರ್ಗ ಸಹಿತ ಭೃಗು (ಸೌಃ) ಬರೆಯಬೇಕು.
ಯಂತ್ರವನ್ನು ಗೋರೋಚನದಿಂದ ಭೋಜಪತ್ರದ ಮೇಲೆ ಬರೆಯಬೇಕು. ತ್ರಿಪುರ ಬಾಲಾ ಅಥವಾ ತ್ರಿಪುರ ಭೈರವಿ ಮಂತ್ರದಿಂದ ಪೂಜೆ ಮಾಡಿ ತುಪ್ಪದಲ್ಲಿ ಹಾಕಬೇಕು. ಈ ಪ್ರಯೋಗದಿಂದ ಇಚ್ಛಿತ ವ್ಯಕ್ತಿಯು ಒಂದು ವಾರದೊಳಗೆ ಆಕರ್ಷಿತನಾಗುತ್ತಾನೆ.

ತತಃ ಸ್ವನಾಥನಾಮಾರ್ಣಾನ್ಮಾಯಾಬೀಜತ್ರಯಂ ಪುನಃ ।
ದಿಕ್ಪತ್ರೆ ತ್ರೀಗಿರಿಸುತಾಂ ವಿದಿಕ್ಪತ್ರೇಷ್ವಥೈಕಶಃ
ಭೂರ್ಜೇ ಸಿತತ್ರಯೋದಶ್ಯಾಂ ರೋಚನಾನಾಭಿಕುಂಕುಮೈಃ । ॥ 76 ॥
ವಿಲಿಖ್ಯೋತ್ತರದಿಗ್ವಕ್ತ್ರೊ ನಿಶ್ಯರ್ಚೆತ್ಸಪ್ತವಾಸರಾನ್
ತದಂತೆ ಭೋಜಯೇತ್ಸಪ್ತ ಪತಿಪುತ್ರಾನ್ವಿತಾಃ ಸ್ತ್ರೀಯಃ । ॥ 77 ॥
ಲಲಿತಾ ಪ್ರೀತಯೆ ಪಶ್ಚಾದ್ಯಂತ್ರಂ ಧಾತುಗತಂ ಧೃತಮ್
ರೂಪಸೌಭಾಗ್ಯಸಂಪತ್ತಿಕರಂ ಪ್ರಿಯವಂಶವದಮ್ । ॥ 78 ॥
ಸಂಪ್ರೋಕ್ತಂ ಲಲಿತಾಯಂತ್ರಂ ಕಾಮಿನಿನಾಮಭಿಪ್ಸದಮ್ ॥ 79 ॥

ಈಗ ದುರ್ಭಾಗ್ಯನಾಶಕ, ಪತಿಯನ್ನು ವಶ ಮಾಡಿಕೊಳ್ಳುವ, ಸ್ತ್ರೀಯರ ಸೌಭಾಗ್ಯ ವರ್ಧಕವಾದ ಲಲಿತಾಯಂತ್ರವನ್ನು ಕುರಿತು ಹೇಳಲಾಗುತ್ತದೆ. ಚತುರ್ಭುಜ ಕರ್ಣಿಕಾ ಸಹಿತ ಅಷ್ಟದಳ ಕಮಲವನ್ನು ಬರೆದು ಚತುರ್ಭುಜದ ಮಧ್ಯದಲ್ಲಿ ಮೂರು ಮಾಯಾಬೀಜ (ಹ್ರೀಂ) ಬರೆದು ತನ್ನ ಪತಿಯ ಹೆಸರನ್ನು ಬರೆಯಬೇಕು. ನಂತರ ಅದರ ಕೆಳಗೆ ಮೂರು ಮಾಯಾ ಬೀಜಗಳನ್ನು (ಹ್ರೀಂ)




ಬರೆಯಬೇಕು. ದಿಕ್ಕುಗಳ ನಾಲ್ಕೂ ದಳಗಳಲ್ಲಿ ಮೂರು ಮೂರು ಮಯಾಬೀಜ ಮತ್ತು ಕೋನಗಳಲ್ಲಿ ದಳಗಳಲ್ಲಿ ಒಂದೊಂದು ಮಾಯಾಬೀಜ ಬರೆಯಬೇಕು. ಈ ಯಂತ್ರವನ್ನು ಶುಕ್ಲ ಪಕ್ಷದ ತ್ರಯೋದಶಿ ತಿಥಿಯ ದಿನ ಭೋಜಪತ್ರದ ಮೇಲೆ ಗೋರೋಚನ, ಕಸ್ತೂರಿ ಮತ್ತು ಕುಂಕುಮಗಳಿಂದ ದಾಳಿಂಬದ ಲೇಖನಿಯಿಂದ ಬರೆಯಬೇಕು.





ನಂತರ ರಾತ್ರಿಯಲ್ಲಿ ಉತ್ತರಾಭಿಮುಖವಾಗಿ ಕುಳಿತು ಲಲಿತಾ ಮಂತ್ರದಿಂದ ಯಂತ್ರವನ್ನು ಪೂಜಿಸಬೇಕು. ಈ ಪ್ರಕಾರ ಏಳು ದಿನ ಪರ್ಯಂತ ಮಾಡಬೇಕು. ಇದರ ನಂತರ ಲಲಿತಾ ದೇವಿಯ ಪ್ರೀತ್ಯರ್ಥ ಪತಿ ಮತ್ತು ಪುತ್ರವತಿಯರಾದ ಏಳು ಜನ ಸ್ತ್ರೀಯರಿಗೆ ಭೋಜನ ಮಾಡಿಸಬೇಕು. ನಂತರ ಯಂತ್ರವನ್ನು ಬೆಳ್ಳಿ, ಬಂಗಾರ ಅಥವಾ ತಾಮ್ರದ ತಾಯಿತದಲ್ಲಿ ಹಾಕಿ ಕೊರಳಲ್ಲಿ ಅಥವಾ ಭುಜದಲ್ಲಿ ಧರಿಸಬೇಕು. ಈ ಯಂತ್ರವನ್ನು ಧರಿಸುವುದರಿಂದ ಸ್ತ್ರೀಯರ ರೂಪ, ಸೌಭಾಗ್ಯ ಮತ್ತು ಸಂಪತ್ತು ಪ್ರಾಪ್ತವಾಗುತ್ತದೆ. ಮತ್ತು ಪತಿಯು ವಶವರ್ತಿಯಾಗುತ್ತಾನೆ. ಈ ಪ್ರಕಾರ ಲಲಿತಾ ಯಂತ್ರವು ಸ್ತ್ರೀಯರಿಗೆ ಇಚ್ಛಿತ ಫಲವನ್ನು ಕೊಡುತ್ತದೆ.

### ಪತಿವಶೀಕರಣ ಯಂತ್ರ

ಗೋರೋಚನಾ ಕುಂಕುಮಾಭ್ಯಾಂ ಭೂರ್ಜೇದ್ವದಲಮಾಲಿಖೇತ್ ।
ಸಾಕಾರಪುಟಿತಂ ನಾಮಕರ್ಣಿಕಾಯಾಂ ದಲೇಧ್ರಿಜಾ ॥ 80 ॥
ದಿನದ್ವಯಂ ನಿಶಾಸ್ವಿಷ್ಟವಾ ಭೋಜಯಿತ್ವಾಂಗನಾ ತ್ರಯಮ್ ।
ಕಂಠೆ ಧೃತಂ ಭರ್ತೃವಶ್ಯಕಾರಕಂ ಯಂತ್ರಮುತ್ತಮಮ್ ॥ 81 ॥

ಗೋರೋಚನ ಮತ್ತು ಕುಂಕುಮದಿಂದ ಭೋಜಪತ್ರದ ಮೇಲೆ ಮಲ್ಲಿಗೆಯ ಲೇಖನಿಯಿಂದ ಅಷ್ಟದಳ ಬರೆಯಬೇಕು. ನಂತರ ಅದರ ಕರ್ಣಿಕಾದಲ್ಲಿ 'ಸಾ' ದಿಂದ ಸಂಪುಟಿತ ಪತಿಯ ಹೆಸರನ್ನು ಮತ್ತು ದಳಗಳಲ್ಲಿ ಮಾಯಾಬೀಜ (ಹ್ರೀಂ) ಬರೆಯಬೇಕು.




ಎರಡು ದಿನಗಳವರೆಗೆ ನಿರಂತರವಾಗಿ ರಾತ್ರಿಯಲ್ಲಿ ಮಾಯಾಬೀಜದಿಂದ ಇದನ್ನು ಪೂಜೆ ಮಾಡಿ ಮೂವರು ಸ್ತ್ರೀಯರಿಗೆ ಭೋಜನ ಮಾಡಿಸಬೇಕು. ಈ ಪ್ರಕಾರ ತಯಾರಿಸಿದ ಯಂತ್ರವನ್ನು ಧಾರಣ ಮಾಡುವುದರಿಂದ ಪತಿಯು ಪತ್ನಿಯ ವಶವಾಗುತ್ತಾಳೆ.

### ವಿಜಯಪ್ರದ ಯಂತ್ರ

ಲಿಖೇಚತುರ್ದಲಂ ಪದ್ಮಂ ಸಾಧ್ಯಾಖ್ಯಾಯುಕ್ತಕರ್ಣಿಕಮ್
ರೋಚನಾಕುಂಕುಮಾಭ್ಯಾಂ ತು ಭೂರ್ಜೆ ಮಾಯಾಯುತಚ್ಛದಮ್ ॥ 43 ॥
ತದ್ಯಂತ್ರಂ ಪಯಸಿ ನ್ಯಸ್ಯ ವಿವಾದಂ ವಾದಿನಾ ಚರೇತ
ಜಯಮಾಪ್ನೋತಿ ಗದಿತಂ ವಿವಾದವಿಜಯಾಭಿದಮ್ ॥ ॥ 44 ॥

### ವಿವಾದ ಜಯಕರ ಯಂತ್ರ




ಭೋಜಪತ್ರದ ಮೇಲೆ ಗೋರೋಚನ ಮತ್ತು ಕುಂಕುಮದಿಂದ ನಾಲ್ಕು ದಳಗಳ ಕಮಲ ಬರೆದು ಅದರ ಕರ್ಣಿಕಾದಲ್ಲಿ ಸಾಧ್ಯ ವ್ಯಕ್ತಿಯ ಹೆಸರು (ಯಾರ ಜೊತೆಗೆ ವಿವಾದವಿದೆಯೋ ಅವರ) ಬರೆಯಬೇಕು. ಕಮಲದ ನಾಲ್ಕೂ ದಳಗಳಲ್ಲಿ ಮಾಯಾಬೀಜ (ಹ್ರೀಂ) ಬರೆದು ತಯಾರಿಸಿದ ಆ ಯಂತ್ರವನ್ನು ಹಾಲಿನಲ್ಲಿ ಹಾಕಿ ಮೊಕದ್ದಮೆಯಲ್ಲಿ ವಾದಿಯೊಂದಿಗೆ ವಾದ ಮಾಡಬೇಕು.

ಈ ಯಂತ್ರದ ಪ್ರಭಾವದಿಂದ ಸಾಧಕನು ವಾದವಿವಾದದಲ್ಲಿ ಜಯಶಾಲಿಯಾಗುತ್ತಾನೆ.

### ಧನಿಕ ವಶೀಕರಣ ಯಂತ್ರ

ಧನಿಕೆ ಯಾಚತಿ ದ್ರವ್ಯಂ ದಾನಾಶಕ್ತಥಮರ್ಣಕೆ ॥ 45 ॥
ಧನಿಕಸ್ಯ ವಶೀಕೃತ್ಯೈ ಯಂತ್ರಂ ಭೂರ್ಜದಲೆ ಲಿಖೇತ್ ।
ರೋಚನಾಕುಂಕುಮಾಭ್ಯಾಂ ತು ಷಟ್ಕೋಣಂ ಸಾಧ್ಯಕರ್ಣಿಕಮ್ ॥ 46 ॥
ಕೋಣಾಗ್ರಿ ಕೋಣಮಧ್ಯೇಷು ಕಾಮಾಂದ್ವಾದಶಸಂಲಿಖೇತ್ ।
ತದ್‌ವೃತ್ತೇನ ಚ ಸಂವೇಷ್ಟ್ಯ ಮಾಯಯಾವೇಷ್ಟಯೇದ್ ಬಹಿಃ ॥ 47 ॥
ಪುನರ್ವೃತ್ತೇನ ಸಂವೇಷ್ಟ್ಯ ಪೂಜಯೇತ್ಸಪ್ತ ವಾಸರಾನ್ ।
ಪಠೇತ್ಸಪ್ತಶತಿಂ ನಿತ್ಯಮಂತೆ ಹೋಮ ಶತಾಧಿಕಮ್ ॥ 48 ॥
ಕೃತ್ವಾ ಸಂಭೋಜಯೇತ್ಕನ್ಯಾಂ ಧರೇಧ್ಯಂತ್ರ ಗಲೇ ಸ್ವಕೇ । ॥ 49 ॥
ಏವಂ ಧನೀವಶಮಿತೊ ನ ಯಾಚತಿ ದದಾತ್ಯಪಿ





ಮೊದಲು ಸಾಲ ತೆಗೆದುಕೊಂಡು ಸಾಲಗಾರನಾಗಿದ್ದು, ಧನಿಕನಿಂದ ಯಾಚನೆ ಮಾಡಿದರೂ ಹಣ ಕೊಡದಿದ್ದರೆ ಅವನನ್ನು ವಶದಲ್ಲಿ ಮಾಡಿಕೊಳ್ಳಲು ವಕ್ಷ್ಯಮಾಣ ಯಂತ್ರವನ್ನು ಭೋಜಪತ್ರದ ಮೇಲೆ ಬರೆಯಬೇಕು.

### ಧನಿಕ ವಶೀಕರಣ ಯಂತ್ರ



ಗೋರೋಚನ ಮತ್ತು ಕುಂಕುಮದಿಂದ ಭೋಜಪತ್ರದ ಮೇಲೆ ಮಲ್ಲಿಗೆಯ ಲೇಖನಿಯಿಂದ ಷಟ್ಕೋಣವನ್ನು ಬರೆದು ಅದರ ಕರ್ಣಿಕಾದಲ್ಲಿ ಸಾಧ್ಯವ್ಯಕ್ತಿಯ ಹೆಸರು ಬರೆಯಬೇಕು. ನಂತರ ಷಟ್ಕೋನಗಳಲ್ಲಿ ಮತ್ತು ಕೋನಗಳಲ್ಲಿ ಮಧ್ಯದಲ್ಲಿ ಒಂದೊಂದರ ಕ್ರಮದಿಂದ 12 ಕಾಮಬೀಜ (ಕ್ಲೀಂ)ಗಳನ್ನು ಬರೆಯಬೇಕು. ನಂತರ ಅದನ್ನು ವೃತ್ತದಿಂದ ವೇಷ್ಟಿತಗೊಳಿಸಿ ಆ ವೃತ್ತವನ್ನೂ ಕೂಡಾ ಮಾಯಾಬೀಜ (ಹ್ರೀಂ)ದಿಂದ ವೇಷ್ಟಿತಗೊಳಿಸಬೇಕು.

ನಂತರ ಆ ಮಾಯಾ ಬೀಜಗಳನ್ನು ವೃತ್ತದಿಂದ ವೇಷ್ಟಿತಗೊಳಿಸಿ ಏಳು ದಿನಗಳ ವರೆಗೆ ಅದನ್ನು ಪೂಜೆ ಮಾಡಬೇಕು. ಪ್ರತಿದಿನ ಸಪ್ತಶತಿ ಪಾಠ ಮಾಡುತ್ತಿರಬೇಕು. ಕೊನೆಯ ದಿನ ನವಾರ್ಣ ಮಂತ್ರದಿಂದ 108 ಆಹುತಿ ಗಳನ್ನು ಕೊಟ್ಟು ಕನ್ಯೆಯರಿಗೆ ಭೋಜನ ಮಾಡಿಸಬೇಕು. ಈ ಪ್ರಕಾರ ತಯಾರಿಸಿದ ಯಂತ್ರವನ್ನು ಕೊರಳಲ್ಲಿ ಧರಿಸುವುದರಿಂದ ಧನಿಕನು ಸಾಧಕನ ವಶೀಭೂತನಾಗುತ್ತಾನೆ ಮತ್ತು ಕೇಳದೆಯೆ ಹಣ ಕೊಡುತ್ತಾನೆ.

### ದುಷ್ಟ ಮೋಹನ ಯಂತ್ರ

ದುಷ್ಟಾರಾಜಸಮೀಪಸ್ಥಾ ಪೈಶುನ್ಯಂ ಕುರ್ವತೆ ಯದಾ ।
ತದಾ ಯಂತ್ರಂ ಪ್ರಕುರ್ವೀತ ದುಷ್ಟಮೋಹನಸಂಜ್ಞಕಮ್ ॥ 50 ॥
ಲಿಖೇದಷ್ಟದಲಂ ಪದ್ಮಂ ಭೂರ್ಜೆ ಚಕ್ರೀವತೋಸ್ಸಜಾ ।
ಕರ್ಣಿಕಾಗತ ಸಾಧ್ಯಾಖ್ಯಂ ಮಾಯಾಯುಕ್ತಕಕುಬ್ದಲಮ್ ॥ 51 ॥

ಸರ್ಗಾಂತಭೃಗುಯುಕ್ಕೋಣಂ ವೃತ್ತದ್ವಿತಯವೇಷ್ಟಿತಮ್ ।
ಕೃತಾಸುಸ್ಥಾಪನಂ ಯಂತ್ರಂ ಸಂಪೂಜ್ಯ ಪಯಸಿ ಕ್ಷಿಪೇತ್
ಏಕವಿಶಂತಿರಾತ್ರೇಣ ದ್ಯುಷ್ಟಾಃ ಸ್ಯುರ್ವಶವರ್ತಿನಃ । ॥ 52 ॥

ರಾಜನ ಹತ್ತಿರದ ದುಷ್ಟ ಕೆಲಸಗಾರರು ಚಾಡಿಕೋರರ ಕೆಲಸ ಮಾಡುತ್ತಿದ್ದರೆ ಈ ದುಷ್ಟ ಮೋಹನ ಯಂತ್ರವನ್ನು ತಯಾರಿಸಬೇಕು. ಭೋಜಪತ್ರದ ಮೇಲೆ ಕಸ್ತೆಯ ರಕ್ತದಿಮದ ಮಲ್ಲಿಗೆಯ ಲೇಖನಿಯಿಂದ ಅಷ್ಟದಳ ಕಮಲವನ್ನು ಬರೆದು ಅದರ ಕರ್ಣಿಕಾದಲ್ಲಿ ಸಾಧ್ಯನ ಹೆಸರು, ನಂತರ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ, ದಳಗಳಲ್ಲಿ ಮಾಯಾಬೀಜ (ಹ್ರೀಂ) ಮತ್ತು ಕೋನಗಳಲ್ಲಿ ನಾಲ್ಕು ದಳಗಳಲ್ಲಿ ಸರ್ಗಾಂತಭೃಗು (ಸಃ) ಬರೆದು ಅದನ್ನು ಎರಡು ವೃತ್ತಗಳಿಂದ ವೇಷ್ಟಿತ ಗೊಳಿಸಬೇಕು. ನಂತರ ಈ ಯಂತ್ರದಲ್ಲಿ ಪ್ರಾಣಪ್ರತಿಷ್ಠೆ ಮಾಡಿ ವಿಧಿವತ್ತಾಗಿ ಪೂಜೆ ಮಾಡಿ ಅದನ್ನು ಹಾಲಿನಲ್ಲಿ ಹಾಕಿಡಬೇಕು. ಈ ಪ್ರಕಾರ ಮಾಡುತ್ತಿರುವುದರಿಂದ ಚಾಡಿಕೋರನು ಇಪ್ಪತ್ತೊಂದು ದಿನದೊಳಗೆ ಸಾಧಕನ ವಶವಾಗುತ್ತಾನೆ.

ದುಷ್ಟ ಮೋಹನ ಯಂತ್ರ




### ಸರ್ವತ್ರ ಜಯಪ್ರದ ಯಂತ್ರ

ಚತುರಸ್ರೇ ವಿಷಾನಂತಂಗತಂ ಮಾಯಾಪುಟಂ ಭೃಗುಮ್ ॥ 53 ॥
ಲಿಖಿತ್ವಾ ತಸ್ಯ ಕೋಣೇಷು ಕಕುಪ್ಸ್ವಪಿ ದಲಾಷ್ಟಕಮ್ ।
ರೋಹರೋಧಸ್ತಂಭಕ್ಷೋಭದಿಗ್ದಲೇಷು ಕ್ರಮಾಲ್ಲಿಖೇತ್ ॥ 54 ॥
ಕೋಣೇಷು ಸರ್ಗಿಚರಮಂ ಭುಜೆ ರೋಚನಯೋತ್ತಮೇ ।
ಶರಾವದ್ವಯಮಧ್ಯಸ್ಥಂ ಮಧ್ಯೆ ಸಾಧ್ಯಾಭಿಧಾನ್ವಿತಮ್ ॥ 55 ॥
ಪೂಜಯೇದ್ ಗಂಧಪುಷ್ಪಾದ್ಯೈರ್ದಿಕ್ಪತಿಭ್ಯೋ ಬಲಿ ಹರೇತ್ ।
ವ್ಯವಹಾರೆ ವಿವಾದೆ ಚ ವಶಕೃದ್ರಾಜ ವೇಶ್ಮನಿ ॥ 56 ॥
ಯಂತ್ರಮೇತತ್ಸಮಾಖ್ಯಾತಂ ಜಯದಂ ಮಾನವರ್ಧನಮ್ ।





ಗೋರೋಚನದಿಂದ ಭೋಜಪತ್ರದ ಮೇಲೆ ಚತುರ್ಭುಜದ ಮಧ್ಯದಲ್ಲಿ ವಿಷ (ಮ) ಅನಂತ (ಅ) ಸಹಿತ ಭೃಗು ಸ ಅರ್ಥಾತ್ ಸ್ಮಃ ಇದನ್ನು ಮಾಯಾದಿಂದ ಸಂಪುಟಿತ 'ಗೊಳಿಸಿ (ಹ್ರೀಂ ಸ್ಮಃ ಹ್ರೀಂ) ಬರೆದು, ನಂತರ ನಾಲ್ಕು ಕೋನಗಳಲ್ಲಿ ಹ್ರೀಂ ಸಃ ಹ್ರೀಂ ಬರೆದು ಅದರ ಮೇಲೆ ಅಷ್ಟ ದಳವನ್ನು ಬರೆಯಬೇಕು. ಅದರ ದಿಕ್ಕುಗಳ ದಳಗಳಲ್ಲಿ ಕ್ರಮವಾಗಿ ರೋಹಃ, ರೋಧಃ, ಸ್ತಂಭಃ, ಮತ್ತು ಕ್ಷೋಭಃ ಬರೆಯಬೇಕು. ನಂತರ ಕೋನಗಳಲ್ಲಿ ದಳಗಳಲ್ಲಿ ಸರ್ಗಿ ವಿಸರ್ಗ ಸಹಿತ ಚರಮ (ಕ್ಷ) ಅರ್ಥಾತ್ ಕ್ಷಃ ಬರೆದು ಚತುರ್ಭುಜದ ಮಧ್ಯದಲ್ಲಿ ಗೋರೋಚನದಿಂದ ಸಾಧ್ಯನ ಹೆಸರನ್ನು ಬರೆಯಬೇಕು. ಇದನ್ನು ಎರಡು ತಟ್ಟೆಗಳ ಮಧ್ಯದಲ್ಲಿಟ್ಟು ಗಂಧ ಪುಷ್ಪಾದಿ ಉಪಚಾರಗಳಿಂದ ಪೂಜಿಸಬೇಕು. ನಂತರ ದಿಕ್ಪಾಲರಿಗೆ ಮಂತ್ರಗಳಿಂದ ಬಲಿ ಕೊಡಬೇಕು.

ಸರ್ವತ್ರ ಜಯಪ್ರದ ಯಂತ್ರ




ಈ ವಿಜಯಪ್ರದ ಯಂತ್ರವು ವ್ಯವಹಾರ ಮತ್ತು ವಿವಾದಗಳಲ್ಲಿ ವಿಜಯವನ್ನು ತರುತ್ತದೆ ಮತ್ತು ರಾಜದ್ವಾರದಲ್ಲಿ ಮಾನ-ಸನ್ಮಾನಗಳನ್ನು ವೃದ್ಧಿಸುತ್ತವೆ. ಈ ಯಂತ್ರವನ್ನು ದಾಳಿಂಬದ ಕಡ್ಡಿಯಿಂದ ಬರೆಯಬೇಕು. ಮತ್ತು ತ್ರೈಲೋಕ್ಯಮೋಹನ ಗೌರಿ ಮಂತ್ರದಿಂದ ಇದನ್ನು ಪೂಜಿಸುವ ವಿಧಾನವಿರುತ್ತದೆ.

### ಶ್ರೀ ಗಣೇಶ ಯಂತ್ರ

ಯಾವಜ್ಜೀವಂ ವಶೀಕರ್ತು ನರಂ ಯಂತ್ರಂ ತಥೋಚ್ಯತೆ ॥ 57 ॥
ಅನಾಮಾ ಸೃಗ್ಗಜಮದರೋಚನಾಲಕ್ತಕೈರ್ಲಿಖೇತ್ ।
ಭೂರ್ಜ ಜಾತೀಯಲೇಖನ್ಯಾ ಚತುರಸ್ರಂ ಮನೋಹರಮ್ ॥ 58 ॥
ತತ್ರಾದ್ಯಪಂಕ್ತೌ ಸಂಲೇಖ್ಯ ಮಾಯಾಬೀಜಸ್ಯ ಸಪ್ತಕಮ್ ।
ದ್ವಿತೀಯಾಯಾಂ ಸೃಣಿರ್ಮಾಯಾಕಾಮ್ ನಾಮಗಸಂಪುಟಮ್ ॥ 59 ॥
ತೃತೀಯಾಯಾಂ ಸೃಣಿಪುಟಾ ಮಾಯಯಾ ಸಂಪುಟಃ ಸ್ಮರಃ ।

ಲೇಖ್ಯಂ ಪಂಕ್ತೌ ಚತುರ್ಥ್ಯಾಂ ತು ಮಾಯಾಬೀಜಚತುಷ್ಟಯಮ್ ॥ 60 ॥
ಚತುರಸ್ರಾದ್ ಬಹಿರ್ದಿಕ್ಷು ದಶಬೀಜಂ ಗಣೇಶಿತುಃ ।
ವಿಲೇಖ್ಯ ದಕ್ಷಿಣಾಂ ಹಿತ್ವಾ ಕುರ್ಯಾದ್ ಭೂಯೋಽಪಿ ಭೂಪುರಮ್ ॥ 61 ॥
ಏತದ್ಯಂತ್ರಂ ಗಣಪತೇರುದಾರಾಂತಃ ಪ್ರವಿನ್ಯಸೇತ್ ।
ವಿನಿರ್ಮಿತಸ್ಯ ಸುಕ್ಷೇತ್ರಾದಾತ್ತಯಾ ಕೃಷ್ಣಯಾ ಮೃದಾ ॥ 62 ॥
ಪಂಚೋಪಚಾರೈರ್ಗಣಪಂ ಸಂಪೂಜ್ಯಾಮುಂ ಮನುಃ ಪಠೇತ್ ।
ದೇವದೇವ ಗಣಾಧ್ಯಕ್ಷ ಸುರಾಸುರ ನಮಸ್ಕೃತ
ದೇವದತ್ತಂ ಮಮಾಯತ್ತಂ ಯಾವಜ್ಜೀವಂ ಕುರು ಪ್ರಭೋ ॥ 63 ॥
ಹಸ್ತಮಾತ್ರೇ ಧರಾಗರ್ತೇ ತಂ ವಿನ್ಯಸ್ಯ ಗಣಾಧಿಪಮ್ ॥
ಸಂಪೂರಯೇನ್ಮೃದಾಗರ್ತಮೇವಂ ವಶ್ಯೋ ಭವೇನ್ನರಃ ॥ 64 ॥

ಭೋಜಪತ್ರದ ಮೇಲೆ ಅನಾಮಿಕ ಬೆರಳಿನ ರಕ್ತ, ಗಜಮದ, ಗೋರೋಚನ

ಗಂ ಗಂ ಗಂ ಗಂ ಗಂ ಗಂ ಗಂ ಗಂ ಗಂ ಗಂ

(ಆಜೀವನ ವಶಕರ ಯಂತ್ರ)

ಹ್ರೀಂ ಹ್ರೀಂ ಹ್ರೀಂ ಹ್ರೀಂ ಹ್ರೀಂ ಹ್ರೀಂ ಹ್ರೀಂ
ಕ್ಲೀಂ ಹ್ರೀಂ ಕ್ಲೀಂಗಂದೇವದತ್ತಂ ವಶಯಗೆ
ಕ್ರೋಂ ಹ್ರೀಂ ಕ್ರೋಂ ಹ್ರೀಂ ಕ್ರೋಂ ಹ್ರೀಂ
ಹ್ರೀಂ ಹ್ರೀಂ ಹ್ರೀಂ ಹ್ರೀಂ

ಗಂ ಗಂ ಗಂ ಗಂ ಗಂ ಗಂ ಗಂ ಗಂ ಗಂ ಗಂ

ಗಂ ಗಂ ಗಂ ಗಂ ಗಂ ಗಂ ಗಂ ಗಂ ಗಂ ಗಂ ಗಂ

ಮತ್ತು ಅಲತಾಗಳ ಮಿಶ್ರಣವನ್ನು ಮಲ್ಲಿಗೆಯ ಬಳ್ಳಿಯ ಲೇಖನಿಯಿಂದ ಚತುರ್ಭುಜ ಬರೆದು ಮಧ್ಯದಲ್ಲಿ, ಮೊದಲನೆಯ ಸಾಲಿನಲ್ಲಿ ಏಳು ಮಾಯಾಬೀಜ





(ಹ್ರೀಂ) ಮತ್ತು ಎರಡನೆಯ ಸಾಲಿನಲ್ಲಿ ಕ್ರಮವಾಗಿ ಸೃಣಿ (ಕ್ರೋಂ) ಮಾಯಾ (ಹ್ರೀಂ) ಕಾಮ (ಕ್ಲೀಂ) ಮತ್ತು ಗಂ ದಿಂದ ಸಂಪುಟಿತ ಸಾಧ್ಯನ ಹೆಸರನ್ನು ಬರೆಯಬೇಕು. ನಂತರ ಮೂರನೆಯ ಸಾಲಿನಲ್ಲಿ ಕ್ರೋಂ ದಿಂದ ಸಂಪುಟಿತ ಮಾಯಾ ಬೀಜ ಮತ್ತು ಮಯಾ ಬೀಜ (ಹ್ರೀಂ) ದಿಂದ ಸಂಪುಟಿತ ಕಾಮ (ಕ್ಲೀಂ) ಬರೆದು ನಾಲ್ಕನೆಯ ಸಾಲಿನಲ್ಲಿ ನಾಲ್ಕು ಮಾಯಾಬೀಜ (ಹ್ರೀಂ) ಬರೆಯಬೇಕು. ನಂತರ ಚತುರಸ್ರದ ಹೊರಗೆ ದಕ್ಷಿಣ ದಿಕ್ಕನ್ನು ಹೊರತುಪಡಿಸಿ ಅನ್ಯ ದಿಕ್ಕುಗಳಲ್ಲಿ ಹತ್ತರಂತೆ ಗಣೇಶ ಬೀಜ (ಗಂ) ಮಂತ್ರಗಳನ್ನು ಬರೆದು ಅದರ ಮೇಲ ಪುನಃ ಭೂಪುರವನ್ನು ರಚಿಸಬೇಕು.

ನಂತರ ಯಾವುದಾದರೊಂದು ಪವಿತ್ರ ಸ್ಥಾನದಿಂದ ತರಲಾದ ಕಪ್ಪು ಮಣ್ಣಿನಿಂದ ನಿರ್ಮಿತ ಗಣೇಶ ಪ್ರತಿಮೆಯ ಉದರ ಭಾಗದಲ್ಲಿ ಈ ಯಂತ್ರವನ್ನಿಟ್ಟು ಪಂಚೋಪಚಾರದಿಂದ ಶ್ರೀ ಗಣೇಶನ ಮಂತ್ರ 'ಗಂ ಗಣಪತಯೇ ನಮಃ'ದಿಂದ ಪೂಜೆ ಮಾಡಿ ಮಂತ್ರವನ್ನು ಪಠಿಸಬೇಕು.

'ದೇವದೇವ ಗಣಾಧ್ಯಕ್ಷ ಸುರಾಸುರ ನಮಸ್ಕೃತ! ದೇವದತ್ತ ಮಮಾಯತ್ತಂ ಯಾವಜ್ಜೀವಂ ಕುರು ಪ್ರಭೋ' ಈ ಶ್ಲೋಕದಲ್ಲಿರುವ 'ದೇವದತ್ತ' ದ ಸ್ಥಾನದಲ್ಲಿ ಸಾಧ್ಯನ ಹೆಸರನ್ನು ಉಚ್ಚಾರಣೆ ಮಾಡಬೇಕು. ನಂತರ ನೆಲದಲ್ಲಿ ಸುಮಾರು ಎರಡು ಘೂಟು ಆಳವಾದ ಮತ್ತು ಅಗಲವಾದ ಗುಂಡಿಯನ್ನು ಅಗೆದು ಅದರಲ್ಲಿ ಗಣೇಶನ ಪ್ರತಿಮೆಯನ್ನು ಸ್ಥಾಪನೆ ಮಾಡಿ ಮಣ್ಣಿನಿಂದ ಮುಚ್ಚಬೇಕು. ಈ ವಿಧಾನದಿಂದ ಸಾಧ್ಯನು ಸಾಧಕನ ವಶವಾಗುತ್ತಾನೆ.

ರಾಜವಶ್ಯಕರ ಯಂತ್ರ

ಪದ್ಮಂ ಚತುರ್ದಲಂ ಕೃತ್ವಾ ಸಾಧ್ಯಾಖ್ಯಂ ನೇತ್ರಕರ್ಣಿಕಮ್ ।
ತಾರೋ ನಮ ಈಮಾನ ವರ್ಕೋರ್ಲ್ಲಿಬೇದ್ದಲಚತುಷ್ಟಯೇ ॥ 65 ॥
ಅಜಿತೇ ಇತ್ಯಾಪಿ ಲಿಖೇದ್ದಕ್ಷಿಣೋತ್ತರಪತ್ರಯೋಃ ।
ಭೂರ್ಜೇ ಗೋರೋಚನಾಚಂದ್ರ ಕೇಸರಾಗುರುಭಿಃ ಪುನಃ ॥ 66 ॥
ತ್ರಿದಿನಂ ನಿಯತೋ ಯಂತ್ರಂ ಸಂಪೂಜ್ಯಾಹ್ನಿ ಚತುರ್ಥಕೇ ।
ವಿಕಂ ಸಂಭೋಜ್ಯ ವಿಪ್ರೇಂದ್ರಂ ಯಂತ್ರಂ ಬಾಹೌ ವಿಧಾರಯೇತ್ ॥ 67 ॥
ಹೇಮಾದಿಸಂಸ್ಥಿತಂ ಭೂಪೋ ವಶಕೃದ್ದರ್ಶನಾದಪಿ॥

ನಾಲ್ಕು ದಳಗಳ ಕಮಲವನ್ನು ಬರೆದು ಕರ್ಣಿಕಾದಲ್ಲಿ ಇ ಮತ್ತು ಸಾಧ್ಯನ ಹೆಸರನ್ನು ಬರೆಯಬೇಕು. ನಂತರ ನಾಲ್ಕು ಕಮಲದಳಗಳಲ್ಲಿ ಪೂರ್ವ ಪಶ್ಚಿಮದ ದಳಗಳಲ್ಲಿ 'ಓಂ ನಮಃ' ಬರೆಯಬೇಕು. ಉತ್ತರ ಮತ್ತು ದಕ್ಷಿಣ ದಳಗಳಲ್ಲಿ

ನೃಪ ವಶ್ಯಕರ ಯಂತ್ರ




'ಓಂ ನಮಃ' ದ ನಂತರ 'ಅಜಿತೆ' ಪದವನ್ನು ಜೋಡಿಸಿ ಬರೆಯಬೇಕು.

ಭೋಜಪತ್ರದ ಮೇಲೆ ಗೋರೋಚನ, ಕರ್ಪೂರ, ಕೇಸರ ಮತ್ತು ಅಗರದಿಂದ ಯಂತ್ರವನ್ನು ಬರೆದು ಮೂರು ದಿನ ಪರ್ಯಂತ ಅಜಿತಾ ಮಂತ್ರದಿಂದ ವಿಧಿವತ್ ಪೂಜೆ ಮಾಡಿ. ನಾಲ್ಕನೆಯ ದಿನ ಯಾವುದಾದರೂ ಓರ್ವ ಶ್ರೇಷ್ಠ ಬ್ರಾಹ್ಮಣನಿಗೆ ಭೋಜನ ಮಾಡಿಸಿದ ನಂತರ, ಯಂತ್ರವನ್ನು ಬಂಗಾರದ ತಾಯಿತಿಯಲ್ಲಿ ಹಾಕಿ ಭುಜದಲ್ಲಿ ಧರಿಸಬೇಕು. ರಾಜನು ಕೂಡಾ ಈ ಯಂತ್ರವನ್ನು ಧರಿಸಿದ ವ್ಯಕ್ತಿಯನ್ನು ನೋಡಿದ ಕೂಡಲೆ ಅವನ ವಶವಾಗುತ್ತಾನೆ.

ಭೃತ್ಯ ವಶ್ಯ ಮತ್ತು ದುಷ್ಟವಶ್ಯ ಯಂತ್ರ

**ಚತುರ್ದಲಾಂತರ್ವಿಲಿಖೇದ್ ಭೃತ್ಯನಾಮಕ್ರಿಯಾನ್ವಿತಮ್ ॥ 68 ॥**
**ದಲೇಷು ಮಾಯಾಬೀಜಾನಿ ಭೂರ್ಜೇ ರೋಚನಯಾ ಸುಧೀಃ ।**
**ದಧ್ನಿ ಕ್ಷಿಪ್ತೇ ತದ್ಯಂತ್ರೇ ಭೃತ್ಯ ಆಜ್ಞಾಕರೋ ಭವೇತ್ ॥ 69 ॥**

ಭೃತ್ಯ ವಶ್ಯಕರ ಯಂತ್ರ




ಚತುರ್ದಳ ಕಮಲದ ಕರ್ಣಿಕಾದಲ್ಲಿ ಭೃತ್ಯ (ಸೇವಕ)ನ ಹೆಸರು ಮತ್ತು ಕ್ರಿಯಾ (ವಶಯ) ಬರೆಯಬೇಕು. ನಂತರ ನಾಲ್ಕು ದಳಗಳಲ್ಲಿ ಮಾಯಾ ಬೀಜ ಬರೆಯಬೇಕು. ಗೋರೋಚನ ದಿಂದ ಭೋಜಪತ್ರದ ಮೇಲೆ ನಂತರ ಯಂತ್ರವನ್ನು ಬರೆದು ನಂತರ ಮೊಸರಿನಲ್ಲಿ ಹಾಕಿದರೆ ಸೇವಕನು ಆಜ್ಞಾಕಾರಿಯಾಗುತ್ತಾನೆ.





**ಚತುರಸ್ರೇ ಲಿಖೇತ್ ಸಾಧ್ಯನಾಮರ್ಣಾಂಗಿರಿಜಾಯುತಾನ್ ।**
**ಭೂರ್ಜೇ ರೋಚನಯಾ ಮಂತ್ರಿ ದುಷ್ಟಪ್ರಭುವಶೀಕೃತೌ ॥ 70 ॥**
**ಶತ್ರುಪ್ರತಿಕೃತೆ ಯಂತ್ರಂ ಹೃದಯೇ ತತ್ರವಿನ್ಯಸೇತ್ ।**
**ಕೃತಾ ಯಾರಾಜಿಕಾ ಪಿಷ್ಟೈಃ ಶತ್ರುಪಾದರಜೋಯುತೈಃ ॥ 71 ॥**
**ಪ್ರತಿಮಾಂ ಪೂಜಯಿತ್ವಾ ತಾಂ ಚುಲ್ಲೀಪಾರ್ಶ್ವೇ ನಿಖಾನಯೇತ್ ।**
**ಅಜಾಸೃಗ್ಯುಕ್ತಭಕ್ತೇನ ಕೃಷ್ಣಭೂತೇ ಬಲಿಂ ಹರೇತ್ ॥ 72 ॥**
**ಮಹಾಕಾಲಾಯದಿಕ್ಪೇಭ್ಯೋರುಣಪುಷ್ಪಾಜ್ಯಸಂಯುತಮ್ ।**
**ಏವಂ ಕೃತೆ ಭವೇದ್ವಶ್ಯೋ ನೃಪೋ ದುಷ್ಟೋಪಿ ತತ್ಕ್ಷಣಾತ್ ॥ 73 ॥**

ದುಷ್ಟ ವಶಕರ ಯಂತ್ರ




ಚತುರಸ್ರದ ಮಧ್ಯದಲ್ಲಿ ಮಾಯಾಬೀಜ (ಹ್ರೀಂ) ದ ಒಳಗೆ (ಹ ದ ನಂತರ ಈ ದ ಮೊದಲು) ಸಾಧ್ಯನ ಹೆಸರನ್ನು ಬರೆಯಬೇಕು. ದುಷ್ಟ ರಾಜನನ್ನು ವಶಮಾಡಿ ಕೊಳ್ಳಲು ಭೋಜಪತ್ರದ ಮೇಲೆ ಗೋರೋಚನದಿಂದ ಮಲ್ಲಿಗೆಯ ಲೇಖನಿಯಿಂದ ಈ ಯಂತ್ರವನ್ನು ಬರೆಯಬೇಕು. ಆ ದುಷ್ಟ ವ್ಯಕ್ತಿಯ ಪಾದದ ಧೂಳಿನಲ್ಲಿ ಸಾಸಿವೆಯ ಚೂರ್ಣವನ್ನು ಬೆರೆಸಿ ಅದರಿಂದ ಅವನ ಗೊಂಬೆಯನ್ನು ತಯಾರಿಸಿ ಅದರ ಹೃದಯ ಸ್ಥಾನದಲ್ಲಿ ಈ ಯಂತ್ರವನ್ನು ಇಡಬೇಕು. ನಂತರ ಆ ಗೊಂಬೆಯನ್ನು ತ್ರೈಲೋಕ್ಯಮೋಹನ ಗೌರಿ ಮಂತ್ರದಿಂದ ಪೂಜೆ ಮಾಡಿ ಅದನ್ನು ಒಲೆಯ ಹತ್ತಿರ ಹೂತು ಹಾಕಬೇಕು. ನಂತರ ಕೃಷ್ಣಪಕ್ಷದ ಚತುರ್ದಶಿ ತಿಥಿಯಂದು ಆಡಿನ ರಕ್ತದಿಂದ ಮಿಶ್ರಿತ ಕೆಂಪು ಹೂವು ಮತ್ತು ತುಪ್ಪದಿಂದ ಮಹಾಕಾಲ ಮತ್ತು ದಿಕ್ಪಾಲರಿಗೆ ಬಲಿ ಕೊಡಬೇಕು. ಈ ಪ್ರಕಾರ ಮಾಡುವುದರಿಂದ ಆ ದುಷ್ಟ ರಾಜನು ಸಾಧಕನ ವಶೀಭೂತವಾಗುತ್ತಾನೆ.

ಲಲಿತಾ ಯಂತ್ರ

**ದೌರ್ಭಾಗ್ಯಶಮನಂ ಭರ್ತೃವಶಕೃದ್ಯಂ ತ್ರಮುಚ್ಯತೆ ।**
**ನಾರೀಣಾಮಿಪ್ಸಿತಪ್ರಾಪ್ತಿಕರಂ ಸೌಭಾಗ್ಯವರ್ಧನಮ್ ॥ 74 ॥**
**ಕುರ್ಯಾದಷ್ಟದಲಂ ಪದ್ಮಂ ಚತುಷ್ಕೋಣಾಢ್ಯಕರ್ಣಿಕಮ್ ।**
**ಚತುಷ್ಕೋಣೆ ಲಿಖೇನ್ಮಾಯಾಬೀಜಾನಾಂ ತ್ರಿತಯಂ ಶುಭಮ್ ॥ 75 ॥**

ಭೋಜಪತ್ರದ ಮೇಲೆ ಗೋರೋಚನ ಮತ್ತು ಕುಂಕುಮದಿಂದ ಮಂತ್ರ ಬರೆದು ಎರಡು ತಟ್ಟೆಗಳಲ್ಲಿಟ್ಟು, ಏಳು ರಾತ್ರಿಗಳವರೆಗೆ ಮಾಯಾಬೀಜ (ಹ್ರೀಂ) ಜಪ

ರಾಜಮೋಹನಯಂತ್ರ




ಮಾಡುತ್ತ ಅದರ ಪೂಜೆಯನ್ನು ಮಾಡಬೇಕು. ರಾಜ ಮೋಹನ ಯಂತ್ರವೆಂಬ ಈ ಯಂತ್ರವನ್ನು ಧರಿಸಿದರೆ ರಾಜ ಅಥವಾ ಅನ್ಯ ಮಾನವರ ಕಠೋರತೆಯನ್ನು ದೂರ ಮಾಡಿ ಅವರನ್ನು ಸಾಧಕರ ವಶವರ್ತಿಯಾಗಿಸುತ್ತದೆ.

## ಮೃತ್ಯುಂಜಯ ಯಂತ್ರ

ಕ್ರುದ್ಧಾಜ್ಜಿಘಾಂಸೋರ್ನೃಪತೇರಾತ್ಮರಕ್ಷಾ ವಿಧಿತ್ಸಯಾ ॥ 37 ॥
ವಕ್ಷ್ಯೇ ಮೃತ್ಯುಂಜಯಂ ಯಂತ್ರಂ ಪದ್ಮಮರ್ಕದಲಂ ಲಿಖೇತ್ ।
ಕರ್ಣಿಕಾಯಾಂ ಚತುಷ್ಕೋಣೇ ಲಿಖೇನ್ನಾಮ ಕ್ರಿಯಾನ್ವಿತಮ್ ॥ 38 ॥
ಸಪ್ತರೇಖಾತ್ಮಕಂ ಕಾರ್ಯಂ ತಚ್ಚತುಷ್ಕೋಣಮುತ್ತಮಮ್ ।
ಈಶಾದಿ ದ್ವಾದಶದಲೇಷ್ವಕ್ಲಿ ಬವರಸಂಯುತಾನ್ ॥ 39 ॥
ಕರ್ಣಾನ್ವಿಲಿಖ್ಯ ತತ್ಪದ್ಮಂ ಚತುರಸ್ರೇಣ ವೇಷ್ಟಯೇತ್ ।





ಚತುರಸ್ರಸ್ಯ ಕೋಣೇಷು ತ್ರಿಶೂಲಾನಿ ಸಮಾಲಿಖೇತ್ ॥ 40 ॥
ಭೂರ್ಜಪತ್ರದ್ವಯೇ ಚೈತದ್ಯಂತ್ರ ಕೃತ್ವಾ ಪೃಥಕ್ಪುನಃ ।
ಯಂತ್ರದ್ವಯಪುಟಂ ಕೃತ್ವಾ ಸ್ಥಾಪಯೇತ್ಕ್ಷಾವುದಂಮುಖಃ ॥ 41 ॥
ತಸ್ಯೋಪರಿಶಿಲಾಂ ನ್ಯಸ್ಯ ತತ್ಸ್ಥೋ ಮಾತೃಕಾಂ ಜಪೇತ್ ।
ಏವಂ ಕೃತೇ ಸಾಧಕಃ ಸ್ಯಾದ್ಧಿತತ್ರಾಸೋ ಯಮಾದಪಿ ॥ 42 ॥
ಸರ್ವರೋಗಸಮುಹಾಚ್ಚ ಕಿಂಪುನಾ ರಾಜಮಂಡಲಾತ್ ।

ಪ್ರಪ್ರಥಮವಾಗಿ ದ್ವಾದಶದಲಯುಕ್ತ ಕಮಲವನ್ನು ಬರೆಯಬೇಕು. ಅದರ ಒಳಗೆ ಏಳು ಚತುರ್ಭುಜ ರೇಖೆಗಳಿಂದ ಆವೃತ ಚತುಷ್ಕೋಣದಲ್ಲಿ ಕ್ರಿಯಾ ಸಹಿತ ಸಾಧ್ಯನಾಮ ಅರ್ಥಾತ್ ಅದರ ಮುಂದೆ 'ಮೃತ್ಯುಂ ವಶ' ಎಂದು ಬರೆಯಬೇಕು. ನಂತರ ಅದರ ಮೇಲ್ಭಾಗದಲ್ಲಿ ದ್ವಾದಶ (12) ದಳಗಳಲ್ಲಿ ಈಶಾನ ಕೋಣದಿಂದ ಪ್ರಾರಂಭಿಸಿ (ಋ ೠ ಲೃ ಲೄ) ಇತ್ಯಾದಿ ಕ್ಲೀವ ಸ್ವರಗಳನ್ನು ಬಿಟ್ಟು ಅನ್ಯ ಸ್ವರಗಳ ಜೊತೆಗೆ ಕರ್ಣ (ಲ ಕಾರ ಅರ್ಥಾತ್ ಲ, ಲಾ, ಲಿ ಇತ್ಯಾದಿ ಹನ್ನೆರಡು ಸ್ವರ) ಬರೆದು ಆ ದಳವನ್ನು ಕೂಡಾ

ಮೃತ್ಯುಂಜಯ ಯಂತ್ರ




ಚತುರಸ್ರದಿಂದ ವೇಷ್ಟಿತಗೊಳಿಸಬೇಕು. ಮತ್ತು ಆ ಚತುರಸ್ರದ ಕೋನಗಳ ಮೇಲೆಯೂ ತ್ರಿಶೂಲಗಳನ್ನು ಬರೆಯಬೇಕು.

ಈ ಯಂತ್ರವನ್ನು ಎರಡು ಭೋಜಪತ್ರಗಳ ಮೇಲೆ ಬೇರೆ ಬೇರೆ ಮಲ್ಲಿಗೆಯ ಲೇಖನಿಯಿಂದ ಅಷ್ಟಗಂಧದಿಂದ ಬರೆದು ಪುನಃ ಅವುಗಳನ್ನು ಎದುರು ಬದುರಾಗಿ ಸೇರಿಸಿ ಉತ್ತರಾಭಿಮುಖವಾಗಿ ಕುಳಿತು ಭೂಮಿಯಲ್ಲಿ ಹೂತು ಹಾಕಬೇಕು.

ಈ ಪ್ರಕಾರ ಮಾಡುವುದರಿಂದ ಸಾಧಕನು ಮೃತ್ಯುಭಯ ಮತ್ತು ಎಲ್ಲ ಪ್ರಕಾರದ ರೋಗಭಯದಿಂದ ಮುಕ್ತನಾಗುವನಲ್ಲದೆ ರಾಜಭಯವಂತೂ ಹೇಳ ಹೆಸರಿಲ್ಲದಾಗುವುದು.




ಕೋಷ್ಠಗಳಲ್ಲಿ ವಿಸರ್ಗ ಸಹಿತ ಅಂತಿಮ ವರ್ಣ (ಕ್ಷಃ) ಬರೆಯಬೇಕು. ನಂತರ ಎರಡೂ ರೇಖೆಗಳ ಮೇಲೆ ಮತ್ತು ಕೆಳಗೆ ಮೂರು, ಮೂರು ಕೋಷ್ಠಗಳನ್ನು ಬರೆದು, ಮಧ್ಯದ ಕೋಷ್ಠದಲ್ಲಿ ವಿಸರ್ಗ ಸಹಿತ ಕ್ಷ (ಕ್ಷಃ) ಮತ್ತು ಅದರ ಪಾರ್ಶ್ವವರ್ತಿ ಎರಡೂ ಕೋಷ್ಠಗಳಲ್ಲಿ ಶ್ರೀ ಬೀಜವನ್ನು ಬರೆಯಬೇಕು.

ಈ ಯಂತ್ರವನ್ನು ಭೋಜಪತ್ರದ ಮೇಲೆ ಗೋರೋಚನದಿಂದ ಮಲ್ಲಿಗೆ ಬಳ್ಳಿಯ ಲೇಖನಿಯಿಂದ ಬರೆದು ಎರಡು ಮುಚ್ಚಳಗಳ ಮಧ್ಯದಲ್ಲಿಟ್ಟು ಬೆಂಕಿಯಿಂದ ಸುಟ್ಟು ಹಾಕಬೇಕು. ಈ ಪ್ರಕಾರ ಸುಟ್ಟು ಹಾಕಿದ ಯಂತ್ರದ ಭಸ್ಮವನ್ನು ಹಾಲಿನಲ್ಲಿ ಬೆರೆಸಿ ಕುಡಿಯುವುದರಿಂದ ಯಜಮಾನನು ಸಾಧಕನ ವಶವಾಗುತ್ತಾನೆ.

### ದಿವ್ಯಸ್ತಂಭನ ಯಂತ್ರ

ದಿಕ್ಷು ಮಾಯಾಚತುಷ್ಕಾಢ್ಯಂ ಸಾಧ್ಯಂ ಷಟ್‌ಕೋಣಮಧ್ಯತಃ ॥ 30 ॥
ಕೋಣೇಷು ಕೋಣಮಧ್ಯೇಷು ಮಾಯಾಬೀಜಂ ಸಮಾಲಿಖೇತ್ ।
ರೋಚನಾಕುಂಕುಮಾಭ್ಯಾಂ ತು ಭೂರ್ಜಪತ್ರೇ ಮನೋಹರೇ ॥ 31 ॥
ತಚ್ಛರಾವಸ್ಥಿತಂ ಪೂಜ್ಯಂ ಜಪೇನ್ಮಾಯಾಂ ತದಗ್ರತಃ ।
ಶರಾವಾತ್ತತ್ಸಮಾದಾಯ ಬದ್ಧ್ವಾ ಮೂರ್ಧ್ನಿ ಮಾನವಃ ॥ 32 ॥
ಅಗ್ನಿತೋಯಾದಿ ದಿವ್ಯೇಷು ಶುಚಿರ್ದಾಹಾದಿ ವರ್ಜಿತಃ ।
ಜಯಮಾಪ್ನೋತಿ ತದ್ರಾತ್ರೌ ಕರ್ತಾ ತಸ್ಯ ಪ್ರಭಾವತಃ ॥ 33 ॥
ದಿವ್ಯಸ್ತಂಭನಾಸಂಜ್ಞಂ ಚ ಯಂತ್ರಮುತ್ತಮ ಮೀರಿತಮ್ ।








ಷಟ್ಕೋಣದ ಮಧ್ಯದಲ್ಲಿ ಸಾಧ್ಯನಾಮ ಮತ್ತು ಅದರ ನಾಲ್ಕೂ ಕಡೆಗಳಲ್ಲಿ ನಾಲ್ಕು ಮಾಯಾ ಬೀಜ (ಹ್ರೀಂ) ಬರೆಯಬೇಕು. ನಂತರ ಕೋನಗಳಲ್ಲಿ ಆರು ಕೋನಗಳಲ್ಲಿ ಮತ್ತು ಅದರ ಮಧ್ಯದಲ್ಲಿ 6–6 ಮಾಯಾ ಬೀಜಗಳನ್ನು ಬರೆಯಬೇಕು.

ಈ ಯಂತ್ರವನ್ನು ಸುಂದರವಾದ ಭೋಜಪತ್ರದ ಮೇಲೆ ಗೋರೋಚನ ಮತ್ತು ಕುಂಕುಮದ ಮಲ್ಲಿಗೆ ಬಳ್ಳಿಯ ಲೇಖನಿಯಿಂದ ಬರೆಯಬೇಕು. ನಂತರ ಅದನ್ನು ತಟ್ಟೆಯೊಳಗೆ ಪ್ರತಿಷ್ಠಾಪನೆ ಮಾಡಬೇಕು. ಮತ್ತು ವಿಧಾನ ಪೂರ್ವಕವಾಗಿ ಅದನ್ನು ಪೂಜೆ ಮಾಡಬೇಕು. ನಂತರ ಅದರ ಎದುರಿಗೆ ಕುಳಿತು ಮಾಯಾ ಬೀಜ (ಹ್ರೀಂ) ದ ಜಪ ಮಾಡಬೇಕು. ನಂತರ ಅದನ್ನು ತಟ್ಟೆಯಿಂದ ತೆಗೆದು ತಲೆಯ ಮೇಲೆ ಕಟ್ಟಿಕೊಳ್ಳುವುದರಿಂದ ಸಾಧಕನು ಅಗ್ನಿಯಿಂದ ಸುಟ್ಟುಕೊಳ್ಳಲಾರನು. ನೀರಿನಿಂದ ಮುಳುಗಲಾರನು. ಮತ್ತು ರಾತ್ರಿಯಲ್ಲಿ ಅದನ್ನು ಧರಿಸುವುದರಿಂದ ಎಂಥ ಪಾಪಿಯಿದ್ದರೂ ಸರ್ವತ್ರ ವಿಜಯಿಯಾಗುತ್ತಾನೆ.

### ರಾಜಮೋಹನ ಯಂತ್ರ

ಮಾಯಾ ವಿಸರ್ಗಿಸಾರ್ಣಾಭ್ಯಾಂ ಪುಟಿತಂ ನಾಮಮಧ್ಯತಃ ॥ 34 ॥
ದಲೇಷ್ವಷ್ಟಸು ಸರ್ಗಾಢ್ಯೌ ಸೌಮಾಯಾಪುಟಿತೌ ಲಿಖೇತ್ ।
ಚತುರಸ್ರೇಣ ತತ್ಪದ್ಮಂ ವೇಷ್ಟಯೇದ್ ಭೂರ್ಜಪತ್ರಕೇ ॥ 35 ॥
ರೋಚನಾಕುಂಕುಮಾಭ್ಯಾಂ ತು ಲಿಖಿತ್ವಾ ತಚ್ಛರಾವಯೋಃ ।
ಪ್ರಕ್ಷಿಪ್ಯ ಪೂಜಯೇತ್ಸಪ್ತರಾತ್ರಂ ಮಾಯಾಂ ಜಪೇನ್ನರಃ ॥ 36 ॥
ರಾಜ ಮೋಹನನಾಮೇದಂ ಯಂತ್ರಂ ನೃಪರುಷಂ ಹರೇತ್ ।

ಅಷ್ಟದಳದ ಮಧ್ಯದಲ್ಲಿ ಮಾಯಾಬೀಜ (ಹ್ರೀಂ) ಮತ್ತು ವಿಸರ್ಗ ಸಹಿತ ಸ ಅರ್ಥಾತ್ ಸಃ ಈ ಎರಡೂ ಬೀಜಾಕ್ಷರಗಳಿಂದ ಪುಟಿತ ಸಾಧ್ಯನ ಹೆಸರನ್ನು ಬರೆದು ಎಂಟೂ ದಳಗಳಲ್ಲಿ ಮಾಯಾದಿಂದ ಪುಟಿತ ವಿಸರ್ಗ ಸಹಿತ ಎರಡು ಸ ಅರ್ಥಾತ್ (ಹ್ರೀಃ ಸಃ ಸಃ ಹ್ರೀಂ) ಬರೆಯಬೇಕು. ನಂತರ ಭೂಪುರದಿಂದ ಅದನ್ನು ಹೊದಿಸಬೇಕು.




ಈ ಪ್ರಕಾರ ಬರೆದ ಅಷ್ಟದಳಗಳನ್ನು ಕ್ರಮವಾಗಿ ಷೋಡಶದಳಗಳಿಂದ ವೇಷ್ಟಿತಗೊಳಿಸ ಬೇಕು. ಮತ್ತು ಅದರ ಮೇಲೆ 16 ಸ್ವರ ವರ್ಣಗಳನ್ನು ಬರೆಯಬೇಕು. ಅದನ್ನು ಮೂರು ವೃತ್ತಗಳಿಂದ ವೇಷ್ಟಿತಗೊಳಿಸಬೇಕು. ಈ ಪ್ರಕಾರ ತಯಾರಿಸಿದ ಯಂತ್ರವನ್ನು ಮಾತೃಕಾ ಮಂತ್ರದಿಂದ ಏಳು ದಿನ ಪರ್ಯಂತ ಪೂಜೆ ಮಾಡಬೇಕು.

ಈ ಪ್ರಕಾರ 'ಮೋಹನ' ಹೆಸರಿನ ಮಹಾಯಂತ್ರದ ಮೇಲೆ ಪೂಜೆ ಮಾಡುವುದರಿಂದ ರಾಜ ಮುಂತಾದ ಎಲ್ಲ ಪುರುಷರು ಮತ್ತು ಸ್ತ್ರೀಯರು ನಿಶ್ಚಿತರೂಪದಲ್ಲಿ ವಶವಾಗುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಈ ಯಂತ್ರವನ್ನು ಭೋಜಪತ್ರದ ಮೇಲೆ ಬರೆದು ತ್ರಿಲೋಹ (ಬಂಗಾರ, ಬೆಳ್ಳಿ ಮತ್ತು ತಾಮ್ರ) ದಿಂದ ತಯಾರಿಸಿದ ತಾಯಿತದಲ್ಲಿ ಹಾಕಿ ಶಿರದ ಮೇಲೆ ಧಾರಣ ಮಾಡುವುದರಿಂದ ರಾಜ ಮತ್ತು ದುಷ್ಟ ಜನರೂ ಕೂಡಾ ವಶವಾಗುತ್ತಾರೆ.

**ಬೀಜ ಸಂಪುಟ ವಶೀಕರಣ ಯಂತ್ರ**

**ಮಾಯಾಸಂಪುಟಿತಾಂ ಸಾಧ್ಯಾಭಿಧಮಾದೌ ಸಮಾಲಿಖೇತ್ ।**
**ತಸ್ಯಾ ಉಪರ್ಯಧಶ್ಚಾಪಿ ಮಯಾಬೀಜಚತುಷ್ಟಯಮ್ ॥ 21 ॥**
**ತದ್ ವೇಷ್ಟಯೇದ್ ಭೂಪುರೇಣ ರೇಖಾದ್ವಿತಯ ಸಂಯುತಮ್ ।**
**ಭೂರ್ಜಪತ್ರೆ ವಿಲಿಖಿತಂ ರೋಚನಾಶೀತಕುಂಕುಮೈಃ ॥ 22 ॥**
**ಅನಾಮಾರಕ್ತಸಮ್ಮಿಶ್ರೈಃ ಪೂಜಿತಂ ವಶಕೃನ್ಮತಮ್।**




ಪ್ರಪ್ರಥಮವಾಗಿ ಮಾಯಾಬೀಜದಿಂದ ಸಂಪುಟಿತ ಸಾಧ್ಯನಾಮ ನಂತರ ಅದರ ಮೇಲ್ಭಾಗದಲ್ಲಿ ಮತ್ತು ಕೆಳಗೆ 4,4. ಮಾಯಾ ಬೀಜ ಬರೆಯಬೇಕು. ನಂತರ ಅದರಿಂದ ಎರಡು ರೇಖೆಗಳ ಭೂಪುರದಿಂದ ಪರಿವೇಷ್ಟಿತ ಗೊಳಿಸಬೇಕು. ಯಂತ್ರವನ್ನು ಗೋರೋಚನ, ಚಂದನ ಮತ್ತು ಕೇಸರದಿಂದ ಭೋಜಪತ್ರದ ಮೇಲೆ ಮಲ್ಲಿಗೆಯ ಲೇಖನಿಯಿಂದ ಬರೆದು





ಅನಾಮಿಕಾದ ರಕ್ತದಿಂದ ಮಿಶ್ರಿತ ಕುಂಕುಮದಿಂದ ಗೌರಿಮಂತ್ರ ಅಥವಾ ಅದರ ಬೀಜಾಕ್ಷರಗಳಿಂದ ಅದರ ಪೂಜೆ ಮಾಡಿದರೆ ವಶೀಕರಣವಾಗುತ್ತದೆ.

**ಕುಮಾರೀರ್ವಾಡವಾನ್ನಾರೀಃ ಸಂಭೋಜ್ಯ ವಿತರೇದ್ ಬಲಿಮ್ ॥ 23 ॥**
**ರಕ್ತಾಪುಷ್ಪಾನ್ನಪಲಲೈರ್ವಶೀಕರಣಸಿದ್ಧಯೇ ।**
**ಸರ್ವಸ್ವ ಮಪಹರ್ತುರ್ವಾ ನಿಬದಧುಂ ವಾಂಛತೀಶ್ವರೆ ॥ 24 ॥**
**ಯಂತ ಬಾಹೌ ವಿಧ್ಯೃತ್ಯೇದಂ ಗಚ್ಛೇದ್ ಭೂಮಿಪತಿಂ ನರಃ ।**
**ಕ್ರೋಧಾಕ್ರಾಂತಮನಾಭೂಪಃ ಶಾಂತಕೋಪಸ್ತಮರ್ಚಯೇತ್ ॥ 25 ॥**

ನಂತರ ಕುಮಾರಿಯರು, ಬ್ರಾಹ್ಮಣರು ಮತ್ತು ಮುತ್ತೈದೆಯರಿಗೆ ಭೋಜನ ಮಾಡಿಸಿ ವಶೀಕರಣದ ಸಿದ್ಧಿಗಾಗಿ ಕೆಂಪು ಹೂವು, ಅನ್ನ ಮತ್ತು ಮಾಂಸದ ಬಲಿ ಕೊಡಬೇಕು.

ರಾಜನಿಂದ ಸರ್ವಸ್ವವನ್ನು ಅಪಹರಣದ ಸ್ಥಿತಿಯಲ್ಲಿ ಅಥವಾ ಕಾರಾಗೃಹವಾಸದ ಸ್ಥಿತಿಯಲ್ಲಿ ಈ ಯಂತ್ರವನ್ನು ಭುಜದಲ್ಲಿ ಧರಿಸಿ ಸಾಧಕನು ರಾಜನ ಎದುರಿಗೆ ಹೋದರೆ, ಅತ್ಯಂತ ಕ್ಷುದ್ರನಾದ ರಾಜನು ಶಾಂತನಾಗುತ್ತಾನೆ ಮತ್ತು ಸಾಧಕನನ್ನು ಆದರಿಸುತ್ತಾನೆ.

**ಬೀಜಂ ಸಂಪುಟನಾಮೇದಂ ಯಂತ್ರಮುಕ್ತಂ ಮನೀಷಿಭಿಃ ।**
**ದಕ್ಷಿಣೋತ್ತರಗಂ ಕುರ್ಯಾದ್ರೇಖಾದ್ವಿತಯ ಮುತ್ತಮಮ್ ॥ 26 ॥**
**ತನ್ಮಧ್ಯೆ ವಿಲಿಖೇತ್ಸಾಧ್ಯಂ ತಾರ ಪದ್ಮಾಲಯಾಪುಟಮ್ ।**
**ರೇಖಾಗ್ರಯೋಃ ಸ್ಥಿತೆ ಕೋಷ್ಠದ್ವಯೆ ಸರ್ಗಿಣಮಂತಿಮಮ್ ॥ 27 ॥**
**ರೇಖಾದ್ವಯಾಪರ್ಯಧಶ್ಚ ಕೋಷ್ಠಾನಾಂ ತ್ರಿತಯಂ ಲಿಖೇತ್ ।**
**ಮಧ್ಯಕೋಷ್ಠೆ ಸಸರ್ಗ ಕ್ಷಂ ಶ್ರೀ ಬೀಜಂ ಪಾರ್ಶ್ವ ಕೋಷ್ಠಯೋಃ ॥ 28 ॥**
**ಏತದ್ರೋಚನಯಾ ಭೂರ್ಜೆ ಲಿಖಿತ್ವಾ ವಹ್ನಿನಾ ದಹೇತ್ ।**
**ಶರಾವಸಂಪುಟಸ್ಥಂ ತತ್ತತೋ ಭಸ್ಮಸಮುದ್ಧರೇತ್ ॥ 29 ॥**
**ಮಧ್ವೇನ ಸಹ ಪ್ರೀತಂ ತತ್ಸ್ವಾಮಿವಶಕರಂ ಪರಮ್ ।**

ದಕ್ಷಿಣೋತ್ತರ ಕ್ರಮದಿಂದ ಎರಡು ರೇಖೆಗಳನ್ನು ಬರೆದು ಅದರ ಮಧ್ಯದಲ್ಲಿ ತಾರ (ಓಂ) ಪದ್ಮಾಲಯಾ (ಶ್ರೀಂ) ದಿಂದ ಸಂಪುಟಿತ ಸಾಧ್ಯ ವ್ಯಕ್ತಿಯ ಹೆಸರನ್ನು ಬರೆಯಬೇಕು. ರೇಖೆಗಳ ಅಗ್ರಭಾಗವು ಕೂಡುವದರಿಂದ ಆಗುವ ಎರಡು

ಓಂ ಕಂ ನಮಃ ದಕ್ಷಹಸ್ತಮೂಲೆ,
ಓಂ ಖಂ ನಮಃ ವಾಮಹಸ್ತಮೂಲೆ,
ಓಂ ಘಂ ನಮಃ ಹಸ್ತಾಂಗುಲಿಸಂಧಿ,
ಓಂ ಗಂ ನಮಃ ದಕ್ಷಮಣಿಬಂಧೆ,
ಓಂ ತ್ರಂ ನಮಃ ವಾಮಹಸ್ತಾಗ್ರೆ,
ಓಂ ಚಂ ನಮಃ ವಾಮಹಸ್ತಮೂಲೆ,
ಓಂ ಛಂ ನಮಃ ದಕ್ಷಕೂರ್ಪರೆ,
ಓಂ ಝಂ ನಮಃ ವಾಮಹಸ್ತಾಂಗುಲಿಸಂಧೌ,
ಓಂ ಜಂ ನಮಃ ವಾಮಮಣಿಬಂಧೆ,
ಓಂ ಣಂ ನಮಃ ದಕ್ಷಪಾದಾಗ್ರೆ,
ಓಂ ಟಂ ನಮಃ ದಪ್ಷಪಾದಮೂಲೆ,
ಓಂ ಠಂ ನಮಃ ದಕ್ಷಿಣಜಾನೌ
ಓಂ ಥಂ ನಮಃ ದಕ್ಷಪಾದಾಂಗುಲಿಸಂಧೌ,
ಓಂ ಡಂ ನಮಃ ದಕ್ಷಿಣಪಾದಗುಲ್ಫೆ,
ಓಂ ನಂ ನಮಃ ವಾಮಪಾದಾಗ್ರೆ,
ಓಂ ತಂ ನಮಃ ವಾಮಪಾದಗುಲ್ಫೆ,
ಓಂ ಥಂ ನಮಃ ವಾಮಜಾನೌ,
ಓಂ ಧಂ ನಮಃ ವಾಮಪಾದಾಂಗುಲಿಸಂಧೌ,
ಓಂ ದಂ ನಮಃ ವಾಮಗುಲ್ಫೆ,
ಓಂ ಮಂ ನಮಃ ಉದರೆ,
ಓಂ ಪಂ ನಮಃ ದಕ್ಷಿಣಪಾರ್ಶ್ವೆ,
ಓಂ ಫಂ ನಮಃ ವಾಮಪಾರ್ಶ್ವೆ
ಓಂ ಭಂ ನಮಃ ನಾಭೌ,
ಓಂ ಬಂ ನಮಃ ಪೃಷ್ಠೆ ।
ಓಂ ಶಂ ನಮಃ ಗುಹ್ಯೋ,
ಓಂ ಪಂ ನಮಃ ಹೃದಿ,
ಓಂ ಸಂ ನಮಃ ಭ್ರೂಮಧ್ಯೆ





ಧ್ಯಾನ :
ಅಕ್ಷರಸ್ರಜಂ ಹರಿಣಾಪೋತಮುದಗ್ರಟಂಕಂ ।
ವಿದ್ಯಾಂ ಕರೈರವಿರತಂ ದಧತಿಂ ತ್ರಿನೇತ್ರಾಮ್ ।
ಅರ್ಧೇಂದುಮೌಲಿಮರುಣಾಮರವಿಂದರಾಮಾಂ ।
ವರ್ಣೇಶ್ವರಿಂ ಪ್ರಣಮತಸ್ತನಭಾರನಮ್ರಾಮ ॥

ಈ ಭೂತಲಿಪಿಯ ಒಂದು ಲಕ್ಷ ಜಪ ಮಾಡಬೇಕು. ನಂತರ ತಿಲದಿಂದ ಹತ್ತು ಸಾವಿರ ಆಹುತಿಗಳನ್ನು ಕೊಡುವುದರಿಂದ ಭೂತಲಿಪಿಯು ಸಿದ್ಧವಾಗುತ್ತದೆ. ಭೂತಲಿಪಿಯನ್ನು ಸಿದ್ಧ ಮಾಡಿಕೊಂಡ ನಂತರ ಬರೆಯಲಾಗುವ ಎಲ್ಲ ಯಂತ್ರಗಳು ಪೂರ್ಣರೂಪದಿಂದ ಪ್ರಭಾವಶಾಲಿಯಾಗುತ್ತವೆ. ಕಾರಣ ಯಂತ್ರವನ್ನು ನಿರ್ಮಾಣ ಮಾಡುವ ಸಾಧಕರು ಯಂತ್ರಸಿದ್ಧಿಗಾಗಿ ಸರ್ವಪ್ರಥಮವಾಗಿ ಭೂತಲಿಪಿಯ ಉಪಾಸನೆ ಮಾಡಬೇಕು. ಈ ಸಿದ್ಧಿಯ ಹೊರತು ತಯಾರಿಸಲ್ಪಡುವ ಯಾವುದೇ ಯಂತ್ರವು ತನ್ನ ಚಮತ್ಕಾರ ಅಥವಾ ಪ್ರಭಾವದ ಫಲವನ್ನು ಪ್ರಕಟಗೊಳಿಸುವದೇ ಇಲ್ಲ.

## ವಶೀಕರಣ ಯಂತ್ರ

ಅಥ ವಶ್ಯಕರಂ ಯಂತ್ರಮುಚ್ಯುತೆ ಕ್ಷಿಪ್ರಸಿದ್ಧಿದಮ್ ।
ಭಸ್ಮಾದಿಶೋಧಿತೆ ಕಾಂಶ್ಯಭಾಜನೆಷ್ಟದಲಂ ಲಿಖೆತ್ ॥ 16 ॥
ಗೋರೋಚನಾ ಕುಂಕುಮಾಭ್ಯಾಂ ಲೇಖನ್ಯಾ ಜಾತಿಜಾತಯಾ ।
ಕರ್ಣಿಕಾಸಾಧ್ಯನಾಮಾಢ್ಯಂ ವರ್ಗಯುಕ್ತಾಷ್ಟಪತ್ರಕಮ್ ॥ 17 ॥
ತದ್ವೇಷ್ಟಯೇತ್ತ್ವರಾಧ್ಯಾಷ್ಟ ಯುಗ್ಮಪತ್ರಾಂಬುಜನ್ಮನಾ ।
ತದ್ ವೇಷ್ಟಯೇತ್ರಿಭಿರ್ವೃತ್ತೈಃ ಪೂಜ್ಯಯೇತ್ಸಪ್ತವಾಸರಾನ್ ॥ 18 ॥
ನೃಪಾದಿಪುರುಷಾಃ ಸರ್ವೆ ಯೋಷಿತೋಪಿ ವಶಾ ಧ್ರುವಮ್ ।
ಮೋಹನಾಖ್ಯೆ ಮಹಾಯಂತ್ರೆ ಪೂಜಿತೆ ಸ್ಯುರ್ನ ಸಂಶಯಃ ॥ 19 ॥
ಭುರ್ಜಾದೌ ಲಿಖಿತಂ ಲೋಹವೇಷ್ಟಿತಂ ಶಿರಸಾಧೃತಮ್ ।
ನೃಪಾಣಾಂ ದುಷ್ಟಸತ್ವಾನಾಂ ವಶೀಕರಣಮುತ್ತಮಮ್ ॥ 20 ॥

ಬೂದಿಯಿಂದ ಶುದ್ಧಗೊಳಿಸಿದ ಕಂಚಿನ ಪಾತ್ರೆಯಲ್ಲಿ ಗೋರೋಚನ ಮತ್ತು ಕುಂಕುಮದಿಂದ ಮಲ್ಲಿಗೆಯ ಲೇಖನಿಯಿಂದ ಅಷ್ಟದಳ ಬರೆಯಬೇಕು. ಅದರ ಕರ್ಣಿಕಾದಲ್ಲಿ ಸಾಧ್ಯನ ಹೆಸರು (ಯಾರನ್ನು ವಶಮಾಡಿಕೊಳ್ಳಬೇಕಾಗಿದೆಯೊ ಅವರ) ಮತ್ತು ಎಂಟು ದಳಗಳಲ್ಲಿ ಕ್ರಮವಾಗಿ ಎಂಟೂ ವರ್ಣಾಕ್ಷರಗಳನ್ನು ಬರೆಯಬೇಕು.

ಸಿದ್ಧವಾಗುತ್ತದೆ. ಯಂತ್ರ ಗಾಯತ್ರಿಯ ಸ್ಮರಣ ಮಾತ್ರದಿಂದ ಸಕಲ ಅಭೀಷ್ಟ ಸಿದ್ಧಿಸುತ್ತವೆ.

**'ಯಂತ್ರರಾಜಾಯ ವಿದ್ಮಹೆ ವರ ಪ್ರದಾಯ ಧೀಮಹಿ ತನ್ನೋ ಯಂತ್ರ ಪ್ರಚೋದಯಾತ್"**

ಯಂತ್ರದ ಹೊರ ಭಾಗದಲ್ಲಿ ಪ್ರಾಣಪ್ರತಿಷ್ಠಾ ಮಂತ್ರವನ್ನು ಬರೆದು ಅದನ್ನು ವೇಷ್ಟಿತಗೊಳಿಸಬೇಕು. ಯಾವ ಯಂತ್ರಗಳನ್ನು ಬರೆಯಲು ವಸ್ತುಗಳ ವಿಷಯದಲ್ಲಿ ನಿರ್ದೇಶನವನ್ನು ಕೊಡಲಾಗಿಲ್ಲವೋ ಆ ಯಂತ್ರಗಳನ್ನು ಭೋಜಪತ್ರ, ರೇಷ್ಮೆ ವಸ್ತ್ರ ಅಥವಾ ತಾಡವೋಲೆಯ ಮೇಲೆ ಬರೆದು ಅದನ್ನು ಮಡಚಿ ನಾಲ್ಕು ಕಡೆಗೆ ದಾರದಿಂದ ಕಟ್ಟಬೇಕು.

ಯಾವ ದೇವತೆಯ ಯಂತ್ರವನ್ನು ಬರೆಯಬೇಕಾಗಿದೆಯೋ ಆ ದೇವತೆಯ ಬೀಜಾಕ್ಷರದಿಂದ ಯುಕ್ತ ಮಾತೃಕಾಗಳ ಮೂಲಕ ಅವುಗಳನ್ನು ಪೂಜೆ ಮಾಡಿ, ಆ ದೇವತೆಯ ಮಂತ್ರ ಜಪ ಮಡಿ, ಹುತಶೇಷ ತುಪ್ಪದಲ್ಲಿ ಯಂತ್ರವನ್ನು ಮುಳುಗಿಸಿ ನಂತರ ಅದನ್ನು ಬಂಗಾರ, ಬೆಳ್ಳಿ ಅಥವಾ ತಾಮ್ರದ ತಾಯಿತದಲ್ಲಿ ಹಾಕಿ ಅದರ ಬಾಯಿಯನ್ನು ಅರಗಿನಿಂದ ಮುಚ್ಚಬೇಕು. ಈ ಪ್ರಕಾರ ನಿರ್ಮಿತ ಯಂತ್ರವನ್ನು ತನ್ನ ಉದ್ದೇಶ ಸಾಧನೆಗಾಗಿ ಶಿರ, ಭುಜಾ ಅಥವಾ ಕಂಠದಲ್ಲಿ ಧರಿಸಬೇಕು.

### ಭೂತಲಿಪಿ ಕಥನ

**ಯಂತ್ರಸೇವನಸಕ್ತೈರ್ನೋಪಾಸ್ಯಾ ಭೂತಲಿಪಿಃ ಪರಾಃ ।**
**ಯಯೋಪಾಸಿತಯಾ ಸರ್ವ ಯಂತ್ರಸಿದ್ಧಿಃ ಪ್ರಜಾಯತೆ** ॥ 15 ॥

ಯಂತ್ರವನ್ನು ಬರೆಯುವವರು ಮತ್ತು ಧರಿಸುವವರು ಪರಾಭೂತ ಲಿಪಿಯ ಉಪಾಸನೆಯನ್ನು ಮಾಡಬೇಕು. ಉಪಾಸನಾ ಮಾತ್ರದಿಂದ ಸಕಲ ಯಂತ್ರಗಳು ಸಿದ್ಧವಾಗುತ್ತದೆ.

ಭೂತಲಿಪಿಯಲ್ಲಿ ನವವರ್ಗ ಮತ್ತು 42 ಅಕ್ಷರಗಳಿರುತ್ತವೆ.

1. ಪ್ರಥಮ ವರ್ಗ – ಅ ಇ ಉ ಋ ಲೃ –ಐದು ಹ್ರಸ್ವಗಳು ।
2. ದ್ವಿತಿಯ ವರ್ಗ – ಎ ಐ ಓ ಔ – ನಾಲ್ಕು ಸಂಧಿ ವರ್ಣಗಳು ।
3. ತೃತಿಯ ವರ್ಗ – ಹಯರವಲ ।
4. ಚತುರ್ಥ ವರ್ಗ – ಙ ಕ ಖ ಘ ಗ ।
5. ಪಂಚಮ ವರ್ಗ – ತ್ರ ಚ ಛ ಝ ಜ ।
6. ಷಷ್ಠಮ ವರ್ಗ – ಟ ಠ ಢ ಣ ।





7. ಸಪ್ತಮ ವರ್ಗ – ನ ತ ಥ ಧ ದ ।
8. ಅಷ್ಟಮ ವರ್ಗ – ಮ ಪ ಫ ಭ ವ ।
9. ನವಮ ವರ್ಗ – ಶ (ವಾಂತ) ಷ (ಶ್ವೇತ) ಸ (ಇಂದ್ರ)

ವಿನಿಯೋಗ : ಅಸ್ಯ ಭೂತಲಿಪೇರ್ದಕ್ಷಿಣಾಮೂರ್ತಿಋಷಿಃ ಗಾಯತ್ರೀಛಂದಃ ವರ್ಣೇಶ್ವರೀ ದೇವತಾ ಆತ್ಮನೋಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಭೂತಲಿಪಿ : ಅಂ ಇಂ ಉಂ ಋಂ ಲೃಂ ಏಂ ಐಂ ಓಂ ಔಂ ಹಂ ಯಂ ರಂ ವಂ ಲಂ ಙಂ ಕಂ ಖಂ ಘಂ ಗಂ ತ್ರಂ ಚಂ ಛಂ ಝಂ ಜಂ ಣಂ ಟಂ ಠಂ ಢಂ ಡಂ ನಂ ತಂ ಥಂ ದಂ ಮಂ ಪಂ ಫಂ ಭಂ ಬಂ ಶಂ ಷಂ ಸಂ

ಷಡಂಗನ್ಯಾಸ : 1. ಹಂ ಯಂ ರಂ ವಂ ಲಂ ಹೃದಯಾಯ ನಮಃ ।
2. ಙಂ ಕಂ ಖಂ ಘಂ ಗಂ ಶಿರಸೆ ಸ್ವಾಹಾ ।
3. ಚಂ ಛಂ ಝಂ ಜಂ ಶಿಖಾಯೈ ವಷಟ್ ।
4. ಣಂ ಟಂ ಠಂ ಡಂ ಢಂ ಕವಚಾಯ ಹುಮ್ ।
5. ನಂ ತಂ ಥಂ ಧಂ ದಂ ನೇತ್ರತ್ರಯಾಯ ವೌಷಟ್ ।
6. ಮಂ ಪಂ ಫಂ ಬಂ ಅಸ್ತ್ರಾಯ ಫಟ್

ವರ್ಣನ್ಯಾಸ : ಓಂ ಅಂ ನಮಃ ಗುದೆ,
ಓಂ ಇಂ ನಮಃ ಲಿಂಗೆ,
ಓಂ ಉಂ ನಮಃ ನಾಭೌ,
ಓಂ ಋಂ ನಮಃ ಹೃದಿ,
ಓಂ ಲೃಂ ನಮಃ ಕಂಠೆ,
ಓಂ ಏಂ ನಮಃ ಭ್ರೂಮಧ್ಯೆ,
ಓಂ ಐಂ ನಮಃ ಲಲಾಟೆ,
ಓಂ ಓಂ ನಮಃ ಶಿರಸಿ,
ಓಂ ಔಂ ನಮಃ ಬ್ರಹ್ಮರಂಧ್ರೆ,
ಓಂ ಹಂ ನಮಃ ಊರ್ಧ್ವಮುಖೆ,
ಓಂ ಯಂ ನಮಃ ಪೂರ್ವಮುಖೆ,
ಓಂ ರಂ ನಮಃ ದಕ್ಷಿಣಮುಖೆ,
ಓಂ ವಂ ನಮಃ ಉತ್ತರಮುಖೆ,
ಓಂ ಲಂ ನಮಃ ಪಶ್ಚಿಮಮುಖೆ,
ಓ ಙಂ ನಮಃ ಹಸ್ತಾಗ್ರೆ,

ಸಾಧಕನು ಶುಭ ಮಹೂರ್ತದಲ್ಲಿ ತನ್ನ ಇಷ್ಟದೇವನನ್ನು ಪೂಜೆ ಮಾಡಿ, ಆ ಯಂತ್ರಗಳನ್ನು ಸ್ಮರಣೆ ಮಾಡುತ್ತ ಹವಿಷ್ಯಾನ್ನವನ್ನು ಭೋಜನ ಮಾಡುತ್ತ ಮೂರು ದಿನಗಳ ಪರ್ಯಂತ ಭೂಮಿಯ ಮೇಲೆ ಶಯನ ಮಾಡುತ್ತ ಇಷ್ಟದೇವನನ್ನು ಪ್ರಾರ್ಥನೆ ಮಾಡಬೇಕು.

"ಹೇ ಪ್ರಭೋ! ನಾನು ಬರೆಯುವ ಯಂತ್ರವು ಹೇಗಿರುತ್ತದೆ?" ಈ ಪ್ರಕಾರ ಪ್ರತಿನಿತ್ಯ ಇಷ್ಟದೇವನನ್ನು ಪ್ರಶ್ನಿಸುತ್ತ ಪೂಜೆ ಮಾಡಿದರೆ ಮೂರನೆಯ ದಿನ ಸಾಧಕನಿಗೆ ಸ್ವಪ್ನದಲ್ಲಿ, ಯಂತ್ರದ ಸಿದ್ಧ, ಸಾಧ್ಯ ಸುಸಿದ್ಧ ಮತ್ತು ಶತ್ರುಗಳ ವಿಷಯದಲ್ಲಿ ವಿವರಗಳು ಕಂಡುಬರುತ್ತವೆ.

**ಸ್ವಪ್ನಾಭಾವೇಪಿ ತದ್ಧಿತ್ವಾ ಪುರಂ ಯಂತ್ರಂ ಲಿಖೇತ್ಸುಧೀಃ ।**
**ಅಥ ಸಂಪ್ರೋಚ್ಯತೆ ಸರ್ವಯಂತ್ರಸಾಧಾರಣೀ ಕ್ರಿಯಾ ॥ 5 ॥**

**ಸ್ನಾತಃ ಶುದ್ಧಾಂಬರಧರಃ ಪುಷ್ಪ ಚಂದನ ಭೂಷಿತಃ ।**
**ದ್ರವ್ಯೈಃ ಸಮುದಿತೈರುಕ್ತಸ್ಥಲೇ ಯಂತ್ರಂ ಲಿಖೇದ್ರಹಃ ॥ 6 ॥**

**ಷಷ್ಠ್ಯಂತಂ ಸಾಧಕಪದಂ ಮಧ್ಯಬೀಜೋಪರಿ ಸ್ಮೃತಮ್ ।**
**ದ್ವಿತೀಯಾಂತಂ ಸಾಧ್ಯಮಧಃ ಪಾರ್ಶ್ವಯೋಃ ಕುರುಯುಗ್ಮಕಮ್ ॥ 7 ॥**

ಶತ್ರು ಯಂತ್ರಗಳನ್ನು ಬರೆಯಬಾರದು. ಅದರ ಬದಲಾಗಿ ಅನ್ಯ ಸಿದ್ಧ, ಸಾಧ್ಯ, ಸುಸಿದ್ಧ ಯಂತ್ರಗಳನ್ನು ಬರೆಯಬೇಕು. ಸ್ವಪ್ನವು ಬಾರದಿದ್ದರೂ ಶತ್ರು ಯಂತ್ರವನ್ನು ಹೊರತು ಪಡಿಸಿ ಅನ್ಯ ಯಂತ್ರಗಳನ್ನು ಬರೆಯಬೇಕು.

ಈಗ ಎಲ್ಲ ದೇವತೆಗಳ ಯಂತ್ರಗಳನ್ನು ಬರೆಯುವ ಸಾಮಾನ್ಯ ಪ್ರಕ್ರಿಯೆಯನ್ನು ವಿವರಿಸಲಾಗುತ್ತದೆ.

ಸ್ನಾನ ಮಾಡಿ ಶುದ್ಧ ವಸ್ತ್ರಗಳನ್ನು ಧರಿಸಿ ಗಂಧದ ತಿಲಕ ಮತ್ತು ಪುಷ್ಪಮಾಲೆಯನ್ನು ಧರಿಸಿ ಯಂತ್ರವನ್ನು ಬರೆಯಲು ನಿರ್ದಿಷ್ಟವಾದ ಮಸಿ ಮತ್ತು ಭೋಜಪತ್ರಾದಿ ವಸ್ತುಗಳನ್ನು ಸಂಗ್ರಹಿಸಿ ಏಕಾಂತ ಸ್ಥಳದಲ್ಲಿ ಕುಳಿತು ಯಂತ್ರವನ್ನು ಬರೆಯಬೇಕು.

ಯಂತ್ರದ ಮಧ್ಯ ಬೀಜದ ಮೇಲೆ ಸಾಧಕನ ಷಷ್ಠ್ಯಂತ ನಾಮ ಮತ್ತು ಕೆಳಗೆ ಸಾಧ್ಯನ ಹೆಸರಿನ ಮುಂದೆ ದ್ವಿತೀಯಾಂತ ವಿಭಕ್ತಿ ಸೇರಿಸಿ ಸಾಧ್ಯ (ವ್ಯಕ್ತಿ ಅಥವಾ ಅವನ ಕಾರ್ಯ) ನ ಹೆಸರು ಮತ್ತು ಎರಡೂ ಕಡೆಗೆ ಎರಡು ಸಾರಿ 'ಕುರು ಕುರು' ಶಬ್ದವನ್ನು ಬರೆಯಬೇಕು. ಸಾಧಕಸ್ಯ (ದೇವದತ್ತಸ್ಯ ಇಷ್ಟಂ ಕುರು ಕುರು) ಸಾಧ್ಯ (ಯಜ್ಞದತ್ತಂ ವಶಂ ಕುರು ಕುರು) ಇತ್ಯಾದಿ





ಯಂತ್ರಗಾಯತ್ರಿ ಕಥನ

**ವಿಯದ್ಭೃಗ್ವಿಸರ್ಗಬೀಜಂ ಮಧ್ಯಭಾಗಾದಧೋ ಲಿಖೇತ್ ।**
**ಈಶಾನಾದಿ ಚತುಷ್ಕೋಣೆ ಹಂಸಃ ಸೋಹಮಸೂನ್ ಪುನಃ ॥ 8 ॥**

**ನೇತ್ರೆ ಶ್ರೋತ್ರೆ ಪಾರ್ಶ್ವಯುಗ್ಮೆ ದಿಕ್ಪಬೀಜಾನಿ ದಿಕ್ಷು ಚ ।**
**ಯಂತ್ರಗಾಯತ್ರಿಕಾ ವರ್ಣಾನ್ಪ್ರತೀಕಾಷ್ಟಂ ತ್ರಯಂ ತ್ರಯಮ್ ॥ 9 ॥**

**ಯಂತ್ರರಾಜಾಯ ಶಬ್ದಾಂತೆ ವಿದ್ಮಹೆ ವರ ತತ್ಪರಮ್ ।**
**ಪ್ರದಾಯ ಧೀಮಹೀತ್ಯಂತೆ ತನ್ನೋ ಯಂತ್ರಃ ಪ್ರಚೋದಯಾತ್ ॥ 10 ॥**

**ಏಷೋಕ್ತಾ ಯಂತ್ರ ಗಾಯತ್ರಿ ಸ್ಮೃತ ಸರ್ವೇಷ್ಟ ಸಿದ್ಧಿದಾಃ ।**
**ಬಹಿಃ ಪ್ರಾಣಪ್ರತಿಷ್ಠಾಯಾಂ ಮನುಂ ಸರ್ವತ್ರ ವೇಷ್ಟಯೇತ್ ॥ 11 ॥**

**ಸ್ಥಲಾನುಕ್ತೌ ಭೂರ್ಜಪತ್ರೆ ಕ್ಷೌಮೆ ವಾ ತಾಡಪತ್ರಕೆ ।**
**ಯಂತ್ರಂ ವಿಲಿಖ್ಯ ಘುಟಿಕಾಂ ಬಧ್ವಾ ಸೂತ್ರೇಣ ವೇಷ್ಟಯೇತ್ ॥ 12 ॥**

**ಲಾಕ್ಷಯಾಚ್ಛಾದಿತೆ ಸ್ವರ್ಣೆ ರೂಪ್ಯೆ ತಾಮ್ರೇಥವಾ ಕ್ಷಿಪೇತ್ ।**
**ಮಧ್ಯಬೀಜೇನ ಸಂಪೂಜ್ಯ ದೇವಂ ಮಾತೃಕಯಾಪಿ ವಾ ॥ 13 ॥**

**ಸಂಜಪ್ಯ ಹುತ್ವಾ ಸಂಪಾತಸಿಕ್ತಂ ಕೃತ್ವಾ ನಿಯೋಜಯೇತ್ ।**
**ಮೂರ್ಧ್ನಿ ಬಾಹೌ ಗಲೆ ವಾಪಿ ತತ್ತದಿದಷ್ಟಾರ್ಥಸಿದ್ಧಯೇ ॥ 14 ॥**

ಬಿ ಮತ್ತು ವಿಸರ್ಗ ಸಹಿತ ವಿಯತ್ (ಹ) ಭೃಗು (ಸ) ಅರ್ಥಾತ್ 'ಸ್ಹೌ' ಈ ಬೀಜವನ್ನು ಯಂತ್ರದ ಬೀಜವೆಂದು ಕರೆಯಲಾಗಿದ್ದು ಅದನ್ನು ಮಧ್ಯ ಭಾಗದ ಕೆಳಗೆ ಪಾರ್ಶ್ವದಲ್ಲಿ ಬರೆಯಬೇಕು. ನಂತರ "ಹಂಸಃ ಸೋಹಂ" ಯಂತ್ರದ ಪ್ರಾಣವನ್ನು ಈಶಾನಾದಿ ನಾಲ್ಕೂ ಮೂಲೆಗಳನ್ನು ಬರೆಯಬೇಕು.

ಯಂತ್ರದ ಎರಡೂ ಕಡೆಗೆ ಕ್ರಮವಾಗಿ ನೇತ್ರ (ಇ, ಈ) ಶ್ರೋತ (ಉ, ಊ) ಬರೆಯಬೇಕು. ಯಂತ್ರದ ಹತ್ತು ದಿಕ್ಕುಗಳಲ್ಲಿ ಹತ್ತು ದಿಕ್ಪಾಲರ ಬೀಜ ಲಂ, ರಂ, ಮಂ, ಕ್ಷಂ, ವಂ, ಯಂ, ಸಂ, ಹಂ, ಆಂ ಹ್ರೀಂ ಬರೆಯಬೇಕು. ಯಂತ್ರ ಗಾಯತ್ರಿಯ 3,3 ವರ್ಣಗಳನ್ನು ಎಂಟು ದಿಕ್ಕುಗಳಲ್ಲಿ ಬರೆಯಬೇಕು.

ಯಂತ್ರ ಗಾಯತ್ರಿ 'ಯಂತ್ರ ರಾಜಾಯ' ಪದದ ನಂತರ 'ವಿದ್ಮಹೆ' ಪದ, ನಂತರ 'ಪ್ರದಾಯ ಧೀಮಹಿ' ಪದ ಮತ್ತು ಕೊನೆಯಲ್ಲಿ 'ತನ್ನೋ ಯಂತ್ರಃ ಪ್ರಚೋದಯಾತ್' ಸೇರಿಸುವುದರಿಂದ ಯಂತ್ರ ಗಾಯತ್ರಿ ಮಂತ್ರವು

ಜಲದಿಂದ ಸಾಧ್ಯ ವ್ಯಕ್ತಿಯ ಅಭಿಷೇಕ ಮಾಡುವುದರಿಂದ ಸಾಧ್ಯನ ದಾರಿದ್ರ್ಯ, ಆಪತ್ತು, ರೋಗಗಳು ಮತ್ತು ತೊಂದರೆಗಳು ದೂರವಾಗುತ್ತವೆ.

**ಆಸುರಿ ಕುಸುಮಂ ಶೀತಂ ಪ್ರಿಯಂಗುರ್ನಾಗಕೇಸರಃ ।**
**ಮನಃ ಶಿಲಾ ಚ ತಗರಮೇತತ್ಸರ್ವ ವಿಚೂರ್ಣಿತಮ್**
**ಶತಾಭಿಮಂತ್ರಿತಂ ಸಾಧ್ಯಮೂರ್ಧ್ನಿ ಕ್ಷಿಪ್ತಂ ವಶಂವದಮ್ ।** ॥ 145 ॥
**ನಿಂಬಕಾಷ್ಠಸಮಿದ್ಧೇಗ್ನಾವಾಸುರಿಂ ಸರ್ಷಪಾನ್ವಿತಾಮ್**
**ಅಷ್ಟೋತ್ತರಶತಂ ಹುತ್ವಾ ಸಪ್ತಾಹಂ ದಕ್ಷಿಣಾಮುಖಃ ।** ॥ 146 ॥
**ವಿದಧ್ಯಾದಚಿರಾಚ್ಛತ್ರುಂ ಸೂರ್ಯಸುನುಗೃಹಾತಿಥಿಮ್**
**ಕಿಂಕುರ್ಯಾನ್ನೃಪತಿಃ ಕ್ರುದ್ಧಃ ಕಿಂಕುರ್ಯಾ ರಿಪವೋಽಖಿಲಾಃ ।** ॥ 147 ॥
**ಕ್ರುದ್ಧಃ ಕಾಲೋಪಿ ಕಿಂಕುರ್ಯಾದಾಸುರಿ ಚೇದುಪಾಸಿತಾ** ॥ 148 ॥

ಸಾಸಿವೆಯ ಹೂವು, ಶ್ರೀಗಂಧ, ಪ್ರಿಯಂಗು, ನಾಗಕೇಶರ, ಮೈಲುತುತ್ತ ಮತ್ತು ತಗರ ಇವುಗಳನ್ನು ಕುಟ್ಟಿ ಪುಡಿ ಮಾಡಿ ಮೂಲಮಂತ್ರದಿಂದ 108 ಬಾರಿ ಅಭಿಮಂತ್ರಿಸಬೇಕು. ನಂತರ ಆ ಚಂದನವನ್ನು ಸಾಧ್ಯ ವ್ಯಕ್ತಿಯ ಮಸ್ತಕದ ಮೇಲೆ ಹಚ್ಚುವುದರಿಂದ ಸಾಧ್ಯನು ಸಾಧಕನ ವಶವರ್ತಿಯಾಗುತ್ತಾನೆ.

ಬೇವಿನ ಸಮಿಧಾಗಳಿಂದ ಪ್ರಜ್ವಲಿತ ಅಗ್ನಿಯಿಂದ ಒಂದು ವಾರದವರೆಗೆ ಬಿಳಿಸಾಸಿವೆ ಮಿಶ್ರಿತ ಸಾಸಿವೆಯಿಂದ ಪ್ರತಿದಿನ 100 ಆಹುತಿಗಳನ್ನು, ದಕ್ಷಿಣಾಭಿಮುಖವಾಗಿ ಕುಳಿತು, ಕೊಟ್ಟರೆ ಶತ್ರುಗಳ ಮಾರಣ ಹೋಮವಾಗುತ್ತದೆ.

ಈ ಆಸುರಿ ವಿದ್ಯೆಯನ್ನು ವಿಧಿವತ್ತಾಗಿ ಉಪಾಸನೆ ಮಾಡಿದರೆ ಕ್ರುದ್ಧ, ಸಮಸ್ತ ಶತ್ರುಗಳು ಅಷ್ಟೇ ಏಕೆ ಕ್ಷುದ್ರನಾದ ಕಾಲನೂಕೂಡಾ ಸಾಧಕನ ಕೂದಲನ್ನು ಕೊಂಕಿಸಲಾರರು.

**ಗ್ರಂಥಾನನೇಕಾನಾಲೋಕ್ಯ ಮಂತ್ರಾಗುಪ್ತತಮಾ ಮಯಾ ।**
**ಹಿತಾಯ ಸುಧಿಯಾಂ ಖ್ಯಾತಾ ವಿಸ್ತರಾದುಪರಮ್ಯತೆ** ॥ 149 ॥

ಮಂತ್ರಶಾಸ್ತ್ರದ ಅನೇಕ ಗ್ರಂಥಗಳನ್ನು ಪರಾಮರ್ಶೆ ಮಾಡಿ ನಾನು ಸಾಧಕರ ಹಿತಾರ್ಥ ಗುಪ್ತಮಯ ಮಂತ್ರಗಳನ್ನು ಈ ಅಧ್ಯಾಯದಲ್ಲಿ ಹೇಳಿದ್ದೇನೆ. ಗ್ರಂಥ ವಿಸ್ತಾರದ ಭಯದಿಂದ ಮುಂದೆ ಏನನ್ನೂ ಹೇಳದೆ ಇಲ್ಲಿಯೇ ಉಪಸಂಹಾರ ಮಾಡುತ್ತೇನೆ ಎಂದು ಗ್ರಂಥಕರ್ತೃರು ಹೇಳುತ್ತಾರೆ.

[ಈ ಪ್ರಕಾರ ಶ್ರೀಮನ್ ಮಹೀಧರ ವಿರಚಿತ ಮಂತ್ರಮಹೋದಧಿ ಗ್ರಂಥದ ಹತ್ತೊಂಭತ್ತನೆಯ ಅಧ್ಯಾಯವು ಸಮಾಪ್ತಿ]





# || ವಿಂಶ ತರಂಗ ||




## ಯಂತ್ರಕಥನ

**ಅಥ ಪ್ರವಕ್ಷ್ಯೇ ಯಂತ್ರಾಣಿ ಗದಿತಾನಿ ಪುರಾರಿಣಾ ।**

**ಶುಭೆ ದಿನೆ ಸಮಾರಾಧ್ಯ ಸ್ವೇಷ್ಟದೇವಂ ಯತಾತ್ಮವಾನ್** ॥ 1 ॥
**ತ್ರ್ಯಾತ್ರಿದಿವಸಂ ಭೂಮೌ ಹವಿಷ್ಯಾಷಿ ಜಪೇ ರತಃ ।**
**ಇದಂ ಮೆ ಲಿಖಿತಂ ಯಂತ್ರಮಿಷ್ಟಂ ತತ್ಕೀದೃಶಂ ಪ್ರಭೋ** ॥ 2 ॥
**ಇತಿ ಪೃಷ್ಟ್ವಾ ನಿಜಂ ದೇವಂ ಪ್ರತ್ಯಹಂ ತಂ ಸಮರ್ಚಯೇತ್ ।**
**ತೃತೀಯೇ ದಿವಸೆ ರಾತ್ರೌ ಸ್ವಪ್ನಂ ಸಂಪ್ರಾಪ್ನುಯಾನ್ನರಃ** ॥ 3 ॥
**ಸಿದ್ಧಂ ಸಾಧ್ಯಂ ಸುಸಿದ್ಧಂ ವಾ ಶತ್ರುಭೂತಮಥೋ ಇದಮ್ ।**
**ಶತ್ರುಯಂತ್ರಂ ಲಿಖೇನ್ನೈವ ತದಾ ತದಿತರಲ್ಲಿಖೇತ್** ॥ 4 ॥

ಈಗ ಯಂತ್ರಗಳ ವಿಷಯವನ್ನು ಹೇಳಲಾಗುತ್ತದೆ. ಭಗವಾನ ಸದಾಶಿವನು ಯಾವ ಯಾವ ಯಂತ್ರಗಳನ್ನು ಕುರಿತು ಭಗವತಿ ಪಾರ್ವತಿಗೆ ಆಖ್ಯಾನ ಮಾಡಿದ್ದನೊ ಆ ಯಂತ್ರಗಳನ್ನು ಕುರಿತು ಹೇಳುತ್ತೇನೆ.

ಈ ಮಂತ್ರದ ಹತ್ತು ಸಾವಿರ ಜಪ ಮಾಡಬೇಕು. ನಂತರ ತುಪ್ಪ ಮಿಶ್ರಿತ ಸಾಸಿವೆಯಿಂದ ದಶಾಂಶ ಹೋಮ ಮಾಡಬೇಕು. ಜಯಾದಿ ಶಕ್ತಿಯುಕ್ತವಾದ ಪೀಠದ ಮೇಲೆ ದುರ್ಗಾದೇವಿಯನ್ನು ಮತ್ತು ದಿಶೆಗಳಲ್ಲಿ ಸಾಯುಧ ಇಂದ್ರಾದಿ ದಿಕ್ಪಾಲರನ್ನು ಪೂಜಿಸಬೇಕು.

## ಕಾಮ್ಯ ಪ್ರಯೋಗಗಳು

ಪಂಚಾಂಗಾಮಾಸುರಿಂ ಮಂತ್ರಿ ಗೃಹಿತ್ವಾ ಮಂತ್ರಯೇಚ್ಛತಮ್ ।
ತಯಾ ಧೂಪಿತಮಾತ್ಮಾನಂ ಯೋ ಜಪೇತ್ ಸ ವಶೋ ಭವೇತ್ ॥ 134 ॥
ಮಧ್ವಕ್ತಮಾಸುರಿಂ ಹುತ್ವಾ ಸಹಸ್ರಂ ವಶಯೇಜ್ಜಗತ್ ।
ರಾಜಿಕಾಪ್ರತಿಮಾಂ ಕೃತ್ವಾ ದಕ್ಷಾಂಘ್ರೇರ್ಮಸ್ತಕಾವಧಿ
ಅಷ್ಟೋತ್ತರಶತಂ ಖಿಂಡಾಜ್ಜುಹುಯಾದನಿದಿತಾನ್ । ॥ 135 ॥
ನಾರ್ಯಾಃ ಪ್ರತಿಕೃತೇರ್ವಾಮಾಸಾದಾದಿಹವನಂ ಚರೇತ್
ಏವಂ ಪ್ರಕುರ್ಯಾಯ್ಸಪ್ತಾಹಂ ರಾಜೇಂಧನ ಚಿತೇನಲ್ । ॥ 136 ॥
ಸ ಸಪತ್ನೋಪಿ ಮೃತ್ಯಂತಂದಾಸೋ ಜಾಯೇತ್ ಮಂತ್ರಿಣಃ ॥ 137 ॥
ಸ್ತ್ರೀಲಿಂಗೋಹಃ ಪ್ರಕರ್ತವ್ಯೋ ಮಂತ್ರೆ ನಾರೀ ವಶೀಕೃತಾ ।
ಕಟುತೈಲಾನ್ವಿತಾಂ ರಾಜಿಂ ನಿಂಬಪತ್ರಯುತಾಂ ರಿಪೋಃ ॥ 138 ॥
ನಾಮಯುಂಮನುನಾ ಹುತ್ವಾ ಜ್ವರಿಣಂ ಕುರುತೆ ರಿಪುಮ್ ।
ಏವಂ ರಾಜಿಂ ಸಲವಣೌಂ ಹುತ್ವಾ ಸ್ಫೋಟೊ ಭವೇದರೇಃ ॥ 139 ॥

ಸಾಸಿವೆಯ ಪಂಚಾಂಗಗಳು–ಬೇರು, ಟೊಂಗೆ, ಪತ್ರ, ಪುಷ್ಪ, ಫಲಗಳನ್ನು ತೆಗೆದುಕೊಂಡು ಮೂಲಮಂತ್ರದಿಂದ ಅದನ್ನು 100 ಬಾರಿ ಅಭಿಮಂತ್ರಿಸಿ ನಂತರ ಅದರಿಂದ ಸ್ವಯಂ ಧೂಪ ಮಾಡಿಕೊಂಡು ಯಾರು ಅದನ್ನು ಮೂಸಿ ನೋಡುತ್ತಾರೆಯೊ ಅವರು ವಶವರ್ತಿಯಾಗುತ್ತಾರೆ. ಜೇನು ಮಿಶ್ರಿತ ಸಾಸಿವೆಯನ್ನು ಮಂತ್ರಪೂರ್ವಕ ಒಂದು ಸಾವಿರ ಆಹುತಿ ಕೊಡುವುದರಿಂದ ಸಾಧಕನು ಜಗತ್ತನ್ನೇ ವಶಪಡಿಸಿಕೊಳ್ಳುತ್ತಾನೆ.

ಸ್ತ್ರೀ ಅಥವಾ ಪುರುಷರು, ಯಾರನ್ನು ವಶಮಾಡಿಕೊಳ್ಳಬೇಕಾಗಿದೆಯೋ, ಅವರ ಸಾಸಿವೆಯ ಗೊಂಬೆಯನ್ನು ಮಾಡಿ ಪುರುಷನ ಬಲಪಾದದಿಂದ ಮಸ್ತಕದವರೆಗೆ ಸ್ತ್ರೀಯ ಎಡಪಾದದಿಂದ ಮಸ್ತಕದವರೆಗೆ 108 ತುಂಡುಗಳನ್ನು ಮಾಡಿ, ಪ್ರತಿದಿನ ವಿಧಿವತ್ತಾಗಿ ಸಾಸಿವೆ ಗಿಡದ ಕಟ್ಟಿಗೆಯಿಂದ ಪ್ರಜ್ವಲಿತ ಅಗ್ನಿಯಲ್ಲಿ ನಿರಂತರವಾಗಿ ಒಂದು ವಾರದವರೆಗೆ ಈ ಮಂತ್ರದಿಂದ ಹೋಮ ಮಾಡಿದರೆ





ಶತ್ರುವು ಕೂಡಾ ಜೀವನದುದ್ದಕ್ಕೂ ಸಾಧಕನ ದಾಸನಾಗುತ್ತಾನೆ. ಸ್ತ್ರೀಯರನ್ನು ವಶಪಡಿಸಿಕೊಳ್ಳಲು ಸಾಧ್ಯದಲ್ಲಿ (ದೇವದತ್ತಸ್ಯ ಉಪವಿಷ್ಟಸ್ಯದ ಸ್ಥಾನದಲ್ಲಿ ದೇವದತ್ತಯಾಃ ಉಪವಿಷ್ಟಾಯಾಃ ಈ ಪ್ರಕಾರ) ಶಬ್ದಗಳನ್ನು ಊಹೆ ಮಾಡಿ ಉಚ್ಚರಿಸಬೇಕು.

ಸಾಸಿವೆ ಎಣ್ಣೆ ಮತ್ತು ಬೇವಿನ ಎಲೆಗಳನ್ನು ಸೇರಿಸಿ ಸಾಸಿವೆಯಿಂದ ಶತ್ರುವಿನ ಹೆಸರು ಹೇಳುತ್ತ ಮೂಲಮಂತ್ರದಿಂದ ಹೋಮ ಮಾಡುತ್ತಿದ್ದರೆ ಶತ್ರುವಿಗೆ ಜ್ವರಬಾಧೆಯಾಗುತ್ತದೆ. ಇದೇ ಪ್ರಕಾರ ಉಪ್ಪು ಸೇರಿಸಿದ ಸಾಸಿವೆಯಿಂದ ಹೋಮ ಮಾಡಿದರೆ ಶತ್ರುವಿನ ಶರೀರವು ಸಿಡಿಯುತ್ತದೆ.

ಅರ್ಕದುಗ್ಧಾಕ್ತ ತದ್ಧೋಮಾನ್ನೇತ್ರೆ ನಾಶಯತೆ ರಿಪೋಃ ।
ಪಾಲಾಶೇಂಧನ ದೀಪ್ತೆಗ್ನೌ ಸಪ್ತಾಹಂ ಘೃತಸಂಯುತಾವೋ ॥ 140 ॥
ಸಾಧಕೋ ರಾಜಿಕಾಂ ಹುತ್ವಾ ಬ್ರಾಹ್ಮಣಂ ವಶಯೇದ್ಧ್ರುವಮ್ ।
ಕ್ಷತ್ರಿಯಂ ತು ಗುಡಾಭ್ಯಕ್ತಾಂ ವೈಶ್ಯಂ ದಧಿಯುತಾಂ ಚ ತಾಮ್ ॥ 141 ॥
ಶೂದ್ರಂ ಲವಣಸಂಯುಕ್ತಾಂ ಹುತ್ವಾ ತಾಂ ಸಾಷ್ಟಕಂ ಶತಮ್ ।
ಆಸುರಿ ಸಮಿಧೋ ಹುತ್ವಾ ಮಧ್ವಕ್ತಾ ಲಭತೇ ನಿಧಿಮ್ ॥ 142 ॥
ತೋಯಪೂರ್ಣೆ ಘಟಿ ಮಂತ್ರಿ ರಾಜೀಕಾಪಲ್ಲವಾನ್ವಿತೆ ।
ಆವಾಹ್ಯಾಂ ತಾಂ ಪೂಜಯಿತ್ವಾ ಶತಂ ಮೂಲೇನ ಮಮತ್ರಯೇತ್ ॥143॥
ತೇನಾಭಿಷಿಕ್ತಂ ಮನುಜಮಲಕ್ಷ್ಮಿರಾಧಯೋ ರುಜಃ ।
ಉಪಸರ್ಗಾಃ ಪಲಾಯಂತೆ ಪರಿತ್ಯಜ್ಯಾತಿ ದೂರತಃ ॥ 144 ॥

ಎಕ್ಕೆಯ ಹಾಲಿನಲ್ಲಿ ಸಾಸಿವೆಯನ್ನು ಮಿಶ್ರ ಮಾಡಿ ಹೋಮ ಮಾಡುವುದರಿಂದ ಶತ್ರುವು ಅಂಧನಾಗುತ್ತಾನೆ.

ಮುತ್ತುಗದ ಸಮಿಧಾದಿಂದ ಪ್ರಜ್ವಲಿತ ಅಗ್ನಿಯಲ್ಲಿ ಒಂದು ವಾರದವರೆಗೆ ತುಪ್ಪ ಮಿಶ್ರಿತ ಸಾಸಿವೆಯ 108 ಆಹುತಿ ಕೊಡುವುದರಿಂದ ಬ್ರಾಹ್ಮಣ ಸಾಧಕನಿಗೆ ಬೆಲ್ಲ ಮಿಶ್ರಿತ ಸಾಸಿವೆಯಿಂದ, ಕ್ಷತ್ರಿಯ ಮೊಸರು ಮಿಶ್ರಿತ ಸಾಸಿವೆಯಿಂದ ಹೋಮ ಮಾಡಿದರೆ, ವೈಶ್ಯ, ಸಾಧಕನಿಗೆ, ಉಪ್ಪು ಮಿಶ್ರಿತ ಸಾಸಿವೆಯಿಂದ, ಶೂದ್ರರು ಸಾಧಕನಿಗೆ ವಶವರ್ತಿಯಾಗುತ್ತಾರೆ. ಮಧುಮಿಶ್ರಿತ ಸಾಸಿವೆಯ ಸಮಿಧಾಗಳಿಂದ ಹೋಮ ಮಾಡುವುದರಿಂದ ವ್ಯಕ್ತಿಗೆ ಭೂಗತ ನಿಧಿಯು ಪ್ರಾಪ್ತವಾಗುತ್ತದೆ.

ನೀರು ತುಂಬಿದ ಕಲಶದಲ್ಲಿ ಸಾಸಿವೆ ಗಿಡದ ಎಲೆಗಳನ್ನು ಹಾಕಿ ಅದರ ಮೇಲೆ ಆಸುರಿ ದೇವಿಯನ್ನು ಆವಾಹನೆ ಮಾಡಿ ಪೂಜೆ ಮಾಡಿ ಮೂಲಮಂತ್ರದಿಂದ ಅದನ್ನು 100 ಬಾರಿ ಅಭಿಮಂತ್ರಿಸಬೇಕು. ನಂತರ ಆ

ನವನೀತಸ್ಯ ಲಿಂಗಾನಿ ಸಂಪೂಜೇಪ್ಸಮವಾಪ್ನುಯಾತ್ ।
ಭಸ್ಮನೋ ಗೋಮಯಸ್ಯಾಪಿ ಬಾಲು ಕಾಯಾಸ್ತಥಾ ಫಲಮ್
ಕ್ರೀಡಂತಿ ಪೃಥುಕಾ ಭೂಮೌ ಕೃತ್ವಾ ಲಿಂಗ ರಜೋಮಯ ಮ್ । ॥ 98 ॥
ಪೂಜಯಂತಿ ವಿನೋದೇನ ತೇಪಿ ಸ್ಯುಃ ಕ್ಷಿತಿನಾಯಕಃ ॥ 99 ॥

ಒಂದು ಲಕ್ಷ ಶಿವಲಿಂಗಗಳನ್ನು ಪೂಜೆ ಮಾಡುವುದರಿಂದ ಮಾನವರು ಪೃಥ್ವಿಯಲ್ಲಿ ಮುಕ್ತಿಯನ್ನು ಪಡೆಯುತ್ತಾರೆ. ಬೆಲ್ಲದಿಂದ ನಿರ್ಮಿತ ಒಂದು ಲಕ್ಷ ಲಿಂಗಗಳ ಪೂಜೆಯಿಂದ ಸಾಧಕನು ರಾಜನಾಗುತ್ತಾನೆ.

ಯಾವ ಸ್ತ್ರೀಯು ಪಾತಿವ್ರತ್ಯ ಧರ್ಮವನ್ನು ಪಾಲನೆ ಮಾಡುತ್ತ ಬೆಲ್ಲದಿಂದ ನಿರ್ಮಿತ ಒಂದು ಸಾವಿರ ಲಿಂಗಗಳನ್ನು ಪೂಜೆ ಮಾಡುತ್ತಾಳೆಯೊ ಅವಳು ಪತಿಯ ಸುಖ ಮತ್ತು ಅಖಂಡ ಸೌಭಾಗ್ಯವನ್ನು ಪಡೆದುಕೊಂಡು ಅಂತದಲ್ಲಿ ಪಾರ್ವತಿಯ ಸ್ವರೂಪವನ್ನು ಪಡೆದುಕೊಳ್ಳುತ್ತಾಳೆ.

ಬೆಣ್ಣೆಯಿಂದ ನಿರ್ಮಿತ ಲಿಂಗಗಳನ್ನು ಪೂಜಿಸುವುದರಿಂದ ಸಾಧಕನು ಅಭೀಷ್ಟ ವಸ್ತುಗಳನ್ನು ಪಡೆದುಕೊಳ್ಳುತ್ತಾನೆ. ಭಸ್ಮ, ಗೋಮಯ ಮತ್ತು ಉಸುಕಿನಿಂದ ತಯಾರಿಸಿದ ಲಿಂಗಗಳ ಪೂಜೆಯಿಂದಲೂ ಕೂಡಾ ಇದೇ ಫಲಗಳು ದೊರೆಯುತ್ತವೆ ಎಂದು ಹೇಳಲಾಗಿದೆ.

ಯಾವ ಬಾಲಕರು ಧೂಳಿನ ಲಿಂಗವನ್ನು ತಯಾರಿಸಿ ಆಡುತ್ತಾರೆಯೊ ಮತ್ತು ವಿನೋದಕ್ಕಾಗಿ ಅದರ ಪೂಜೆ ಮಾಡುತ್ತಾರೆಯೊ ಅವರು ಅದರ ಪ್ರಭಾವದಿಂದ ರಾಜರಾಗುತ್ತಾರೆ.

**ಲಿಂಗಪೂಜಾ ಫಲಗಳು**

ಪ್ರಾತರ್ಗೋಮಯಲಿಂಗಾನಿ ನಿತ್ಯಂ ಯಸ್ತ್ರೀಣಿ ಪೂಜಯೇತ್ ।
ಬೃಹತೀಬಿಲ್ವಯೋಃ ಪತ್ರೈರ್ನೈವೇದ್ಯಂ ಗುಡಮರ್ಪಯೇತ್ ॥ 100 ॥
ಏವಂ ಮಾಸತ್ರಯಂ ಕುರ್ವನ್ನನಲ್ಪಂ ಲಭತೇ ಧನಮ್ ।
ಏಕಾದಶೈವಲಿಂಗಾನಿ ಗೋಮಯೋತ್ಥಾನಿ ಯೋ ಯಜೇತ್ ॥ 101 ॥
ಪ್ರಾತರ್ಮಧ್ಯಾಹ್ನಯೋಃ ಸಾಯಂ ನಿಶೀಥೆ ಪ್ರತಿವಾಸರಮ್ ।
ಸ ಸರ್ವಾಃ ಸಂಪದೊ ಯಾಯಾತ್ ಷಣ್ಮಾಸಾ ದೇವಮಾಚರನ್ ॥ 102 ॥
ಏಕಾದಶಂ ಯಜೇನ್ನಿತ್ಯಂ ಶಾಲಿಪಿಷ್ಟಮಯಾನಿ ಸಃ ।
ಲಿಂಗಾನಿ ಮಾಸಮಾತ್ರೇಣ ಸಕಲ್ಮಷ ಚ ಯಂ ದಹೇತ್ ॥ 103 ॥
ಸ್ಫಾಟಿಕಂ ಪೂಜಿತಂ ಲಿಂಗಮೇನೋನಿಕರನಾಶಕಮ್ ।
ಸರ್ವಕಾಮಪ್ರದಂ ಪುಂಸಾಮುದುಂಬರಸಮುದ್ಭವಮ್ ॥ 104 ॥





ರೇಪಾತ್ಮಜಂ ಸರ್ವಸಿದ್ಧಿಪ್ರದಂ ದುಃಖವಿನಾಶನಮ್ ।
ಯಥಾಶಕ್ತ್ಯಚ್ಚಿಲ್ಲಿಂಗಸ್ಯ ಪೂಜಾ ನಿತ್ಯಂ ಕೃತೇಪ್ಸದಾ ॥ 105 ॥

ಯಾರು ಪ್ರಾತಃಕಾಲ ಮೂರು ತಿಂಗಳ ವರೆಗೆ ಗೋಮಯದಿಂದ ನಿರ್ಮಿತ ಮೂರು ಲಿಂಗಗಳನ್ನು ಪೂಜೆ ಮಾಡುತ್ತಾರೆಯೊ ಮತ್ತು ಅದರ ಮೇಲೆ ಬೃಹತಿ ಮತ್ತು ಬಿಲ್ವಪತ್ರಗಳನ್ನು ಏರಿಸಿ ಬೆಲ್ಲವನ್ನು ನಿವೇದಿಸುವುದರಿಂದ ಸಾಧಕರು ಉತ್ತಮ ಧನ ಸಂಪಾದಿಸುತ್ತಾರೆ.

ಯಾವ ವ್ಯಕ್ತಿ ಗೋಮಯ ನಿರ್ಮಿತ ಹನ್ನೊಂದು ಲಿಂಗಗಳನ್ನು ಆರು ತಿಂಗಳವರೆಗೆ ಪ್ರಾತಃ ಕಾಲ, ಮಧ್ಯಾಹ್ನ, ಸಾಯಂಕಾಲ ಮತ್ತು ಮಧ್ಯ ರಾತ್ರಿ ಈ ಪ್ರಕಾರ ಕಾಲಚತುಷ್ಟಯದಲ್ಲಿ ನಿರಂತರವಾಗಿ ಪೂಜೆ ಮಾಡುತ್ತಾರೆಯೊ ಅವರು ಸಕಲ ಪ್ರಕಾರದ ಸಮೃದ್ಧಿಗಳನ್ನು ಪಡೆಯುತ್ತಾರೆ.

ಯಾರು ಶಾವಕ್ಕಿಯ ಪಿಷ್ಟದಿಂದ ಹನ್ನೊಂದು ಲಿಂಗಗಳನ್ನು ತಯಾರಿಸಿ ಒಂದು ತಿಂಗಳವರೆಗೆ ನಿರಂತರವಾಗಿ ಪೂಜೆ ಮಾಡುತ್ತಾರೆಯೊ ಅವರ ಸಕಲ ಪಾಪಗಳು ನಷ್ಟವಾಗುತ್ತವೆ.

ಸ್ಫಟಿಕದ ಲಿಂಗದ ಪೂಜೆಯಿಂದ ಸಾಧಕರ ಸಕಲ ಪಾಪಗಳು ದೂರವಾಗುತ್ತವೆ. ತಾಮ್ರದಿಂದ ತಯಾರಿಸಲಾದ ಲಿಂಗವು ಸಾಧಕನ ಸಕಲ ಮನೋಭಿಲಾಷೆಗಳನ್ನು ಪೂರ್ಣಗೊಳಿಸುತ್ತದೆ. ನರ್ಮದೇಶ್ವರ ಲಿಂಗದ ಪೂಜೆಯಿಂದ ಎಲ್ಲ ಪ್ರಕಾರದ ಸಿದ್ಧಿಗಳು ಪ್ರಾಪ್ತವಾಗುತ್ತವೆ ಮತ್ತು ದುಃಖಗಳ ನಾಶವಾಗುತ್ತವೆ. ಯಾವುದೇ ಪ್ರಕಾರದಲ್ಲಿ ನಿತ್ಯ ಲಿಂಗವನ್ನು ಪೂಜಿಸುವುದು ಅಭೀಷ್ಟಫಲದಾಯಕವೆಂದು ಹೇಳಲಾಗಿದೆ.

ಯೋ ಯಜೇತ್ ಪಿಚುಮಂದೋತ್ಥೈಃ ಪತ್ರೈರ್ಗೋಮಯಜಂ ಶಿವಮ್ ।
ಕ್ರುದ್ಧಂ ಮಹೇಶ್ವರಂ ಧ್ಯಾಯನ್ ಸ ಪರಾಜಯತೆ ರಿಪೂನ್ ॥ 106 ॥
ಯೋ ಲಿಂಗಂ ಪೂಜಯೇನ್ನಿತ್ಯಂ ಶಿವಭಕ್ತಿಪರಾಯಣಃ ।
ಮೇರುತುಲ್ಯೋಪಿ ತಸ್ಯಾರು ಪಾಪರಾಶಿರ್ಲಯಂ ವ್ರಜೇತ್ ॥ 107 ॥
ದೋಗ್ಧ್ರೀಣಾಂ ತು ಗವಾಂ ಲಕ್ಷಂ ತೋ ದಧ್ಯಾದ್ವೇದಪಾಠಿನೆ ।
ಪಾರ್ಥಿವಂ ಯೋರ್ಚಯೇಲ್ಲಿಂಗಂ ತಯೋರ್ಲಿಂಗಾರ್ಚಕೊ ವರಃ ॥ 108 ॥

ಯಾರು ಗೋಮಯದ ಶಿವಲಿಂಗವನ್ನು ತಯಾರಿಸಿ ಕ್ರುದ್ಧ ಮಹೇಶ್ವರನನ್ನು ಧ್ಯಾನ ಮಾಡುತ್ತ ಬೇವಿನ ಎಲೆಗಳಿಂದ ಪೂಜಿಸುತ್ತಾರೆಯೊ ಅವರ ಶತ್ರುಗಳು ನಾಶವಾಗುತ್ತಾರೆ.

ಯಾರು ಭಗವಾನ್ ಶಿವನ ಭಕ್ತಿಯಲ್ಲಿ ತತ್ಪರವಾಗಿ ಪ್ರತಿದಿನ ಲಿಂಗವನ್ನು ಪೂಜೆ ಮಾಡುತ್ತಾರೆಯೊ ಅವರ ಪರ್ವತ ಶಿಖರ ಸಮಾನ ಪಾಪಗಳು ಕೂಡಾ ನಷ್ಟವಾಗುತ್ತವೆ.

ಯಾರು ವೇದಪಾಠನಿರತರಾದವರಿಗೆ ಒಂದು ಲಕ್ಷ ಹಾಲು ಕರೆಯುವ ಹಸುಗಳನ್ನು ಕರು ಸಹಿತವಾಗಿ ದಾನ ಮಾಡುತ್ತಾರೆಯೊ ಮತ್ತು ಯಾವ ಸಾಧಕರು ಪಾರ್ಥಿವ ಶಿವಲಿಂಗದ ಪೂಜೆ ಮಾಡುತ್ತಾರೆಯೊ ಅವರಲ್ಲಿ ಪಾರ್ಥಿವ ಶಿವಲಿಂಗವನ್ನು ಪೂಜಿಸುವ ಸಾಧಕನೇ ಶ್ರೇಷ್ಠನೆಂದು ಹೇಳಲಾಗುತ್ತದೆ.

**ಚತುರ್ದಶ್ಯಾಂ ತಥಾಷ್ಟಮ್ಯಾಂ ಪೌರ್ಣಮಾಸ್ಯಾಂ ವಿಧುಕ್ಷಯೆ ।**
**ಪಯಸಾ ಸ್ನಾಪಯೇಲ್ಲಿಂಗಂ ಧರಾದಾನ ಫಲಂ ವ್ರಜೇತ್ ॥ 109 ॥**
**ಲಿಂಗಪೂಜಾ ವಿಧಾಯಗ್ರೆ ಸ್ತೋತ್ರಂ ವಾ ಶತರುದ್ರೀಯಮ್ ।**
**ಪ್ರಜಪೇತ್ತನ್ಮನಾ ಭೂತ್ವಾ ಶಿವೆ ಸ್ವಂ ವಿನಿವೇದಯೇತ್ ॥ 110 ॥**
**ಯತ್ಸಂಖ್ಯಾಕಂ ಯಜೇಲ್ಲಿಂಗಂ ತನ್ಮಿತಂ ಹೋಮಮಾಚರೇತ್ ।**
**ಆಜ್ಯಾನ್ವಿತೈಸ್ತಿಲೈರಗ್ನೌ ಘೃತೈರ್ವಾ ಪಾಯಸೇನ ವಾ ॥ 111 ॥**
**ಶಿವಮಂತ್ರೇಣ ತಸ್ಯಾಂತೆ ಬ್ರಾಹ್ಮಣಾನ್ ಭೋಜಯೇಚ್ಛತಮ್ ।**
**ಏವಂ ಕೃತೆ ಸಮಸ್ತೇಷ್ಟಸಿದ್ಧಿರ್ಭವತಿ ನಿಶ್ಚಿತಮ್ ॥ 112 ॥**

ಚತುರ್ದಶಿ, ಅಷ್ಟಮಿ, ಹುಣ್ಣಿಮೆ ಮತ್ತು ಅಮಾವಾಸ್ಯೆಗಳಂದು ಶಿವಲಿಂಗಕ್ಕೆ ಹಾಲಿನ ಅಭಿಷೇಕ ಮಾಡುವುದರಿಂದ ಭೂಮಿಯನ್ನು ದಾನ ಮಾಡಿದ ಫಲವು ದೊರೆಯುತ್ತದೆ.

ಲಿಂಗಪೂಜೆಯ ನಂತರ ಅದರ ಎದುರಿಗೆ 'ಯಜುರ್ವೇದೋಕ್ತ ನಮಸ್ತೇರುದ್ರ' ಇತ್ಯಾದಿ ಯಾವುದಾದರೂ ಸ್ತೋತ್ರ ಅಥವಾ ಶತರುದ್ರೀಯ ಇತ್ಯಾದಿ ಪಾಠ ಮಾಡಬೇಕು. ನಂತರ ಸ್ವಯಂ ಭಗವಾನ್ ಸದಾಶಿವನಿಗೆ ಸಮರ್ಪಿತ ನಾಗಬೇಕು.

ಎಷ್ಟು ಸಂಖ್ಯೆಯಲ್ಲಿ ಲಿಂಗಗಳನ್ನು ಪೂಜೆ ಮಾಡುತ್ತೀರೋ ಅಷ್ಟೇ ಸಂಖ್ಯೆಯಲ್ಲಿ ತುಪ್ಪ ಮಿಶ್ರಿತ ಎಳ್ಳುಗಳಿಂದ ಅಥವಾ ತುಪ್ಪದಿಂದ ಅಥವಾ ಪಾಯಸದಿಂದ, ವಿಧಿವತ್ ಸ್ಥಾಪಿಸಲ್ಪಟ್ಟ ಅಗ್ನಿಯಲ್ಲಿ ಓಂ ನಮಃ ಶಿವಾಯ ಮಂತ್ರದಿಂದ ಹೋಮ ಮಾಡಬೇಕು. ಇದರ ನಂತರ 100 ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಈ ಪ್ರಕಾರ ಸಾಧನೆಯಿಂದ ಸಾಧಕರ ಸಕಲ ಮನೋರಥಗಳು ಪೂರ್ಣವಾಗುತ್ತವೆ.





## ಧರ್ಮಮಂತ್ರ ಸಾಧನಾ

**ಪ್ರಣವಾಂಕುಶಹೃಲ್ಲೇಖಾಪಾಶಾಃ ಕಂಭೌತಿಕೇಂದುಮತ್ ।**
**ವೈವಸ್ವತಾಯ ಧರ್ಮಾಂತೆ ರಾಜಾವರ್ಣಾಃ ಪ್ರಭಂಜನಃ ॥ 113 ॥**
**ಭಕ್ತಾನುಗ್ರಹವರ್ಣಾಂತೆ ಕೃತೆ ನಮ ಉದೀರಿತಃ ।**
**ಚತುರ್ವಿಂಶತಿ ವರ್ಣಾತ್ಮಾ ಮಂತ್ರಃ ಶಮನದೈವತಃ ॥ 114 ॥**
**ತ್ರಿನೇತ್ರಪಂಚಬಾಣಾದ್ರಿಯುಗ್ಮಾಕ್ಷೈರಂಗಕಂ ಮನೋಃ ।**
**ವಿಧಾಯ ಸಾವಧಾನೇನ ಮನಸಾ ಚಿಂತಯೇದ್ಯಮಮ್ ॥ 115 ॥**
**ಪಾಂಥಃ ಸಂಯುತ ಮೇಘಸನ್ನಿಭತನುಃ ಪ್ರದ್ಯೋಚನಸ್ಯಾತ್ಮಜೊ ।**
**ನೃಣಾಂ ಪುಣ್ಯಕೃತಾಂ ಶುಭಾವಹವಪುಃ ಪಾಪೀಯಸಾಂ ದುಃಖಕೃತ್**
**ಶ್ರೀಮದ್ದಕ್ಷಿಣದಿಕ್ಪತಿರ್ಮಹಿಷಗೋಭೂಷಾಭರಾಲಂಕೃತೊ ।**
**ಧ್ಯೇಯಃ ಸಂಯಮಿನಿಪತಿಃ ಪಿತೃಗಣಸ್ವಾಮಿ ಯಮೋದಂಡಭೃತ್ ॥ 116 ॥**
**ಅಭ್ಯಸ್ತೋಽಯಂ ಸಿದ್ಧಮಂತ್ರಃ ಸಕಲಾ ಪದ್ವಿನಾಶನಃ ।**
**ನರಕಪ್ರಾಪ್ತಿರೋದ್ಧಾಸ್ಯಾದ್ರಿ ಪುಭೀತಿನಿವರ್ತಕಃ ॥ 117 ॥**

ಪ್ರಣವ (ಓಂ), ಅಂಕುಶ (ಕ್ರೋಂ) ಹೃಲ್ಲೇಖಾ (ಹ್ರೀಂ), ಪಾಶ (ಆಂ) ಕಂ ಜಲಬೀಜ (ವಂ), ಎ ಮತ್ತು ಬಿಂದುವಿನಿಂದ ಸಂಯುಕ್ತ, ಅಂದರೆ (ವೈಂ), ನಂತರ 'ವೈವಸ್ವತಾಯ ಧರ್ಮ ಪದ, 'ರಾಜಾ' ಪದ ಮತ್ತು ಪ್ರಭಂಜನ (ಯ) ನಂತರ, 'ಭಕ್ತಾನುಗ್ರಹ' ಶಬ್ದ, ನಂತರ 'ಕೃತೆ ನಮಃ' ಸೇರಿಸುವುದರಿಂದ ಇಪ್ಪತ್ತಾಲ್ಕು ಅಕ್ಷರಗಳ ಧರ್ಮರಾಜ ಮಂತ್ರವು ರಚನೆಯಾಗುತ್ತದೆ.

"ಓಂ ಕ್ರೋಂ ಹ್ರೀಂ ಆಂ ವೈಂ ವೈವಸತ್ವಾಯ ಧರ್ಮರಾಜಾಯ ಭಕ್ತಾನುಗ್ರಹ ಕೃತೆ ನಮಃ"

ಮಂತ್ರದ 3,2,5,5, ಅದ್ರಿ 7 ಮತ್ತು 2 ವರ್ಣಗಳಿಂದ ಷಡಂಗನ್ಯಾಸ ಮಾಡಬೇಕು. ನಂತರ ಮನಪೂರ್ವಕವಾಗಿ ಧರ್ಮರಾಜನ ಧ್ಯಾನ ಮಾಡಬೇಕು.

ವಿನಿಯೋಗ : ಅಸ್ಯ ಶ್ರೀ ಧರ್ಮರಾಜಮಂತ್ರಸ್ಯ ವಾಮದೇವಋಷಿ ರ್ಗಾಯತ್ರಿಚ್ಛಂದಃ ಶಮನೋದೇವತಾ ಮಮಾಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಷಡಂಗನ್ಯಾಸ : ಓಂ ಕ್ರೋಂ ಹ್ರೀಂ ಹೃದಯಾಯ ನಮಃ, ಆಂ ವೈಂ ಶಿರಸೆ ಸ್ವಾಹಾ, ವೈವಸತ್ವಾಯ ಶಿಖಾಯೈ ವಷಟ್,

ಧರ್ಮರಾಜಾಯ ಕವಚಾಯ ಹುಮ್, ಭಕ್ತಾನುಗ್ರಹಕೃತೆ ನೇತ್ರತ್ರಯಾಯ ವೌಷಟ್, ನಂಃ ಅಸ್ತ್ರಾಯ ಫಟ್

ಧ್ಯಾನ : ಯಾವ ಸೂರ್ಯಪುತ್ರನ ಸಜಲಮೇಘದ ಸಮಾನ ಶ್ಯಾಮ ವರ್ಣದ ಶರೀರವಿದೆಯೊ, ಯಾರು ಪುಣ್ಯವಂತರಿಗೆ ಸೌಮ್ಯ ರೂಪದಲ್ಲಿ ಪಾಪಿಗಳಿಗೆ ದುಃಖದಾಯಕ ಭಯಾನಕ ರೂಪದಲ್ಲಿ ಪ್ರಕಟವಾಗುವರೋ, ಅನೇಕ ಪ್ರಕಾರದ ಆಭೂಷಣಗಳಿಂದ ಅಲಂಕೃತ ಸಂಯಮಿನಿ ನಗರಿಯ ಮತ್ತು ಪಿತೃಗಣದ ಅಧಿಪತಿ, ಐಶ್ವರ್ಯ ಸಂಪನ್ನ ದಕ್ಷಿಣಾದಿಶೆಯ ಅಧಿಪತಿ, ಮಹಿಷದ ಮೇಲೆ ಸವಾರಿ ಮಾಡುವ, ಪ್ರಾಣಿಗಣಗಳನ್ನು ನಿಯಂತ್ರಿಸುವ ಮತ್ತು ದಂಡಧಾರಿಯಾದ ಧರ್ಮರಾಜನನ್ನು ಧ್ಯಾನ ಮಾಡಬೇಕು.

ಅಭ್ಯಾಸ ಮಾಡುವುದರಿಂದ ಸಿದ್ಧವಾಗುವ ಈ ಮಂತ್ರವು ಸಾಧಕನ ಸಕಲ ಆಪತ್ತುಗಳನ್ನು ನಾಶ ಮಾಡುತ್ತದೆ. ನಕರ ಪ್ರಾಪ್ತಿಯನ್ನು ತಡೆಯುತ್ತದೆ ಮತ್ತು ಶತ್ರುಭಯವನ್ನು ದೂರ ಮಾಡುತ್ತದೆ.

**ಚಿತ್ರಗುಪ್ತ ಮಂತ್ರ ಸಾಧನಾ**

ಪ್ರಣವೋ ಹೃದ್ವಿಚಿತ್ರಾಯ ಧರ್ಮಾಂತೆ ಲೇಖಕಾಯ ಚ ।
ಯಮವಾಂತೆ ಹಿಕಾಧಿತಿಕಾರಿಣೆ ಪದಮುಚ್ಚರೇತ್ ॥ 118 ॥
ಕ್ಷುಧಾತಂದ್ರಿ ಕ್ರಿಯೋತ್ಕಾರಿ ವಹ್ನಿಯಾರ್ಘೀಶಸಂಯುತಾಃ ॥
ಯಾಮಿನೀಶಯುತಾ ಮೂರ್ಧ್ನಿ ಜನ್ಮಸಂಪತ್ತದಂ ತತಃ ॥ 119 ॥
ಪ್ರಳಯಂ ಕಥಯ ದ್ವಂದಂ ಸ್ವಾಹಾಪ್ಯಾತ್ರಿಂಶದಕ್ಷರಃ ।
ಮಂತ್ರೋಯಂ ಚಿತ್ರಗುಪ್ತಸ್ಯ ಸರ್ವದುಃಖೌಘನಾಶನಃ ॥ 120 ॥
ಸಪ್ತಷಣ್ಣವ ವಸ್ವಂಗೈನೇತ್ರಾರ್ಣೈರ್ಮನುಸಂಭವೈಃ ।
ಪ್ರವಿಧಾಯ ಷಡಂಗಾನಿ ಚಿಂತಯೇತ್ ಕರ್ಮಲೇಖಕಮ್ ॥ 121 ॥

ಪ್ರಣವ (ಓಂ), ನಂತರ ಹೃದ್ (ನಮಃ) 'ವಿಚಿತ್ರಾಯ ಧರ್ಮ' 'ಲೇಖಕಾಯ ಯಮವಾಹಿಕಾಧಿಕಾರಿಣೇ' ಪದವನ್ನು ಉಚ್ಚರಿಸಬೇಕು. ನಂತರ ಕ್ಷುಧಾ (ಯ) ತಂದ್ರಿ (ಮ) ಕ್ರಿಯ (ಲ) ಉತ್ಕಾರಿ (ಬ) ವಹ್ನಿ (ರ) ಮತ್ತು (ಯ) ಈ ವರ್ಣಗಳಲ್ಲಿ ಅರ್ಘೀಶ ಮತ್ತು ಇಂದು ಸೇರಿಸುವುದರಿಂದ ಯ್ಮ್ಲ್ವ್ರ್ಯೂ ನಂತರ 'ಜನ್ಮ ಸಂಪತ್ತ್ರಲಯಂ' ಪದವನ್ನು ಉಚ್ಚರಿಸಿ ಎರಡು ಬಾರಿ ಕಥಯ ಮತ್ತು ಕೊನೆಯಲ್ಲಿ 'ಸ್ವಾಹಾ' ಸೇರಿಸುವುದರಿಂದ ಸಕಲ ಪಾಪ ಮತ್ತು ದುಃಖಗಳನ್ನು ದೂರ ಮಾಡುವ ಮೂವತ್ತೆರಡು ಅಕ್ಷರಗಳ ಚಿತ್ರಗುಪ್ತ ಮಂತ್ರವು ರಚನೆಯಾಗುತ್ತದೆ.

"ಓಂ ನಮಃ ವಿಚಿತ್ರಾಯ ಧರ್ಮಲೇಖಕಾಯ ಯಮವಾಹಿಕಾಧಿಕಾರಿಣೆ ಯ್ಮ್ಲ್ವ್ರ್ಯೂ ಜನ್ಮಸಂಪತ್ತ್ರಲಯಂ ಕಥಯ ಕಥಯ ಸ್ವಾಹಾ"





ಷಡಂಗನ್ಯಾಸ : ಮಂತ್ರದ 7,6,9,8, 6 ಮತ್ತು 2 ವರ್ಣಗಳಿಂದ ಷಡಂಗನ್ಯಾಸ ಮಾಡಬೇಕು. ನಂತರ ಎಲ್ಲ ಕರ್ಮಗಳ ಲೆಕ್ಕಪತ್ರ ಬರೆಯುವ ಚಿತ್ರಗುಪ್ತನನ್ನು ಧ್ಯಾನ ಮಾಡಬೇಕು.

ವಿನಿಯೋಗ : ಅಸ್ಯ ಶ್ರೀ ಚಿತ್ರಗುಪ್ತಮಂತ್ರಸ್ಯ ವಾಮದೇವಋಷಿರ್ಗಾಯತ್ರಿ ಛಂದಃ ಶಮನೋದೇವತಾ ಮಮಾಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಷಡಂಗನ್ಯಾಸ ; ಓಂ ನಮಃ ವಿಚಿತ್ರಾಯ ಹೃದಯಾಯ ನಮಃ, ಧರ್ಮಲೇಖಕಾಯ ಶಿರಸೆ ಸ್ವಾಹಾ, ಯಮವಾಹಿಕಾಧಿಕಾರಿಣೆ ಶಿಖಾಯೈ ವಷಟ್, ಯ್ಮ್ಲ್ವ್ರ್ಯೂ ಜನಸಂಪತ್ತ್ರಲಯಂ ಕವಚಾಯ ಹುಮ್, ಕಥಯಂ ಕಥಯ ನೇತ್ರತ್ರಯಾಯ ವೌಷಟ್, ಸ್ವಾಹಾ ಅಸ್ತ್ರಾಯ ಫಟ್

ಕಿರೀಟೋಜ್ಜ್ವಲಂ ವಸ್ತ್ರಭೂಷಾಭಿರಾಮಂ ಚಿತ್ರಾಸನಾಸೀನಮಿಂದುಪ್ರಭಾಸ್ಯಮ್
। ನೃಣಾಂ ಪಾಪಪುಣ್ಯಾನಿ ಪತ್ರೇ ಲಿಖಂತಂ ಭಜೇ ಚಿತ್ರಗುಪ್ತಂ ಸಖಾಯಂ
ಯಮಸ್ಯಃ ॥ 122 ॥
ಸಿದ್ಧಮಂತ್ರಮಿಮಂ ಪುಂಸಾಂ ಜಪತಾಂ ಚಿತ್ರಗುಪ್ತಕಃ ।
ಪ್ರಸನ್ನೋ ಗಣಯೇತ್ ಪುಣ್ಯಂ ನೈವಪಾಪಂ ಕದಾಚನ ॥ 123 ॥

ಕಿರೀಟದ ಪ್ರಕಾಶದಿಂದ ಉಜ್ವಲ ಮತ್ತು ವಸ್ತ್ರ ಮತ್ತು ಆಭೂಷಣಗಳಿಂದ ಮನೋಹರ, ಚಂದ್ರಿಕೆಯ ಸಮಾನ ಪ್ರಸನ್ನ ಮುಖಮುದ್ರೆಯುಳ್ಳ ವಿಚಿತ್ರ ಆಸನದ ಮೇಲೆ ಕುಳಿತುಕೊಂಡು, ಮನುಕುಲದ ಪಾಪ-ಪುಣ್ಯಗಳನ್ನು ಪತ್ರದಲ್ಲಿ ಬರೆಯುವ ಯಮರಾಜನ ಸಖಿ ಚಿತ್ರಗುಪ್ತನನ್ನು ಭಜಿಸುತ್ತೇನೆ.

ಈ ಸಿದ್ಧ ಮಂತ್ರದ ಜಪ ಮಾಡುವ ಮನುಷ್ಯರಿಂದ ಪ್ರಸನ್ನರಾದ ಚಿತ್ರಗುಪ್ತರು ಸಾಧಕರ ಪುಣ್ಯದ ಲೆಕ್ಕವನ್ನು ಮಾತ್ರ ಬರೆಯುತ್ತಾರೆಯೆ ಹೊರತು ಪಾಪದ ಲೆಕ್ಕವನ್ನಲ್ಲ.

## ಅಥರ್ವವೇದೋಕ್ತ ಅಸುರಿ ವಿದ್ಯಾಸಾಧನಾ

ವಕ್ಷ್ಯಾಮ್ಯಥರ್ವವೇದೋಕ್ತಮಾಸುರಿವಿಧಿಮುತ್ತಮಮ್ ।
ಕಟುಕೆ ಕಟುಕಾಂತೆ ತು ಪತ್ರೇಂತೆ ಸುಭಗೆ ಪದಮ್ ॥ 124 ॥
ಅನಂತಸುರೀರಕ್ತೋಂತೆ ಪದಂ ಸ್ಯಾದ್ರಕ್ತವಾಸಸೆ ।
ಅಥರ್ವಣಸ್ಯ ದುಹಿತೆ ಕೇತವೋಘೋಭಗೀಬಲಿ ॥ 125 ॥
ಅಘೋರಕರ್ಮಶಬ್ದಾಂತೆ ಕಾರಿಕೆ ಅಮುಕಸ್ಯ ಚ ।
ಗತಿಂ ದಹದ್ವಯಂ ಕರ್ಣೋಃ ಪವಿಷ್ಟಸ್ಯ ಗುದಂ ದಹ ॥ 126 ॥

ಅಧಮವೆಂದು ಹೇಳಲಾಗಿದೆ. ಬಾಯಿಯ ರೋಗಗಳಲ್ಲಿ ಸುಗಂಧ ತೈಲದ ದೀಪದಾನವನ್ನು ಮಾಡಬೇಕು. ಒಂದು ಸಾವಿರ ಫಲದ ದೀಪದಾನದಿಂದ ಕಾರ್ಯ ಸಿದ್ಧಿಯಾಗದಿದ್ದರೆ ಮೂರು ದೀಪದಾನಗಳನ್ನು ವಿಧಾನಪೂರ್ವಕವಾಗಿ ಮಾಡಬೇಕು. ಈ ಪ್ರಕಾರ ಮಾಡುವುದರಿಂದ ಅಸಾಧ್ಯ ಕಾರ್ಯಗಳು ಸಿದ್ಧಿಯಾಗುತ್ತವೆ.

ಯಾವುದೇ ಪ್ರಕಾರದಿಂದ ಯಾರಾದರೂ ವ್ಯಕ್ತಿಗಳು ತನ್ನ ಮನೆಯಲ್ಲಿ ಕಾರ್ತವೀರ್ಯನ ದೀಪ ದಾನವನ್ನು ಮಾಡಿದರೆ ಅವನ ಸಮಸ್ತ ವಿಘ್ನಗಳು ನಾಶವಾಗುತ್ತವೆ. ಮತ್ತು ಶತ್ರುಗಳು ನಾಶವಾಗುತ್ತಾರೆ. ಸದಾ ಕಾಲ ವಿಜಯವನ್ನು ಪಡೆದುಕೊಳ್ಳುತ್ತಾರೆ. ಮತ್ತು ಪುತ್ರ, ಪೌತ್ರ, ಧನ ಮತ್ತು ಯಶಸ್ಸನ್ನು ಪಡೆದುಕೊಳ್ಳುತ್ತಾರೆ. ಪಾತ್ರೆ ತುಪ್ಪ ಮುಂತಾದ ನಿಯಮಗಳನ್ನು ಪಾಲಿಸದ, ಯಾವ ಯಾವುದೇ ಪ್ರಕಾರದಿಂದ ಪ್ರತಿದಿನ ಮನೆಯಲ್ಲಿ ಕಾರ್ತವೀರ್ಯಾರ್ಜುನನ ಪ್ರಸನ್ನತೆಗಾಗಿ ದೀಪದಾನ ಮಾಡುತ್ತಾರೆಯೋ ಅವರು ತಮ್ಮ ಸಕಲ ಅಭೀಷ್ಟಗಳನ್ನು ಪಡೆದುಕೊಳ್ಳುತ್ತಾರೆ.

**ದೀಪಪ್ರಿಯಃ ಕಾರ್ತವೀರ್ಯೋ ಮಾರ್ತಾಂಡೊ ನತಿವಲ್ಲಭಃ ।**
**ಸ್ತುತಿಪ್ರಿಯೊ ಮಹಾವಿಷ್ಣುರ್ಗಣೇಶಸ್ತರ್ಪಣಪ್ರಿಯಃ ॥ 116 ॥**

**ದುರ್ಗಾರ್ಚನಪ್ರಿಯಾ ನೂನಮಭಿಷೇಕಪ್ರಿಯಃ ಶಿವಃ ।**
**ತಸ್ಮಾತ್ತೇಷಾಂ ಪ್ರತೋಷಾಯ ವಿದಧ್ಯಾತ್ತತ್ತದಾವೃತಃ ॥ 117 ॥**

ಕಾರ್ತವೀರ್ಯಾರ್ಜುನನಿಗೆ ದೀಪವು ಅತ್ಯಂತ ಪ್ರೀಯವಾದುದು. ಸೂರ್ಯನಿಗೆ ನಮಸ್ಕಾರ, ಮಹಾವಿಷ್ಣುವಿಗೆ ಸ್ತುತಿ ಪ್ರಿಯವಾದವುಗಳು. ಗಣೇಶನಿಗೆತರ್ಪಣ, ಭಗವತಿ ದುರ್ಗೆಗೆ ಅರ್ಚನೆ, ಶಿವನಿಗೆ ಅಭಿಷೇಕ ಪ್ರಿಯವಾದುದು. ಕಾರಣ ಈ ದೇವತೆಗಳನ್ನು ಪ್ರಸನ್ನಗೊಳಿಸಲು ಅವರ ಪ್ರಿಯವಾದ ಕರ್ತವ್ಯವನ್ನು ಮಾಡಬೇಕು ಎಂದು ಗ್ರಂಥಕಾರರು ಸೂಚಿಸುತ್ತಾರೆ.

[ ಈ ಪ್ರಕಾರ ಶ್ರೀಮನ್ ಮಹೀಧರ ವಿರಚಿತ ಮಂತ್ರ ಮಹೋದಧಿಯ ಕನ್ನಡ ವ್ಯಾಖ್ಯೆಯ ಸಪ್ತದಶ ತರಂಗ ಸಂಪೂರ್ಣವು]







# ॥ ಅಷ್ಟಾದಶ ತರಂಗ ॥



## ಕಾಲರಾತ್ರಿ ಮಂತ್ರ ಸಾಧನಾ

ಕಾಲರಾತ್ರಿಮಥೋ ವಕ್ಷ್ಯೇ ಸಪತ್ನಗಣ ಸೂದನೀಮ್
ತಾರವಾಕ್ಶಕ್ತಿಕಂದರ್ಪರಮಾಃ ಕಾಮೇಶ್ವರೀತಿ ಚ ॥ 2 ॥
ಸರ್ವಜನಮನೋಹರ್ಣಾ ಹರಿಸರ್ವಮುಖಾಂತತಃ ॥ 1 ॥
ಸ್ತಂಭನ್ಯಂತೆ ಸರ್ವರಾಜವಶಂಕರಿಪದಂ ತತಃ ॥ 2 ॥
ಸರ್ವದುಷ್ಟನಿರ್ದಲನಿ ಸರ್ವಸ್ತ್ರೀಪುರುಷಾರ್ಣಕಾಃ ।
ಕರ್ಷಿಣೀತಿ ತತೋ ಬಂದಿಶೃಂಖಲಾಸ್ತೋಟಯದ್ವಯಮ್ ॥ 3 ॥
ಸರ್ವಶತ್ರೂನ್ ಭಂಜಯಾದ್ವಿಡ್ವೇಷ್ಟೃನ್ನಿರ್ದಲಯದ್ವಯಮ್ ।
ಸರ್ವಸ್ತಂಭಯಯುಗ್ಮಂ ಸ್ಯಾನ್ಮೋಹನಾಸ್ತ್ರೇಣ ತತ್ಪರಮ್ ॥ 4 ॥
ದ್ವೇಷಿಣಃ ಪದಮುಚ್ಚಾರ್ಯ ತತ ಉಚ್ಚಾಟಯದ್ವಯಮ್ ।
ಸರ್ವವಶಂಕುರುದ್ವಂದಂ ಸ್ವಾಹಾ ದೇಹಿ ಯುಗಂ ಪುನಃ ॥ 5 ॥
ಸರ್ವ ಚ ಕಾಲರಾತ್ರೀತಿ ಕಾಮಿನೀತಿ ಗಣೇಶ್ವರಿ ।
ನಮೋಂತಯಂ ಮಹಾವಿದ್ಯಾ ಗುಣರಾಮಥರಾಕ್ಷರಾ ॥ 6 ॥

ಶತ್ರು ಸಮುದಾಯವನ್ನು ನಾಶ ಮಾಡುವ ಕಾಲರಾತ್ರಿಯ ಮಂತ್ರಗಳನ್ನು ಹೇಳಲಾಗುತ್ತದೆ.

ಸ್ತ್ರೀಶೂದ್ರಪತಿತಾದೀನಾಂ ಸಂಭಾಷಾಮಪಿ ವರ್ಜಯೇತ್
ಜಪೇತ್ಸಹಸ್ರಂ ಪ್ರತ್ಯೇಕಂ ಮಂತ್ರರಾಜಂ ನವಾಕ್ಷರಮ್ । ॥ 102 ॥
ಸ್ತೋತ್ರಪಾಠಂ ಪ್ರತಿದಿನಂ ನಿಶೀಥಿನ್ಯಾಂ ವಿಶೇಷತಃ

ಏಕಪಾದೇನ ದೀಪಾಗ್ರೇ ಸ್ಥಿತ್ವಾ ಯೋ ಮಂತ್ರನಾಯಕಮ್ । ॥ 103 ॥
ಸಹಸ್ರಂ ಪ್ರಜಪೇದ್ರಾತ್ರೌ ಸೋಭೀಷ್ಟಂ ಕ್ಷಿಪ್ರಮಾಪ್ನುಯಾತ್

ಸಮಾಪ್ಯ ಶೋಭನೇ ಘಸ್ರೇ ಸಂಭೋಜ್ಯ ದ್ವಿಜನಾಯಕಾನ್ । ॥ 104 ॥
ಕುಂಭೋದಕೇನ ಕರ್ತಾರಮಭಿಷಿಂಚೇನ್ಮನುಂ ಸ್ಮರನ್

ಕರ್ತಾ ತು ದಕ್ಷಿಣಾಂ ದದ್ಯಾತ್ ಪುಷ್ಕಲಾಂ ತೋಷಹೇತವೇ । ॥ 105 ॥
ಗುರೌ ತುಷ್ಟೇ ದದಾತೀಷ್ಟಂ ಕೃತವೀರ್ಯಸುತೋ ನೃಪಃ ॥ 106 ॥

ಗುರ್ವಾಜ್ಞಯಾ ಸ್ವಯಂ ಕುರ್ಯಾದ್ಯದಿ ವಾ ಕಾರಯೇದ್ ಗುರುಮ್ ।
ಕೃತ್ವಾ ರತ್ನಾದಿದಾನೇನ ದೀಪದಾನಂ ಧರಾಪತೇಃ ॥ 107 ॥

ಗುರ್ವಾಜ್ಞಾಮಂತರಾ ಕುರ್ಯಾದ್ಯೋ ದೀಪಂ ಸ್ವೇಷ್ಟಸಿದ್ಧಯೇ ।
ಪ್ರತ್ಯುತಾನುಭವತ್ಯೇಷ ಹಾನಿಮೇವ ಪದೇ ಪದೇ ॥ 108 ॥

ಯಾತ್ರೆಯನ್ನು ಪ್ರಾರಂಭಿಸುವ ಪೂರ್ವದಲ್ಲಿ ಎಂಟು ಪಲ ಪರಿಮಾಣದ ದೀಪದಾನವು ಸಕಲ ಅಭೀಷ್ಟದಾಯಕವಾಗಿರುತ್ತದೆ. ಕಾರಣ ಎಲ್ಲ ಪ್ರಕಾರದ ಪ್ರಯತ್ನಗಳಿಂದ ಯಾವುದೇ ವಿಘ್ನಗಳು ಉಂಟಾಗದಂತೆ ದೀಪದ ರಕ್ಷಣೆಯನ್ನು ಮಾಡಬೇಕು.

ದೀಪವು ಶಾಂತವಾಗುವವರೆಗೆ ಕರ್ತೃವು ಬ್ರಹ್ಮಚರ್ಯವನ್ನು ಪಾಲಿಸುತ್ತ ಭೂಮಿಯ ಮೇಲೆ ಮಲಗಬೇಕು. ಮತ್ತು ಸ್ತ್ರೀಯರು, ಶೂದ್ರರು, ಪತಿತರೊಂದಿಗೆ ಸಂಭಾಷಣೆಯನ್ನು ಕೂಡಾ ಮಾಡಬಾರದು.

ಪ್ರತ್ಯೇಕ ದೀಪದಾನದ ಸಮಯದಿಂದ ಸಮಾಪ್ತಿಯ ಪರ್ಯಂತ ಪ್ರತಿದಿನ ನವಾಕ್ಷರ ಮಂತ್ರದ ಒಂದು ಸಾವಿರ ಜಪ ಮತ್ತು ಸ್ತೋತ್ರಪಾಠವನ್ನು ವಿಶೇಷ ರೂಪದಲ್ಲಿ ರಾತ್ರಿಯ ಕಾಲದಲ್ಲಿ ಮಾಡಬೇಕು.

ಮಧ್ಯರಾತ್ರಿಯಲ್ಲಿ ಒಂದೇ ಕಾಲಿನ ಮೇಲೆ ನಿಂತುಕೊಂಡು ದೀಪದ ಎದುರು ಯಾವ ಸಾಧಕರು ಈ ಮಂತ್ರರಾಜದ ಒಂದು ಸಾವಿರ ಜಪವನ್ನು ಮಾಡುತ್ತಾರೆಯೋ ಅವರು ಶೀಘ್ರವಾಗಿ ತಮ್ಮ ಅಭೀಷ್ಟಗಳನ್ನು ಪಡೆದುಕೊಳ್ಳುತ್ತಾರೆ.

ಈ ಪ್ರಯೋಗವನ್ನು ಶುಭದಿನದಲ್ಲಿ ಸಮಾಪ್ತಗೊಳಿಸಿ ಶ್ರೇಷ್ಠರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿದ ನಂತರ ಕುಂಭಜಲದಿಂದ ಮೂಲಮಂತ್ರದ್ವಾರಾ ಕರ್ತೃವನ್ನು ಅಭಿಷೇಕ ಮಾಡಿಸಬೇಕು.





ಕರ್ತೃ ಸಾಧಕರು ಗುರುಗಳಿಗೆ ಸಂತೋಷದಾಯಕವಾಗುವಂತೆ ದಕ್ಷಿಣೆ ಕೊಟ್ಟು ಅವರನ್ನು ಸಂತೃಪ್ತಗೊಳಿಸಬೇಕು. ಗುರುವು ಪ್ರಸನ್ನವಾದ ನಂತರ ಕೃತವೀರ್ಯನ ಪುತ್ರನಾದ ಕಾರ್ತವೀರ್ಯಾರ್ಜುನನು ಸಾಧಕರ ಸಕಲ ಇಷ್ಟಾರ್ಥಗಳನ್ನು ಪೂರೈಸುತ್ತಾನೆ.

ಈ ಪ್ರಯೋಗವನ್ನು ಗುರುವಿನ ಆಜ್ಞೆಯನ್ನು ಪಡೆದುಕೊಂಡು ಸ್ವಯಂ ಮಾಡಬೇಕು. ಅಥವಾ ಗುರುವಿಗೆ ರತ್ನಾದಿಗಳನ್ನು ದಾನ ಮಾಡಿ ಅವರಿಂದ ಕಾರ್ತವೀರ್ಯಾರ್ಜುನನಿಗೆ ದೀಪದಾನವನ್ನು ಮಾಡಿಸಬೇಕು. ಗುರುವಿನ ಆಜ್ಞೆ ತೆಗೆದುಕೊಳ್ಳದೆ ಯಾವ ವ್ಯಕ್ತಿಯು ತನ್ನ ಇಷ್ಟಾರ್ಥಸಿದ್ಧಿಗಾಗಿ ಈ ಪ್ರಯೋಗದ ಅನುಷ್ಠಾನವನ್ನು ಮಾಡುತ್ತಾರೆಯೋ ಅವರ ಕಾರ್ಯಸಿದ್ಧಿಯಾಗುವ ಮಾತಂತೂ ದೂರ, ಮೇಲಿಂದ ಮೇಲೆ ಹಾನಿಯನ್ನು ಅನುಭವಿಸಬೇಕಾಗುತ್ತದೆ.

ದೀಪದಾನವಿಧಿಂ ಬ್ರೂಯಾತ್ಕೃತಘ್ನಾದಿಷು ನೋ ಗುರುಃ ।
ದುಷ್ಟೇಭ್ಯಃ ಕಥಿತೋ ಮಂತ್ರೋ ವಕ್ತುರ್ದುಃಖಾವಹೋ ॥ 109 ॥

ಉತ್ತಮಂ ಗೋಘೃತಂ ಪ್ರೋಕ್ತಂ ಮಧ್ಯಮಂ ಮಹಿಷಿಭವಮ್ ।
ತಿಲತೈಲೆ ತು ತಾದೃಕ್ಸ್ಯಾತ್ಕನೀಯೋಜಾದಿಜಂ ಘೃತಮ್ ॥ 110 ॥

ಆಸ್ಯಾರೋಗೇ ಸುಗಂಧೇನ ದರ್ಧಯಾತ್ತೈಲೇನ ದೀಪಕಮ್ ।
ಸಿದ್ಧಾರ್ಥಸಂಭವೇನಾಥ ದ್ವಿಷತಾಂ ನಾಶಹೇತವೆ ॥ 111 ॥

ಫಲೈರ್ದಶಶತೈರ್ದೀಪೆ ವಿಹಿತೆ ಚೇನ್ನ ದೃಶ್ಯತೆ ।
ಕಾರ್ಯಸಿದ್ಧಿಸ್ತದಾತ್ರಿಸ್ತು ದೀಪಃ ಕಾರ್ಯೋರ್ಯಥಾವಿಧಿಃ ॥ 112 ॥

ತದಾ ಸುದುರ್ಲಭಂ ಕಾರ್ಯ ಸಿದ್ಧ್ಯತ್ಯೇವ ನ ಸಂಶಯಃ ।
ಯಥಾಕಥಂಚಿದ್ಭಃ ಕುರ್ಯಾದ್ ದೀಪದಾನಂ ಸ್ವಮೇಶ್ಮನಿ ॥ 113 ॥

ವಿಘ್ನಾಃ ಸರ್ವೇರಿಭಿಃ ಸಾಕಂ ತಸ್ಯ ನಶ್ಯಂತಿ ದೂರತಃ ।
ಸರ್ವದಾ ಜಯಮಾಪ್ನೋತಿ ಪುತ್ರಾನ್ ಪೌತ್ರಾನ್ ಧನಂ ಯಶಃ ॥ 114 ॥

ಯಥಾಕಥಂಚಿದ್ಯೋ ದೀಪಂ ನಿತ್ಯಂ ಗೇಹೆ ಸಮಾಚರೇತ್ ।
ಕಾರ್ತವೀರ್ಯಾರ್ಜುನ ಪ್ರೀತ್ಯೈ ಸೋಭೀಷ್ಟಂ ಲಭತೆ ನರಃ ॥ 115 ॥

ಕೃತಘ್ನರಾದ ವ್ಯಕ್ತಿಗಳಿಗೆ ಈ ದೀಪದಾನ ವಿಧಾನವನ್ನು ಹೇಳಬಾರದು. ಏಕೆಂದರೆ ಈ ಮಂತ್ರವು ದುಷ್ಟರಿಗೆ ಹೇಳಿದರೆ, ಹೇಳಿದವರಿಗೆ ದುಃಖ ಪ್ರಾಪ್ತವಾಗುತ್ತದೆ. ದೀಪದಾನಕ್ಕೆ ಹಸುವಿನ ತುಪ್ಪವು ಸರ್ವಶ್ರೇಷ್ಠ ಮತ್ತು ಎಮ್ಮೆಯ ತುಪ್ಪ ಮತ್ತು ತಿಲದ ತೈಲವು ಮಧ್ಯಮವೆಂದು ಹೇಳಲಾಗಿದೆ. ಆಡಿನ ತುಪ್ಪವು

ಸಹಸ್ರಂ ಮಂತ್ರರಾಜಂ ಚ ಜಪಿತ್ವಾ ಕವಚಂ ಪಠೇತ್

ಏವಂ ದೀಪಪ್ರದಾನಸ್ಯ ಕರ್ತಾಪ್ನೋತ್ಯಖಿಲೇಪ್ಸಿತಮ್ । ॥ 93 ॥
ದೀಪ ಪ್ರಬೋಧಕಾಲೇ ತು ವರ್ಜಯೇದಶುಭಾಂ ಗಿರಮ್ ॥ 94 ॥

ತಾರ (ಓಂ), ಬಿಂದು (ಅನುಸ್ವಾರ) ಸಹಿತ ಅನಂತ (ಆ) ಆರ್ಥಾತ್ (ಆಂ) ಮಾಯಾ (ಹ್ರೀಂ) ವಾಮನೇತ್ರ ಸಹಿತ ಸ್ವಬೀಜ (ಕ್ರೀಂ) ನಂತರ ಶಾಂತಿ (ಈ) ಮತ್ತು ಚಂದ್ರ (ಅನುಸ್ವಾರ) ಸಹಿತ ಕೃರ್ಮ(ವ) ಮತ್ತು ಅಗ್ನಿ (ರ) ಅರ್ಥಾತ್ (ವ್ರೀಂ) ನಂತರ ವಹ್ನಿನಾರಿ (ಸ್ವಾಹಾ), ಅಂಕುಶ (ಕ್ರೋಂ) ಮತ್ತು ಅಂತ್ಯದಲ್ಲಿ ಧ್ರುವ (ಓಂ) ಜೋಡಿಸುವುದರಿಂದ ನವಾಕ್ಷರ ಮಂತ್ರವು ರಚನೆಯಾಗುತ್ತದೆ. "ಓಂ ಆಂ ಹ್ರೀಂ ಕ್ರೀಂ ವ್ರೀಂ ಸ್ವಾಹಾ ಕ್ರೋಂ ಓಂ"

ಈ ಮಂತ್ರದ ದತ್ತಾತ್ರಯ ಋಷಿ, ಅನುಷ್ಟುಪ್ ಛಂದ ಮತ್ತು ಅದರ ದೇವತೆ ಕಾರ್ತವೀರ್ಯಾರ್ಜುನ ಮತ್ತು ನ್ಯಾಸ ವಿಧಿ ಹಿಂದಿನಂತಿದೆ. ಈ ಮಂತ್ರದ ಒಂಬ ಸಾವಿರ ಜಪ ಮಾಡಬೇಕು.

**ವಿನಿಯೋಗ : ಅಸ್ಯ ನವಾಕ್ಷರಕಾರ್ತವೀರ್ಯಮಂತ್ರಸ್ಯ ದತ್ತಾತ್ರೇಯ ಋಷಿಃ ಅನುಷ್ಟುಪ್ ಛಂದಃ ಕಾರ್ತವೀರ್ಯಾರ್ಜುನೋ ದೇವತಾತ್ಮನೋಭೀಷ್ಟಸಿದ್ಧ್ಯರ್ಥೇ ಜಪೇ ವಿನಿಯೋಗಃ**

**ಷಡಂಗನ್ಯಾಸ : ವ್ರಾಂ ಹೃದಯಾಯ ನಮಃ, ವ್ರೀಂ ಶಿರಸೇ ಸ್ವಾಹಾ, ವ್ರೂಂ ಶಿಖಾಯೈ ವಷಟ್, ವ್ರೈಂ ಕವಚಾಯ ಹುಮ್ ವ್ರೌಂ ನೇತ್ರತ್ರಯಾಯ ವೌಷಟ್, ವ್ರಃ ಅಸ್ತ್ರಾಯ ಫಟ್**

ಈ ಪ್ರಕಾರ ದೀಪದಾನ ಮಾಡುವ ವ್ಯಕ್ತಿಯು ತನ್ನ ಸಕಲ ಇಷ್ಟಾರ್ಥಗಳನ್ನು ಪೂರ್ಣಗೊಳಿಸಿಕೊಳ್ಳುತ್ತಾನೆ. ದೀಪವನ್ನು ಹೊತ್ತಿಸುವ ಸಮಯದಲ್ಲಿ ಅಮಂಗಲಕಾರಿ ಶಬ್ದಗಳನ್ನು ಉಚ್ಚರಿಸುವುದು ನಿಷಿದ್ಧವಾಗಿದೆ.

ವಿಪ್ರಸ್ಯ ದರ್ಶನಂ ತತ್ರ ಶುಭದಂ ಪರಿಕೀರ್ತಿತಮ್ ।
ಶೂದ್ರಾಣಾಂ ಮಧ್ಯಮಂ ಪ್ರೋಕ್ತಂ ಮ್ಲೇಂಛಸ್ಯಬಧಬಂಧನಮ್ ॥ 95 ॥
ಆಖ್ವೋತ್ವೋರ್ದರ್ಶನಂ ದುಷ್ಟಂ ಗವಾಶ್ವಸ್ಯ ಸುಖಾವಹಮ್ ।
ದೀಪಜ್ವಾಲಾಸಮಾಸಿದ್ಧ್ಯೈ ವಕ್ರಾ ನಾಶವಿಧಾಯಿನಿ ॥ 96 ॥
ಸಶಬ್ದಾ ಭಯದಾ ಕರ್ತುರುಜ್ಜ್ವಲಾ ಸುಖದಾ ಮತಾ ।
ಕೃಷ್ಣಾ ತು ಶತ್ರುಭಯದಾ ವಮಂತಿ ಪಶುನಾಶಿನಿ ॥ 97 ॥





ಕೃತೆ ದೀಪೇ ಯದಾ ಪಾತ್ರಂ ಭಗ್ನಂ ದೃಶ್ಯೇತ ದೇವತಃ ।
ಪಕ್ಷಾದರ್ವಾಕ ತದಾಗಚ್ಛೇದ್ಯಜಮಾನೋ ಯಮಾಲಯಮ್ ॥ 98 ॥
ವೃತ್ಯಂತರಂ ಯದಾ ಕುರ್ಯಾತ್ಕಾರ್ಯ ಸಿದ್ಧೌರ್ವಿಲಂಬತಃ ।
ನೇತ್ರಹೀನೋ ಭವೇತ್ಕರ್ತಾ ತಸ್ಮಿಂದೀಪಾಂತರೇ ಕೃತೆ ॥ 99 ॥
ಅಶುಚಿಸ್ಪರ್ಶನೇ ತ್ವಾಧಿರ್ದೀಪನಾಶೇ ತು ಚೌರಭೀಃ ।
ಶ್ವ ಮಾರ್ಜಾರಾಖುಸಂಸ್ಪರ್ಶೆ ಭವೇದ್ ಭೂಪತಿತೋ ಭಯಮ್ ॥ 100 ॥

ಈಗ ದೀಪದಾನ ಸಮಯದ ಶುಭಾಶುಭ ಶಕುನಗಳನ್ನು ಹೇಳಲಾಗುತ್ತಿದೆ.

ದೀಪವನ್ನು ಹೊತ್ತಿಸುವಾಗ ಬ್ರಾಹ್ಮಣನ ದರ್ಶನವು ಶುಭವಾಗಿರುತ್ತದೆ. ಶೂದ್ರರ ದರ್ಶನ ಮಧ್ಯಮ ಫಲದಾಯಕ ಮತ್ತು ಮ್ಲೇಚ್ಛರ ದರ್ಶನವು ಬಂಧನಕಾರಕವೆಂದು ತಿಳಿಯಲಾಗುತ್ತದೆ. ಇಲಿ ಮತ್ತು ಬೆಕ್ಕುಗಳ ದರ್ಶನವು ಅಶುಭ ಮತ್ತು ಗೋವು ಮತ್ತು ಅಶ್ವಗಳ ದರ್ಶನವು ಶುಭಕಾರಕವಾಗಿದೆ.

ದೀಪದ ಜ್ವಾಲೆಯು ನೇರವಾಗಿದ್ದರೆ ಸಿದ್ಧಿದಾಯಕ ಮತ್ತು ವಕ್ರವಾಗಿದ್ದರೆ ವಿನಾಶಕಾರಕವೆಂದು ತಿಳಿಯಲಾಗುತ್ತದೆ. ದೀಪದ ಜ್ವಾಲೆಯಿಂದ ಬರುವ ಚಟ ಚಟ ಶಬ್ದವು ಭಯಕಾರಕವಾಗಿರುತ್ತದೆ. ಜ್ಯೋತಿ ಪುಂಜವು ಉಜ್ವಲವಾಗಿದ್ದರೆ ಕರ್ತೃವಿಗೆ ಸುಖ ಪ್ರಾಪ್ತವಾಗುತ್ತದೆ. ಅದು ಕಪ್ಪಾಗಿದ್ದರೆ ಶತ್ರುಭಯದಾಯಕ ಮತ್ತು ವಮನ ಮಾಡಿದಂತಿದ್ದರೆ ಪಶುಹಾನಿಯಾಗುತ್ತದೆ. ದೀಪದಾನದ ನಂತರ ಸಂಯೋಗವಶಾತ್ ಪಾತ್ರೆಯು ಭಗ್ನವಾದರೆ ಯಜಮಾನನು ಹದಿನೈದು ದಿನದೊಳಗಾಗಿ ಮರಣ ಹೊಂದುತ್ತಾನೆ.

ದೀಪದಾನದ ಶುಭಾಶುಭ ಕರ್ತವ್ಯಗಳನ್ನು ಹೇಳಲಾಗುತ್ತದೆ. ದೀಪದಲ್ಲಿ ಎರಡನೆಯ ಬತ್ತಿಯನ್ನು ಹಾಕುವುದರಿಂದ ಕಾರ್ಯ ಸಿದ್ಧಿಯಲ್ಲಿ ವಿಳಂಬವಾಗುತ್ತದೆ. ಆ ದೀಪದಿಂದ ಬೇರೆ ದೀಪವನ್ನು ಹೊತ್ತಿಸುವವನು ಕುರುಡನಾಗುತ್ತಾನೆ. ಅಶುದ್ಧ, ಅಶುಚಿ ಅವಸ್ಥೆಯಲ್ಲಿ ದೀಪವನ್ನು ಸ್ಪರ್ಶ ಮಾಡುವುದರಿಂದ ಆದಿ ವ್ಯಾಧಿಗಳು ಉತ್ಪನ್ನವಾಗುತ್ತವೆ. ದೀಪವು ನಾಶವಾದರೆ ಚೋರಭಯ, ನಾಯಿ, ಬೆಕ್ಕು, ಇಲಿ ಮುಂತಾದ ಪ್ರಾಣಿಗಳ ಸ್ಪರ್ಶದಿಂದ ರಾಜಭಯವು ಉಂಟಾಗುತ್ತದೆ.

ಯಾತ್ರಾರಂಭೆ ವಸುಪಲ್ಯೈಃ ಕೃತೊ ದೀಪೋಖಿಲೇಷ್ಟದಃ ।
ತಸ್ಮಾದ್ದೀಪಃ ಪ್ರಯತ್ನೇನ ರಕ್ಷಣೀಯೋಂತರಾಯತಃ ॥ 101 ॥
ಆ ಸಮಾಪ್ತೇಃ ಪ್ರಕುರ್ವೀತ ಬ್ರಹ್ಮಚರ್ಯ ಚ ಭೂಶಯಮ್ ।

ನಭೋಗ್ನಿವಾಮಕರ್ಣೇಂದುಸ್ಥಿತೌ ಪಾಶದ್ವಯಂ ತತಃ ।
ದೀಪಂ ಗೃಹಾಣ ತ್ವಮುಕಂ ರಕ್ಷ ರಕ್ಷ ಪದಂ ಪುನಃ
ದುಷ್ಟನ್ನಾಶಯ ಯುಗ್ಮಂ ಸ್ಯಾತ್ತಥಾ ಪಾತಯ ಪಾತಯ । ॥ 85 ॥
ಶತ್ರೂಂಜಹಿ ದ್ವಯಂ ಮಾಯಾ ತಾರಃ ಸ್ವಂ ಬೀಜಮಾತ್ಮಭೂಃ
ವಹ್ನಿಜಾಯಾ ಅನೇನಾಥ ದೀಪವರ್ಣೇಯ ಪಶ್ಚಿಮಾ । ॥ 86 ॥
ಭಿಮುಖೇನಾಮುಕಂ ರಕ್ಷ ಅಮುಕಾಂತೆ ವರಪ್ರದಾ
ನಾಯಾಕಾಶ ದ್ವಯಂ ವಾಮ ನೇತ್ರಚಂದ್ರಯುತಂ ಶಿವಾ । ॥ 87 ॥
ವೇದಾದಿ ಕಾಮಚಾಮುಂಡಾ ಸ್ವಾಹಾ ತುಃಪುಃ ಸಬಿಂದುಕೌ
ಪ್ರಣವೋಗ್ನಿ ಪ್ರಿಯಾಮಂತ್ರೊ ನೇತ್ರಬಾಣಧರಾಕ್ಷರಃ । ॥ 88 ॥
ದತ್ತಾತ್ರೇಯೋ ಮುನಿರ್ಮಾಲಾಮಂತ್ರಸ್ಯ ಪರಿಕೀರ್ತಿತಃ ॥ 89 ॥
ಛಂದೋಮಿತಂ ಕಾರ್ತವೀರ್ಯಾರ್ಜುನೋ ದೇವಃ ಶುಭಾವಹಃ ।
ಚಾಮುಂಡಾಯ ಷಡಂಗಾನಿ ಚರೇತ್ಷಡ್‌ದೀರ್ಘಯುಕ್ತ್ಯಾ ॥ 90 ॥

ಈಗ 152 ಅಕ್ಷರಗಳ ದೀಪಸಂಕಲ್ಪ ಮಂತ್ರ (ದ್ವಿ 2 ಇಷು 5 ಭೂಮಿ 1 ಅಂಕಾನಾಂ ವಾಮತೊ ಗತಿಃ)ವನ್ನು ಹೇಳಲಾಗುತ್ತದೆ.

ಪ್ರಣವ (ಓಂ), ಪಾಶ (ಆಂ), ಮಾಯಾ (ಹ್ರೀಂ), ಶಿಖಾ (ವಷಟ್) ಇದರ ನಂತರ 'ಕಾರ್ತ', 'ವೀರ್ಯಾರ್ಜುನ' ನಂತರ, 'ಮಾಹಿಷ್ಮತಿನಾಥಾಯ ಸಹಸ್ರಬಾಹವೆ'. ಈ ವರ್ಣಗಳ ನಂತರ 'ಸಹಸ್ರ' ಪದ, ಹೇಳಬೇಕು. ನಂತರ "ಕೃತುದೀಕ್ಷಿತಹಸ್ತಾಯ ದತ್ತಾತ್ರೆಯ ಪ್ರಿಯಾಯ' ಆತ್ರೇಯಾನುಸುಯಾಗರ್ಭರತ್ನಾಯ' ವಾಮಕರ್ಣ (ಉ), ಇಂದು (ಅನುಸ್ವಾರ)ಸಹಿತ ನಭ (ಹ) ಮತ್ತು ಅಗ್ನಿ (ರ್) ಅರ್ಥಾತ್ 9ಹೂ) ಪಾಶ (ಆಂ) ನಂತರ "ಇಮಂ ದೀಪಂ ಗೃಹಾಣ ಅಮುಕಂ ರಕ್ಷ ರಕ್ಷ ದುಷ್ಟಾನ್ನಾಶಯ ನಾಶಯ' ನಂತರ ಎರಡು ಬಾರಿ ಪಾತಯ, ಮತ್ತು ಎರಡು ಬಾರಿ ಘತಯ (ಪಾತಯ ಪಾತಯ ಘಾತಯ ಘಾತಯ), 'ಶತ್ರೂನ್ ಜಹಿ ಜಹಿ' ಮಾಯಾ (ಹ್ರೀಂ), ತಾರ (ಓಂ), ಸ್ವಬೀಜ (ಫ್ರೋಂ), ಆತ್ಮಭೂ (ಕ್ಲೀಂ) ಮತ್ತು ವಹ್ನಿಜಾಯಾ (ಸ್ವಾಹಾ), ನಂತರ 'ಅನೇನ ದೀಪವರ್ಯೇಣ ಪಶ್ಚಿಮಾಭಿಮುಖೇನ ಅಮುಕಂ ರಕ್ಷ ಅಮುಕಂವರ ಪ್ರದಾನಾಯ' ನಂತರ ವಾಮನೇತ್ರ (ಈ) ಚಂದ್ರ (ಅನುಸ್ವಾರ) ಸಹಿತ ಎರಡು ಬಾರಿ ಆಕಾಶ (ಹ) ಅರ್ಥಾತ್ (ಹಿಂ ಹಿಂ) ಶಿವಾ (ಹ್ರೀಂ) ವೇದಾದಿ (ಓಂ) ಕಾಮ (ಕ್ಲೀಂ) ಚಾಮುಂಡಾ (ವ್ರೀಂ), 'ಸ್ವಾಹಾ' ನಂತರ ಸಾನುಸ್ವಾರ ತವರ್ಗ ಮತ್ತು ಪವರ್ಗ (ತಂ ಥಂ ದಂ ಧಂ ನಂ ಪಂ ಫಂ ಬಂ ಭಂ ಮಂ) ಪುನಃ ಪ್ರಣವ (ಓಂ)





ಮತ್ತು ಅಗ್ನಿಪ್ರಿಯಾ ಸ್ವಾಹಾ ಜೋಡಿಸುವುದರಿಂದ 152 ಅಕ್ಷರಗಳ ದೀಪದಾನ ಮಂತ್ರವು ರಚನೆಯಾಗುತ್ತದೆ. ಓಂ ಆಂ ಹ್ರೀಂ ವಷಟ್ ಕಾರ್ತವೀರ್ಯಾರ್ಜುನಾಯ ಮಾಹಿಷ್ಮತಿನಾಥಾಯ ಸಹಸ್ರಬಾಹವೆ ಸಹಸ್ರಕೃತದೀಕ್ಷಿತ ಹಸ್ತಾಯ ದತ್ತಾತ್ರೇಯ ಪ್ರಿಯಾಯ ಆತ್ರೇಯಾನುಸುಯಾ ಗರ್ಭರತ್ನಾಯ ಹೂಂ ಆಂ ಇಮಂ ದೀಪಂ ಗೃಹಾಣ ಅಮುಕಂ ರಕ್ಷ ರಕ್ಷ ದುಷ್ಟಾನ್ನಾಶಯ ನಾಶಯ ಪಾತಯ ಪಾತಯ ಘಾತಯ ಘಾತಯ ಶತ್ರೂನ್ ಜಹಿ ಜಹಿ ಹ್ರೀಂ ಓಂ ಫ್ರೋಂ ಕ್ಲೀಂ ಸ್ವಾಹಾ ಅನೇನ ದೀಪವರ್ಣೇಯ ಪಶ್ಚಿಮಾಭಿಮುಖೇನ ಅಮುಕಂ ರಕ್ಷ ಅಮುಕಂ ವರ ಪ್ರದಾನಾಯ ಹಿಂ ಹಿಂ ಹ್ರೀಂ ಓಂ ಕ್ಲೀಂ ವ್ರೀಂ ಸ್ವಾಹಾ ತಂ ಥಂ ದಂ ಧಂ ನಂ ಪಂ ಫಂ ಬಂ ಭಂ ಮಂ ಓಂ ಸ್ವಾಹಾ"

ಈ ಮೂಲಾಮಂತ್ರದ ದತ್ತಾತ್ರೇಯ ಋಷಿ, ಅಮಿತಛಂದ ಮತ್ತು ಕಾರ್ತವೀರ್ಯಾರ್ಜುನ ದೇವತೆ ಇರುತ್ತಾರೆ. ಷಡ್‌ದೀರ್ಘಸಹಿತ ಚಾಮುಂಡಾ ಬೀಜದಿಂದ ಷಡಂಗನ್ಯಾಸ ಮಾಡಬೇಕು.

ವಿನಿಯೋಗ : ಅಸ್ಯ ಶ್ರೀ ಕಾರ್ತವೀರ್ಯಮಾಲಾ ಮಂತ್ರಸ್ಯ ದತ್ತಾತ್ರೇಯ ಋಷಿ ರಮಿತಛಂದಃ ಕಾರ್ತವೀರ್ಯಾರ್ಜುನೋ ದೇವತಾತ್ಮನೋಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಷಡಂಗನ್ಯಾಸ ; ಓಂ ವ್ರಾಂ ಹೃದಯಾಯ ನಮಃ, ವ್ರೀಂ ಶಿರಸೆ ಸ್ವಾಹಾ । ವ್ರೂಂ ಶಿಖಾಯೈ ವಷಟ್, ವ್ರೈಂ ಕವಚಾಯ ಹುಮ್, ವ್ರೌಂ ನೇತ್ರತ್ರಯಾಯ ವೌಷಟ್, ವ್ರಃ ಅಸ್ತ್ರಾಯ ಫಟ್

ಧ್ಯಾತ್ವಾ ದೇವಂ ತತೋ ಮಂತ್ರಂ ಪಠಿತ್ವಾಂತೆ ಕ್ಷಿಪೇಜ್ಜಲಮ್ ।
ತತೋ ನವಾಕ್ಷರಂ ಮಂತ್ರಂ ಸಹಸ್ರಂ ತತ್ಪುರೊ ಜಪೇತ್ ॥ 91 ॥

ದೀಪ ಸಂಕಲ್ಪದ ಪ್ರಾರಂಭದಲ್ಲಿ ಕಾರ್ತವೀರ್ಯನ ಧ್ಯಾನ ಮಾಡಬೇಕು. ನಂತರ ಕೈಗಳಲ್ಲಿ ನೀರು ತೆಗೆದುಕೊಂಡು ಸಂಕಲ್ಪ ಮಂತ್ರವನ್ನು ಉಚ್ಚಾರಣೆ ಮಾಡುತ್ತ ನೀರನ್ನು ನೆಲದ ಮೇಲೆ ಹಾಕಬೇಕು. ಇದರ ನಂತರ ನವಾಕ್ಷರ ಮಂತ್ರದ ಒಂದು ಸಾವಿರ ಜಪ ಮಾಡಬೇಕು.

ನವಾಕ್ಷರ ಕಾರ್ತವೀರ್ಯಮಂತ್ರ

ತಾರೋನಂತೊ ಬಿಂದುಯುಕ್ತೊ ಮಾಯಾಸ್ವಂ ವಾಮನೇತ್ರಯುಕ್ ।
ಕೂರ್ಮಾಗ್ನಿ ಶಾಂತಿಚಂದ್ರಾಢ್ಯೊ ವಹ್ನಿನಾರ್ಯಕುಶಂ ಧ್ರುವಃ ॥ 92 ॥
ಋಷಿಃ ಪೂರ್ವ ಸ್ಮೃತೊನುಷ್ಟುಪ್ಛಂದೊ ಹ್ಯಸ್ಯತ್ತು ಪೂರ್ವವತ್ ।

ಯಾವನ್ನಾದರೂ ಜೊತೆಗೂಡಿಸಲು ಗೋದಿಯ ಹಿಟ್ಟನ್ನು ದೀಪ ಪಾತ್ರ ತಯಾರಿಸಲು ಉಪಯೋಗಿಸಬೇಕು.

ದೀಪದ ಮೂಲ ಮತ್ತು ಮೇಲ್ಭಾಗಗಳು ಆಕಾರದಲ್ಲಿ ಒಂದೇ ಸಮಾನವಾಗಿ ಇರಬೇಕೆನ್ನುವುದನ್ನು ನೆನಪಿನಟ್ಟುಕೊಳ್ಳಬೇಕು. ಪಾತ್ರೆಯ ಅಳತೆಯು 12,10,8,6,5 ಅಥವಾ 4 ಅಂಗುಲದ್ದಾಗಿರಬೇಕು.

ನೂರು ಪಲ ತೂಕದ ಪಾತ್ರೆಯಲ್ಲಿ ಒಂದು ಸಾವಿರ ಪಲ ತುಪ್ಪ, 500 ಪಲ ತೂಕದ ಪಾತ್ರದಲ್ಲಿ ಹತ್ತು ಸಾವಿರ ಪಲ ತುಪ್ಪ, 60 ಪಲ ಭಾರದಿಂದ ತಯಾರಿಸಿದ ಪಾತ್ರೆಯಲ್ಲಿ 75 ಪಲ ತುಪ್ಪ, 125 ಪಲ ಭಾರದ ಪಾತ್ರೆಯಲ್ಲಿ ಮೂರು ಸಾವಿರ ಪಲ ತುಪ್ಪ, 115 ಪಲ ಭಾರದ ಪಾತ್ರೆಯಲ್ಲಿ ಎರಡು ಸಾವಿರ ಪಲ ತುಪ್ಪ, 30 ಪಲ ಭಾರದ ಪಾತ್ರೆಯಲ್ಲಿ 5 ಪಲ ತುಪ್ಪ ಮತ್ತು 52 ಪಲ ಭಾರದಿಂದ ತಯಾರಾದ ಪಾತ್ರೆಯಲ್ಲಿ 100 ಪಲ ತುಪ್ಪವನ್ನು ಹಾಕಬೇಕು. ಈ ಪ್ರಕಾರ ಎಷ್ಟು ಪ್ರಮಾಣದಲ್ಲಿ ತುಪ್ಪವನ್ನು ಉರಿಸಬೇಕಾಗಿದೆಯೊ ಅದರ ಅನುಸಾರ ಪಾತ್ರೆಯ ತೂಕವನ್ನು ವಿಚಾರಿಸಬೇಕು.

**ನಿತ್ಯೇ ದೀಪೇ ವಹ್ನಿಪಲಂ ಪಾತ್ರಮಾಜ್ಯಂ ಪಲಂ ಸ್ಮೃತಮ್ ।**
**ಏವಂ ಪಾತ್ರಂ ಪ್ರತಿಷ್ಠಾಪ್ಯ ವರ್ತಿಃ ಸುತ್ರೋತ್ಥಿತಾಃ ಕ್ಷಿಪೇತ್ ॥ 74 ॥**

**ಏಕಾ ತ್ರಿಸ್ರೋಥವಾ ಪಂಚ ಸಪ್ತಾದ್ಯಾ ವಿಷಮಾ ಅಪಿ ।**
**ತಿಥಿಮಾನಾಢ್ಯ ಸಹಸ್ರಂ ತಂತುಸಂಖ್ಯಾವಿನಿರ್ಮಿತಾಃ ॥ 75 ॥**

**ಗೋಘೃತಂ ಪ್ರಕ್ಷಿಪೇತ್ತತ್ರಂ ಶುದ್ಧವಸ್ತ್ರವಿಶೋಧಿತಮ್ ।**
**ಸಹಸ್ರಪಲಸಂಖ್ಯಾದಿ ದಶಾಂತಂ ಕಾರ್ಯಗೌರವಾತ್ ॥ 76 ॥**

**ಸುವರ್ಣಾದಿಕೃತಾಂ ರಮ್ಯಾಂ ಶಲಾಕಾಂ ಷೋಡಶಾಂಗುಲಾಮ್ ।**
**ತದರ್ಧಾ ವಾ ತದರ್ಧಾ ವಾ ಸೂಕ್ಷ್ಮಾಗ್ರಾಂ ಸ್ಥೂಲಮೂಲಕಾಮ್ ॥77॥**

**ವಿಮುಚ್ಛೇದ ದಕ್ಷಿಣೇ ಭಾಗೇ ಪಾತ್ರಮಧ್ಯೇ ಕೃತಾಗ್ರಕಾಮ್ ।**
**ಪಾತ್ರಾದ್ ದಕ್ಷಿಣದಿಗ್ದೇಶೇ ಮುಕ್ತಾಂಗುಲಚತುಷ್ಟಯಮ್ ॥ 78 ॥**

**ಅಧೋಗ್ರಾಂ ದಕ್ಷಿಣಾಧಾರಂ ನಿಖನೇಚ್ಛುರಿಕಾಂ ಶುಭಾಮ್ ।**
**ದೀಪಂ ಪ್ರಜ್ವಾಲಯೇತ್ತತ್ರ ಗಣೇಶಸಮ್ಮೃತಿಪೂರ್ವಕಮ್ ॥ 79 ॥**

**ದೀಪಾತ್ ಪೂರ್ವೇ ತು ದಿಗ್ಭಾಗೇ ಸರ್ವತೋಭದ್ರಮಂಡಲೇ ।**
**ತಂಡುಲಾಷ್ಟದಲೇ ವಾಪಿ ವಿಧಿವತ್ಥಾಪಯೇದ್ಘಟಮ್ ॥ 80 ॥**





**ತತ್ರಾವಾಹ್ಯ ನೃಪಾಧೀಶಂ ಪೂರ್ವವತ್ ಪೂಜಯೇತ್ ಸುಧೀಃ ।**
**ಜಲಾಕ್ಷತಾಃ ಸಮಾದಾಯ ದೀಪಂ ಸಂಕಲ್ಪಯೇತ್ತತಃ ॥ 81 ॥**

ನಿತ್ಯದೀಪದಲ್ಲಿ ಮೂರು ಪಲ ಭಾರದ ಪಾತ್ರ ಮತ್ತು 1 ಪಲ ತುಪ್ಪದ ಅಳತೆ ಹೇಳಲಾಗಿದೆ. ಈ ಪ್ರಕಾರ ದೀಪಪಾತ್ರವನ್ನು ಸ್ಥಾಪಿಸಿ ಅರಳೆಯಿಂದ ಮಾಡಲಾದ ಬತ್ತಿಗಳನ್ನು ಹಾಕಬೇಕು. 1,3,5,7,15 ಅಥವಾ ಒಂದು ಸಾವಿರ ನೂಲಿನಿಂದ ತಯಾರಿಸಿದ ಬತ್ತಿಗಳನ್ನು ಉಪಯೋಗಿಸಬೇಕು. ಸಾಮಾನ್ಯವಾಗಿ ವಿಷಮ ಸಂಖ್ಯೆಗಳ ನೂಲಿನಿಂದ ತಯಾರಿಸಿದ ಬತ್ತಿಗಳನ್ನು ಉಪಯೋಗಿಸಬೇಕು.

ದೀಪಪಾತ್ರೆಯಲ್ಲಿ ಶುದ್ಧವಾದ ಅರಿವೆಯಿಂದ ಸೋಸಲಾದ ತುಪ್ಪವನ್ನು ಹಾಕಬೇಕು. ಕಾರ್ಯದ ಭಾರಕ್ಕನುಸಾರವಾಗಿ 10 ರಿಂದ 100 ಪಲದ ಪರಿಮಾಣ ಪರ್ಯಂತ ತುಪ್ಪವನ್ನು ಉಪಯೋಗಿಸಬೇಕು.

ಬಂಗಾರ ಮುಂತಾದವುಗಳಿಂದ ನಿರ್ಮಿತ ಪಾತ್ರೆಗಳ ಮುಂಭಾಗದಲ್ಲಿ ತೆಳುವಾದ ಮತ್ತು ಹಿಂಭಾಗದಲ್ಲಿ ದಪ್ಪವಾದ 16,8 ಅಥವಾ 4 ಅಂಗುಲಗಳ ಒಂದು ಸುಂದರವಾದ ಶಲಾಕಾವನ್ನು ತಯಾರಿಸಿ ದೀಪ ಪಾತ್ರದ ಒಳಗೆ ಪಲ ಭಾಗದಿಂದ ಮುಂಭಾಗದವರೆಗೆ ಹಾಕಬೇಕು. ನಂತರ ದೀಪಪಾತ್ರದ ದಕ್ಷಿಣ ದಿಕ್ಕಿನಲ್ಲಿ ನಾಲ್ಕು ಅಂಗುಲ ಸ್ಥಾನವನ್ನು ಬಿಟ್ಟು ಭೂಮಿಯಲ್ಲಿ ಒಂದು ಚೂರಿ ಅಥವಾ ಚಾಕುವನ್ನು ತಲೆ ಕೆಳಗಾಗಿ ಹೂತಿಡಬೇಕು. ನಂತರ ಶ್ರೀಗಣೇಶನನ್ನು ಸ್ಮರಣೆ ಮಾಡುತ್ತ ದೀಪವನ್ನು ಹೊತ್ತಿಸಬೇಕು.

ದೀಪದ ಪೂರ್ವ ದಿಕ್ಕಿನಲ್ಲಿ ಸರ್ವತೋಭದ್ರಮಂಡಲ ಅಥವಾ ಅಕ್ಕಿಗಳಿಂದ ನಿರ್ಮಿಸಲ್ಪಟ್ಟ ಅಷ್ಟದಳಗಳ ಮೇಲೆ ಮಣ್ಣಿನ ಕುಂಭವೊಂದನ್ನು ವಿಧಿಪೂರ್ವಕವಾಗಿ ಸ್ಥಾಪಿಸಬೇಕು. ಆ ಕುಂಭದ ಮೇಲೆ ಕಾರ್ತವೀರ್ಯನನ್ನು ಆವಾಹನೆ ಮಾಡಿ ಸಾಧಕನು ಈ ಹಿಂದೆ ವಿವರಿಸಿದ ವಿಧಾನದಂತೆ ಪೂಜೆ ಮಾಡಬೇಕು. ನಂತರ ಕೈಯಲ್ಲಿ ಅಕ್ಷತೆ ಮತ್ತು ನೀರು ತೆಗೆದುಕೊಂಡು ದೀಪದ ಸಂಕಲ್ಪ ಮಾಡಬೇಕು.

**ದೀಪಸಂಕಲ್ಪಮಂತ್ರೋಥ ಕಥ್ಯತೇ ದ್ವೀಷು ಭೂಮಿತಃ ।**
**ಪ್ರಣವಃ ಪಾಶಮಾಯೇ ಚ ಶಿಖಾಕಾರ್ತಾಕ್ಷರಾಣಿ ಚ ॥ 82 ॥**

**ವೀರ್ಯಾರ್ಜುನಾಯ ಮಾಹಿಷ್ಮತೀನಾಥಾಯ ಸಹಸ್ರಚ ।**
**ಬಾಹವೇ ಇತಿ ವರ್ಣಾಂತೇ ಸಹಸ್ರಪದಮುಚ್ಚರೇತ್ ॥ 83 ॥**

**ಕೃತುದೀಕ್ಷಿತಹಸ್ತಾಯ ದತ್ತಾತ್ರೇಯಪ್ರಿಯಾಯ ಚ ।**
**ಆತ್ರೇಯಾಯಾನುಸೂಯಾಂತೇ ಗರ್ಭರತ್ನಾಯ ತತ್ಪರಮ್ ॥ 84 ॥**

ಅಂತಃ ಸ್ಮರಂ ಸಮಾಲಿಖ್ಯಾ ಷಟ್‌ಕೋಣೇಷು ಸಮಾಲಿಖೇತ್ ।
ಮಂತ್ರರಾಜಸ್ಯ ಷಡ್ವರ್ಣಾನ್ಕಾಮಬೀಜವಿವರ್ಜಿತಾನ್ ॥ 66 ॥

ಕಾರ್ತಿಕ ಶುಕ್ಲ ಸಪ್ತಮಿಯ ಮಧ್ಯರಾತ್ರಿಯ ಕಾಲವು ಈ ಕಾರ್ಯದ ಪ್ರಾರಂಭಕ್ಕೆ ಶುಭವಾಗಿದೆ. ಅಂದು ರವಿವಾರ ಮತ್ತು ಶ್ರವಣಾ ನಕ್ಷತ್ರವಿದ್ದರೆ ದುರ್ಲಭಯೋಗವಾಗುತ್ತದೆ. ಅತ್ಯಾವಶ್ಯಕ ಕಾರ್ಯಗಳಿಗಾಗಿ ಮಾಸಾದಿಗಳ ವಿಚಾರವನ್ನು ಮಾಡಬೇಕಾದ ಅವಶ್ಯಕತೆಯಿರುವುದಿಲ್ಲ.

ದೀಪ ಪೂಜನ ಯಂತ್ರ

ನಾ
ಕ್ರೋಂ ಶ್ರೀಂ ಹುಂ ಫಟ್
ರ್ಜು
ಯ
ರ್ಯಾ
ಕ್ರೋಂ ಶ್ರೀಂ ಹುಂ ಫಟ್
ಕ್ಲೀಂ
ಕ್ರೋಂ ಶ್ರೀಂ ಹುಂ ಫಟ್
ನ
ವೀ
ಕ್ರೋಂ ಶ್ರೀಂ ಹುಂ ಫಟ್
ರ್ತ
ಮಃ
ಕಾ

ಸಾಧಕರು ದೀಪದಾನದ ಪ್ರಥಮ ದಿನ ಉಪವಾಸ ಮಾಡಿ ಬ್ರಹ್ಮಚರ್ಯವನ್ನು ಪಾಲಿಸಿ ನೆಲದ ಮೇಲೆ ಮಲಗಬೇಕು. ನಂತರ ಎರಡನೆಯ ದಿನ ಪ್ರಾತಃ ಕಾಲದಲ್ಲಿ ಸ್ನಾನಾದಿ ನಿತ್ಯಕರ್ಮಗಳಿಂದ ನಿವೃತ್ತರಾಗಿ ಗೋಮಯ ಮತ್ತು ಶುದ್ಧ ನೀರಿನಿಂದ ಭೂಮಿಯನ್ನು ಶುದ್ಧ ಮಾಡಬೇಕು. ನಂತರ ಪ್ರಾಣಾಯಾಮ ಮಾಡಿ ದೀಪದಾನದ ಸಂಕಲ್ಪ ಮಾಡಿ ಪೂರ್ವೋಕ್ತ ವಿಧಾನದಿಂದ ನ್ಯಾಸ ಮಾಡಬೇಕು.

ಶುದ್ಧಗೊಳಿಸಿದ ಭೂಮಿಯ ಮೇಲೆ ಕೆಂಪು ಚಂದನ ಮಿಶ್ರಿತ ಅಕ್ಕಿ ಕಾಳುಗಳಿಂದ ಷಟ್ಕೋಣಗಳನ್ನು ರಚನೆ ಮಾಡಬೇಕು. ಪುನಃ ಅದರ ಒಳಗೆ





ಕಾಮಬೀಜ (ಕ್ಲೀಂ) ಬರೆದು ಷಟ್ಕೋಣಗಳಲ್ಲಿ ಮಂತ್ರರಾಜನ ಕಾಮಬೀಜವನ್ನು ಬಿಟ್ಟು ಅನ್ಯಬೀಜ (ಓಂ, ಫ್ರೋಂ, ವ್ರೀಂ, ಭ್ರೂಂ, ಆಂ, ಹ್ರೀಂ)ಗಳನ್ನು ಬರೆಯಬೇಕು.

ಸೃಣಿಂ ಪದ್ಮಂ ವರ್ಮಚಾಸ್ತ್ರಂ ಪೂರ್ವಾದ್ಯಾಶಾಸುಸಂಲಿಖೇತ್ ।
ನಾರ್ಣೈರ್ವೇಷ್ಟಯೇತ್ತಚ್ಚ ತ್ರಿಕೋಣಂ ತದ್‌ಬಹಿಃ ಪುನಃ ॥ 67 ॥
ಏವಂ ವಿಲಿಖಿತೆ ಯಂತ್ರೆ ನಿದಧ್ಯಾದ್ ದೀಪಭಜನಮ್ ।
ಸ್ವರ್ಣಜಂ ರಜತೋತ್ಥಂ ವಾ ತಾಮ್ರಜಂ ತದ್‌ಭಾವತಃ ॥ 68 ॥

ಸೃಣಿ (ಕ್ರೋಂ) ಪದ್ಮ (ಶ್ರೀಂ) ವರ್ಮ (ಹುಂ) ಮತ್ತು ಅಸ್ತ್ರ (ಫಟ್) ಈ ನಾಲ್ಕು ಬೀಜಗಳನ್ನು ಪೂರ್ವಾದಿ ನಾಲ್ಕು ದಿಶೆಗಳಲ್ಲಿ ಬರೆಯಬೇಕು. ನಂತರ ಒಂಭತ್ತು ವರ್ಣಗಳಿಂದ (ಕಾರ್ತವೀರ್ಯಾರ್ಜುನಾಯ ನಮಃ) ಆ ಷಟ್ಕೋಣಗಳನ್ನು ಪರಿವೇಷ್ಟಿತಗೊಳಿಸಬೇಕು. ನಂತರ ಅದರ ಹೊರಗೆ ಒಂದು ತ್ರಿಕೋಣವನ್ನು ರಚನೆ ಮಾಡಬೇಕು.

ಈ ಪ್ರಕಾರ ಲಿಖಿತ ಯಂತ್ರದ ಮೇಲೆ ದೀಪ ಪಾತ್ರವನ್ನು ಸ್ಥಾಪನೆ ಮಾಡಬೇಕು.

ಕಾಂಸ್ಯಪಾತ್ರಂ ಮೃಣ್ಮಯಂ ಚ ಕನಿಷ್ಠಂ ಲೋಹಜಂ ಮೃತೌ ।
ಶಾಂತಯೆ ಮುದ್‌ಗಚೂರ್ಣೋತ್ಥಂ ಸಂಧೌ ಗೋಧೂಮಚೂರ್ಣಜಮ್ ॥69॥
ಬಿಲ್ವೇಷುದಧ್ಯಂ ಸಮಾನಂ ತು ಪಾತ್ರಂ ಕುರ್ಯಾತ್ತ್ರಯತ್ನತಃ ।
ಅರ್ಕದಿಗ್ವಸುಷಟ್ ಪಂಚಚತುರಾಭಾಂಗುಲೈರ್ಮಿತಮ್ ॥ 70 ॥
ಆಜ್ಯಪಲಸಹಸ್ರಂ ತು ಪಾತ್ರಂ ಶತಪಲೈಃ ಕೃತಮ್ ।
ಆಜ್ಯೆಯುತಪಲೆ ಪಾತ್ರಂ ಪಲಪಂಚಶತೀಕೃತಮ್ ॥ 71 ॥
ಪಂಚಸಪ್ತತಿಸಂಖ್ಯೆ ತು ಪಾತ್ರಂ ಷಷ್ಟಿಪಲಂ ಮತಮ್ ।
ತ್ರಿಸಹಸ್ರೆ ಘೃತಪಲೆ ಶರಾರ್ಕಪಾಲಭಾಜನಮ್ ॥ 72 ॥
ದ್ವಿಸಹಸ್ರೆ ಶರಶಿವಂ ಶತಾರ್ಧೆ ತ್ರಿಂಶತಾ ಮತಮ್ ।
ಶತೇಕ್ಷಿಶರಸಂಖ್ಯಾತಮೇವಮನ್ಯತ್ರ ಕಲ್ಪಯೇತ್ ॥ 73 ॥

ಪಾತ್ರೆಯು ಬಂಗಾರ, ಬೆಳ್ಳಿ ಅಥವಾ ತಾಮ್ರದ್ದಾಗಿರಬೇಕು. ಅದರ ಅಭಾವದಲ್ಲಿ ಕಂಚು ಅಥವಾ ಅದೂ ಇಲ್ಲದಿದ್ದಲ್ಲಿ ಯಾವುದಾದರೂ ಲೋಹದ ಅಥವಾ ಮಣ್ಣಿನ ಪಾತ್ರೆಯಾಗಬಹುದು. ಆದರೆ ಲೋಹ ಮತ್ತು ಮಣ್ಣಿನ ಪಾತ್ರೆಗಳನ್ನು ಕನಿಷ್ಠವೆಂದು ಪರಿಗಣಿಸಲಾಗುತ್ತದೆ.

ಶಾಂತಿ ಮತ್ತು ಪೌಷ್ಟಿಕ ಕರ್ಮಗಳಿಗಾಗಿ ಹೆಸರಿನ ಹಿಟ್ಟು ಮತ್ತು

ವಿನಿಯೋಗ : ಅಸ್ಯ ಶ್ರೀ ಕಾರ್ತವೀರ್ಯಾರ್ಜುನಮಂತ್ರಸ್ಯ ದತ್ತಾತ್ರೇಯ ಋಷಿರನುಷ್ಟುಪ್ಛಂದಃ ಶ್ರೀ ಕಾರ್ತವೀರ್ಯಾರ್ಜುನೋ ದೇವತಾತ್ಮನೋಽಭೀಷ್ಟ ಸಿದ್ಧ್ಯರ್ಥೇ ಜಪೇ ವಿನಿಯೋಗಃ

ಪಂಚಾಂಗನ್ಯಾಸ :

ಕಾರ್ತವೀರ್ಯಾರ್ಜುನೋ ನಾಮ ಹೃದಯಾಯ ನಮಃ, ರಾಜಾ ಬಾಹುಸಹಸ್ರವಾನ್ ಶಿರಸೇ ಸ್ವಾಹಾ, ತಸ್ಯ ಸಂಸ್ಮರಣಾದೇವ ಶಿಖಾಯೈ ವಷಟ್, ಹೃತಂ ನಷ್ಟಂ ಚ ಲಭ್ಯತೆ ಕವಚಾಯ ಹುಮ್, ಕಾರ್ತವೀರ್ಯಾರ್ಜುನೋ ಅಸ್ತ್ರಾಯ ಫಟ್

### ಕಾರ್ತವೀರ್ಯಾರ್ಜುನ ಗಾಯತ್ರಿ

ಕಾರ್ತವೀರ್ಯಾಯ ಶಬ್ದಾಂತೆ ವಿದ್ಮಹೇಪದಮೀರಯೇತ್ ॥ 54 ॥
ಮಹಾವೀರ್ಯಾಯವರ್ಣಾಂತೆ ಧೀಮಹೀತಿ ಪದಂ ವದೇತ್ ।
ತನ್ನೋಽರ್ಜುನಃ ಪ್ರಚೋದಾಂತೆ ಚೋದಯಾತ್ಪದಮೀರಯೇತ್ ॥ 55 ॥
ಗಾಯತ್ರ್ಯೇಷಾರ್ಜುನ ಸ್ಯೋಕ್ತಾ ಪ್ರಯೋಗಾದೌ ಜಪೇತ್ತು ತಾಮ್ ।
ಅನುಷ್ಟುಭಂ ಮನುಃ ರಾತ್ರೌ ಜಪತಾಂ ಚೌರ ಸಂಚಯಾ ॥ 56 ॥
ಪಾಲಯಂತೆ ಗೃಹಾದ್ದೂರಂ ತರ್ಪಣಾದ್ವಚನಾದಪಿ ।

'ಕಾರ್ತವೀರ್ಯಾಯ' ಪದದ ನಂತರ 'ವಿದ್ಮಹೆ' ಆಮೇಲೆ 'ಮಹಾವೀರ್ಯಾಯ' 'ಧೀಮಹಿ' ಪದವನ್ನು ಹೇಳಬೇಕು. ನಂತರ 'ತನ್ನೋಽರ್ಜುನಃ ಪ್ರಚೋದಯಾತ್' ಹೇಳಬೇಕು. ಇದು ಕಾರ್ತವೀರ್ಯಾರ್ಜುನ ಗಾಯತ್ರಿ ಮಂತ್ರವಾಗಿದ್ದು ಕಾರ್ತವೀರ್ಯ ಪ್ರಯೋಗಗಳ ಪ್ರಾರಂಭದಲ್ಲಿ ಈ ಮಂತ್ರವನ್ನು ಜಪಿಸಬೇಕು.

"ಕಾರ್ತವೀರ್ಯಾಯ ವಿದ್ಮಹೆ ಮಹಾವೀರ್ಯಾಯ ಧೀಮಹಿ ತನ್ನೋಽರ್ಜುನಃ ಪ್ರಚೋದಯಾತ್"

ರಾತ್ರಿಯಲ್ಲಿ ಈ ಮಂತ್ರದ ಜಪ ಮಾಡುವುದರಿಂದ ಕಳ್ಳರು ಮನೆಯಿಂದ ದೂರ ಓಡಿ ಹೋಗುತ್ತಾರೆ. ಈ ಮಂತ್ರದ ತರ್ಪಣ ಅಥವಾ ಉಚ್ಚಾರಣೆ ಮಾಡುವುದರಿಂದಲೂ ಕಳ್ಳರು ಓಡಿ ಹೋಗುತ್ತಾರೆ.

### ದೀಪದಾನ ವಿಧಾನ

ಅಥೊ ದೀಪವಿಧಿಂ ವಕ್ಷ್ಯೆ ಕಾರ್ತವೀರ್ಯಪ್ರಿಯಂಕರಮ್ ॥ 57 ॥
ವೈಶಾಖೆ ಶ್ರಾವಣೆ ಮಾರ್ಗೆ ಕಾರ್ತಿಕಾಶ್ವಿನ ಪೌಷತಃ ।
ಮಾಘಫಾಲ್ಗುನಯೋರ್ಮಾಸೆ ದೀಪಾರಂಭಂ ಪ್ರಶಸ್ಯತೆ ॥ 58 ॥



ತಥಾ ರಿಕ್ತಾವಿಹೀನಾಯಾಂ ಪರೆ ಶನಿ ಕುಜೌ ವಿನಾ ।
ಹಸ್ತೋತ್ತರಾಶ್ವಿರೌದ್ರೇಷು ಪುಷ್ಯವೈಷ್ಣವವಾಯುಭೆ ॥ 59 ॥
ದ್ವಿದೈವತೆ ನಚ ರೋಹಿಣ್ಯಾಂ ದೀಪಾರಂಭಃ ಪ್ರಶಸ್ಯತೆ ।
ಚರಮೇ ಚ ವ್ಯತಿಪಾತೆ ಧೃತೌ ವೃದ್ಧೌ ಸುಕರ್ಮಣಿ ॥ 60 ॥
ಪ್ರೀತೌ ಹರ್ಷೆ ಚ ಸೌಭಾಗ್ಯೆ ಶೋಭನಾಯುಷ್ಮತೋರಪಿ ।
ಕರಣೆ ವಿಷ್ಟಿರಹಿತೆ ಗ್ರಹಣೆದ್ಧರ್ೋದಯಾದಿಷು ॥ 61 ॥

ಈಗ ಕಾರ್ತವೀರ್ಯಃ ದೀಪಪ್ರಿಯಃ ಎಂಬಂತೆ, ಕಾರ್ತವೀರ್ಯನನ್ನು ಪ್ರಸನ್ನಗೊಳಿಸಲು, ದೀಪದಾನ ವಿಧಾನವನ್ನು ಹೇಳಲಾಗುತ್ತದೆ.

ವೈಶಾಖ, ಶ್ರಾವಣ, ಮಾರ್ಗಶಿರ್ಷ, ಕಾರ್ತಿಕ, ಅಶ್ವಿನ, ಪೌಷ, ಮಾಘ ಮತ್ತು ಫಲ್ಗುಣ ಮಾಸಗಳಲ್ಲಿ ದೀಪದಾನ ಮಾಡುವುದು ಪ್ರಶಸ್ತವೆಂದು ಹೇಳಲಾಗುತ್ತದೆ.

ಚತುರ್ಥಿ, ನವಮಿ, ಚತುರ್ದಶಿ ಈ ತಿಥಿಗಳನ್ನು ಹೊರತುಪಡಿಸಿ, ವಾರಗಳಲ್ಲಿ ಮಂಗಳ ಮತ್ತು ಶನಿವಾರ ದಿನಗಳನ್ನು ಬಿಟ್ಟು, ಹಸ್ತ, ಉತ್ತರಾತ್ರಯ, ಅಶ್ವಿನಿ, ಆರ್ದ್ರಾ, ಪುಷ್ಯ, ಶ್ರವಣ, ಸ್ವಾತಿ, ವಿಶಾಖಾ ಮತ್ತು ರೋಹಿಣಿ ನಕ್ಷತ್ರಗಳಲ್ಲಿ ಕಾರ್ತವೀರ್ಯನಿಗಾಗಿ ದೀಪದಾನವನ್ನು ಪ್ರಾರಂಭಿಸಲು ಪ್ರಶಸ್ತವಾಗಿರುತ್ತವೆ.

ವೈಧೃತಿ, ವ್ಯತಿಪಾತ, ಧೃತಿ, ವೃದ್ಧಿ, ಸುಕರ್ಮಾ, ಪ್ರೀತಿ ಹರ್ಷಣ, ಸೌಭಾಗ್ಯ, ಶೋಭನ ಮತ್ತು ಆಯುಷ್ಮಾನ್ ಯೋಗಗಳಲ್ಲಿ ಮತ್ತು ವಿಷ್ಟಿ (ಭದ್ರಾ) ಕರಣವನ್ನು ಹೊರತು ಪಡಿಸಿ ಅನ್ಯ ಕರಣಗಳಲ್ಲಿ ದೀಪಾರಂಭ ಮಾಡಬೇಕು. ಈ ಯೋಗಗಳಲ್ಲಿ ಪೂರ್ವಾಹ್ಣದಲ್ಲಿ ದೀಪಾರಂಭ ಮಾಡಬೇಕು.

ಏಷು ಯೋಗೇಷು ಪೂರ್ವಾಹ್ಣೆ ದೀಪಾರಂಭಂ ಕೃತಃ ಶುಭಃ ।
ಕಾರ್ತಿಕೆ ಶುಕ್ಲಸಪ್ತಮ್ಯಾಂ ನಿಶೀಥೇತೀವಶೋಭನಃ ॥ 62 ॥
ಯದಿ ತತ್ರ ರವೇರ್ವಾರಃ ಶ್ರವಣಂ ಭಂ ತು ದುರ್ಲಭಮ್ ।
ಅತ್ಯಾವಶ್ಯಕಕಾರ್ಯೇಷು ಮಾಸಾದೀನಾಂ ನ ಶೋಧನಮ್ ॥ 63 ॥
ಆದ್ಯೆ ಹ್ಯುಪೋಷ್ಯ ನಿಯತೊ ಬ್ರಹ್ಮಚಾರಿ ಶಯೀತ ಕೌ ।
ಪ್ರಾತಃ ಸ್ನಾತ್ವಾ ಶುದ್ಧಭೂಮೌ ಲಿಪ್ತಾಯಾಂ ಗೋಮಯೋದಕೈಃ ॥ 64 ॥
ಪ್ರಾಣಾನಾಯಮ್ಯ ಸಂಕಲ್ಪ್ಯ ನ್ಯಾಸಾನ್ಪೂರ್ವೋದಿತಾಂಶ್ಚರೇತ್ ।
ಷಟ್ಕೋಣಂ ರಚಯೇದ್ ಭೂಮೌ ರಕ್ತಚಂದನತಂಡುಲೈಃ ॥ 65 ॥

ವರ್ಮಾಸ್ತ್ರಾಗ್ನಿಪ್ರಿಯಾಮಂತ್ರಃ ಪ್ರೋಕ್ತೋಷ್ಟಾದಶವರ್ಣವಾನ್ ।
ತ್ರಿವೇದಸಪ್ತಯುಗ್ಮಾಕ್ಷಿವರ್ಣೈಃ ಪಂಚಾಂಗಕಂ ಮನೋಃ ॥ 44 ॥

ಮಂತ್ರದ ಕ್ರಮವಾಗಿ 1,2,7,2 ಮತ್ತು 2 ವರ್ಣಗಳಿಂದ ಪಂಚಾಂಗನ್ಯಾಸ ಮಾಡಬೇಕು.

ಓಂ ಹೃದಯಾಯ ನಮಃ, ನಮಃ ಶಿರಸೆ ಸ್ವಾಹಾ,
ಕಾರ್ತವೀರ್ಯಾರ್ಜುನಾಯ ಶಿಖಾಯೈ ವಷಟ್,
ಹುಂ ಫಟ್ ಕವಚಾಯ ಹುಮ್, ಸ್ವಾಹಾ ಅಸ್ತ್ರಾಯ ಫಟ್

ಮಂತ್ರಾಂತರ ಕಥನ

ನಮೋ ಭಗವತೇ ಶ್ರೀತಿ ಕಾರ್ತ್ತವೀರ್ಯಾರ್ಜುನಾಯ ಚ ।
ಸರ್ವದುಷ್ಟಾಂತಕಾಯೇತಿ ತಪೋಬಲಪರಾಕ್ರಮ ॥ 45 ॥
ಪರಿಪಾಲಿತ ಸಪ್ತಾಂತೆ ದ್ವೀಪಾಯ ಸರ್ವರಾಪದಮ್ ।
ಜನ್ಯಚೂಡಾಮಣ್ಯಾಂತೆ ಯೆ ಸರ್ವಶಕ್ತಿಮತೆ ತತಃ ॥ 46 ॥
ಸಹಸ್ರಬಾಹವೇ ಪ್ರಾಂತೆ ವರ್ಮಾಸ್ತ್ರಾಂತೊ ಮಹಾಮನುಃ ।
ತ್ರಿಷಷ್ಟಿವರ್ಣವಾನ್ಪ್ರೋಕ್ತಃ ಸ್ಮರಣಾತ್ಸರ್ವವಿಘ್ನಹೃತ ॥ 47 ॥
ರಾಜನ್ಯಚಕ್ರವರ್ತ್ತಿ ಚ ವೀರಃ ಶೂರಸ್ತ್ರತೀಯಕಃ ।
ಮಾಹಿಷ್ಮತಿಪತಿಃ ಪಶ್ಚಾಚ್ಚತುರ್ಥಃ ಸಮುದೀರಿತಃ ॥ 48 ॥
ರೇವಾಂಬುಪರಿತೃಪ್ತಷ್ಚ ಕಾರಾಗೇಹಪ್ರಬಾಧಿತಃ ।
ದಶಾಸ್ಯಶ್ಚೇತಿ ಷಡ್‌ಭಿಃ ಸ್ಯಾತ್ಪದೈರ್ಙೆಂತೈಃ ಷಡಂಗಕಮ್ ॥ 49 ॥

ಮಂತ್ರದ ಸ್ವರೂಪ ಈ ಪ್ರಕಾರವಿರುತ್ತದೆ: "ನಮೋ ಭಗವತೆ ಶ್ರೀ ಕಾರ್ತವೀರ್ಯಾರ್ಜುನಾಯ ಸರ್ವ ದುಷ್ಟಾಂತಕಾಯ ತಪೋಬಲಪರಾಕ್ರಮ ಪರಿಪಾಲಿತಸಪ್ತದ್ವೀಪಾಯ ಸರ್ವರಾಜನ್ಯ ಚೂಡಾಮಣಯೆ ಸರ್ವಶಕ್ತಿಮತೆ ಸಹಸ್ರಬಾಹವೆ ಹುಂ ಫಟ್"

1. ರಾಜನ್ಯಚಕ್ರವರ್ತಿ 2. ವೀರ 3. ಶೂರ 4. ಮಾಹಿಷ್ಮತಿಪತಿ 5. ರೇವಾಂಬುಪರಿತೃಪ್ತ 6. ಕಾರಗೇಹಪ್ರಬಾಧಿತದಶಾಸ್ಯ ಈ ಆರು ಪದಗಳ ಅಂತ್ಯದಲ್ಲಿ ಚತುರ್ಥಿ ವಿಭಕ್ತಿ ಸೇರಿಸಿ ಷಡಂಗನ್ಯಾಸ ಮಾಡಬೇಕು.

ರಾಜನ್ಯಚಕ್ರವರ್ತಿನೆ ಹೃದಯಾಯ ನಮಃ, ವೀರಾಯ ಶಿರಸೆ ಸ್ವಾಹಾ, ಶೂರಾಯ ಶಿಖಾಯೈ ವಷಟ್, ಮಹೀಷ್ಮತಿಪತಯೆ ಕವಚಾಯ ಹುಮ್,





ರೇವಾಂಬುಪರಿತೃಪ್ತಾಯ ನೇತ್ರತ್ರಯಾಯ ವೌಷಟ್, ಕಾರಾಗೇಹಪ್ರಬಾಧಿತ ಶಾಸ್ಯಾಯ ಅಸ್ತ್ರಾಯ ಫಟ್

ಸೀಂಚಮಾನಂ ಯುವತಿಭಿಃ ಕ್ರೀಡಂತಂ ನರ್ಮದಾಜಲೆ ।
ಹಸ್ತೈರ್ಜಲೌಘಂ ರುಂಧಂತಂ ಧ್ಯಾಯೇನ್ಮಂತ್ರಂ ನೃಪೋತ್ತಮಮ್ ॥ 50॥
ಏವಂ ಧ್ಯಾತ್ವಾಯುತಂ ಮಂತ್ರಂ ಜಪೇದನ್ಯತ್ತು ಪೂರ್ವವತ್ ।
ಪೂರ್ವವತ್ಸರ್ವನೇತಸ್ಯ ಸಮಾರಾಧನಮೀರಿತಮ್ ॥ 51 ॥

ನರ್ಮದಾ ನದಿಯಲ್ಲಿ ಜಲಕ್ರೀಡೆಯಾಡುತ್ತಿರುವ ಸಮಯ ಯುವತಿಯರಿಂದ ಅಭಿಷಿಂಚಿತವಾದ ಮತ್ತು ನರ್ಮದೆಯ ಪ್ರವಾಹವನ್ನು ನಿಯಂತ್ರಿಸಿದ ನೃಪಶ್ರೇಷ್ಠ ಕಾರ್ತವೀರ್ಯಾರ್ಜುನನನ್ನು ನಾನು ಧ್ಯಾನಿಸುತ್ತೇನೆ.

ಈ ಪ್ರಕಾರ ಧ್ಯಾನ ಮಾಡಿ ಮಂತ್ರದ ಹತ್ತು ಸಾವಿರ ಜಪ ಮಾಡಬೇಕು. ಮತ್ತು ಪೂರ್ವೋಕ್ತ ವಿಧಾನದಿಂದ ಹವನ, ಪೂಜನ ಇತ್ಯಾದಿ ಸಮಸ್ತ ಕರ್ಮಗಳನ್ನು ಪೂರೈಸಬೇಕು. ಈ ಮಂತ್ರದ ಸಾಧನೆಯ ಎಲ್ಲ ವಿಧಾನಗಳು ಈ ಹಿಂದಿನಂತಿರುತ್ತವೆ.

ನಷ್ಟಲಾಭದೋನ್ಯೋ ಮಂತ್ರ

ಕಾರ್ತವೀರ್ಯಾರ್ಜುನೋ ವರ್ಣಾನ್ನಾಮರಾಜಾಪದಂ ತತಃ ।
ಉಕ್ತ್ವಾ ಬಾಹುಸಹಸ್ರಾಂತೆ ವಾನ್ಪದಂ ತಸ್ಯ ಸಂತತಃ ॥ 52 ॥
ಸ್ಮರಣಾದೇವವರ್ಣಾಂತೆ ಹೃತಂ ನಷ್ಟಂ ಚ ಸಂಪತೇತ್ ।
ಲಭ್ಯತೆ ಮಂತ್ರವರ್ಣೋಯಂ ದ್ವಾತ್ರಿಂಶದ್ವರ್ಣಸಂಜ್ಞಕಃ ॥ 53 ॥
ಪಾದೈಃ ಸರ್ವೇಣ ಪಂಚಾಂಗಂ ಧ್ಯಾನಯೋಗಾದಿಪೂರ್ವವತ್ ।

'ಕಾರ್ತವೀರ್ಯಾರ್ಜುನೋ' ಪದ, ನಂತರ 'ನಾಮ ರಾಜಾ' ಹೇಳಿ 'ಬಾಹುಸಹಸ್ರಂ' ಮತ್ತು 'ವಾನ್' ಹೇಳಬೇಕು. ನಂತರ 'ತಸ್ಯ ಸಂ' 'ಸ್ಮರಣಾದೇವ' ಮತ್ತು 'ಹತಂ ನಷ್ಟಂ ಚ' ಹೇಳಿ 'ಲಭ್ಯತೆ' ಉಚ್ಚರಿಸಬೇಕು. ಇದು 32 ಅಕ್ಷರಗಳ ಮಂತ್ರವಾಗಿದೆ.

ಈ ಅನುಷ್ಟುಪದ ಒಂದೊಂದು ಪಾದದಿಂದ ಮತ್ತು ಸಂಪೂರ್ಣ ಮಂತ್ರದಿಂದ ಪಂಚಾಂಗನ್ಯಾಸ ಮಾಡಬೇಕು. ಇದರ ಧ್ಯಾನ ಮತ್ತು ಪೂಜನ ಆದಿ ಪೂರ್ವೋಕ್ತ ಮಂತ್ರದ ಸಮಾನವಾಗಿರುತ್ತದೆ.

"ಕಾರ್ತವೀರ್ಯಾರ್ಜುನೊ ನಾಮ ರಾಜಾ ಬಾಹುಸಹಸ್ರವಾನ್ ।
ತಸ್ಯ ಸಂಸ್ಮರಾಣಾದೇವ ಹೃತಂ ನಷ್ಟಂ ಚ ಲಭ್ಯತೆ ॥"

ಬೀಜಾಕ್ಷರ (ಘ್ರೋಂ) ದಿಂದ ಯುಕ್ತ ಕಾರ್ತವೀರ್ಯಾರ್ಜುನದ ಚತುರ್ಥ್ಯಂತ, ಅದರ ನಂತರ ನಮಃ ಸೇರಿಸುವುದರಿಂದ 10 ಅಕ್ಷರಗಳ ಪ್ರಥಮ ಮಂತ್ರವಾಗುತ್ತದೆ. ಅನ್ಯ ಮಂತ್ರಗಳಿಗೂ ಕೂಡಾ 9 ಅಥವಾ ಹನ್ನೊಂದು ಅಕ್ಷರಗಳನ್ನು ಹೇಳಲಾಗಿದೆ.

ಈ ಮಂತ್ರದ ಪ್ರಾರಂಭದಲ್ಲಿ ಎರಡು ಬೀಜ (ಘ್ರೋಂ, ವ್ರೀಂ) ಸೇರಿಸುವುದರಿಂದ ದ್ವಿತೀಯ ಮಂತ್ರವಾಗುತ್ತದೆ. ಸ್ವಬೀಜ (ಘ್ರೋಂ), ಕಾಮಬೀಜ (ಕ್ಲೀಂ) ಸಹಿತ ತೃತೀಯ ಮಂತ್ರವಾಗುತ್ತದೆ. ಸ್ವಬೀಜ ಮತ್ತು 'ಭ್ರೂಂ' ಸಹಿತ ಚತುರ್ಥ ಮಂತ್ರವಾಗುತ್ತದೆ. ಸ್ವಬೀಜ ಮತ್ತು ಪಾಶಬೀಜ (ಆಂ) ಸಹಿತ ಪಂಚಮ ಮಂತ್ರ, ಸ್ವಬೀಜ ಮತ್ತು ಮಾಯಾಬೀಜ (ಹ್ರೀಂ) ಸಹಿತ ಷಷ್ಠಮ ಮಂತ್ರ, ಸ್ವಬೀಜ ಮತ್ತು ಅಂಕುಶ (ಕ್ರೋಂ) ಸಹಿತ ಸಪ್ತಮ, ಸ್ವಬೀಜ ಮತ್ತು ಶ್ರೀಬೀಜ ಸಹಿತ ಅಷ್ಟಮ ಮಂತ್ರ, ಸ್ವಬೀಜ ಮತ್ತು ವಾಗ್ಬೀಜ (ಐಂ) ಸಹಿತ ನವಮ ಮಂತ್ರ ಮತ್ತು ಆದಿಯಲ್ಲಿ ವರ್ಮ (ಹುಂ) ಮತ್ತು ಅಂತ್ಯದಲ್ಲಿ ಅಸ್ತ್ರ (ಫಟ್) ಸಹಿತ ದಶಮ ಮಂತ್ರವು ರಚನೆಯಾಗುತ್ತದೆ.

| | |
|---|---|
| 1. ಘ್ರೋಂ | ಕಾರ್ತವೀರ್ಯಾರ್ಜುನಾಯಃ ನಮಃ । |
| 2. ಘ್ರೋಂ ವ್ರೀಂ | ಕಾರ್ತವೀರ್ಯಾರ್ಜುನಾಯ ನಮಃ । |
| 3. ಘ್ರೋಂ ಕ್ಲೀಂ | ಕಾರ್ತವೀರ್ಯಾರ್ಜುನಾಯ ನಮಃ । |
| 4. ಘ್ರೋಂ ಭ್ರೂಂ | ಕಾರ್ತವೀರ್ಯಾರ್ಜುನಾಯ ನಮಃ । |
| 5. ಘ್ರೋಂ ಆಂ | ಕಾರ್ತವೀರ್ಯಾರ್ಜುನಾಯ ನಮಃ । |
| 6. ಘ್ರೋಂ ಹ್ರೀಂ | ಕಾರ್ತವೀರ್ಯಾರ್ಜುನಾಯ ನಮಃ । |
| 7. ಘ್ರೋಂ ಕ್ರೋಂ | ಕಾರ್ತವೀರ್ಯಾರ್ಜುನಾಯ ನಮಃ । |
| 8. ಘ್ರೋಂ ಶ್ರೀಂ | ಕಾರ್ತವೀರ್ಯಾರ್ಜುನಾಯ ನಮಃ । |
| 9. ಘ್ರೋಂ ಐಂ | ಕಾರ್ತವೀರ್ಯಾರ್ಜುನಾಯ ನಮಃ । |
| 10. ಹುಂ | ಕಾರ್ತವೀರ್ಯಾರ್ಜುನಾಯ ನಮಃ ಫಟ್ |

ಎರಡನೆಯ ಮಂತ್ರದಿಂದ ಒಂಭತ್ತನೆಯ ಮಂತ್ರದವರೆಗೆ ಬೀಜಗಳ ವ್ಯುತ್ಕ್ರಮವಿದ್ದು, ಹತ್ತನೆಯ ಮಂತ್ರದಲ್ಲಿ ವರ್ಮ (ಹುಂ) ಮತ್ತು ಅಸ್ತ್ರ (ಫಟ್)ದ ಮಧ್ಯದಲ್ಲಿ ಒಂಭತ್ತು ಅಕ್ಷರಗಳಿರುತ್ತವೆ. ಈ ಮಂತ್ರಗಳಲ್ಲಿ ಪ್ರಥಮ ದಶಾಕ್ಷರವು ವಿರಾಟಛಂದದಲ್ಲಿದ್ದರೆ ಉಳಿದ ಮಂತ್ರಗಳು ತ್ರಿಷ್ಟುಪ್‌ಛಂದದಲ್ಲಿರುತ್ತವೆ.

**ದಶಮಂತ್ರಾ ಇಮೇ ಪ್ರೋಕ್ತಾಃ ಪ್ರಣವಾದಿ ಪದಾನಿ ಚ ।**
**ತದಾದಿಮಃ ಶಿವಾರ್ಣಃ ಸ್ಯಾದನ್ಯೇ ತು ದ್ವಾದಶಾಕ್ಷರಃ** ॥ 40 ॥





**ಏವಂ ವಿಂಶತಿ ಮಂತ್ರಾಣಾಂ ಯಜನಂ ಪೂರ್ವವನ್ಮತಮ್ ।**
**ತ್ರಿಷ್ಟುಪ್‌ಛಂದಸ್ತದಾದ್ಯೇಷು ಸ್ಯಾದನ್ಯೇಷು ಜಗತೀಮತಾ** ॥ 41 ॥
**ದೀರ್ಘಾಢ್ಯಮೂಲಬೀಜೇನ ಕುರ್ಯಾದೇಷಾಂ ಷಡಂಗಕಮ್ ।**
**ತಾರೋ ಹೃತ್ಕಾರ್ತವೀರ್ಯಾರ್ಜುನಾಯ ವರ್ಮಾಸ್ತ್ರಠದ್ವಯಮ್ ।**
**ಚತುರ್ದಶಾರ್ಣೋ ಮನುರ್ಮಂತ್ರೋಯಮಸ್ಯೇಜ್ಯಾ ಪೂರ್ವವನ್ಮತಾ** ॥ 42 ॥

ಪೂರ್ವೋಕ್ತ 10 ಮಂತ್ರಗಳ ಪ್ರಾರಂಭದಲ್ಲಿ ಪ್ರಣವ (ಓಂ) ಸೇರಿಸುವುದರಿಂದ ಪ್ರಥಮ ದಶಾಕ್ಷರ ಮಂತ್ರವು ಏಕಾದಶ ಅಕ್ಷರಗಳ ಮತ್ತು ಅನ್ಯ 9 ದ್ವಾದಶಾಕ್ಷರ ಮಂತ್ರಗಳಾಗುತ್ತವೆ. ಈ ಪ್ರಕಾರ ಕಾರ್ತವೀರ್ಯ ಮಂತ್ರದ ಇಪ್ಪತ್ತು ಪ್ರಕಾರದ ಮಂತ್ರಗಳಾಗುತ್ತವೆ. ಇವೆಲ್ಲ ಮಂತ್ರಗಳ ಸಾಧನವು ಪೂರ್ವೋಕ್ತ ವಿಧಾನದಂತಿದೆ. ಎರಡನೆಯ ದಶಸಂಖ್ಯಾ ಮಂತ್ರಗಳಲ್ಲಿ, ಪ್ರಥಮ ತ್ರಿಷ್ಟುಪ್ ಮತ್ತು ಶೇಷ ಜಗತೀ ಛಂದವಾಗಿರುತ್ತದೆ. ಮಂತ್ರಗಳ ಸಾಧನಾದಲ್ಲಿ ಷಡ್‌ದೀರ್ಘ ಸಹಿತ ಸ್ವಬೀಜದಿಂದ ಷಡಂಗನ್ಯಾಸ ಮಾಡಬೇಕು.

ವಿನಿಯೋಗ : ಅಸ್ಯ ಶ್ರೀ ಏಕಾದಶಾಕ್ಷರ ಕಾರ್ತವೀರ್ಯಮಂತ್ರಸ್ಯ ದತ್ತಾತ್ರೇಯ ಋಷಿಸ್ತ್ರಿಷ್ಟುಪ್ ಛಂದಃ ಕಾರ್ತವೀರ್ಯಾರ್ಜುನೋ ದೇವತಾತ್ಮನೋಭೀಷ್ಟ ಸಿದ್ಧ್ಯರ್ಥೇ ಜಪೇ ವಿನಿಯೋಗಃ ಮತ್ತು ಉಳಿದ ಒಂಭತ್ತಕ್ಕೆ

ಅಸ್ಯ ಶ್ರೀ ದ್ವಾದಶಾಕ್ಷರ ಕಾರ್ತವೀರ್ಯಮಂತ್ರಸ್ಯ ದತ್ತಾತ್ರೇಯ ಋಷಿರ್ಜಗತೀಛಂದಃ ಕಾರ್ತವೀರ್ಯಾರ್ಜುನೋ ದೇವತಾತ್ಮನೋಭೀಷ್ಟಸಿದ್ಧ್ಯರ್ಥೇ ಜಪೇ ವಿನಿಯೋಗಃ

ಷಡಂಗನ್ಯಾಸ ; ಘ್ರಾಂ ಹೃದಯಾಯ ನಮಃ, ಘ್ರೀಂ ಶಿರಸೇ ಸ್ವಾಹಾ, ಘ್ರೂಂ ಶಿಖಾಯೈ ವಷಟ್, ಘ್ರೈಂ ಕವಚಾಯ ಹುಮ್, ಘ್ರೌಂ ನೇತ್ರತ್ರಯಾಯ ವೌಷಟ್, ಘ್ರಃ ಅಸ್ತ್ರಾಯ ಫಟ್

ತಾರ (ಓಂ) ಹೃತ (ನಮಃ) ಪುನಃ ಕಾರ್ತವೀರ್ಯಾರ್ಜುನ ಪದ, ವರ್ಮ (ಹುಂ), ಅ (ಫಟ್) ಮತ್ತು ಕೊನೆಯಲ್ಲಿ ಠ ದ್ವಯ (ಸ್ವಾಹಾ) ಸೇರಿಸುವುದರಿಂದ ಹದಿನಾಲ್ಕು ಅಕ್ಷರಗಳ ಮಂತ್ರವು ಸಿದ್ಧವಾಗುತ್ತದೆ. ಈ ಮಂತ್ರದ ಸಾಧನಾವು ಈ ಹಿಂದೆ ವಿವರಿಸಿದ ವಿಧಾನದಂತಿದೆ.

**"ಓಂ ನಮಃ ಕಾರ್ತವೀರ್ಯಾರ್ಜುನಾಯ ಹುಂ ಫಟ್ ಸ್ವಾಹಾ"**
**ಭೂನೇತ್ರ ಸಪ್ತನೇತ್ರಾಕ್ಷಿವರ್ಣೈರಸ್ಯಾಂಗಪಂಚಕಮ್ ।**
**ತಾರೋ ಹೃದ್ಭಗವಾಂಡೆಂತಃ ಕಾರ್ತವೀರ್ಯಾರ್ಜುನಸ್ತಥಾ** ॥ 43 ॥

ಪುತ್ರಾನ್ಯಶೋ ರೋಗನಾಶಮಾಯುಃ ಸ್ವಜನರಂಜನಮ್ ।
ವಾಕ್ಸಿದ್ಧಿಂ ಸುದೃಶಃ ಕುಂಭಾಭಿಷಿಕ್ತೋ ಲಭತೇ ನರಃ ॥ 25 ॥
ಶತ್ರೂಪದ್ರವಪಾಪನ್ನೇ ಗ್ರಾಮೇ ವಾ ಪುಟಭೇದನೇ ।
ಸಂಸ್ಥಾಪಯೇದಿದಂ ಯಂತ್ರಮರಿಭೀತಿನಿವೃತ್ತಯೇ ॥ 26 ॥
ಸರ್ಷಪಾರಿಷ್ಟದಲಶುನಕಾರ್ಪಾಸೈರ್ಮಾರ್ಯತೇ ರಿಪುಃ ।
ದತ್ತೂರೈಃ ಸ್ತಂಭ್ಯತೇ ನಿಂಬೈರ್ದ್ವೇಷ್ಯತೇ ವಶ್ಯತೇಂಬುಜೈಃ ॥ 27 ॥
ಉಚ್ಚಾಟ್ಯತೇ ವಿಭೀತಸ್ಯ ಸಮಿದಿಭಃ ಖದಿರಸ್ಯ ಚ ।
ಕಟುತೈಲಮಹಿಷ್ಯಾಜ್ಯೈರ್ಹೋಮದ್ರವ್ಯಾಂಜನಂ ಸ್ಮೃತಮ್ ॥ 28 ॥
ಯವೈರ್ಹುತೈಃ ಶ್ರಿಯಃ ಪ್ರಾಪ್ತಿಸ್ತಿಲೈರಾಜ್ಯೈರಘಕ್ಷಯಃ ।
ತಿಲತಂಡುಲಸಿದ್ಧಾರ್ಥಲಾಜೈರ್ವಶ್ಯೋ ನೃಪೋ ಭವೇತ್ ॥ 29 ॥

ಈ ಪ್ರಕಾರ ಅಭಿಷೇಕ ಮಾಡುವುದರಿಂದ ಅಭಿಷಿಕ್ತ ವ್ಯಕ್ತಿಯು ಪುತ್ರ, ಯಶ, ಆರೋಗ್ಯ, ಆಯು ಮತ್ತು ಆತ್ಮೀಯರೊಂದಿಗೆ ಪ್ರೇಮ, ವಾಕ್ಸಿದ್ಧಿ ಮತ್ತು ಉತ್ತಮ ಪತ್ನಿಯನ್ನು ಪಡೆದುಕೊಳ್ಳುತ್ತಾನೆ. ಗ್ರಾಮ ಅಥವಾ ನಗರಗಳಲ್ಲಿ ಶತ್ರುಗಳ ಮೂಲಕ ಉಪದ್ರವ ಉಂಟಾದಾಗ ಅವುಗಳ ಭಯವನ್ನು ದೂರ ಮಾಡಲು ಕಾರ್ತವೀರ್ಯನ ಈ ಯಂತ್ರವನ್ನು ಸ್ಥಾಪನೆ ಮಾಡಬೇಕು.

ಸಾಸಿವೆ, ಅಂಟುವಾಳ, ಬಳ್ಳೊಳ್ಳಿ ಮತ್ತು ಅರಳೆಯ ಹೋಮದಿಂದ ಶತ್ರುವಿನ ಮಾರಣ ಹೋಮವಾಗುತ್ತದೆ. ಧತ್ತೂರದ ಹೋಮದಿಂದ ಶತ್ರು ಸ್ತಂಭನ, ಬೇವಿನ ಹೋಮದಿಂದ ಪರಸ್ಪರ ವಿದ್ವೇಷಣ, ಕಮಲದ ಹೋಮದಿಂದ ವಶೀಕರಣ ಮತ್ತು ತಾರೇಗಿಡ ಮತ್ತು ಕಾಚಿನಗಿಡದ ಸಮಿಧಾಗಳ ಹೋಮದಿಂದ ಶತ್ರುವಿನ ಉಚ್ಚಾಟನೆಯಾಗುತ್ತದೆ. ಜವೆಗೋದಿಯ ಹೋಮದಿಂದ ಲಕ್ಷ್ಮಿಪ್ರಾಪ್ತಿ ತಿಲ ಮತ್ತು ತುಪ್ಪದ ಹೋಮದಿಂದ ಪಾಪಕ್ಷಯ, ತಿಲ ಮತ್ತು ಅಕ್ಕಿಯ ಸಿದ್ಧಾರ್ಥ ಮತ್ತು ಭತ್ತರಳಿನ ಹೋಮದಿಂದ ರಾಜನು ವಶವಾಗುತ್ತಾನೆ.

ಅಪಾಮಾರ್ಗಾರ್ಕದೂರ್ವಾಣಾಂ ಹೋಮೋ ಲಕ್ಷ್ಮಿ ಪ್ರಘೋಘನುತ್ ।
ಸ್ತ್ರೀವಶ್ಯಕೃತ್ಪ್ರಿಯಂಗುಣಾಂ ಪುರಾಣಾಂ ಭೂತಶಾಂತಿದಃ ॥ 30 ॥
ಅಶ್ವತ್ಥೋದುಂಬರಪ್ಲಕ್ಷವಟಬಿಲ್ವಸಮುದ್ಭವಾಃ ।
ಸಮಿಧೋ ಲಭತೆ ಹುತ್ವಾ ಪುತ್ರಾನಾಯುರ್ಧನಂ ಸುಖಮ್ ॥ 31 ॥
ನಿರ್ಮೋಕಹೇಮಸಿದ್ಧಾರ್ಥಲವಣೈಶ್ಚೋರನಾಶನಮ್ ।
ರೋಚನಾಗೋಮಯಃ ಸ್ತಂಭೋಃ ಭೂಪ್ರಾಪ್ತಿಃ ಶಾಲಿಭಿರ್ಹುತೈಃ ॥ 32 ॥





ಹೋಮಸಂಖ್ಯಾ ತು ಸರ್ವತ್ರ ಸಹಸ್ರಾದಯುತಾವಧಿ ।
ಪ್ರಕಲ್ಪನೀಯಾ ಮಂತ್ರಜ್ಞೈಃ ಕಾರ್ಯಗೌರವಲಾಘವಾತ್ ॥ 33 ॥

ಉತ್ತರಾಣೀ, ಎಕ್ಕೆ ಮತ್ತು ಗರಿಕೆಗಳ ಹೋಮವು ಸಂಪತ್ ಪ್ರದಾಯಕ ಮತ್ತು ಪಾಪನಾಶಕವಾಗುತ್ತದೆ. ಪ್ರಿಯಂಗುವಿನ ಹೋಮದಿಂದ ಸ್ತ್ರೀಯರು ವಶವಾಗುತ್ತಾರೆ. ಗುಗ್ಗುಲದ ಹೋಮವು ಭೂತಗಳನ್ನು ಶಾಂತಗೊಳಿಸುತ್ತದೆ. ಅಶ್ವತ್ಥ, ಜಾಡುಂಬುರ, ಆಲ ಮತ್ತು ಬಿಲ್ವ ವೃಕ್ಷಗಳ ಸಮಿಧಾಗಳಿಂದ ಹೋಮ ಮಾಡಿದರೆ ಸಾಧಕರು ಪುತ್ರ, ಆಯುಷ್ಯ, ಧನ ಮತ್ತು ಸುಖವನ್ನು ಪಡೆದುಕೊಳ್ಳುತ್ತಾರೆ. ಸರ್ಪದ ಪೊರೆ, ಧತ್ತೂರ, ಬಿಳಿಯಸಾಸಿವೆ ಮತ್ತು ಲವಣಗಳಿಂದ ಹೋಮ ಮಾಡಿದರೆ ಕಳ್ಳರು ನಾಶವಾಗುತ್ತಾರೆ. ಗೋರೋಚನ ಮತ್ತು ಗೋಮಯದ ಹೋಮದಿಂದ ಸ್ತಂಭನವಾಗುತ್ತದೆ. ಮತ್ತು ಭತ್ತದ ಹೋಮದಿಂದ ಭೂಮಿ ಪ್ರಾಪ್ತವಾಗುತ್ತದೆ.

ವಿದ್ವಾನ್ ಸಾಧಕರು ಕಾರ್ಯಗಳ ಪ್ರಮಾಣಕ್ಕನುಗುಣವಾಗಿ, ಸಮಸ್ತ ಕಾಮ್ಯ ಪ್ರಯೋಗಗಳ ಹೋಮಗಳ ಸಂಖ್ಯೆಯನ್ನು । ಸಾವಿರದಿಂದ ಹತ್ತು ಸಾವಿರದವರೆಗೆ ನಿಗದಿಗೊಳಿಸಬೇಕು. ಸಂದರ್ಭಾನುಸಾರವಾಗಿ ಸಂಖ್ಯೆಯನು, ನಿರ್ಧರಿಸಿಕೊಳ್ಳಬೇಕು.

**ದಶಮಂತ್ರ ಭೇದಗಳು**

ಕಾರ್ತವೀರ್ಯಸ್ಯ ಮಂತ್ರಾಣಾಮುಚ್ಯಂತೆ ಸಿದ್ಧಿದಾಭಿದಾಃ ।
ಕಾರ್ತವೀರ್ಯಾರ್ಜುನಂ ಡೆಂತಮಂತೆ ಚ ನಮಸಾನ್ವಿತಮ್ ॥ 34 ॥
ಸ್ವಬೀಜಾದ್ಯೋ ದಶಾರ್ಣೋಸಾವನ್ಯೆ ನವಶಿವಾಕ್ಷರಾಃ ।
ಆದ್ಯಬೀಜದ್ವಯೇನಾಸೌ ದ್ವಿತಿಯೊ ಮಂತ್ರ ಈರಿತಃ ॥ 35 ॥
ಸ್ವಕಾಮಾಭ್ಯಾಂ ತೃತಿಯೋಸೌ ಸ್ವಭೂಭ್ಯಾಂ ತು ಚತುರ್ಥಕಃ ।
ಸ್ವಪಾಶಾಭ್ಯಾಂ ಸಪ್ತಮಃ ಸ್ಯಾತ್ ಸ್ವರಮಾಭ್ಯಾಮಥಾಷ್ಟಮಃ ।
ಸ್ವವಾಗ್ಭವಾಂಭ್ಯಾಂ ನವಮೋ ವರ್ಮಾಸ್ತ್ರಾಭ್ಯಾಂ ತಥಾಂತಿಮಃ ॥ 37 ॥
ದ್ವಿತಿಯಾದಿ ನವಾಂತೆ ತು ಬೀಜಯೋಃ ಸ್ಯಾದ್ ವ್ಯತಿಕ್ರಮಃ ।
ಮಂತ್ರೇ ತು ದಶಮೆ ವರ್ಣಾ ನವವರ್ಮಾಸ್ತ್ರಮಧ್ಯಗಾಃ ॥ 38 ॥
ಏತೇಷು ಮಂತ್ರವರ್ಯೇಷು ಸ್ವಾನುಕೂಲಂ ಮನುಂ ಭಜೇತ್ ।
ವಿಪಾಮಾದ್ಯೆ ವಿರಾಟ್‌ಛಂದೋನ್ಯೇಷು ತ್ರಿಷ್ಟುಬುದಾಹೃತಮ್ ॥ 39 ॥

ಈಗ ಸಕಲ ಸಿದ್ಧಿದಾಯಕವಾದ ಕಾರ್ತವೀರ್ಯಾರ್ಜುನ ಮಂತ್ರದ ಭೇದಗಳನ್ನು ವಿವರಿಸಲಾಗುತ್ತದೆ.

ಓಂ ಫ್ರೌ ಅಸ್ತ್ರಾಯ ಫಟ್

ನಂತರ ಅಷ್ಟದಳಗಳಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಚೋರವಿಭಂಜನ ಮುಂತಾದ. ಆಗ್ನೇಯಾದಿ ನಾಲ್ಕು ಕೋನಗಳಲ್ಲಿ ದುಃಖನಾಶಕ ಇತ್ಯಾದಿ ನಾಲ್ಕು ನಾಮ ಮಂತ್ರಗಳಿಂದ ಪೂಜೆ ಮಾಡಬೇಕು.

ಓಂ ಚೋರಮದವಿಭಂಜನಾಯ ನಮಃ ಪೂರ್ವೆ, ಓಂ ಮಾರಮದ
ವಿಭಂಜನಾಯ ನಮಃ ದಕ್ಷಿಣೆ, । ಓಂ ಅರಿಮದವಿಭಂಜನಾಯ ನಮಃ ಪಶ್ಚಿಮೆ,
ಓಂ ದೈತ್ಯಮದವಿಭಂಜನಾಯ ನಮಃ ಉತ್ತರೆ ।
ಓಂ ದುಃಖನಾಶಾಯ ನಮಃ ಆಗ್ನೇಯೆ, ಓಂ ದುಷ್ಟನಾಶಾಯ ನಮಃ ನೈಋತ್ಯೆ
ಓಂ ದುರಿತನಾಶಾಯ ನಮಃ ವಾಯುವ್ಯೆ, ಓಂ ರೋಗನಾಶಾಯ ನಮಃ ಈಶಾನ್ಯೆ

ತತ್ಪಶ್ಚಾತ್ ಪೂರ್ವಾದಿ ದಿಶಾಗಳಲ್ಲಿ, ದಳಗಳಲ್ಲಿ ಅಗ್ರಭಾಗದ ಮೇಲೆ ಶ್ವೇತ ಕಾಂತಿಯುಕ್ತ ಕ್ಷೇಮಂಕರಿ ಮುಂತಾದ ಅಷ್ಟಶಕ್ತಿಗಳನ್ನು ಈ ಪ್ರಕಾರ ಪೂಜೆ ಮಾಡಬೇಕು.

ಓಂ ಕ್ಷೇಮಂಕರ್ಯ್ಯೈ ನಮಃ । ಓಂ ವಶ್ಯಂಕರ್ಯ್ಯೈ ನಮಃ ।
ಓಂ ಶ್ರೀಕರ್ಯ್ಯೈ ನಮಃ । ಓಂ ಯಶಸ್ಕರ್ಯ್ಯೈ ನಮಃ ।
ಓಂ ಆಯುಷ್ಕರ್ಯ್ಯೈ ನಮಃ । ಓಂ ಪ್ರಜ್ಞಾಕರ್ಯ್ಯೈ ನಮಃ ।
ಓಂ ವಿದ್ಯಾಕರ್ಯ್ಯೈ ನಮಃ । ಓಂ ಧನಕರ್ಯ್ಯೈ ನಮಃ ।

ನಂತರ ಭೂಪುರದಲ್ಲಿ ತತ್ಸಂಬಂಧಿ ದಿಶಾಗಳಲ್ಲಿ ಇಂದ್ರಾದಿ ದಶ ದಿಕ್ಪಾಲರ ಈ ಪ್ರಕಾರ ಪೂಜೆ ಮಾಡಬೇಕು.

ಓಂ ಲಂ ಇಂದ್ರಾಯ ನಮಃ ಪೂರ್ವೆ, ಓಂ ರಂ ಅಗ್ನಯೆ ನಮಃ ಆಗ್ನೇಯೆ ।
ಓಂ ಮಂ ಯಮಾಯ ನಮಃ ದಕ್ಷಿಣೆ, ಓಂ ಕ್ಷಂ ನಿರುತುಯೇ ನಮಃ ನೈಋತ್ಯೆ
ಓಂ ವಂ ವರುಣಾಯ ನಮಃ ಪಶ್ಚಿಮೆ, ಓಂ ಯಂ ವಾಯುವೆ ನಮಃ ವಾಯುವ್ಯೆ
ಓಂ ಸಂ ಸೋಮಾಯ ನಮಃ ಉತ್ತರೆ, ಓಂ ಹಂ ಈಶಾನಾಯ ನಮಃ ಈಶಾನ್ಯೆ
ಓಂ ಅಂ ಬ್ರಾಹ್ಮಣೆ ನಮಃ ಪೂರ್ವೇಶಾನಯೋರ್ಮಧ್ಯೆ । ಓಂ ಹ್ರೀಂ
ಅನಂತಾಯ ನಮಃ ಪಶ್ಚಿಮನ್ಯೈಋತ್ಯೋರ್ಮಧ್ಯೆ

ಭೂಪುರದ ಹೊರಗೆ ವಜ್ರಾದಿ ಆಯುಧಗಳನ್ನು ಪೂಜೆ ಮಾಡಬೇಕು.

ಓಂ ವಜ್ರಾಯ ನಮಃ । ಓಂ ಶಕ್ತ್ಯೈ ನಮಃ ।
ಓಂ ದಂಡಾಯ ನಮಃ । ಓಂ ಖಡ್ಗಾಯ ನಮಃ ।





ಓಂ ಶೂಂ ಶೂಲಾಯ ನಮಃ । ಓಂ ಪಂ ಪದ್ಮಾಯ ನಮಃ ।
ಓಂ ಚಂ ಚಕ್ರಾಯ ನಮಃ ।

ಈ ಪ್ರಕಾರ ಆವರಣ ಪೂಜೆ ಮಾಡಿದ ನಂತರ ಧೂಪ-ದೀಪ ನೈವೇದ್ಯಾದಿ ಉಪಚಾರಗಳಿಂದ ವಿಧಿವತ್ ಕಾರ್ತವೀರ್ಯನನ್ನು ಪೂಜೆ ಮಾಡಬೇಕು.

ಕಾರ್ತವೀರ್ಯಾರ್ಜುನಸ್ಯಾಥ ಪೂಜಾರ್ಥಂ ಯಂತ್ರ ಉಚ್ಯತೆ ॥ 21 ॥
ದಿಕ್ಪತ್ರಂ ವಿಲಿಖೇತ್ತ್ರಬೀಜಮದನಶ್ರುತ್ಯಾದಿವಾಕ್ಕರ್ಣಿಕಂ ।
ವರ್ಮಾಂತ ಪ್ರಣವಾದಿಬೀಜದಶಕಂ ಶೇಷಾರ್ಣಪತ್ರಾಂತರಮ್ ॥ 22॥
ಉಷ್ಠಾಢ್ಯಂ ಸ್ವರಕೇಸರಂ ಪರಿವೃತ್ತಂ ಶೇಷೈಃ ಸ್ವಕೋಣೋಲ್ಲದ್ ।
ಭೂತಾರ್ಣಾಕ್ಷಿತಿಮಂದಿರಾವೃತಮಿದಂ ಯಂತ್ರಂ ಧರಾಧೀಶಿತುಃ ॥ 22 ॥

ಈಗ ಕಾಮ್ಯ ಪ್ರಯೋಗಗಳಲ್ಲಿ ಕಾರ್ತವೀರ್ಯಾರ್ಜುನ ಯಂತ್ರವನ್ನು ಹೇಳಲಾಗುತ್ತದೆ.

ವೃತ್ತಾಕಾರ ಕರ್ಣಿಕಾದಲ್ಲಿ ದಶದಳವನ್ನು ರಚಿಸಿ ಕರ್ಣಿಕಾದಲ್ಲಿ ತನ್ನ ಬೀಜ (ಫ್ರೋಂ) ಕಾಮಬೀಜ (ಕ್ಲಿಂ) ಶ್ರುತಿಬೀಜ (ಓಂ) ಮತ್ತು ವಾಗ್ಬೀಜ (ಐಂ) ಬರೆಯಬೇಕು. ನಂತರ ಪ್ರಣವದಿಂದ ವರ್ಮಬೀಜ ಪರ್ಯಂತ ಮೂಲಮಂತ್ರದಿಂದ ಹತ್ತು ಬೀಜಗಳನ್ನು ದಶದಳಗಳ ಮೇಲೆ ಬರೆಯಬೇಕು. ಶೇಷ ಸಹ ಸಹಿತ 16 ಸ್ವರಗಳನ್ನು ಕೇಶರದಲ್ಲಿ ಮತ್ತು ಶೇಷ ವರ್ಣಗಳಿಂದ ದಶದಳವನ್ನು ವೇಷ್ಟಿತಗೊಳಿಸಬೇಕು. ಭೂಪುರದ ಕೋನಗಳಲ್ಲಿ ಪಂಚಭೂತ ವರ್ಣಗಳನ್ನು ಬರೆಯಬೇಕು.

ಅಭಿಷೇಕ ವಿಧಾನ

ಶುದ್ಧಭೂಮಾವಷ್ಟಗಂಧೈರ್ಲಿಖಿತ್ವಾ ಯಂತ್ರಮಾದರಾತ್ ।
ತತ್ರ ಕುಂಭಂ ಪ್ರತಿಷ್ಠಾಪ್ಯ ತತ್ರಾವಾಹ್ಯಾರ್ಚಯೇನ್ನೃಪಮ್ ॥ 23 ॥
ಸ್ಪೃಷ್ಟ್ವಾ ಕುಂಭಂ ಜಪೇನ್ಮಂತ್ರಂ ಸಹಸ್ರಂ ವಿಜಿತೇಂದ್ರಿಯಃ ।
ಅಭಿಷಿಂಚೇತ್ತದಂಭೋಭಿಃ ಪ್ರಿಯಂ ಸರ್ವೇಷ್ಟಸಿದ್ಧಯೆ ॥ 24 ॥

ಶುದ್ಧ ಭೂಮಿಯಲ್ಲಿ ಶ್ರದ್ಧಾ ಪೂರ್ವಕವಾಗಿ ಅಷ್ಟಗಂಧದಿಂದ ಮಂತ್ರವನ್ನು ಬರೆದು ಅದರ ಮೇಲೆ ಕುಂಭವನ್ನು ಪ್ರತಿಷ್ಠಾಪನೆ ಮಾಡಿ ಅದರಲ್ಲಿ ಕಾರ್ತವೀರ್ಯಾರ್ಜುನನನ್ನು ಆವಾಹನ ಮಾಡಿ ವಿಧಿಪೂರ್ವಕವಾಗಿ ಪೂಜೆ ಮಾಡಬೇಕು.

ನಂತರ ಇಂದ್ರಿಯ ಸಂಯಮವನ್ನು ಸಾಧಿಸಿ ಸಾಧಕರು ಕಲಶವನ್ನು ಸ್ಪರ್ಶ ಮಾಡಿ ಮೂಲಮಂತ್ರದ ಒಂದು ಸಾವಿರ ಜಪ ಮಾಡಬೇಕು. ನಂತರ ಆ ಕಲಶದ ಜಲದಿಂದ ತನ್ನನ್ನು ಮತ್ತು ತನ್ನ ಕುಟುಂಬದ ಜನರನ್ನು ಅಭಿಷೇಕ ಮಾಡಬೇಕು.

ಈ ಮಂತ್ರದಿಂದ ಒಂದು ಲಕ್ಷ ಜಪ ಮಾಡಬೇಕು. ಎಳ್ಳುಗಳಿಂದ ಅಥವಾ ಅಕ್ಕಿ ಮಿಶ್ರಿತ ಪಾಯಸದಿಂದ ಅದರ ದಶಾಂಶ ಹೋಮ ಮಾಡಬೇಕು. ವೃತ್ತಾಕಾರದ ಕರ್ಣಿಕಾ, ನಂತರ ವಕ್ಷ್ಯಮಾಣ ದಶದಲ ಮತ್ತು ಅದರ ಮೇಲಿನ ಭೂಪುರದಿಂದ ಯುಕ್ತ ವೈಷ್ಣವ ಪೀಠದ ಮೇಲೆ ವೈಷ್ಣವಿ ಶಕ್ತಿಗಳನ್ನು ಪೂಜೆ ಮಾಡಿ ಅದರ ಮೇಲೆ ಅವುಗಳನ್ನು ಪೂಜಿಸಬೇಕು.

ಕಾರ್ತವೀರ್ಯನ ಪೂಜೆಯನ್ನು ಷಟ್ಕೋನಯುಕ್ತ ಯಂತ್ರದಲ್ಲಿ ಎಂದು ಹೇಳಲಾಗಿದೆ. ಕೇಸರದಲ್ಲಿ ಪೂರ್ವಾದಿ ಅಷ್ಟ ದಿಶೆಗಳಲ್ಲಿ ಮತ್ತು ಮಧ್ಯದಲ್ಲಿ ವೈಷ್ಣವೀ ಶಕ್ತಿಯನ್ನು ಈ ಪ್ರಕಾರ ಪೂಜೆ ಮಾಡಬೇಕು.

ಓಂ ವಿಮಲಾಯೈ ನಮಃ ಪೂರ್ವೆ, ಓಂ ಉತ್ಕರ್ಷಿಣ್ಯೈ ನಮಃ ಆಗ್ನಯೆ ।
ಓಂ ಜ್ಞಾನಾಯೈ ನಮಃ ದಕ್ಷಿಣೆ, ಓಂ ಕ್ರಿಯಾಯೈ ನಮಃ ನೈಋತ್ಯೆ ।
ಓಂ ಭೋಗಾಯೈ ನಮಃ ಪಶ್ಚಿಮೆ, ಓಂ ಪ್ರಹ್ವೈ ನಮಃ ವಾಯುವ್ಯೆ ।
ಓಂ ಸತ್ಯಾಯೈ ನಮಃ ಉತ್ತರೆ, ಓಂ ಈಶಾನಾಯೈ ನಮಃ ಈಶಾನ್ಯೆ ।
ಓಂ ಅನುಗ್ರಹಾಯೈ ನಮಃ ಮಧ್ಯೆ

ನಂತರ ವೈಷ್ಣವ ಆಸನ ಮಂತ್ರದಿಂದ ಆಸನವನ್ನು ಕೊಟ್ಟು ಮೂಲಮಂತ್ರದಿಂದ ಅದರ ಮೇಲೆ ಕಾರ್ತವೀರ್ಯನ ಸ್ವರೂಪದ ಕಲ್ಪನೆ ಮಾಡಿ ಆವಾಹನದಿಂದ ಪುಷ್ಪಾಂಜಲಿ ಪರ್ಯಂತ ವಿಧಿವತ್ ಅವರ ಪೂಜೆ ಮಾಡಿ ಆಜ್ಞೆಯನ್ನು ಪಡೆದುಕೊಂಡು ಆವರಣ ಪೂಜೆಯನ್ನು ಪ್ರಾರಂಭ ಮಾಡಬೇಕು.

ಮಧ್ಯೇಗ್ನೀಶಾಸುರಮರುತ್ಕೋಣೇಷು ಹೃದಯಾದಿಕಾನ್ ।
ಚತುರಂಗಂ ಚ ಸಂಪೂಜ್ಯ ಸರ್ವತೋಽಸ್ತ್ರಂ ತತೋಽಯಜೇತ್ ॥ 15 ॥

ಖಡ್ಗಚರ್ಮಧರಾಧ್ಯೇಯಾಶ್ಚಂದ್ರಾಭಾ ಅಂಗಮೂರ್ತಯಃ ।
ಷಟ್‌ಕೋಣೇಷು ಷಡಂಗಾನಿ ತತೋ ದಿಕ್ಷು ವಿದಿಕ್ಷು ಚ ॥ 16 ॥

ಚೋರಮದವಿಭಂಜನಂ ಮಾರೀಮದವಿಭಂಜನಮ್ ।
ಅರಿಮದವಿಭಂಜನಂ ದೈತ್ಯಮದವಿಭಂಜನಮ್ ॥ 17 ॥

ದುಃಖನಾಶಂ ದುಷ್ಟನಾಶಂ ದುರಿತಾಮಯನಾಶಕೌ ।
ದಿಕ್ಷ್ವಷ್ಟಶಕ್ತಯಃ ಪೂಜ್ಯಾಃ ಪ್ರಾಚ್ಯಾದಿಷು ಸಿತಪ್ರಭಾಃ ॥ 18 ॥

ಕ್ಷೇಮಂಕರಿ ವಶ್ಯಕರಿ ಶ್ರೀಕರಿ ಚ ಯಶಸ್ಕರಿ ।
ಆಯುಷ್ಕರಿ ತಥಾ ಪ್ರಜ್ಞಾಕರಿ ವಿದ್ಯಾಕರಿ ಪುನಃ ॥ 19 ॥



ಧನಕರ್ಯಷ್ಟಮಿ ಪಶ್ಚಾಲ್ಲೋಕೇಶಾ ಅಸ್ತ್ರಸಂಯುತಾ ।
ಏವಂ ಸಂಸಾಧಿತೋ ಮಂತ್ರಃ ಪ್ರಯೋಗಾರ್ಹಃ ಪ್ರಜಾಯತೆ ॥ 20 ॥

ಮಧ್ಯದಲ್ಲಿ ಆಗ್ನೇಯ, ಈಶಾನ, ನೈಋತ್ಯ, ಮತ್ತು ವಾಯುವ್ಯ ಕೋನಗಳಲ್ಲಿ ಹೃದಯಾದಿ ನಾಲ್ಕು ಅಂಗಗಳ ಪುನಃ ನಾಲ್ಕು ದಿಕ್ಕುಗಳಲ್ಲಿ ಅಸ್ತ್ರಗಳ ಪೂಜೆ ಮಾಡಬೇಕು.

ನಂತರ ಢಾಲು-ಖಡ್ಗಗಳನ್ನು ಹಿಡಿದು ಚಂದ್ರನ ಕಾಂತಿಯುತವಾದ ಷಡಂಗ ಮೂರ್ತಿಗಳನ್ನು ಧ್ಯಾನಿಸುತ್ತ ಷಟ್ಕೋನಗಳಲ್ಲಿ ಷಡಂಗಪೂಜೆ ಮಾಡಬೇಕು.

ಆಮೇಲೆ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಮತ್ತು ಆಗ್ನೇಯಾದಿ ನಾಲ್ಕು ಕೋನಗಳಲ್ಲಿ 1. ಚೋರಮದವಿಭಂಜನ 2. ಮಾರೀಮದವಿಭಂಜನ 3. ಅರಿಮದವಿಭಂಜನ 4. ದೈತ್ಯಮದವಿಭಂಜನ 5. ದುಃಖನಾಶಕ 6. ದುಷ್ಟನಾಶಕ 7. ದುರಿತನಾಶಕ ಮತ್ತು 8. ರೋಗನಾಶಕರನ್ನು ಪೂಜೆ ಮಾಡಬೇಕು. ಪುನಃ ಪೂರ್ವಾದಿ ಅಷ್ಟ ದಿಶಾಗಳಲ್ಲಿ ಶ್ವೇತಕಾಂತಿಯುಕ್ತ ಅಷ್ಟ ಶಕ್ತಿಗಳನ್ನು ಪೂಜೆ ಮಾಡಬೇಕು.

1. ಕ್ಷೇಮಂಕರಿ 2. ವಶ್ಯಕರಿ 3. ಶ್ರೀಹರಿ 4. ಯಶಸ್ಕರಿ 5. ಆಯುಷ್ಕರಿ 6. ಪ್ರಜ್ಞಾಕರಿ 7. ವಿದ್ಯಾಕರಿ 8. ಧನಕರಿ ಈ ಎಂಟು ಶಕ್ತಿಗಳಿರುತ್ತವೆ. ನಂತರ ದಶ ದಿಕ್ಪಾಲಕರನ್ನು ಅವರ ಆಯುಧ ಸಹಿತವಾಗಿ ಪೂಜೆ ಮಾಡಬೇಕು. ಈ ಪ್ರಕಾರ ಸಾಧನೆಯಿಂದ ಮಂತ್ರವು ಸಿದ್ಧವಾದ ಮೇಲೆ ಕಾಮ್ಯ ಪ್ರಯೋಗಗಳನ್ನು ಮಾಡಲು ಸಾಧ್ಯವಾಗುತ್ತದೆ.

ಆವರಣ ಪೂಜಾ : ಪ್ರಪ್ರಥಮವಾಗಿ ಕರ್ಣಿಕಾದಲ್ಲಿ ಆಗ್ನೇಯಾದಿ ಕೋನಗಳಲ್ಲಿ ಪಂಚಾಂಗ ಪೂಜೆ ಮಾಡಬೇಕು.

ಆಂ ಘ್ರೋಂ ಶ್ರೀಂ ಹೃದಯಾಯ ನಮಃ ಆಗ್ನೆಯೆ
ಈಂ ಕ್ಲೀಂ ಭ್ರೂಂ ಶಿರಸೆ ಸ್ವಾಹಾ ಈಶಾನ್ಯೆ ।
ಹುಂ ಶಿಖಾಯೈ ವಷಟ್ ನೈಋತ್ಯೆ ।
ಕ್ಲೈಂ ಶ್ರೈಂ ಕವಚಾಯ ಹುಮ್ ವಾಯುವ್ಯೆ ।
ಹುಂ ಫಟ್ ಅಸ್ತ್ರಾಯ ಸರ್ವದಿಕ್ಷು
ಷಡಂಗಪೂಜೆ : ಓಂ ಫ್ರಾಂ ಹೃದಯಾಯ ನಮಃ,
ಓಂ ಫ್ರೀಂ ಶಿರಸೆ ಸ್ವಾಹಾ, ಓಂ ಫ್ರೂಂ ಶಿಖಾಯೈ ವಷಟ್, ।
ಓಂ ಫ್ರೈಂ ಕವಚಾಯ ಹುಮ್, ಓಂ ಫ್ರೌಂ ನೇತ್ರತ್ರಯಾಯ ವೌಷಟ್,

ಮಾಡಬೇಕು. ನಂತರ ಕಾರ್ತವೀರ್ಯಾರ್ಜುನಾಯ ನಮಃ ದಿಂದ ವ್ಯಾಪಕ ನ್ಯಾಸ ಮಾಡಬೇಕು.

**ಆಂ ಫ್ರೋಂ ವ್ರೀಂ ಹೃದಯಾಯ ನಮಃ, ಈಂ ಕ್ಲೀಂ ಭ್ರೂಂ ಶಿರಸೆ ಸ್ವಾಹಾ, ಹುಂ ಶಿಖಾಯೈ ವಷಟ್, ಕ್ರೈಂ ಶ್ರೈಂ ಕವಚಾಯ ಹುಮ್, ಹುಂ ಫಟ್ ಅಸ್ತ್ರಾಯ ಫಟ್**

ಈ ಪ್ರಕಾರ ಷಡಂಗನ್ಯಾಸ ಮಾಡಿ, ಕಾರ್ತವೀರ್ಯಾರ್ಜುನಾಯ ನಮಃದಿಂದ ಸರ್ವಾಂಗನ್ಯಾಸ ಮಾಡಬೇಕು.

**ವರ್ಮಾಸ್ತ್ರಾಭ್ಯಾಮಸ್ತ್ರಮುಕ್ತಂ ಶೇಷಾಣ್ಯೈರ್ವ್ಯಾಪಕಂ ಚರೇತ್ ।**
**ಹೃದಯೆ ಜಠರೇ ನಾಭೌ ಜಠರೇ ಗುಹ್ಯಾದೇಶಕೆ** ॥ 8 ॥

**ದಕ್ಷಪಾದೆ ವಾಮಪಾದೆ ಸಕ್ಥಿಜಾನುನಿ ಜಂಘಯೋಃ ।**
**ವಿನ್ಯಸೇದ್ ಬೀಜದಶಕಂ ಪ್ರಣವದ್ವಯ ಮಧ್ಯಗಮ್** ॥ 9 ॥

**ತಾರಾದ್ಯಾನ್ ನವಶೇಷರ್ಣಾನ್ ಮಸ್ತಕೆ ಚ ಲಲಾಟಕೆ ।**
**ಭ್ರುವೋಃ ಶ್ರುತ್ಯೋಸ್ತಥೈವಾಕ್ಷ್ಣೋರ್ನಸಿ ವಕ್ತ್ರೆ ಗಲೇಂಸಕೆ** ॥ 10 ॥

**ಸರ್ವಮಂತ್ರೇಣ ಸರ್ವಾಂಗೆ ಕೃತ್ವಾ ವ್ಯಾಪಕಮದ್ವಯಃ ।**
**ಸರ್ವೇಷ್ಟಸಿದ್ಧಯೆ ಧ್ಯಾಯೇತ್ ಕಾರ್ತವೀರ್ಯ ಜನೇಶ್ವರಮ್** ॥ 11 ॥

**ವರ್ಣನ್ಯಾಸ** : ಮಂತ್ರದ ಹತ್ತು ಬೀಜಾಕ್ಷರಗಳನ್ನು ಪ್ರಣವದಿಂದ ಸಂಪುಟಿತಗೊಳಿಸಿ ಯಥಾಕ್ರಮ, ಹೃದಯ, ಜಠರ, ನಾಭಿ, ಗುಹ್ಯ, ಎಡಗಾಲು, ಬಲಗಾಲು, ಎರಡೂ ಸಕ್ಥಿ, ಎರಡೂ ತೊಡೆಗಳು, ಎರಡು ಮೊಳಕಾಲುಗಳು ಮತ್ತು ಉಳಿದ 9 ವರ್ಣಗಳಲ್ಲಿ ಒಂದೊಂದು ವರ್ಣದಿಂದ ಮಸ್ತಕ, ಲಲಾಟ, ಭ್ರೂ, ಕರ್ಣ, ನೇತ್ರ, ನಾಸಿಕ, ಬಾಯಿ, ಮತ್ತು ಕಂಠ ಮತ್ತು ಎರಡೂ ಹೆಗಲುಗಳ ಮೇಲೆ ನ್ಯಾಸ ಮಾಡಬೇಕು.

ನಂತರ ಎಲ್ಲ ಅಂಗಗಳ ಮೇಲೆ ಮಂತ್ರದ ಎಲ್ಲಾ ವರ್ಣಗಳಿಂದ ವ್ಯಾಪಕ ನ್ಯಾಸ ಮಾಡಿದ ನಂತರ ಅಭೀಷ್ಟ ಸಿದ್ಧಿಗಾಗಿ ರಾಜಾ ಕಾರ್ತವೀರ್ಯನನ್ನು ಧ್ಯಾನಿಸಬೇಕು.

**ವಿಧಾನ** : ಓಂ ಫ್ರೋಂ ಓಂ ಹೃದಯೆ, ಓಂ ವ್ರೀಂ ಓಂ ಜಠರೆ, ಓಂ ಕ್ಲೀಂ ಓಂ ನಾಭೌ, ಓಂ ಭ್ರೂಂ ಓಂ ಗುಹ್ಯೋ, ಓಂ ಆಂ ಓಂ ದಕ್ಷಪಾದೆ, ಓಂ ಹ್ರೀಂ ಓಂ ವಾಮಪಾದೆ,





ಓಂ ಹ್ರೀಂ ಓಂ ವಾಮಪಾದೆ, ಓಂ ಫ್ರೋಂ ಓಂ ಸಕ್ಥ್ನೋ, ಓಂ ಶ್ರೀಂ ಓಂ ಊರ್ವೋ, ಓಂ ಹುಂ ಓಂ ಜಾನುನೋ, ಓಂ ಫಟ್ ಓಂ ಜಂಘಯೋ, ಓಂ ಕಾಂ ಮಸ್ತಕೆ.

ಓಂ ರ್ತ ಲಲಾಟೆ, ಓಂ ವೀಂ ಭ್ರುವೋ, ಓಂ ರ್ಯಾ ಕರ್ಣಯೋ, ಓಂ ರ್ಜು ನೇತ್ರಯೋ, ಓಂ ನಾಂ ನಾಸಿಕಾಯಾಮ್, ಓಂ ಯಂ ಮುಖೆ, ಓಂ ನಂ ಗಲೆ, ಓಂ ಮಃ ಸ್ಕಂಧೆ

ಈ ಪ್ರಕಾರ ನ್ಯಾಸಮಾಡಿ – ಓಂ ಫ್ರೋಂ ಶ್ರೀಂ ಕ್ಲೀಂ ಭ್ರೂಂ ಆಂ ಹ್ರೀಂ ಫ್ರೋಂ ಶ್ರೀಂ ಹುಂ ಫಟ್ ಕಾರ್ತವೀರ್ಯಾರ್ಜುನಾಯ ನಮಃ ಸರ್ವಾಂಗೆ ಮಂತ್ರದಿಂದ ವ್ಯಾಪಕ ನ್ಯಾಸ ಮಾಡಬೇಕು.

**ಉದ್ಯತ್ಸೂರ್ಯಸಹಸಕಾಂತಿರಖಿಲಕ್ಷೋಣಿಧವೈರ್ವಂದಿತೊ ।**
**ಹಸ್ತಾನಾಂ ಶತಪಂಚಕೇನ ಚ ದಧಚಚಾಪಾನಿಷೂಂಸ್ತಾವತಾ ॥**
**ಕಂಠೆ ಹಾಟಕಮಾಲಯಾ ಪರಿವೃತಶ್ಚಕ್ರಾವತಾರೋ ಹರೇಃ ।**
**ಪಾಯಾತ್ ಸ್ಯಂದನಗೋರುಣಾಭವಸನಃ ಶ್ರೀಕಾರ್ತವೀರ್ಯೋನೃಪಃ** ॥ 12 ॥

**ಲಕ್ಷಮೇಕಂ ಜಪೇನ್ಮಂತ್ರಂ ದಶಾಂಶಂ ಜುಹುಯಾತ್ತಿಲೈಃ ।**
**ಸತಂಡುಲೈಃ ಪಾಯಸೇನ ವಿಷ್ಣುಪೀಠೆ ಯಜೇತ್ ತಮ** ॥ 13 ॥

**ವಕ್ಷ್ಯಮಾಣೆ ದಶದಲೆ ವೃತ್ತ ಭೂಪುರ ಸಂಯುತೆ ।**
**ಸಂಪೂಜ್ಯ ವೈಷ್ಣವೀ ಶಕ್ತಿ ಸ್ತತ್ರಾವಾಹ್ಯಾರ್ಚಯೇನ್ ನೃಪಮ್** ॥ 14 ॥




ಉದಯಿಸುತ್ತಿರುವ ಸಹಸ್ರ ಸೂರ್ಯರ ಸಮಾನ ಕಾಂತಿಯುಳ್ಳ ಸಕಲ ರಾಜರಿಂದ ವಂದಿತ, ತನ್ನ ಐದು ನೂರು ಕೈಗಳಲ್ಲಿ ಧನುಷ ಮತ್ತು ಐದು ನೂರು ಕೈಗಳಲ್ಲಿ ಬಾಣಗಳನ್ನು ಹಿಡಿದು ಸುವರ್ಣ ಮಾಲೆಗಳನ್ನು ಕಂಠದಲ್ಲಿ ಧರಿಸಿದ, ರಥಾರೂಢನಾದ ಸಾಕ್ಷಾತ್ ಸುದರ್ಶನಾವತಾರನಾದ ಕಾರ್ತವೀರ್ಯನು ನಮ್ಮನ್ನು ರಕ್ಷಿಸಲಿ.

# ॥ ಸಪ್ತದಶ ತರಂಗ ॥



## ಕಾರ್ತವೀರ್ಯಾರ್ಜುನ ಮಂತ್ರಸಾಧನಾ

ಅಥೇಷ್ಟದಾನ ಮನೂನ್ ವಕ್ಷೆ ಕಾರ್ತವೀರ್ಯಸ್ಯ ಗೋಪಿತಾನ್ ।
ಯಃ ಸುದರ್ಶನಚಕ್ರಸ್ಯಾವತಾರಃ ಕ್ಷಿತಿಮಂಡಲೆ ॥ 1 ॥

ವಹ್ನಿತಾರಯುತಾರೌದ್ರಿಲಕ್ಷ್ಮಿರಗ್ನಿಂದುಶಾಂತಿಯುಕ್ ।
ವೇಧಾಧರೇಂದುಶಾಂತ್ಯಾಢ್ಯೋ ನಿದ್ರಾರ್ಘೀಶಾಗ್ನಿಬಿಂದುಯುಕ್ ॥ 2 ॥

ಪಾಶೊ ಮಾಯಾಂಕುಶಂ ಪದ್ಮಾವರ್ಮಾಸ್ತ್ರೇಕಾರ್ತವೀಪದಮ್ ।
ರೇಫೋ ವಾಯ್ವಾಸನೋಂತೊ ವಹ್ನಿಜಾ ಕರ್ಣಸಂಸ್ಥಿತೌ ॥ 3 ॥

ಮೇಷಃ ಸದೀರ್ಘಃ ಪವನೊ ಮನುರುಕ್ತೊ ಹೃದಂತಿಕಃ ।
ಊನವಿಂಶತಿವರ್ಣೋಯಂ ತಾರಾದಿರ್ನಖವರ್ಣಕಃ ॥ 4 ॥

ಶಂಕರಾಚಾರ್ಯಾದಿ ಆಚಾರ್ಯರು ಈವರೆಗೂ ಅಪ್ರಕಾಶಿತವಾದ ಅಭೀಷ್ಟ ಫಲದಾಯಕ ಕಾರ್ತವೀರ್ಯ ಮಂತ್ರಗಳನ್ನು ಈಗ ಹೇಳಲಾಗುತ್ತದೆ. ಕಾರ್ತ್ಯವೀರ್ಯಾರ್ಜುನ ಭೂಮಂಡಲದಲ್ಲಿ ಸುದರ್ಶನ ಚಕ್ರದ ಅವತಾರವೆಂದು ಭಾವಿಸಲಾಗುತ್ತದೆ.





ವಹ್ನಿ (ರ), ತಾರ ಸಹಿತ ರೌದ್ರಿ (ಫ) ಅರ್ಥಾತ್ (ಫ್ರೋಂ) ಇಂದು ಮತ್ತು ಶಾಂತಿ ಸಹಿತ ಲಕ್ಷ್ಮಿ (ವ) ಅರ್ಥಾತ್ (ವ್ರೀಂ) ಧರಾ (ಹಲ) ಇಂದು (ಅನುಸ್ವಾರ) ಮತ್ತು ಶಾಂತಿ (ಈಕಾರ) ಸಹಿತ ವೇಧಾ (ಕ) ಅರ್ಥಾತ್ (ಕ್ಲೀಂ). ಅರ್ಘೀಶ (ಊ ಕಾರ) ಅಗ್ನಿ (ರ) ಮತ್ತು ಬಿಂದು (ಅನುಸ್ವಾರ) ಸಹಿತ ನಿದ್ರಾ (ಭ) ಅರ್ಥಾತ್ (ಭ್ರೂಂ) ನಂತರ ಕ್ರಮವಾಗಿ ಪಾಶ (ಆಂ) ಮಾಯಾ (ಹ್ರೀಂ) ಅಂಕುಶ (ಕ್ರೋಂ) ಪದ್ಮ (ಶ್ರೀಂ), ವರ್ಮ (ಹುಂ) ನಂತರ ಅಸ್ತ್ರ (ಫಟ್). 'ಕಾರ್ತವಿ' ಪದ, ವಾಯವಾಸನ (ಯು), ಅನಂತಾ (ಆ) ದಿಂದ ಯುಕ್ತ ರೇಫ (ರ) ಅರ್ಥಾತ್ (ರ್ಯಾ) ಕರ್ಣ (ಉ) ಸಹಿತ ವಹ್ನಿ (ರ) ಮತ್ತು (ಜ) ಅರ್ಥಾತ್ (ರ್ಜು) ಸದೀರ್ಘ (ಆಕಾರ ಯುಕ್ತ) ಮೇಷ (ನ) ಅರ್ಥಾತ್ (ನಾ) ಪವನ (ಯ) ಇದರಲ್ಲಿ ಹೃದಯ (ನಮಃ) ಜೋಡಿಸುವುದರಿಂದ 19 ಅಕ್ಷರಗಳ ಕಾರ್ತವೀರ್ಯಾರ್ಜುನ ಮಂತ್ರವು ಸಿದ್ಧವಾಗುತ್ತದೆ. ಈ ಮಂತ್ರದ ಪ್ರಾರಂಭದಲ್ಲಿ 'ಓಂ' ಸೇರಿಸುವುದರಿಂದ 20 ಅಕ್ಷರಗಳಮಂತ್ರವಾಗುತ್ತದೆ. "(ಓಂ) ಫ್ರೋಂ ವ್ರೀಂ ಕ್ಲೀಂ ಭ್ರೂಂ ಆಂ ಹ್ರೀಂ ಫ್ರೋಂ ಶ್ರೀಂ ಹುಂ ಫಟ್ ಕಾರ್ತವೀರ್ಯಾರ್ಜುನಾಯ ನಮಃ"

ದತ್ತಾತ್ರೇಯೋ ಮುನಿಶ್ಚಾಸ್ಯ ಛಂದೋನುಷ್ಟುಬುದಾಹೃತಮ್ ।
ಕಾರ್ತವೀರ್ಯಾರ್ಜುನೋದೇವೋ ಬೀಜಂ ಶಕ್ತಿರ್ಧ್ರುವಶ್ಚ ಹೃತ್ ॥ 5 ॥

ಶೇಷಾಢ್ಯಬೀಜಯುಗ್ಮೇನ ಹೃದಯಂ ವಿನ್ಯಸೇದ್ ಬುಧಃ ।
ಶಾಂತಿಯುಕ್ತ ಚತುರ್ಥೇನ ಕಾಮಾಢ್ಯೇನ ಶಿರೋಂಗಕಮ್ ॥ 6 ॥

ಇಂದ್ವಾಢ್ಯವಾಮಕರ್ಣಾಢ್ಯ ಮಾಯಯಾರ್ಘೀಶಯುಕ್ತಯಾ ।
ಶಿಖಾಮಂಕುಶಪದ್ಮಾಭ್ಯಾಂ ಸವಾಗ್ಭ್ಯಾಂ ವರ್ಮ ವಿನ್ಯಸೇತ್ ॥ 7 ॥

ಈ ಮಂತ್ರದ ದತ್ತಾತ್ರೇಯ ಋಷಿ, ಅನುಷ್ಟುಪ್ ಛಂದ, ಕಾರ್ತವೀರ್ಯಾರ್ಜುನ ದೇವತೆ, ಧ್ರುವ (ಓಂ) ಬೀಜ ಮತ್ತು ಹೃದ್ (ನಮಃ) ಶಕ್ತಿಯಿರುತ್ತದೆ.

ಶೇಷ (ಆ) ದಿಂದ ಯುಕ್ತ ಪ್ರಥಮ ಎರಡು ಬೀಜ, 'ಆಂ ಫ್ರೋಂ ವ್ರೀಂ ಹೃದಯಾಯ ನಮಃ, ಶಾಂತಿಯಿಂದ (ಈ) ಯುಕ್ತ ಚತುರ್ಥ ಬೀಜ ಭ್ರೂಂ, ಇದರೊಂದಿಗೆ ಕಾಮಬೀಜ (ಕ್ಲೀಂ) ಸೇರಿಸಿ ಅದರಿಂದ ಶಿರ ಅರ್ಥಾತ್ ಈಂ ಕ್ಲೀಂ ಭ್ರೂಂ ಶಿರಸೆ ಸ್ವಾಹಾ, ಇಂದು (ಅನುಸ್ವಾರ) ವಾಮಕರ್ಣ (ಊ ಕಾರ) ಸಹಿತ ಅರ್ಘೀಶ ಮಾಯಾ (ಹ) ಅರ್ಥಾತ್ ಹುಂ ದಿಂದ ಶಿಖೆಯ ಮೇಲೆ ನ್ಯಾಸ ಮಾಡಬೇಕು. ವಾಕ್ ಸಹಿತ ಅಂಕುಶ (ಕ್ರೈಂ) ಮತ್ತು ಪದ್ಮ (ಶ್ರೈಂ) ದಿಂದ ಕವಚದ, ವರ್ಮ ಮತ್ತು ಅಸ್ತ್ರ (ಹುಂ ಫಟ್) ದಿಂದ ಅಸ್ತ್ರನ್ಯಾಸ

ವಾಗ್ (ಐಂ), ಮಾಯಾ (ಹ್ರೀಂ), ಕಮಲಾ (ಶ್ರೀಂ) ಕಾಮ (ಕ್ಲೀಂ) ಮತ್ತು ವೇದಾದಿ (ಓಂ) ನಂತರ ಇಂದುಯುತ್ ವಿಷ (ಮಂ) ನಂತರ 'ಮಣಿಕರ್ಣಿ' ಪದ, ನಂತರ ಬ್ರಹ್ಮಾ (ಕೆ) ಹೃದಯ (ನಮಃ) ಇದನ್ನು ಪ್ರಣವ (ಓಂ)ದಿಂದ ಸಂಪುಟಿತ ಮಾಡುವುದರಿಂದ 15 ಅಕ್ಷರಗಳ ಮಣಿಕರ್ಣಿಕಾ ಮಂತ್ರವು ರಚನೆಯಾಗುತ್ತದೆ.

"ಓಂ ಐಂ ಹ್ರೀಂ ಶ್ರೀಂ ಕ್ಲೀಂ ಓಂ ಮಂ ಮಣಿಕರ್ಣಿಕೆ ನಮಃ ಓಂ"

ಈ ಮಂತ್ರದ ವೇದವ್ಯಾಸ ಋಷಿ, ಅತಿಶಕ್ವರಿ ಛಂದ, ಶ್ರೀ ಮಣಿಕರ್ಣಿ ದೇವತಾ ಇರುತ್ತಾರೆ. ಮಾನವರಿಗೆ ಸುಖ ಮತ್ತು ಸಂತಾನ ಭಾಗ್ಯವನ್ನು ನೀಡುತ್ತಾಳೆ.

ವಿನಿಯೋಗ :

ಅಸ್ಯ ಶ್ರೀ ಮಣಿಕರ್ಣಿಕಾಮಂತ್ರಸ್ಯ ವೇದವ್ಯಾಸ ಋಷಿರತಿಶಕ್ವರಿಛಂದಃ ಶ್ರೀ ಮಣಿಕರ್ಣಿಕಾ ದೇವತಾತ್ಮನೋಭಿಷ್ಟ ಸಿದ್ಧ್ಯರ್ಥೆ ಜಪೇ ವಿನಿಯೋಗಃ

ಮಂತ್ರದ ಕ್ರಮಶಃ ಚಂದ್ರ 1, ನೇತ್ರ 2, ಅಕ್ಷಿ 2, ನೇತ್ರ 2, ಈಬು 5 ಮತ್ತು ವಹ್ನಿ 3 ಅಕ್ಷರಗಳಿಂದ ಷಡಂಗನ್ಯಾಸ ಮಾಡಬೇಕು.

ಓಂ ಹೃದಯಾಯ ನಮಃ, ಓಂ ಐಂ ಹ್ರೀಂ ಶಿರಸೆ ಸ್ವಾಹಾ,
ಓಂ ಶ್ರೀಂ ಕ್ಲೀಂ ಶಿಖಾಯೈ ವಷಟ್, ಓಂಮಂ ಕವಚಾಯ ಹುಮ್,
ಓಂ ಮಣಿಕರ್ಣಿಕೆ ನೇತ್ರತ್ರಯಾಯ ವೌಷಟ್ ನಮಃ,
ಓಂ ನಮಃ ಓಂ ಅಸ್ತ್ರಾಯ ಫಟ್

ಫುಲ್ಲೇಂದಿವರನಿರ್ಮಿತಾಂ ಕರತಲೆ ಮಾಲಾಮಸವ್ಯೆ ಕರೆ
ಬೀಜಾಪೂರಫಲಂ ಸಿತಾಂಬುಜಮಯಿಂ ಮಾಲಾಂ ದಧಾನಾ ಹೃದಿ ।
ಶ್ವೇತಕ್ಷೌಮವೃತಾ ಶರದ್ವಿಧುನಿಭಾ ತ್ರ್ಯಕ್ಷಾ ನಿಬದ್ಧಾಂಜಲಿ –
ರ್ಧ್ಯಾತವ್ಯಾ ಮಣಿಕರ್ಣಿಕಾ ರವಿಸಮಾ ತೋಯೇಶಕಾಷ್ಠಮುಖಿ ॥ 132॥

ಲಕ್ಷತ್ರಯಂ ಜಪೇನ್ಮಂತ್ರಂ ಜುಹುಯಾತ್ತದ್ದಶಾಂಶತಃ ।
ಪುಂಡರೀಕೈಸ್ತ್ರಿಮಧ್ವಕ್ತೈರ್ಯಜತ್ತಾಂ ಗಂಗಯಾ ಸಮಮ್ ॥ 133 ॥

ಅಯಂ ಮನುರ್ಜಪ್ಯೈರ್ಜಪ್ತೊ ಮೋಕ್ಷಲಕ್ಷ್ಮಿಂ ಪ್ರಯಚ್ಛತಿ ।
ಸುಖಂ ಸಮಸ್ತಂ ಸಂತಾನಂ ಸೌಭಾಗ್ಯಂ ಧನಸಂಚಯಮ್ ॥ 134 ॥

ಅರಳಿದ ಕಮಲಗಳ ಮಾಲೆಯನ್ನು ಬಲಗೈಯಲ್ಲಿ ಹಿಡಿದು, ಎಡಗೈಯಲ್ಲಿ





ಬಿಜೌರಾ ಫಲವನ್ನು ಹಿಡಿದು, ಶ್ವೇತ ಕಮಲಗಳ ಮಾಲೆಯನ್ನು ಧರಿಸಿ, ಶ್ವೇತ ವಸ್ತ್ರಗಳನ್ನು ಉಟ್ಟು, ಶರತ್ ಕಾಲದ ಚಂದ್ರನ ಸಮಾನ ಕಾಂತಿಯುತ ಶರೀರವುಳ್ಳ ತ್ರಿನೇತ್ರ ಸೂರ್ಯ ಸಮಾನ ತೇಜಸ್ವಿನಿಯಾದ, ಪಶ್ಚಿಮಾಭಿಮುಖಿಯಾಗಿ ಅಂಜಲೀಬದ್ಧಳಾದ ಶ್ರೀ ಮಣಿಕರ್ಣಿಕಾ ಭಗವತಿಯನ್ನು ಧ್ಯಾನಿಸಬೇಕು.

ಈ ಮಂತ್ರದ ಮೂರು ಲಕ್ಷ ಜಪ ಮತ್ತು ತ್ರಿಮಧುರ (ಜೇನು-ತುಪ್ಪ-ಸಕ್ಕರೆ) ಮಿಶ್ರಿತ ಕಮಲದ ಹೂಗಳಿಂದ ದಶಾಂಶ ಹೋಮ ಮಾಡಬೇಕು. ಗಂಗಾ ದೇವಿಯ ಸಮಾನ ಮಣಿಕರ್ಣಿಕಾ ಆವರಣ ಪೂಜೆಯನ್ನು ಮಾಡಬೇಕು.

ಈ ಮಂತ್ರದ ಸಾಧನೆಯಿಂದ ಸಾಧಕರಿಗೆ ಮೋಕ್ಷ, ಐಶ್ವರ್ಯ, ಸೌಭಾಗ್ಯ ಮತ್ತು ಸಂತಾನ ಪ್ರಾಪ್ತಿಯಾಗುತ್ತದೆ. ಮತ್ತು ಅಪಾರ ಧನ ಸಂಪತ್ತು, ಸೌಖ್ಯ ಪ್ರಾಪ್ತವಾಗುತ್ತವೆ.

ಪ್ರಣವೋ ಬಿಂದುಯಂಮೊಂತೆ ಮಣ್ಯಂತೆ ಕರ್ಣಿಕೆಪ್ರಣ ।
ವಾಲ್ಮಿಕೆ ಹೃದಯಂ ಮಂತ್ರೋ ಮನುವರ್ಣೋಸ್ಯ ಪೂರ್ವವತ್ ॥ 135॥

ವಿಧೇಯೋಪಾಸನಾ ಸರ್ವಾ ಮಣಿಕರ್ಣ್ಯಾ ಉಪಾಸಕಃ ।
ಕುದೇಶೇಪಿ ಮೃತೋ ಯಾತಿ ಬ್ರಹ್ಮಾವಾಮಲವ್ಯಯಮ್ ॥ 136 ॥

ಪ್ರಣವ (ಓಂ) ಬಿಂದು ಸಹಿತ ಮ (ಮಂ) ನಂತರ 'ಮಣಿ' 'ಕರ್ಣಿಕೆ ಪ್ರಣವಾತ್ಮಿಕೆ' ಕೊನೆಯಲ್ಲಿ ಹೃದಯ (ನಮಃ) ಸೇರಿಸುವುದರಿಂದ ಹದಿನಾಲ್ಕು ಅಕ್ಷರಗಳ ಮಣಿಕರ್ಣಿಕಾದ ಇನ್ನೊಂದು ಮಂತ್ರ ರಚನೆಯಾಗುತ್ತದೆ. "ಓಂ ಮಂ ಮಣಿಕರ್ಣಿಕಾಪ್ರಣವಾತ್ಮಿಕೆ ನಮಃ"

ಎಲ್ಲರೂ ಮಣಿಕರ್ಣಿಕ ಮಂತ್ರೋಪಾಸನೆಯನ್ನು ಮಾಡಬೇಕು. ಏಕೆಂದರೆ ಆದರಿಂದ ಮಗಧ ಮುಂತಾದ ನಿಂದಿತ ಪ್ರದೇಶಗಳಲ್ಲಿ ಮೃತ್ಯುವಾದರೂ ಕೂಡಾ ಸಾಧಕರು ಅಮಲ, ಅವ್ಯಯ ಮತ್ತು ಬ್ರಹ್ಮತ್ವವನ್ನು ಪಡೆದುಕೊಳ್ಳುತ್ತಾರೆ.

[ಈ ಪ್ರಕಾರ ಶ್ರೀ ಮನ್‌ಮಹೀಧರ ವಿರಚಿತ ಮಂತ್ರಮಹೋದಧಿಯ ಷೋಡಶ ತರಂಗವು ಸಮಾಪ್ತವು]

ರಾಮವೇದಾಂಗವಹ್ನ್ಯಂಕನೇತ್ರಾರ್ಣೈರಂಗಮೀರಿತಮ್ ।
ಇಯಮಾದಿಮಸಪ್ತಾರ್ಣಾತ್ಯಕ್ತೋಕ್ತಾ ನಖರಾಕ್ಷರಿ

ಬಾಣವೇದಾಗ್ನಿರಾಮಾಗ್ನಿ ನೇತ್ರಾರ್ಣೈರಂಗಮೀರಿತಮ್ । ॥ 125 ॥
ತಾರೋ ಹಿಲಿಮಿಲಿದ್ವಂದ್ವೆ ಗಂಗೆ ದೇವಿ ನಮೋ ಮನುಃ

ತಿಥಿವರ್ಣೋ ಯಮಸ್ಯಾಗ್ನಿನೇತ್ರಾಕ್ಷಕ್ಷಿಯುಗಾಕ್ಷಿಭಿಃ । ॥ 126 ॥
ತಾರೋ ಮಾಯಾರಮಾಹಾರ್ದ ತತೋ ಭಗವತೀತಿ ಚ ॥ 127 ॥

ತಾರ (ಓಂ) ನಂತರ 'ನಮೋ ಭಗವತಿ' ವಾಕ್ (ಓಂ), ಸದ್ಯಗ್ ಇ ದಿಂದ ಯುಕ್ತ ಸಹಿತ ತಂದ್ರಿ (ಮ), ಪಿನಾಕೀಶ (ಲ), ವಿಷ (ಮ), ಮತ್ತು ಲ (ಮಿಲಿ ಮಿಲಿ) ನಂತರ 'ಗಂಗೆ ಮಾ', ಆಮೇಲೆ ಎರಡು ಬಾರಿ ಪಾವಯ (ಪಾವಯ ಪಾವಯ) ಮತ್ತು ಅಂತ್ಯದಲ್ಲಿ ಹುತವಹಾಂಗನಾ (ಸ್ವಾಹಾ) ಸೇರಿಸುವುದರಿಂದ 27 ಅಕ್ಷರಗಳ, ಪಾತಕಗಳ ಸಮೂಹವನ್ನೇ ನಷ್ಟ ಮಾಡುವಂಥ ಗಂಗಾ ಮಂತ್ರವು ರಚನೆಯಾಗುತ್ತದೆ.

"ಓಂ ನಮೋ ಭಗವತಿ ಏಂ ಹಿಲಿ ಹಿಲಿ ಮಿಲಿ ಮಿಲಿ ಗಂಗೇ ಮಾಂ ಪಾವಯ ಪಾವಯ ಸ್ವಾಹಾ"

ಮಂತ್ರದ 3,4,6,3,9 ಮತ್ತು ಎರಡು ವರ್ಣಗಳಿಂದ ಷಡಂಗನ್ಯಾಸ ಮಾಡಬೇಕು.

ಓಂ ನಮೋ ಹೃದಯಾಯ ನಮಃ, ಭಗವತಿ ಶಿರಸೇ ಸ್ವಾಹಾ, ಏಂ ಹಿಲಿ ಹಿಲಿ ಮಿ ಶಿಖಾಯೈ ವಷಟ್ । ಲಿ ಮಿಲಿ ಕವಚಾಯ ಹುಮ್, ಗಂಗೆ ಮಾ ಪಾವಯ ಪಾವಯ ನೇತ್ರತ್ರಯಾಯ ವೌಷಟ್, ಸ್ವಾಹಾ ಅಸ್ತ್ರಾಯ ಫಟ್।

ಈ ಮಂತ್ರದ ಪ್ರಾರಂಭದ ಏಳು ಅಕ್ಷರಗಳನ್ನು ತೆಗೆದು ಹಾಕಿದರೆ 20 ಅಕ್ಷರಗಳ ಅನ್ಯ ಗಂಗಾಮಂತ್ರವು ರಚನೆಯಾಗುತ್ತದೆ.

ಏಂ ಹಿಲಿ ಹಿಲಿ ಮಿಲಿ ಮಿಲಿ ಗಂಗೆ ಮಾಂ ಪಾವಯ ಪಾವಯ ಸ್ವಾಹಾ।

ಈ ಮಂತ್ರದ 5,4,3,3,3 ಮತ್ತು 2 ವರ್ಣಗಳಿಂದ ಷಡಂಗನ್ಯಾಸ ಮಾಡುವ ವಿಧಾನವಿದೆ.

ಏಂ ಹಿಲಿ ಹಿಲಿ ಹೃದಯಾಯ ನಮಃ, ಮಿಲಿ ಮಿಲಿ ಶಿರಸೆ ಸ್ವಾಹಾ, ಗಂಗೆ ಮಾಂ ಶಿಖಾಯೈ ವಷಟ್, ಪಾವಯ ಕವಚಾಯ ಹುಮ್, ಪಾವಯ ನೇತ್ರತ್ರಯಾಯ ವೌಷಟ್, ಸ್ವಾಹಾ ಅಸ್ತ್ರಾಯ ಫಟ್

ತಾರ (ಓಂ) ನಂತರ ಎರಡು ಬಾರಿ 'ಹಿಲಿಮಿಲಿ' ನಂತರ 'ಗಂಗೇ ದೇವಿ





ನಮಃ' ಇದು ಹದಿನೈದು ಅಕ್ಷರಗಳ ಇನ್ನೊಂದು ಗಂಗಾ ಮಂತ್ರವಾಗಿದೆ. "ಓಂ ಹಿಲಿ ಹಿಲಿ ಮಿಲಿ ಮಿಲಿ ಗಂಗೆ ದೇವಿ ನಮಃ"

ಷಡಂಗನ್ಯಾಸ : ಓಂ ಹಿಲಿ ಹೃದಯಾಯ ನಮಃ, ಹಿಲಿ ಶಿರಸೆ ಸ್ವಾಹಾ, ಮಿಲಿ ಶಿಖಾಯೈ ವಷಟ್, ಮಿಲಿ ಕವಚಾಯ ಹುಮ್, ಗಂಗೆ ದೇವಿ ನೇತ್ರತ್ರಯಾಯ ವೌಷಟ್,
ನಮಃ ಅಸ್ತ್ರಾಯ ಫಟ್

ಗಂ ಸ್ಮೃತ್ಯೈ ತ್ರಿಸದ್ಯಗ್ವಾಯುಸ್ತೆ ನಮೋ ಮರ್ಮಫಡಮನುಃ ।
ತ್ರಿನೇತ್ರವೇದಪಂಚಾಕ್ಷಿಯುಗ್ಮಾನೈರಂಗಮೀರಿತಮ್ ॥ 128 ॥
ಏಷಾಂ ಚತುರ್ಣಾಂ ಮಂತ್ರಾಣಾಮುಪಾಸ್ತಿಃ ಪೂರ್ವವನ್ಮತಾ ।

ತಾರ (ಓಂ), ಮಾಯಾ (ಹ್ರೀಂ), ರಮಾ (ಶ್ರೀಂ), ಹಾರ್ದ (ನಮಃ) ನಂತರ 'ಭಗವತಿ ಗಂ' ಆಮೇಲೆ ಸ್ಮೃತಿ (ಗ), ಅತ್ರಿ (ದ) ಸದ್ಯಗ್ ವಾಯು (ಯಿ), ತೆ, ನಂತರ ನಮೌ, ವರ್ಮ (ಹುಂ) ಮತ್ತು ಅಂತದಲ್ಲಿ ಫಟ್ ಜೋಡಿಸುವುದರಿಂದ 18 ಅಕ್ಷರಗಳ ಗಂಗಾ ಮಂತ್ರವು ರಚನೆಯಾಗುತ್ತದೆ.

"ಓಂ ಹ್ರೀಂ ಶ್ರೀಂ ನಮೋ ಭಗವತಿ ಗಂಗದಯಿತೆ ನಮೋ ಹುಂ ಫಟ್"
ಮಂತ್ರದ 3,2,4,5,2 ಮತ್ತು 3 ಅಕ್ಷರಗಳಿಂದ ಷಡಂಗನ್ಯಾಸ ಮಾಡಬೇಕು.
ಓಂ ಹ್ರೀಂ ಶ್ರೀಂ ಹೃದಯಾಯ ನಮಃ, ನಮೋ ಶಿರಸೆ ಸ್ವಾಹಾ ಭಗವತಿ ಶಿಖಾಯೈ ವಷಟ್, ಗಂಗದಯಿತೆ ಕವಚಾಯ ಹುಮ್, ನಮೋ ನೇತ್ರತ್ರಯಾಯ ವೌಷಟ್, ಹುಂ ಫಟ್ ಅಸ್ತ್ರಾಯ ಫಟ್
ಈ ನಾಲ್ಕೂ ಗಂಗಾ ಮಂತ್ರಗಳ ಸಾಧನಾ ವಿಧಾನ, ಉಪಾಸನೆಗಳು ಈ ಮೊದಲು ವಿವರಿಸಿದ ಹಾಗೆ ಇರುತ್ತವೆ.

ಮಣಿಕರ್ಣಿಕಾ ಮಂತ್ರ ಸಾಧನಾ

ವಾಙ್ಮಯಾಕಮಲಾ ಕಾಮದೇವಾಢ್ಯೋ ವಿಷಮಿಂದುಯುಕ್ ॥ 129 ॥
ಮಣಿಕರ್ಣಿಭಗೀಬ್ರಹ್ಮಾ ಹೃದಯಂ ಧ್ರುವಸಂಪುಟಃ ।
ಮಂತ್ರಃ ಪಂಚದಶಾರ್ಣೋಸ್ಯ ಮುನಿರ್ವ್ಯಾಸೋತಿಶಕ್ವರೀ ॥ 130 ॥
ಛಂದಃ ಶ್ರೀಮಣಿಕರ್ಣೀ ತು ದೇವತ ಸುಖಪುತ್ರದಾ ।
ಚಂದ್ರನೇತ್ರಾಕ್ಷಿನೇತ್ರೇಷು ವಹ್ನಿವರ್ಣೈಃ ಷಡಂಗಕಮ್ ॥ 131 ॥

ನಂತರ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ, ಅಧರ್ಮ ಆದಿಗಳನ್ನು ನಿಮ್ನ ಮಂತ್ರಗಳಿಂದ ಪೂಜೆ ಮಾಡಬೇಕು.

**ಓಂ ಅಧರ್ಮಾಯ ನಮಃ ಪೂರ್ವೆ, ಓಂ ಅಜ್ಞಾನಾಯ ನಮಃ ದಕ್ಷಿಣೆ।**
**ಓಂ ಅವೈರಾಗ್ಯಾಯ ನಮಃ ಪಶ್ಚಿಮೆ, ಓಂ ಅನೈಶ್ವರ್ಯಾಯ ನಮಃ ಉತ್ತರೆ।**

ನಂತರ ಪೀಠದ ಮಧ್ಯದಲ್ಲಿ ಅನಂತಾದಿ ದೇವತೆಗಳನ್ನು ಪೂಜೆ ಮಾಡಬೇಕು.
**ಓಂ ಅನಂತಾಯ ನಮಃ । ಓಂ ಪದ್ಮಾಯ ನಮಃ ।**
**ಓಂ ದ್ವಾದಶಕಲಾತ್ಮನೆ ಸೂರ್ಯಮಂಡಲಾಯ ನಮಃ ।**
**ಓಂ ಷೋಡಶಕಲಾತ್ಮನೆ ಸೋಮಮಂಡಲಾಯ ನಮಃ ।**
**ಓಂ ದಶಕಲಾತ್ಮನೆ ವಹ್ನಿಮಂಡಲಾಯ ನಮಃ ।**
**ಓಂ ಸಂ ಸತ್ವಾಯ ನಮಃ ಓಂ ರಂ ರಜಸೇ ನಮಃ ।**
**ಓಂ ತಂ ತಮಸೇ ನಮಃ । ಓಂ ಆಂ ಆತ್ಮನೇ ನಮಃ ।**
**ಓಂ ಅಂ ಅಂತರಾತ್ಮನೆ ನಮಃ । ಓಂ ಪಂ ಪರಮಾತ್ಮನೆ ನಮಃ ।**
**ಓಂ ಹ್ರೀಂ ಜ್ಞಾನಾತ್ಮನೆ ನಮಃ**

ನಂತರ ಕೇಶರಗಳಲ್ಲಿ ಪೂರ್ವಾದಿ ದಿಕ್ಕುಗಳಲ್ಲಿ ಮತ್ತು ಮಧ್ಯದಲ್ಲಿ ಜಯಾದಿ ಪೀಠಶಕ್ತಿಗಳನ್ನು ಪೂಜೆ ಮಾಡಬೇಕು.
**ಓಂ ಜಯಾಯೈ ನಮಃ । ಓಂ ವಿಜಯಾಯೈ ನಮಃ । ಓಂ ಅಜಿತಾಯೈ ನಮಃ । ಓಂ ಅಪರಾಜಿತಾಯೈ ನಮಃ । ಓಂ ನಿತ್ಯಾಯೈ ನಮಃ । ಓಂ ವಿಲಾಸಿನ್ಯೈ ನಮಃ । ಓಂ ದೋಗ್ಧ್ರ್ಯೈ ನಮಃ । ಓಂ ಅಘೋರಾಯೈ ನಮಃ । ಓಂ ಮಂಗಲಾಯೈ ನಮಃ ಪೀಠಮಧ್ಯೆ**

ಈ ಪ್ರಕಾರ ಪೀಠ ಪೂಜೆ ಮಾಡಿ ನಂತರ ಧ್ಯಾನಶ್ಲೋಕದಲ್ಲಿ ವರ್ಣಿತ ಭಗವತಿ ಭಾಗೀರಥಿಯ ಸ್ವರೂಪವನ್ನು ಧ್ಯಾನ ಮಾಡಿ, ಮೂಲಮಂತ್ರದಿಂದ ಮೂರ್ತಿಯ ಕಲ್ಪನೆ ಮಾಡಿ "ಓಂ ಸರ್ವಶಕ್ತಿಕಮಲಾಸನಾಯ ನಮಃ" ಮಂತ್ರದಿಂದ ಪೀಠದ ಮೇಲೆ ಆಸನವನ್ನು ಕೊಟ್ಟು, ಸಾಮಾನ್ಯ ಉಪಚಾರಗಳಿಂದ ಅವಾಹನೆಯಿಂದ ಪ್ರಾರಂಭಿಸಿ ಪುಷ್ಪಾಂಜಲಿಯವರೆಗೆ ವಿಧಿವತ್ ಪೂಜೆ ಮಾಡಿ, ಆವರಣ ಪೂಜೆಯ ಅಪ್ಪಣೆ ಪಡೆದುಕೊಂಡು ಆವರಣ ಪೂಜೆಯನ್ನು ಪ್ರಾರಂಭ ಮಾಡಬೇಕು.

**ಆವರಣ ಪೂಜಾ ವಿಧಾನ :** ಪ್ರಾರಂಭದಲ್ಲಿ ಕೇಸರಗಳಲ್ಲಿ ಷಡಂಗನ್ಯಾಸದ ಮಂತ್ರಗಳಿಂದ ಆಗ್ನೇಯಾದಿ ನಾಲ್ಕು ಕೋನಗಳಲ್ಲಿ, ಮಧ್ಯದಲ್ಲಿ ಮತ್ತು ಚತುರ್ದಿಕ್ ಅಂಗಪೂಜೆ ಮಾಡಬೇಕು.





**ಓಂ ನಮಃ ಹೃದಯಾಯ ನಮಃ ಆಗ್ನಯೆ । ಓಂ ಶಿವಾಯೈ ಶಿರಸೆ ಸ್ವಾಹಾ ನೈಋತ್ಯೆ । ಓಂ ನಾರಾಯಣ್ಯೈ ಶಿಖಾಯೈ ವಷಟ್ ವಾಯುವ್ಯೆ । ಓಂ ದಶಹರಾಯೈ ಕವಚಾಯ ಹುಮ್ ಈಶಾನ್ಯೆ । ಓಂ ಗಂಗಾಯೈ ನೇತ್ರತ್ರಯಾಯ ವೌಷಟ್ ಪೀಠಮಧ್ಯೆ । ಓಂ ಸ್ವಾಹಾ ಅಸ್ತ್ರಾಯ ಫಟ್ ಚತುರ್ದಿಕ್ಷು ।**

ನಂತರ ಭುಪುರದ ಹೊರಗೆ ದಿಕ್ಪಾಲರ ಹತ್ತಿರ ವಜ್ರಾದಿ ಅಯುಧಗಳನ್ನು ನಿಮ್ನಲಿಖಿತ ಮಂತ್ರಗಳಿಂದ ಪೂಜೆ ಮಾಡಬೇಕು.

**ಓಂ ವಂ ವಜ್ರಾಯ ನಮಃ । ಓಂ ಶಂ ಶಕ್ತಯೇ ನಮಃ ।**
**ಓಂ ದಂ ದಂಡಾಯ ನಮಃ । ಓಂ ಖಂ ಖಡ್ಗಾಯ ನಮಃ ।**
**ಓಂ ಪಾಂ ಪಾಶಾಯ ನಮಃ । ಓಂ ಅಂ ಅಂಕುಶಾಯ ನಮಃ**
**ಓಂ ಗಂ ಗದಾಯೈ ನಮಃ । ಓಂ ಶಂ ಶೂಲಾಯೈ ನಮಃ ।**
**ಓಂ ಪಂ ಪದ್ಮಾಯ ನಮಃ । ಓಂ ಚಂ ಚಕ್ರಾಯ ನಮಃ ।**

ಈ ಪ್ರಕಾರ ಆವರಣ ಪೂಜೆ ಮಾಡಿ ಪುನಃ ಧೂಪ, ದೀಪ ನೈವೇದ್ಯಾದಿ ಉಪಚಾರಗಳಿಂದ ಭಾಗೀರಥಿಯನ್ನು ವಿಧಿವತ್ತಾಗಿ ಪೂಜೆ ಮಾಡಬೇಕು.

**ಜೇಷ್ಠಶುಕ್ಲದಶಮ್ಯಾಂ ತಾಂ ವಿಶೇಷೇಣ ಭಜೇದ್ ಬುಧಃ ।**
**ದಧ್ಯಾದ್‌ದಶಭ್ಯೋ ವಿಪ್ರೇಭ್ಯೋ ದಶಪ್ರಸ್ಥಮಿತಾಂಸಿಲಾನ್ ॥ 121 ॥**

**ಜಪ್ತ್ವಾ ಸಹಸ್ರಂ ಹುತ್ವಾ ಚೋಪೋಷ್ಯ ತತ್ರ ವಿಕಲ್ಮಷಃ ।**
**ಸರ್ವಭೋಗಸಮಾಯುಕ್ತೊ ಜಾಯತೆ ಮಾನವೊ ಭುವಿ ॥ 122 ॥**

ಸಾಧಕರು ಜೇಷ್ಠ ಶುಕ್ಲ ದಶಮಿ (ದಶಹರಾ)ಯ ದಿವಸ ವಿಶೇಷ ರೂಪದಿಂದ ಭಗವತಿ ಭಾಗೀರಥಿಯನ್ನು ಉಪಾಸನೆ ಮಾಡಬೇಕು. ಅಂದು ಹತ್ತು ಬ್ರಾಹ್ಮಣರಿಗೆ 10 ಪ್ರಸ್ಥ ಎಳ್ಳುಗಳನ್ನು ದಾನ ಮಾಡಬೇಕು. ಹತ್ತು ಸಾವಿರ ಈ ಮಂತ್ರ ಜಪ ಮಾಡಿ ಒಂದು ಸಾವಿರ ಸಂಖ್ಯೆಯಲ್ಲಿ ತಿಲದ ಆಹುತಿ ಕೊಡಬೇಕು. ಮತ್ತು ಉಪವಾಸ ಮಾಡಬೇಕು. ಈ ಪ್ರಕಾರ ಮಾಡುವುದರಿಂದ ಸಾಧಕರು ಪಾಪರಹಿತರಾಗಿ ಸಕಲ ಸುಖಭೋಗಗಳನ್ನು ಪಡೆದುಕೊಳ್ಳುತ್ತಾರೆ.

### ಅನ್ಯ ಗಂಗಾ ಮಂತ್ರಗಳು

**ತಾರೋ ನಮೋ ಭಗವತಿ ವಾಕ್ಸದೃಗ್ಗಗನಂ ಹಿಲಿ ।**
**ಕ್ರಿಯಾಂತಂದ್ರೀಪಿನಾಕೀಶವಿಷಲಾಃ ಸೂಕ್ಷ್ಮಸಂಯುತಾಃ ॥ 123 ॥**

**ಗಂಗೆ ಮಾಂ ಪಾವಯದ್ವಂದ್ವಮಂತೆ ಹುತವಹಾಂಗಾನಾ ।**
**ಗಿರಿನೇತ್ರಾಕ್ಷರೀವಿದ್ಯಾ ಸ್ಮೃತಾ ಪಾತಕಸಂಘಹೃತ್ ॥ 124 ॥**

ವಿನಿಯೋಗ : ಅಸ್ಯ ಶ್ರೀ ಗಂಗಾಮಂತ್ರಸ್ಯ ವೇದವ್ಯಾಸಋಷಿಃ ಕೃತಿಛಂದಃ ಗಂಗಾದೇವತಾತ್ಮನೋಭಿಲಷಿತ ಸಿದ್ಧ್ಯರ್ಥೇ ಜಪೇ ವಿನಿಯೋಗಃ

ಷಡಂಗನ್ಯಾಸ : ಓಂ ಓಂ ನಮಃ ಹೃದಯಾಯ ನಮಃ, ಓಂ ಶಿವಾಯೈ ಶಿರಸೆ ಸ್ವಾಹಾ, ಓಂ ನಾರಾಯಣ್ಯೈ ಶಿಖಾಯೈ ವಷಟ್, ಓಂ ದಶಹರಾಯೈ ಕವಚಾಯ ಹುಮ್,

ಓಂ ಗಂಗಾಯೈ ನೇತ್ರತ್ರಯಾಯ ವೌಷಟ್, ಓಂ ಸ್ವಾಹಾ ಅಸ್ತ್ರಾಯ ಫಟ್

ಉತ್ಫುಲ್ಲಾಮಲಪುಂಡರೀಕರುಚಿರಾ ಕೃಷ್ಣೇಶ ವಿಧ್ಯಾತ್ಮಿಕಾ ।
ಕುಂಭೇಷ್ಟಾಭಯತೋಯಜಾ ನಿದಧತಿ ಶ್ವೇತಾಂಬರಾಲಂಕೃತಾ ।
ಹೃಷ್ಟಾಸು ಶಶಿಶೇಖರಾಖಿಲನದೀಶೋಣಾದಿಭಿಃ ಸೇವಿತಾ ।
ಧ್ಯೇಯಾ ಪಾಪವಿನಾಶಿನಿ ಮಕರಗಾ ಭಾಗೀರಥಿ ಸಾಧಕೈಃ ॥ 116 ॥

ಲಕ್ಷಂ ಜಪೇದ್ದಶಾಂಶೇನ ಜುಹುಯಾತ್ಸಧೃತೈಸ್ತಿಲೈಃ ।
ಜಯಾದಿಶಕ್ತಿಭಿಯುಕ್ತೆ ಪೀಠೆ ಭಾಗೀರಥಿಂ ಯಜೇತ್ ॥ 117 ॥

ಪ್ರಯಜೆತ್ಕೇಸರೆಷ್ಟಂಗಂ ದಲೆ ರುದ್ರಂ ಹಂ ವಿಧಿಮ್ ।
ಸೂರ್ಯಂ ಹಿಮಾಚಲಂ ಮೇನಾಂ ಭಗೀರಥಮ ಪಾಂಪತಿಮ್ ॥ 118॥

ದಲಾಗ್ರತೊ ಮೀನಕೂರ್ಮಮಂಡೂಕ ಮಕರಾನಪಿ ।
ಹಂಸಾಂಕಾರಂಡ ವಾಂಶ್ಚಕ್ರವಾಕಾನ್ ಸಾರಸಕಾನ್ಯಜೇತ್ ॥ 119 ॥

ಚತುರಸ್ರೆ ಶುಕಮುಖ್ಯಾನಾಯುಧೈಃ ಸಂಯುತಾನ್ಯಜೇತ್ ।
ಏವಂ ಸಂಸಾಧಿತೋ ಮಂತ್ರೋಭಿಷ್ಟಂ ಯಚ್ಛತಿ ಮಂತ್ರಿಣಾಮ್ ॥ 120॥

ಅರಳಿದ ಅತ್ಯಂತ ಸ್ವಚ್ಛ ಕಮಲದ ಸಮಾನ ಮನೋಹರ ಅಂಗವುಳ್ಳ ವಿಷ್ಣು, ಸದಾಶಿವ ಮತ್ತು ಬ್ರಹ್ಮಸ್ವರೂಪಿಣಿಯಾದ, ತನ್ನ ಕೈಗಳಲ್ಲಿ ಕುಂಭ, ವರ, ಅಭಯ ಮತ್ತು ಕಮಲಗಳನ್ನು ಧರಿಸಿರುವ, ಶ್ವೇತವಸ್ತ್ರಧಾರಿಯಾದ, ಪ್ರಸನ್ನವದನಳಾದ, ಮಸ್ತಕದ ಮೇಲೆ ಚಂದ್ರಕಲೆಗಳಿಂದ ಸುಶೋಭಿತ, ಮೊಸಳೆಯ ಮೇಲೆ ಕುಳಿತ ಸಮಸ್ತ ನದಿಗಳಿಂದ ಪೂಜಿತಳಾದ, ಪಾಪಗಳನ್ನು ಕಳೆಯುವ ಭಗವತಿ ಭಾಗೀರಥಿಯನ್ನು ಸಾಧಕರು ಧ್ಯಾನಿಸಬೇಕು.

ಈ ಮಂತ್ರದ ಒಂದು ಲಕ್ಷ ಜಪ ಮಾಡಬೇಕು. ಮತ್ತು ತಿಲಗಳಿಂದ ದಶಾಂಶ ಹೋಮ ಮಾಡಬೇಕು. ಜಯಾ ಆದಿ ಶಕ್ತಿಗಳಿಂದ ಯುಕ್ತವಾದ ಪೀಠದ ಮೇಲೆ ಭಗವತಿ ಭಾಗೀರಥಿಯನ್ನು ಪೂಜೆ ಮಾಡಬೇಕು. ಕೇಸರಗಳಲ್ಲಿ





ಅಂಗಪೂಜಾ ಮತ್ತು ಅಷ್ಟದಳಗಳಲ್ಲಿ 1. ರುದ್ರ 2. ಹರಿ 3. ಬ್ರಹ್ಮ 4. ಸೂರ್ಯ 5. ಹಿಮಾಲಯ 6. ಮೇನಾ 7. ಭಗೀರಥ ಮತ್ತು 8. ಸಾಗರರನ್ನು ಪೂಜೆ ಮಾಡಬೇಕು.

ದಳಗಳ ಅಗ್ರಭಾಗದಲ್ಲಿ 1. ಮೀನ 2. ಕೂರ್ಮ 3. ಮಂಡೂಕ 4. ಮಕರ 5. ಹಂಸ 6. ಕಾರಂಡವ 7. ಚಕ್ರವಾಕ ಮತ್ತು 8. ಸಾರಸರನ್ನು ಪೂಜೆ ಮಾಡಬೇಕು. ಭೂಪುರದಲಿ ಇಂದ್ರಾದಿ ದಶದಿಕ್ಪಾಲರನ್ನು ಅವರ ಆಯುಧ ಸಹಿತವಾಗಿ ಪೂಜೆ ಮಾಡಬೇಕು. ಈ ಪ್ರಕಾರ ಉಪಾಸನೆ ಮಾಡಿದ ಮಂತ್ರವು ಸಾಧಕರ ಅಭೀಷ್ಟಗಳನ್ನು ಪೂರೈಸುತ್ತದೆ.

ಗಂಗಾ ಯಂತ್ರ

ವಿಧಾನ : ವೃತ್ತಾಕಾರದ ಕರ್ಣಿಕಾ, ಅಷ್ಟದಳ ಮತ್ತು ಭೂಪುರ ಸಹಿತ ಯಂತ್ರವನ್ನು ಬರೆಯಬೇಕು. ಧ್ಯಾನ ಶ್ಲೋಕದಲ್ಲಿ ವರ್ಣಿಸಿದ ಭಗವತಿ ಗಂಗಾಳ ಸ್ವರೂಪವನ್ನು ಧ್ಯಾನ ಮಾಡಿ ಮಾನಸೋಪಚಾರಗಳಿಂದ ಪೂಜೆ ಮಾಡಿ ಅರ್ಘ್ಯ ಸ್ಥಾಪನೆ ಮಾಡಬೇಕು. ನಂತರ ಪೀಠದ ಮೇಲೆ ಪೀಠ ದೇವತೆಗಳನ್ನು ಪೂಜೆ ಮಾಡಬೇಕು.

ಪೀಠ ಮಧ್ಯೆ – ಓಂ ಆಧಾರಶಕ್ತಯೇ ನಮಃ, ಓಂ ಪ್ರಕೃತ್ಯೈ ನಮಃ । ಓಂ ಕೂರ್ಮಾಯನಮಃ, ಓಂ ಶೇಷಾಯ ನಮಃ, ಓಂ ಪೃಥಿವ್ಯೈ ನಮಃ, ಓಂ ಕ್ಷೀರಸಮುದ್ರಾಯ ನಮಃ, ಓಂ ಶ್ವೇತದ್ವೀಪಾಯ ನಮಃ, ಓಂ ಮಣಿದಂಡಪಾಯ ನಮಃ, । ಓಂ ಕಲ್ಪವೃಕ್ಷಾಯ ನಮಃ, ಓಂ ಮಣಿವೇದಿಕಾಯೈ ನಮಃ, ಓಂ ರತ್ನಸಿಂಹಾಸನಾಯ ನಮಃ

ನಂತರ ಆಗ್ನೇಯಾದಿ ನಾಲ್ಕು ಕೋನಗಳಲ್ಲಿ, ಧರ್ಮ ಆದಿಗಳನ್ನು ಪೂಜೆ ಮಾಡಬೇಕು.

ಓಂ ಧರ್ಮಾಯ ನಮಃ ಆಗ್ನಯೆ, ಓಂ ಜ್ಞಾನಾಯ ನಮಃ ನೈಋತ್ಯೆ ।
ಓಂ ವೈರಾಗ್ಯಾಯ ನಮಃ ವಾಯುವ್ಯೆ, ಓಂ ಐಶ್ವರ್ಯಾಯ ನಮಃ ಈಶಾನ್ಯೆ।

ನ್ಯಾಸವಿಧಿ : ಯಕ್ಷಾಯ ಹೃದಯಾಯ ನಮಃ, ಕುಬೇರಾಯ ಶಿರಸೆ ಸ್ವಾಹಾ, ವೈಶ್ರವಣಾಯ ಶಿಖಾಯೈ ವಷಟ್, ಧನಧಾನ್ಯಾಧಿಪತಯೆ ಕವಚಾಯ ಹುಮ್, ಧನಧಾನ್ಯಸಮೃದ್ಧಿಂ ಮೆ ನೇತ್ರತ್ರಯಾಯ ವೌಷಟ್ । ದೇಹಿ ದಾಪಯ ಸ್ವಾಹಾ ಅಸ್ತ್ರಾಯ ಫಟ್

ಮನುಜವಾಹ್ರಾವಿಮಾನವರಸ್ಥಿತಂ ಗರುಡರತ್ನನಿಭಂ ನಿಧಿನಾಯಕಮ್ ।
ಶಿವಸಖಂ ಮುಕುಟಾದಿವಿಭೂಷಿತಂ ವರಗದೆ ದಧತಂ ಭಜ ತುಂದಿಲಮ್ ॥ 109 ॥
ಲಕ್ಷಮೇಕಂ ಜಪೇನ್ಮಂತ್ರಂ ದಶಾಂಶಂ ಜುಹುಯಾತ್ತಿಲೈಃ ।
ಧರ್ಮಾಧಿಪೀಠೆ ಪ್ರಯಜೇದಂಗಲೋಕಪಹೇತಯಃ ॥ 110 ॥
ಶಿವಾಲಯೆ ಜಪೇನ್ಮಂತ್ರಮಯುತಂ ಧನವೃದ್ಧಯೆ ।
ಬಿಲ್ವಮೂಲೋಪವಿಷ್ಟೇನ ಜಪ್ತೋ ಲಕ್ಷಂ ಧನರ್ದ್ಧಿದಃ ॥ 111 ॥

ಈಗ ಅಲಕಾಪುರಿಯಲ್ಲಿ ವಿರಾಜಮಾನನಾದ ಕುಬೇರನ ಧ್ಯಾನವನ್ನು ಹೇಳಲಾಗುತ್ತದೆ. ಮಾನವ ಶ್ರೇಷ್ಠನು, ಸುಂದರವಾದ ವಿಮಾನವನ್ನು ಏರಿರುವ, ಗಾರುಡಮಣಿಯಂಥ ಕಾಂತಿಯುಳ್ಳವನು ಮುಕುಟಾದಿ ಆಭರಣಗಳಿಂದ ಭೂಷಿತನಾದವನು ತನ್ನ ಎರಡೂ ಕೈಗಳಲ್ಲಿ ಕ್ರಮವಾಗಿ ವರ ಮತ್ತು ಗದೆಗಳನ್ನು ಧರಿಸಿ, ಬೊಜ್ಜು ಶರೀರವುಳ್ಳವ, ಶಿವನ ಮಿತ್ರನಾದ, ಧನಾಧಿಪತಿಯಾದ ಕುಬೇರನನ್ನು ನಾನು ಧ್ಯಾನಿಸುತ್ತೇನೆ.

ಈ ಮಂತ್ರದ ಒಂದು ಲಕ್ಷ ಜಪ ಮಾಡಬೇಕು. ತಿಲದಿಂದ ಅದರ ದಶಾಂಶ ಹೋಮ ಮಾಡಬೇಕು. ಮತ್ತು ಧರ್ಮ ಮುಂತಾದ ಶಕ್ತಿಯುಕ್ತ ಪೀಠದ ಮೇಲೆ ಷಡಂಗ, ದಿಕ್ಪಾಲ ಮತ್ತು ಅವರ ಆಯುಧಗಳನ್ನು ಪೂಜೆ ಮಾಡಬೇಕು.

**ಕಾಮ್ಯ ಪ್ರಯೋಗ** : ಧನವೃದ್ಧಿಗಾಗಿ ಶಿವ ಮಂದಿರದಲ್ಲಿ ಈ ಮಂತ್ರದ ಹತ್ತು ಸಾವಿರ ಜಪ ಮಾಡಬೇಕು. ಬಿಲ್ವ ವೃಕ್ಷದ ಕೆಳಗೆ ಕುಳಿತು ಈ ಮಂತ್ರದ ಒಂದು ಲಕ್ಷ ಜಪ ಮಾಡುವುದರಿಂದ ಧನ-ಧಾನ್ಯ ಸಮೃದ್ಧಿಯಾಗುತ್ತದೆ.

## ಸರ್ವ ದಾರಿದ್ರ್ಯನಾಶಕ ಕುಬೇರ ಮಂತ್ರ

ಆದೌ ತಾರಪುಟಾ ಲಕ್ಷ್ಮೀಸ್ತತೊ ಮಾಯಾಪುಟಾರಮಾ ।
ತತಃ ಕಾಮಪುಟಾ ಸ್ಯೈವ ಡೆಂತೊ ವಿತ್ತೇಶ್ವರೋ ನಮಃ ॥ 112 ॥
ಷೋಡಶಾಕ್ಷರ ಮಂತ್ರೋಯಂ ಸರ್ವದಾರಿದ್ರ್ಯನಾಶನಃ ।
ತ್ರಿನೇತ್ರನಯನದ್ವೀಷು ಯುಗ್ಮಾರ್ಣೈರಂಗಕಂ ಮನೋಃ ।
ಧ್ಯಾನಾಚನಾದಿಕಂ ಸರ್ವಮಸ್ಯ ಪೂರ್ವವದಾಚರೇತ್ ॥ 113 ॥

ತಾರ (ಓಂ) ದಿಂದ ಸಂಪುಟಿತ ಲಕ್ಷ್ಮಿ (ಶ್ರೀಂ) ಅರ್ಥಾತ್ "ಓಂ ಶ್ರೀಂ





ಓಂ" ನಂತರ ಮಾಯಾ ಬೀಜದಿಂದ ಸಂಪುಟಿತ ರಮಾ (ಹ್ರೀಂ ಶ್ರೀಂ ಹ್ರೀಂ), ಆಮೇಲೆ ಕ್ಲಿಂ ಬೀಜದಿಂದ ಪುಟಿತ ಲಕ್ಷ್ಮಿ (ಶ್ರೀಂ), ನಂತರ ಚತುರ್ಥ್ಯಂತ ವಿತ್ತೇಶ್ವರ ಶಬ್ದ (ವಿತ್ತೇಶ್ವರಾಯ) ಮತ್ತು ಕೊನೆಯಲ್ಲಿ 'ನಮಃ' ಜೋಡಿಸುವುದರಿಂದ ಹದಿನಾರು ಅಕ್ಷರಗಳ ಕುಬೇರ ಮಂತ್ರವು ಸಿದ್ಧವಾಗುತ್ತದೆ. 3,2,2,25 ಮತ್ತು 2 ವರ್ಣಗಳಿಂದ ಷಡಂಗನ್ಯಾಸ ಮಾಡಬೇಕು. ಈ ಮಂತ್ರದ ವಿನಿಯೋಗ, ಧ್ಯಾನ ಮತ್ತು ಪೂಜೆಗಳು ಹಿಂದಿನ ಮಂತ್ರದ ಸಮಾನವಾಗಿವೆ.

"ಓಂ ಶ್ರೀಂ ಓಂ ಹ್ರೀಂ ಶ್ರೀಂ ಹ್ರೀಂ ಕ್ಲಿಂ ಶ್ರೀಂ ಕ್ಲಿಂ ವಿತ್ತೇಶ್ವರಾಯ ನಮಃ"

ವಿನಿಯೋಗ : ಅಸ್ಯ ಶ್ರೀ ಕುಬೇರ ಮಂತ್ರಸ್ಯ ವಿಶ್ರವಾಋಷಿಬೃಹತೀಛಂದಃ ಶಿವಮಿತ್ರಧನೇಶ್ವರಿ ದೇವತಾತ್ಮನೋಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಷಡಂಗನ್ಯಾಸ ; ಓಂ ಶ್ರೀಂ ಓಂ ಹೃದಯಾಯ ನಮಃ, ಹ್ರೀಂ ಶ್ರೀಂ ಶಿರಸೆ ಸ್ವಾಹಾ, ಹ್ರೀಂ ಕ್ಲಿಂ ಶಿಖಾಯೈ ವಷಟ್,

ಶ್ರೀಂ ಕ್ಲೀಂ ಕವಚಾಯ ಹುಮ್, ವಿತ್ತೇಶ್ವರಾಯ ನೇತ್ರತ್ರಯಾಯ ವೌಷಟ್, ನಮಃ ಅಸ್ತ್ರಾಯ ಫಟ್

## ಗಂಗಾಮಂತ್ರ ಸಾಧನಾ

ಅಥಃ ಶಂಭೋಃ ಶಿರಸ್ಥಾಯಾದೇವಸಿಂಧೋರ್ಮನೂನ್ ಭ್ರುವೆ ।
ಪ್ರಣವೊ ಹೃದಯಂ ಡೆಂತೆ ಶಿವನಾರಾಯಣಿಪದೆ ।
ತ ದ್ವದ್ ದಶಹರಾಗಂಗೆ ವಹ್ನಿಜಾಯಾನಖಾಕ್ಷರಃ ॥ 114 ॥
ಮನುರ್ವ್ಯಾಸೊ ಮುನಿಶ್ಛಂದಃ ಕೃತಿರ್ಗಂಗಾಸ್ಯ ದೇವತಾ ।
ತ್ರಿವಹ್ನಿವೇದಬಾಣಾಗ್ನಿನೇತ್ರವರ್ಣೈಃ ಷಡಂಗಕಮ್ ॥ 115 ॥

ಈಗ ಭಗವಾನ್ ಶಿವಶಂಕರನ ಶಿರವನ್ನಲಂಕರಿಸಿರುವ ಗಂಗಾ ದೇವಿಯ ಮಂತ್ರಗಳನ್ನು ಹೇಳಲಾಗುತ್ತದೆ. ಪ್ರಣವ (ಓಂ), ನಂತರ ಹೃದಯ (ನಮಃ), ಚತುರ್ತ್ಯಂತ ಶಿವಾ ಮತ್ತು ನಾರಾಯಣಿ (ಶಿವಾಯ್ಯೆ ನಾರಾಯಣ್ಯೈ) ಆಮೇಲೆ ಚತುರ್ಥ್ಯಂತ ದಶಹರಾ ಮತ್ತು ಗಂಗಾ ಶಬ್ದ (ದಶಹರಾಯ್ಯೆ ಗಂಗಾಯ್ಯೆ) ಮತ್ತು ಅದರ ಅಂತದಲ್ಲಿ ವಹ್ನಿ ಜಾಯಾ (ಸ್ವಾಹಾ) ಜೋಡಿಸುವುದರಿಂದ 20 ಅಕ್ಷರಗಳ ಗಂಗಾ ಮಂತ್ರವು ರಚನೆಯಾಗುತ್ತದೆ. "ಓಂ ನಮಃ ಶಿವಾಯ್ಯೆ ನಾರಾಯನ್ಯೈ ದಶಹರಾಯ್ಯೆ ಗಂಗಾಯ್ಯೆ ಸ್ವಾಹಾ"

ಈ ಮಂತ್ರದ ವ್ಯಾಸ ಋಷಿ, ಕೃತಿಛಂದ ಮತ್ತು ಗಂಗಾ ದೇವತೆಯಿರುತ್ತಾರೆ. ಮಂತ್ರದ ಕ್ರಮಶಃ 3,3,4,5,3 ಮತ್ತು 2 ಅಕ್ಷರಗಳಿಂದ ಷಡಂಗನ್ಯಾಸ ಮಾಡಬೇಕು.

ಓಂ ಸಂ ಸೋಮಾಯ ನಮಃ । ಓಂ ಹಂ ಈಶಾನಾಯ ನಮಃ ।
ಓಂ ಆಂ ಬ್ರಹ್ಮಣೇ ನಮಃ । ಓಂ ಹ್ರೀಂ ಅನಂತಾಯ ನಮಃ ।

ಆಮೇಲೆ ಸಪ್ತಮ ಆವರಣದಲ್ಲಿ, ಭೂಪುರದ ಆಗ್ನೇಯಾದಿ ಕೋನಗಳಲ್ಲಿ ವಿರೂಪಾಕ್ಷ ಮುಂತಾದವರನ್ನು ಪೂಜೆ ಮಾಡಬೇಕು.

ಓಂ ವಿರೂಪಾಕ್ಷಾಯ ನಮಃ ಆಗ್ನೆಯೆ,
ಓಂ ವಿಶ್ವರೂಪಾಯ ನಮಃ ನೈಋತ್ಯೆ
ಓಂ ಪಶುಪತಯೇ ನಮಃ ವಾಯುವ್ಯೆ,
ಓಂ ಊರ್ಧ್ವಲಿಂಗಾಯ ನಮಃ ಈಶಾನ್ಯೆ

ಇದರ ನಂತರ ಭೂಪುರದ ಹೊರಗೆ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಶೇಷ ಮುಂತಾದ ಅಷ್ಟ ನಾಗಗಳನ್ನು ಅವರ ವರ್ಣ, ಜಾತಿ ಮತ್ತು ಫಣಗಳನ್ನು ಜೋಡಿಸಿ ಈ ಕೆಳಗಿನಂತೆ ಪೂಜೆ ಮಾಡಬೇಕು.

ಓಂ ಶ್ವೇತಾಯ ವಿಪ್ರವರ್ಣಾಯ ಸಹಸ್ರಫಣಾಯ ಶೇಷಾಯ ನಮಃ ।
ಓಂ ನೀಲಾಯ ವೈಶ್ಯವರ್ಣಾಯ ಪಂಚಶತಫಣಾಯ ತಕ್ಷಕಾಯ ನಮಃ ।
ಓಂ ಕುಂಕುಮಾಭಾಯ ವಿಪ್ರವರ್ಣಾಯ ಸಹಸ್ರಫಣಾಯ ಅನಂತಾಯ ನಮಃ ।
ಓಂ ಪೀತಾಯ ಕ್ಷತ್ರಿಯವರ್ಣಾಯ ಸಪ್ತಶತಫಣಾಯ ವಾಸುಕಯೇ ನಮಃ ।
ಓಂ ಕೃಷ್ಣಾಯ ವೈಶ್ಯವರ್ಣಾಯ ಸಪ್ತಶತಫಣಾಯ ಶಂಖಪಾಲಾಯ ನಮಃ ।
ಓಂ ಉಜ್ವಲಾಯ ಶೂದ್ರವರ್ಣಾಯ ಪಂಚಶತಫಣಾಯ ಮಹಾಪದ್ಮಾಯ ನಮಃ ।
ಓಂ ಉಜ್ವಲಾಯ ಶೂದ್ರವರ್ಣಾಯ ತ್ರಿಂಶದಪಣಾಯ ಕಂಬಲಾಯ ನಮಃ ।
ಓಂ ಉಜ್ವಲಾಯ ಶೂದ್ರವರ್ಣಾಯ ತ್ರಿಂಶದಪಣಾಯ ಕರ್ಕೋಟಕಾಯ ನಮಃ ।

ಈ ಪ್ರಕಾರ ಆವರಣ ಪೂಜೆಯನ್ನು ಪೂರೈಸಿ ಧೂಪ-ದೀಪಾದಿಗಳಿಂದ ಪುನಃ ಭಗವಾನ್ ರುದ್ರನನ್ನು ಪೂಜಿಸಬೇಕು.

ಏವಮರ್ಚನ್ಮಹಾದೇವಂ ಪಂಚಾಂಗನ್ಯಾಸಪೂರ್ವಕಮ್ ।
ದಶಾಕ್ಷರಜಪಾಸಕ್ತೋ ನ ಸೀದೇತ್ತ್ವೇಷ್ಟಸಾಧನೆ ॥ 102 ॥
ಮನೋಹರಾಣಿ ಗೇಹಾನಿ ಸುಂದರ್ಯೋರ್ ವಾಮಲೋಚನಾ ।
ಧನಮಿಚ್ಛಾಪೂರಣಾಂತಂ ಲಭತೇ ಶಿವಸೇವನಾತ್ ॥ 103 ॥
ಪ್ರಯೋಗಾನ್ಪೂರ್ವಮಂತ್ರೋಕ್ತಾನ್ ಕುರ್ವೀಂತಾತ್ರ ದಶಾಕ್ಷರೇ ।
ದಶಾಕ್ಷಂ ಭಜೇನ್ವಿಪ್ರೋ ರುದ್ರಜಾಪಿ ಭವೇತ್ಸದಾ ॥ 104 ॥





ಈ ಪ್ರಕಾರ ಪಂಚಾಂಗನ್ಯಾಸ ಮಾಡಿದ ನಂತರ ಮಹಾದೇವನನ್ನು ಪೂಜೆ ಮಾಡುವ ಮತ್ತು ದಶಾಕ್ಷರ ಮಂತ್ರದ ಜಪ ಮಾಡುವ ಬ್ರಾಹ್ಮಣರು ನಿರಾಯಾಸವಾಗಿ ಇಷ್ಟಾರ್ಥಗಳನ್ನು ಸಿದ್ಧಿಸಿಕೊಳ್ಳುತ್ತಾರೆ. ಭಗವಾನ್ ಸದಾಶಿವನ ಆರಾಧನೆಯಿಂದ ಸುಂದರವಾದ ಗೃಹ, ಸಾಧ್ವಿ ಮತ್ತು ಪತಿವ್ರತೆಯಾದ ಪತ್ನಿ ಮತ್ತು ಯಥೇಷ್ಟ ಧನವನ್ನು ಪಡೆದುಕೊಳ್ಳುತ್ತಾನೆ.

ಮಹಾಮೃತ್ಯುಂಜಯ ಮಂತ್ರದ ಕಾಮ್ಯ ಪ್ರಯೋಗಗಳನ್ನೇ ದಶಾಕ್ಷರ ಮಂತ್ರದ ಕಾಮ್ಯ ಪ್ರಯೋಗಗಳಂತೆ ಉಪಯೋಗಿಸಬೇಕು. ಬ್ರಾಹ್ಮಣರು ದಶಾಕ್ಷರ ಮಂತ್ರದ ಜಪ ಮಾಡುತ್ತ ರುದ್ರಜಾಪಿಯಾಗಬೇಕು.

**ಕುಬೇರ ಮಂತ್ರ ಸಾಧನಾ**

ಅಥ ಮಂತ್ರಂ ಕುಬೇರಸ್ಯ ವಕ್ಷೆ ಸರ್ವಸಮೃದ್ಧಿದಮ್ ।
ಯಕ್ಷಾಯ ಪದಮುಚ್ಚಾರ್ಯ ಕುಬೇರಾಯ ಪದಾಚ್ಚ ವೈ ॥ 105 ॥
ಶ್ರವಣಾಯ ಧನಾರ್ಣಾಂತೆ ಧಾನ್ಯಾಧಿಪತೆಯ ಧನಮ್ ।
ಧಾನ್ಯಶಬ್ದಾತ್ಸಮೃದ್ಧಿಂ ಮೇ ದೇಹಿ ದಾಪಯತದ್ವಯಮ್ ॥ 106 ॥
ಬಾಣರಾಮಾಕ್ಷರೋ ಮಂತ್ರೋ ವಿಶ್ರವಾಮುನಿರಸ್ಯ ತು ।
ಛಂದಸ್ತು ಬೃಹತಿ ದೇವಃ ಶಿವಮಿತ್ರಂ ಧನೇಶ್ವರಃ ॥ 107 ॥
ತ್ರಿಚತುಃ ಪಂಚವಸ್ವಷ್ಟಮುನಿವರ್ಣೈರ್ಮನೂದ್ಭವೈಃ ।
ಕೃತ್ವಾ ಷಡಂಗ ಧನದಂ ಚಿಂತಯೇದಲಕಾಗತಮ್ ॥ 108 ॥

'ಯಕ್ಷಾಯ' ಪದ, ನಂತರ 'ಕುಬೇರಾಯ', 'ವೈಶ್ರವಣಾಯ ಧನ' ಈ ಪದಗಳನ್ನು ಉಚ್ಚರಿಸುತ್ತ 'ಧ್ಯಾನಾಧಿಪತಯೆ ಧನಧಾನ್ಯ ಸಮೃದ್ಧಿಂ' ಮೆ ದೇಹಿ ದಾಪಯ ಪುನಃ ಠ ದ್ವಯ (ಸ್ವಾಹಾ) ಸೇರಿಸುವುದರಿಂದ 35 ಅಕ್ಷರಗಳ ಸರ್ವ ಪ್ರಕಾರದ ಸಮೃದ್ಧಿಗಳನ್ನು ನೀಡುವ ಕುಬೇರ ಮಂತ್ರವು ರೂಪುಗೊಳ್ಳುತ್ತದೆ.

"ಯಕ್ಷಾಯ ಕುಬೇರಾಯ ವೈಶ್ರವಣಾಯ ಧನಧಾನ್ಯಾದಿಪತಯೆ ಧನಧಾನ್ಯ ಸಮೃದ್ಧಿಂ ಮೆ ದೇಹಿ ದಾಪಯ ಸ್ವಾಹಾ"

ವಿನಿಯೋಗ : ಅಸ್ಯ ಶ್ರೀ ಕುಬೇರ ಮಂತ್ರಸ್ಯ ವಿಶ್ರವಾಋಷಿರ್ಬೃಹತಿಛಂದಃ ಶಿವಮಿತ್ರ ಧನೇಶ್ವರೋ ದೇವತಾತ್ಮನೋಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಮಂತ್ರದ 3,4,5,8,8 ಮತ್ತು ಏಳು ವರ್ಣಗಳಿಂದ ಷಡಂಗನ್ಯಾಸ ಮಾಡಬೇಕು. ನಂತರ ಅಲಕಾಪುರಿಯಲ್ಲಿ ವಿರಾಜಮಾನ ಕುಬೇರನನ್ನು ಧ್ಯಾನ ಮಾಡಬೇಕು.

ಮಾರಯೇತಿ ಚ ತಸ್ಯಾಂತೇದಮತ್ಯೈರೋಷ್ಮಂ ನಿಷೀಢ್ಯ ಚ ।
ಪಾಣ್ಯೋಸ್ತಲೇ ಪ್ರಪೀಡ್ಯಾಥ ತ್ಯಕ್ತ್ವಾತಾಂ ಸದನಂ ವ್ರಜೇತ್
ಏವಂ ಸಪ್ತದಿನಂ ಕುರ್ವನ್ ಹನ್ಯಾಚ್ಛತ್ರುಂ ಶಿವಾವಿತಮ್ । ॥ 31 ॥
ಅರ್ಧಚಂದ್ರಾಕೃತೌ ಕುಂಡೆ ಸ್ಥಂಡಿಲೆ ವಾ ಹುತಂ ಚರೇತ್
ಮುಕ್ತಕೇಶಃ ಶ್ಮಶಾನಸ್ಥೆ ಲವಣೈ ರಾಜಿಕಾಯುತೈಃ । ॥ 32 ॥
ಉನ್ಮತ್ತಫಲಪುಷ್ಪೈಶ್ಚ ನಖರೋಮದಿಷ್ಟರಪಿ
ಕಾಕಕೌಶಿಕಗೃಧ್ರಾಣಾಂ ಪಕ್ಷೈಃ ಶ್ಲೇಷ್ಮಾತಕಾಕ್ಷಜೈಃ । ॥ 33 ॥
ಸಮಿದ್ಭಿಶ್ಚ ತ್ರಿಶತಂ ದಕ್ಷಿಣಾಶಾಮುಖೋ ನಿಶಿ
ಸಪ್ತ ಘಸ್ರಾನಿದಂ ಕುರ್ವನ್ಮಾರಯೇದ್ ರಿಪುಮುದ್ಧತಮ್ । ॥ 34 ॥
ಶತಷಟ್ಕಂ ಜಪೇದ್ರಾತ್ರೌ ಶ್ಮಶಾನೆ ದಿವಸತ್ರಯಮ್ ॥ 35 ॥

ರಾತ್ರಿಯಲ್ಲಿ ಸ್ಮಶಾನ ಭೂಮಿಯ ಮಣ್ಣು ಅಥವಾ ಬೂದಿಯಿಂದ ಶತ್ರುವಿನ ಗೊಂಬೆಯನ್ನು ತಯಾರಿಸಿ ಹೃದಯ ಸ್ಥಾನದಲ್ಲಿ ಅವನ ಹೆಸರನ್ನು ಬರೆಯಬೇಕು. ನಂತರ ಅದರಲ್ಲಿ ಪ್ರಾಣ ಪ್ರತಿಷ್ಠೆ ಮಾಡಿ. ಮಂತ್ರದ ಕೊನೆಯಲ್ಲಿ ಶತ್ರುವಿನ ಹೆಸರು, ಆ ಮೇಲೆ ಛಿಂದಿ ಮತ್ತು ಮಾರಯ ಜೋಡಿಸಿ ಅದರ ಜಪ ಮಾಡುತ್ತ ಶಸ್ತ್ರದಿಂದ ಆ ಗೊಂಬೆಯನ್ನು ತುಂಡು ತುಂಡು ಮಾಡಬೇಕು. ನಂತರ ಅವುಡುಗಚ್ಚಿ ಕೈಗಳಿಂದ ತುಂಡುಗಳನ್ನು ಹೊಸಕಿ ಹಾಕಬೇಕು. ಅದನ್ನು ಅಲ್ಲಿಯೇ ಬಿಟ್ಟು ಮನೆಗೆ ಮರಳಬೇಕು. ಏಳು ದಿನ ನಿರಂತರವಾಗಿ ಈ ಪ್ರಕಾರ ಮಾಡುತ್ತ ಇದ್ದರೆ ಶಿವನ ರಕ್ಷಣೆಯಿದ್ದರೂ ಕೂಡಾ ಶತ್ರುವು ಮರಣ ಹೊಂದುತ್ತಾನೆ.

ಸ್ಮಶಾನದಲ್ಲಿ ಕೇಶಗಳನ್ನು ಬಿಚ್ಚಿ, ಅರ್ಧಚಂದ್ರಾಕೃತಿಯ ಕುಂಡದಲ್ಲಿ ಅಥವಾ ವೇದಿಯ ಮೇಲೆ, ಸಾಸಿವೆ ಉಪ್ಪು ಮಿಶ್ರಿತ ಧತ್ತೂರದ ಫಲ, ಅದರ ಹೂಗಳು, ಕಾಗೆ, ಗೂಬೆ ಮತ್ತು ಹದ್ದುಗಳ ಉಗುರು, ಕೂದಲು ಮತ್ತು ರೆಕ್ಕೆಗಳಿಂದ ಮತ್ತು ವಿಷದಿಂದ ಲೇಪಿತ ತಾರೆಕಾಯಿಯ ಸಮಿಧಾದಿಂದ, ರಾತ್ರಿಯಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು ಒಂದು ವಾರದ ವರೆಗೆ ನಿರಂತರವಾಗಿ ಹೋಮ ಮಾಡುವುದರಿಂದ ಶತ್ರುವು ಮರಣ ಹೊಂದುತ್ತಾನೆ.

ಬೇತಾಳ ಸಿದ್ಧಿ ಪ್ರಯೋಗ

ತತೋ ವೇತಾಲ ಉತ್ಥಾಯ ವದೇದ್ ಭಾವಿ ಶುಭಾಶುಭಮ್ ।
ಉದಿತಂ ಕುರುತೆ ಸರ್ವಂ ಕಿಂಕರೀಭೂಯ ಮಂತ್ರಿಣಃ ॥ 36 ॥





ಹನುಮತ್ಪ್ರತಿಮಾಂ ಭೂಮೌ ವಿಲಿಖೇತ್ತತ್ಪುರೋ ಮನೂನ್ ।
ಸಾಧ್ಯನಾಮ ದ್ವಿತಿಯಾಂತ ವಿಮೋಚಯ ವಿಮೋಚಯ ॥ 37 ॥
ತತ್ಸರ್ವಂ ಮಾರ್ಜಯೇದ್ವಾಮಹಸ್ತೇನಾಥ ಪುನರ್ಲಿಖೇತ್ ।
ಏವಮಷ್ಟೋತ್ತರಶತಂ ಲಿಖಿತ್ವಾಂ ಮಾರ್ಜಯೇತ್ಪುನಃ ॥ 38 ॥
ಏವಂ ಕೃತೆ ಪರಾಧೀನೊ ಮುಚ್ಯತೆ ನಿಗಡಾತ್ಕ್ಷಣಾತ್ ।

ಸ್ಮಶಾನದಲ್ಲಿ, ರಾತ್ರಿಯ ಸಮಯದಲ್ಲಿ ನಿರಂತರವಾಗಿ ಮೂರು ದಿನಗಳವರೆಗೆ ಪ್ರತಿದಿನ 600 ರ ಸಂಖ್ಯೆಯಲ್ಲಿ ಈ ಮೂಲಮಂತ್ರವನ್ನು ಜಪಿಸುತ್ತಿದ್ದರೆ ಬೇತಾಳವು ಬಂದು ನಿಂತು ಸಾಧಕನ ದಾಸನಾಗುತ್ತದೆ. ಮತ್ತು ಭವಿಷ್ಯದಲ್ಲಿ ಆಗುವ ಶುಭಾಶುಭ ಘಟನೆಗಳನ್ನು ಮತ್ತು ಅನ್ಯ ಪ್ರಕಾರದ ಶಂಕೆಗಳಿಗೆ ಉತ್ತರ ನೀಡುತ್ತದೆ.

ಹನುಮಂತನ ಪ್ರತಿಮೆಯ ಎದುರಿಗೆ ಸಾಧಕನು ಸಾಧ್ಯನ ದ್ವಿತಿಯಾಂತ ನಾಮ, ನಂತರ ವಿಮೋಚಯ, ವಿಮೋಚಯ ಪದ, ನಂತರ ಮೂಲಮಂತ್ರ ಬರೆಯಬೇಕು. ನಂತರ ಅದನ್ನು ಎಡಗೈಯಿಂದ ಅಳಿಸಿ ಹಾಕಬೇಕು. ಈ ಬರೆಯುವ ಮತ್ತು ಅಳಿಸುವ ಪ್ರಕ್ರಿಯೆನ್ನು ಪುನಃ ಪುನಃ ಮಾಡುತ್ತಿರಬೇಕು. ಈ ಪ್ರಕಾರ ಒಂದ ನೂರಾ ಎಂಟು ಬಾರಿ ಬರೆಯುವ ಮತ್ತು ಅಳಿಸುವುದರಿಂದ ಬಂಧನದಲ್ಲಿರುವ ವ್ಯಕ್ತಿಯು ಬೇಡಿ ಮತ್ತು ಬಂಧನದಿಂದ ಮುಕ್ತನಾಗುತ್ತಾನೆ.

ಏವಂ ವಿದ್ವೇಷಣಾದೀನಿ ಕುರ್ಯಾತ್ತತ್ಪಲ್ಲವಂ ಲಿಖನ್ ॥ 39 ॥
ವಶ್ಯಾರ್ಥೆ ಸರ್ಷಪೈರ್ಹೋಮಾ ವಿದ್ವೇಷೆ ಕರವೀರಜೈಃ ।
ಕುಸುಮೈರಿಧ್ಮಕಾಷ್ಠೈರ್ವಾ ಜೀರಕೈರ್ಮರಿಚೈರಪಿ ॥ 40 ॥

ಹನುಮಂತನ ಪಾದಗಳ ಕೆಳಗೆ "ಅಮುಕಂ ವಿದ್ವೇಷಯ ವಿದ್ವೇಷಯ" ಬರೆದು ವಿದ್ವೇಷಣ ಮಾಡಿದರೆ, "ಅಮುಕಂ ಉಚ್ಚಾಟಯ ಉಚ್ಚಾಟಯ" ಬರೆದು ಉಚ್ಚಾಟನೆ ಮತ್ತು 'ಮಾರಯ ಮಾರಯ' ಬರೆದು ಮಾರಣ ಪ್ರಯೋಗಗಳನ್ನು ಮಾಡಬಹುದು. ಆದರೆ ಗುರುವಿನ ಮಾರ್ಗದರ್ಶನವಿರದೆ ಈ ಪ್ರಯೋಗಗಳನ್ನು ಮಾಡಿದರೆ ಸಾಧಕನಿಗೆ ಆಘಾತಗಳು ಉಂಟಾಗುವವು.

ವಶ್ಯ ಕರ್ಮಗಳಲ್ಲಿ ಬಿಳಿಯ ಸಾಸಿವೆ, ವಿದ್ವೇಷದಲ್ಲಿ ಕಣಗಿಲು ಹೂವು, ಕಟ್ಟಿಗೆ, ಅಥವಾ ಜೀರಿಗೆ ಮತ್ತು ಕಪ್ಪು ಮೆಣಸುಗಳಿಂದ ಹೋಮ ಮಾಡಬೇಕು.

ಕಾಮ್ಯ ಪ್ರಯೋಗಗಳು

ಜ್ವರೆ ದೂರ್ವಾಗೂಡೂಚಿಭಿರ್ದಘ್ನಾ ಕ್ಷೀರೇಣ ವಾ ಘೃತೈಃ ।
ಶೂಲೆ ಹೋಮಃ ಕುಬೇರಾಕ್ಷೈರೇರಡಸಮಿಧಾ ತಥಾ ॥ 41 ॥

ಅಭಿಚಾರೋತ್ಥಭುತೋತ್ಥ ಜ್ವರೆ ತನ್ಮಂತ್ರಿತೈರ್ಜಲೈಃ ।
ಭಸ್ಮಭಿಃ ಸಲಿಲೈರ್ವಾಪಿ ತಾಡಯೇಜ್ಜ್ವರಿಣಃ ಕ್ರುಧಾ
ದಿನತ್ರಯಾಜ್ಜ್ವರಾನ್ಮುಕ್ತಃ ಸಸುಖಂ ಲಭತೇ ನರಃ । ॥ 18 ॥
ತನ್ಮಂತ್ರಿತಂ ಪಯಃ ಪೀತ್ವಾ ಯೋದ್ಧುಂ ಗಚ್ಛೇನ್ಮನುಂ ಜಪನ್
ತಜ್ಜಪ್ತಭಸ್ಮಲಿಪ್ತಾಂಗಃ ಶಸ್ತ್ರಸಂಧೈರ್ನ ಬಾಧ್ಯತೆ ॥ 19 ॥
ಶಸ್ತ್ರಕ್ಷತಂ ವ್ರಣಂ ಶೋಫೋ ಲೂತಾಸ್ಫೋಟೋಪಿ ಭಸ್ಮನಾ । ॥ 20 ॥
ತ್ರಿಮಂತ್ರಿತೇನ ಸಂಸ್ಪೃಷ್ಟಾಃ ಶುಷ್ಯಂತ್ಯಚಿರತೊ ನೃಣಾಮ್ ॥ 21 ॥

10 ದಿನ ಪರ್ಯಂತ ರಾತ್ರಿಯಲ್ಲಿ 900 ರಂತೆ ಮಂತ್ರ ಜಪ ಮಾಡಿದರೆ ರಾಜಭಯ ಮತ್ತು ಶತ್ರುಭಯಗಳು ದೂರವಾಗುತ್ತವೆ. ಅಭಿಚಾರ ಜನ್ಯ ಅಥವಾ ಭೂತಜನ್ಯ ಜ್ವರಗಳಲ್ಲಿ, ಈ ಮಂತ್ರದಿಂದ ಅಭಿಮಂತ್ರಿತ ಜಲ ಅಥವಾ ಭಸ್ಮದಿಂದ ಕ್ರೋಧಪೂರ್ವಕವಾಗಿ ಜ್ವರಗ್ರಸ್ತ ರೋಗಿಗೆ ಸಂಪ್ರೋಕ್ಷಣೆ ಮಾಡಬೇಕು. ಈ ಪ್ರಯೋಗದಿಂದ ಮೂರು ದಿನಗಳಲ್ಲಿ ರೋಗಿಯು ಜ್ವರಮುಕ್ತನಾಗುವನು. ಈ ಮಂತ್ರದಿಂದ ಅಭಿಮಂತ್ರಿತ ಔಷಧಿ ಸೇವನೆಯಿಂದ ನಿಶ್ಚಿತ ರೂಪದಲ್ಲಿ ಆರೋಗ್ಯಪ್ರಾಪ್ತಿಯಾಗುವುದು.

ಈ ಮಂತ್ರದಿಂದ ಅಭಿಮಂತ್ರಿತ ಜಲವನ್ನು ಕುಡಿದು ಮತ್ತು ಈ ಮಂತ್ರವನ್ನು ಜಪಿಸುತ್ತ ತನ್ನ ಶರೀರದಲ್ಲಿ ಭಸ್ಮವನ್ನು ಧರಿಸಿ ಈ ಮಂತ್ರವನ್ನು ಜಪಿಸುತ್ತ ರಣಭೂಮಿಗೆ ತೆರಳಿದರೆ ಯುದ್ಧದಲ್ಲಿ ನಾನಾ ಪ್ರಕಾರದ ಶಸ್ತ್ರಗಳನ್ನು ಪ್ರಯೋಗಿಸಿದರೂ ಯಾವ ತೊಂದರೆಯೂ ಆಗುವುದಿಲ್ಲ.

ಶಸ್ತ್ರದ ಗಾಯ ಅಥವಾ ಅನ್ಯ ಪ್ರಕಾರದ ಗಾಯ, ಬಾವು, ಅಥವಾ ವ್ರಣ, ಕುರು, ಗುಳ್ಳೆ ಮುಂತಾದ ಚರ್ಮರೋಗಗಳು ಈ ಮಂತ್ರದಿಂದ ಮೂರು ಬಾರಿ ಅಭಿಮಂತ್ರಿತ ಭಸ್ಮವನ್ನು ಲೇಪಿಸುವುದರಿಂದ ಶೀಘ್ರದಲ್ಲಿ ಗುಣವಾಗುವವು

ಸೂರ್ಯಾಸ್ತಮಯಮಾರಭ್ಯ ಜಪೇತ್ ಸೂರ್ಯೋದಯಾವಧಿ ।
ಕೀಲಕಂ ಭಸ್ಮ ಚಾದಾಯ ಸಪ್ತಹಾವಧಿ ಸಂಯತಃ ॥ 22 ॥
ನಿಖನೇದ್ ಭಸ್ಮಕೀಲೌ ತೌ ವಿದ್ವಿಷಾಂ ದ್ವಾರ್ಯಲಕ್ಷಿತಮ್ ।
ವಿದ್ವೇಷಂ ಮಿಥ ಆಪನ್ನಾಃ ಪಲಾಯಂತೇರಯೊ ಚಿರಾತ್ ॥ 23 ॥
ಅಭಿಮಂತ್ರಿತ ಭಸ್ಮಾಂಬುದೇಹಚಂದನ ಸಂಯುತಮ್ ।
ಖಾದ್ಯಾದಿಯೋಜಿತಂ ಯಸ್ಮೈ ದೀಯತೆ ಸ ಚ ದಾಸವತ್ ॥ 24 ॥
ಕ್ರೂರಾಶ್ಚ ಜಂತವೋನೇನ ಭವಂತಿ ವಿಧಿನಾ ವಶಾಃ ।





ಈಶಾನದಿಕ್ಸ್ಥಮೂಲೇನ ಭೂತಾಂಕುಶತರೋಃ ಶುಭಾಮ್ ॥ 25 ॥
ಅಂಗುಷ್ಠ ಮಾತ್ರಾಂ ಪ್ರತಿಮಾಂ ಪ್ರವಿಧಾಯ ಹನೂಮತಃ ।
ಪ್ರಾಣಸಂಸ್ಥಾಪನಂ ಕೃತ್ವಾ ಸಿಂಧೂರೈಃ ಪರಿಪೂಜ್ಯ ಚ ॥ 26 ॥
ಗೃಹಸ್ಯಾಭಿಮುಖೆ ದ್ವಾರೆ ನಿಖನೇನ್ಮಂತ್ರ ಮುಚ್ಚರನ್ ।
ಭೂತಾಭಿಚಾರಚೌರಾಗ್ನಿವಿಷರೋಗ ನೃಪೋದ್ಭವಾಃ ॥ 27 ॥
ಸಂಜಾಯಂತೆ ಗೃಹೆ ತಸ್ಮಿನ್ ಕದಾಚಿದುಪದ್ರವಾಃ ।
ಪ್ರತ್ಯಹಂ ಧನಪುತ್ರಾದ್ಯೈರೇಧತೆ ತದ್ಗೃಹಂ ಚಿರಮ್ ॥ 28 ॥

ತನ್ನ ಇಂದ್ರಿಯಗಳನ್ನು ವಶದಲ್ಲಿಸಿಕೊಂಡು ಸಾಧಕನು ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ ಏಳು ದಿನ ಮೊಳೆ ಮತ್ತು ಭಸ್ಮಗಳನ್ನು ತೆಗೆದುಕೊಂಡು ಈ ಮಂತ್ರವನ್ನು ಜಪಿಸಬೇಕು. ನಂತರ ಭಸ್ಮ ಮತ್ತು ಮೊಳೆಗಳನ್ನು ತೆಗೆದುಕೊಂಡು ಶತ್ರುವಿನ ಬಾಗಿಲಿನಲ್ಲಿ ಹುಗಿದು ಬಿಟ್ಟರೆ, ಶತ್ರುಗಳು ಪರಸ್ಪರ ಬಡಿದಾಡಿಕೊಂಡು ಅಲ್ಲಿಂದ ಶೀಘ್ರವಾಗಿ ಹೊರಟು ಹೋಗುವರು.

ತನ್ನ ಶರೀರದ ಮೇಲೆ ಲೇಪಿಸಿರುವ ಗಂಧದ ಜೊತೆಗೆ ಈ ಮಂತ್ರದಿಂದ ಅಭಿಮಂತ್ರಿತ ನೀರು ಮತ್ತು ಭಸ್ಮಗಳನ್ನು ಖಾದ್ಯ ಪದಾರ್ಥಗಳ ಜೊತೆಗೆ ಬೆರೆಸಿ ತಿನ್ನಿಸುವುದರಿಂದ, ತಿಂದ ವ್ಯಕ್ತಿಯು ದಾಸನಾಗುತ್ತಾನೆ. ಅದೇ ಪ್ರಕಾರ ಅದನ್ನು ಕ್ರೂರ ಪ್ರಾಣಿಗಳಿಗೆ ತಿನ್ನಿಸಿದರೆ ಸಾಧಕನ ವಶವರ್ತಿಯಾಗುತ್ತವೆ.

ಕರಂಜ ವೃಕ್ಷದ ಈಶಾನ ಕೋನದ ಬೇರನ್ನು ತೆಗೆದುಕೊಂಡು ಅದರಿಂದ ಹನುಮಂತನ ಪ್ರತಿಮೆಯನ್ನು ನಿರ್ಮಾಣ ಮಾಡಿ ಅದರ ಪ್ರಾಣಪ್ರತಿಷ್ಠೆ ಮಾಡಿ, ಸಿಂಧೂರವನ್ನು ಲೇಪಿಸಿ ಈ ಮಂತ್ರದ ಜಪ ಮಾಡುತ್ತ ಅದುನ್ನು ಮನೆಯ ಬಾಗಿಲಿನಲ್ಲಿ ಹುಗಿಯಬೇಕು. ಈ ಪ್ರಕಾರ ಮಾಡುವುದರಿಂದ ಮನೆಯಲ್ಲಿ ಭೂತ, ಅಭಿಚಾರ, ಕಳ್ಳರು, ಅಗ್ನಿ, ವಿಷರೋಗ ಮತ್ತು ರಾಜಭಯ ಇತ್ಯಾದಿ ಉಪದ್ರವಗಳು ಉಂಟಾಗುವುದಿಲ್ಲ. ಮನೆಯಲ್ಲಿ ನಿರಂತರವಾಗಿ ಧನ-ಪುತ್ರಪೌತ್ರಾದಿಗಳ ಸಮೃದ್ಧಿಯಾಗುತ್ತದೆ.

ಮಾರಣ ಪ್ರಯೋಗ

ನಿಶಿ ಸ್ಮಶಾನಭೂಮಿಸ್ಥೊ ಭಸ್ಮನಾ ಮೃತ್ಸ್ನಯಾಪಿ ವಾ ।
ಶತ್ರೋಃ ಪ್ರತಿಕೃತಿಂ ಕೃತ್ವಾ ಹೃದಿ ನಾಮ ಸಮಾಲಿಖೇತ್ ॥ 29 ॥
ಕೃತಪ್ರಾಣಪ್ರತಿಷ್ಠಾಂ ತಾಂ ಭಿಂಧ್ಯಾಚ್ಛಸ್ತ್ರೈರ್ಮನುಂ ಜಪನ್ ।
ಮಂತ್ರಾಂತೆ ಪ್ರೋಚ್ಚರೇಚ್ಛತ್ರೋರ್ನಾಮಧಿಂಧಿ ಚ ಭಿಂಧಿ ಚ ॥ 30 ॥

ಪೂಜೆ ಮಾಡಿ, ಮೂಲಮಂತ್ರದಿಂದ ಪುಷ್ಪಾಂಜಲಿ ಸಮರ್ಪಿಸಬೇಕು. ನಂತರ ಹನುಮಂತನ ಆಜ್ಞೆಯನ್ನು ಪಡೆದು ಆವರಣ ಪೂಜೆಯನ್ನು ಮಾಡಬೇಕು.

**ಆವರಣ ಪೂಜಾ**

ಸರ್ವ ಪ್ರಥಮವಾಗಿ ಕೇಸರಗಳಲ್ಲಿ ಅಂಗಪೂಜಾ ಮತ್ತು ದಳಗಳಲ್ಲಿ ಅಷ್ಟ ನಾಮಗಳಿಂದ ಹನುಮಂತನನ್ನು ಪೂಜಿಸಬೇಕು. ರಾಮಭಕ್ತ, ಮಹಾತೇಜ, ಕಪಿರಾಜ, ಮಹಾಬಲ, ದ್ರೋಣಾದ್ರಿಹಾರಕ, ಮೇರು ಪೀಠಕಾರ್ಚನಕಾರಕ, ದಕ್ಷಿಣಾಶಾಭಾಸ್ಕರ ಮತ್ತು ಸರ್ವವಿಘ್ನನಿವಾರಕ ಇವು ಎಂಟು ಹನುಮಂತನ ನಾಮಗಳಿವೆ. ಈ ನಾಮಗಳಿಂದ ಅರ್ಚನೆ ಮಾಡಿದ ನಂತರ ದಳಗಳ ಅಗ್ರಭಾಗದಲ್ಲಿ ಸುಗ್ರೀವ, ಅಂಗದ, ನೀಲ, ಜಾಂಬುವಂತ, ನಳ, ಸುಷೇಣ ದ್ವಿವಿದ ಮತ್ತು ಮಯಂದ ಈ ಎಂಟು ವಾನರಗಳನ್ನು ನಂತರ ದಿಕ್ಪಾಲರನ್ನು ಕೂಡಾ ಪೂಜೆ ಮಾಡಬೇಕು.

ವಿಧಾನ : ಪ್ರಪ್ರಥಮವಾಗಿ ಕೇಸರದಲ್ಲಿ ಆಗ್ನೇಯಾದಿ ಕ್ರಮದಲ್ಲಿ ಅಂಗಪೂಜಾ–

| | |
|---|---|
| **ಹೌಂ ಹೃದಯಾಯ ನಮಃ,** | ಹಸಖ್ಫ್ರೆಂ ಶಿರಸೆ ಸ್ವಾಹಾ । |
| **ಖ್ಫ್ರೆಂ ಶಿಖಾಯೈ ವಷಟ್,** | ಹಸ್ತ್ರಾಂ ಕವಚಾಯ ಹುಂ |
| **ಹಸಖಫ್ರೆಂ ನೇತ್ರತ್ರಯಾಯ** | ವೌಷಟ್, ಹಸೌಂ ಅಸ್ತ್ರಾಯ ಫಟ್ । |

ನಂತರ ದಳಗಳಲ್ಲಿ ಪೂರ್ವಾದಿ ದಿಶೆಗಳ ಕ್ರಮದಲ್ಲಿ ನಾಮಗಳಿಂದ,

| | |
|---|---|
| ಓಂ ರಾಮಭಕ್ತಾಯ ನಮಃ, | ಓಂ ಮಹಾತೇಜಸೆ ನಮಃ, |
| ಓಂ ಕಪಿರಾಜಾಯ ನಮಃ, | ಓಂ ಮಹಾಬಲಾಯ ನಮಃ, |
| ಓಂ ದ್ರೋಣಾದ್ರಿಹಾರಕಾಯೈ ನಮಃ, | ಓಂ ಮೇರು ಪೀಠಕಾರ್ಚನಕಾರಕಾ ನಮಃ |
| ಓಂ ದಕ್ಷಿಣಾಶಾಭಾಸ್ಕರಾಯ ನಮಃ, | ಓಂ ಸರ್ವವಿಘ್ನನಿವಾರಕಾಯ ನಮಃ |

ಆಮೇಲೆ, ದಳಗಳ ಅಗ್ರಭಾಗದಲ್ಲಿ ಸುಗ್ರೀವಾದಿ ವಾನರರನ್ನು ಪೂರ್ವಾದಿ ಕ್ರಮದಲ್ಲಿ–

ಓಂ ಸುಗ್ರೀವಾಯ ನಮಃ । ಓಂ ಅಂಗದಾಯ ನಮಃ ।
ಓಂ ನೀಲಾಯ ನಮಃ । ಓಂ ಜಾಂಬುವಂತಾಯ ನಮಃ ।
ಓಂ ನಳಾಯ ನಮಃ । ಓಂ ಸುಷೇಣಾಯ ನಮಃ ।
ಓಂ ದ್ವಿವಿದಾಯ ನಮಃ । ಓಂ ಮೈಂದಾಯ ನಮಃ

ಭೂಪುರದಲ್ಲಿ ಪೂರ್ವಾದಿ ಕ್ರಮದಲ್ಲಿ ಇಂದ್ರಾದಿ ದಿಕ್ಪಾಲರನ್ನು –





ಓಂ ಲಂ ಇಂದ್ರಾಯ ನಮಃ ಪೂರ್ವೆ,
ಓಂ ರಂ ಅಗ್ನಯೇ ನಮಃ ಆಗ್ನೆಯ ।
ಓಂ ಯಂ ಯಮಾಯ ನಮಃ ದಕ್ಷಿಣೆ,
ಓಂ ಕ್ಷಂ ನಿರುತಯೆ ನಮಃ ನೈರುತ್ಯೆ
ಓಂ ವಂ ವರುಣಾಯ ನಮಃ ಪಶ್ಚಿಮೆ,
ಓಂ ಯಂ ವಾಯುವೆ ನಮಃ ವಾಯುವ್ಯೆ
ಓಂ ಸಂ ಸೋಮಾಯ ನಮಃ ಉತ್ತರೆ,
ಓಂ ಹಂ ಈಶಾನಾಯ ನಮಃ ಈಶಾನ್ಯೆ
ಓಂ ಆಂ ಬ್ರಹ್ಮಣೆ ನಮಃ ಪೂರ್ವಈಶಾನಯೋರ್ಮಧ್ಯೆ ।
ಓಂ ಹ್ರೀಂ ಅನಂತಾಯ ನಮಃ ಪಶ್ಚಿಮನೈರುತ್ಯಯೋರ್ಮಧ್ಯೆ

ಈ ಪ್ರಕಾರ ಆವರಣ ಪೂಜೆ ಮಾಡಿ ಮೂಲಮಂತ್ರದಿಂದ ಪುನಃ ಹನುಮಾನ್‌ನನ್ನು ಧೂಪದೀಪಾದಿ ಉಪಚಾರಗಳಿಂದ ಪೂಜೆ ಮಾಡಬೇಕು.

ಏವಂ ಸಿದ್ಧೆ ಮನೌ ಮಂತ್ರಿ ಸ್ವಪರೇಷ್ಟಂ ಪ್ರಸಾಧಯೇತ್ ।
ಕದಲೀಬೀಜಪೂರಾಮ್ರಫಲೈರ್ಹುತ್ವಾ ಸಹಸ್ರಕಮ್ ॥ 14 ॥

ದ್ವಾವಿಂಶಾಂಥೆ ಬ್ರಹ್ಮಚಾರಿ ವಿಪ್ರಾನ್ ಸಂಭೋಜಯೇದಥ ।
ಏವಂ ಕೃತ್ತೆ ಮಹಾಭೂತ ವಿಷಚೌರಾದ್ಯುಪದ್ರವಾಃ ॥ 15 ॥

ನಶ್ಯಂತಿ ಕ್ಷಣಮಾತ್ರೇಣ ವಿದ್ವೇಷಿಗ್ರಹದಾನವಾಃ ।
ಅಷ್ಟೋತ್ತರ ಶತಂ ವಾರಿಮಂತ್ರಿಕಂ ವಿಷನಾಶನಮ್ ॥ 16 ॥

ಈ ಪ್ರಕಾರ ಮಂತ್ರವು ಸಿದ್ಧವಾದ ನಂತರ ಸಾಧಕನು ತನ್ನ ಅಥವಾ ಬೇರೆಯವರ ಇಷ್ಟಾರ್ಥ ಸಿದ್ಧಿಯ ಕಾರ್ಯಗಳನ್ನು ಮಾಡಬಹುದು.

ಬಾಳೆಹಣ್ಣು, ಬಿಜೌರಾ, ಮಾವಿನ ಹಣ್ಣಿನಿಂದ ಒಂದು ಸಾವಿರ ಆಹುತಿ ಕೊಡಬೇಕು. ಮತ್ತು 22 ಬ್ರಹ್ಮಚಾರಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಈ ಪ್ರಕಾರ ಮಾಡುವುದರಿಂದ ಮಹಾಭೂತ, ವಿಷ ಮತ್ತು ಕಳ್ಳರು ಮುಂತಾದವರ ಉಪದ್ರವಗಳು ನಾಶವಾಗುತ್ತವೆ. ಇದಲ್ಲದೆ ವಿದ್ವೇಷ ಮಾಡುವವರು, ಗ್ರಹ ಮತ್ತು ದಾನವರೂ ಕೂಡಾ ಈ ಪ್ರಯೋಗದಿಂದ ನಾಶವಾಗುತ್ತಾರೆ. ಈ ಮಂತ್ರದಿಂದ 108 ಬಾರಿ ಅಭಿಮಂತ್ರಿತ ಜಲವು ವಿಷದ ಪ್ರಭಾವವನ್ನು ನಾಶ ಮಾಡುತ್ತದೆ.

ರಾತ್ರೌ ನವಶತಂ ಮಂತ್ರಂ ಜಪೇದ್ದಶಾದಿನಾವಧಿ ।
ಯೋ ನರಸ್ತಸ್ಯ ನಶ್ಯಂತಿ ರಾಜಶತ್ರೂತ್ಥಭೀತಯಃ ॥ 17 ॥

ಕೇಸರೇಷ್ವಂಗಪೂಜಾ ಸ್ಯಾದ್ ದಲೇಷ್ವಷ್ಟಾಸ್ವದಾಷ್ಟಯಾನ್
ರಾಮಭಕ್ತೋ ಮಹಾತೇಜಾ ಕಪಿರಾಜೋ ಮಹಾಬಲಃ । ॥ 10 ॥
ದ್ರೋಣಾದ್ರಿಹಾರಕೋ ಮೇರುಪೀಠಕಾರ್ಚನ ಕಾರಕಃ
ದಕ್ಷಿಣಾಶಾಭಾಸ್ಕರಶ್ಚ ಸರ್ವವಿಘ್ನನಿವಾರಕಃ । ॥ 11 ॥
ಏವಂ ನಾಮಾನಿ ಸಂಪೂಜ್ಯ ದಲಾಗ್ರೇಷು ಚ ವಾನರಾನ್
ಸುಗ್ರೀವಮಂಗದಂ ನೀಲಂ ಜಾಂಬವಂತಂ ನಲಂ ತಥಾ । ॥ 12 ॥
ಸುಷೇಣಂ ದ್ವಿವಿದಂ ಮೈಂದಂ ಪೂಜಯೇದ್ದಿಕ್ಪತೀನಪಿ ॥ 13 ॥

ಈ ಪ್ರಕಾರ ಧ್ಯಾನ ಮಾಡಿ ತನ್ನ ಮನಸ್ಸು ಮತ್ತು ಇಂದ್ರಿಯಗಳನ್ನು ವಶದಲ್ಲಿರಿಸಿಕೊಂಡು ಸಾಧಕನು ಹನ್ನೆರಡು ಸಾವಿರ ಸಂಖ್ಯೆಯಲ್ಲಿ ಜಪ ಮಾಡಬೇಕು. ಮತ್ತು ಹಾಲು, ಮೊಸರು ಮತ್ತು ತುಪ್ಪಗಳಿಂದ ಮಿಶ್ರಿತ ಭತ್ತದಿಂದ ಅದರ ದಶಾಂಶ ಹೋಮ ಮಾಡಬೇಕು. ವಿಮಲಾ ಮುಂತಾದ ಶಕ್ತಿಗಳಿಂದ ಯುಕ್ತ ಪೀಠದ ಮೇಲೆ ಶ್ರೀ ಹನುಮಾನ್‌ನನ್ನು ಪೂಜೆ ಮಾಡಬೇಕು.

ಹನುಮತ್ಪೂಜನ ಯಂತ್ರ



ಮೊದಲು ವೃತ್ತಾಕಾರದ ಕರ್ಣಿಕಾ, ನಂತರ ಅಷ್ಟದಳ ಮತ್ತು ಭೂಪುರ ಸಹಿತ ಯಂತ್ರದ ನಿರ್ಮಾಣ ಮಾಡಬೇಕು. ನಂತರ ಧ್ಯಾನ ಶ್ಲೋಕದಲ್ಲಿ ವರ್ಣಿತ ಹನುಮಂತನ ಸ್ವರೂಪದ ಧ್ಯಾನ ಮಾಡಿ ಮಾನಸೋಪಚಾರದಿಂದ ಪೂಜೆ ಮಾಡಿ ಅರ್ಘ್ಯ ಸ್ಥಾಪನೆ ಮಾಡಬೇಕು. ನಂತರ ಪೂರ್ವದಲ್ಲಿ (9:72–78)ರಲ್ಲಿ ವರ್ಣಿತ ವಿಧಾನದಿಂದ ವೈಷ್ಣವ ಪೀಠದಲ್ಲಿ ಪೂಜಿಸಬೇಕು. ಪೀಠದ ಮಧ್ಯದಲ್ಲಿ – ಓಂ ಆಧಾರಶಕ್ತಯೇ ನಮಃ । ಓಂ ಪ್ರಕೃತ್ಯೈ ನಮಃ । ಓಂ ಕೂರ್ಮಾಯ ನಮಃ । ಓಂ ಅನಂತಾಯ ನಮಃ । ಓಂ ಪೃಥಿವ್ಯೈ ನಮಃ । ಓಂ ಕ್ಷೀರಸಮುದ್ರಾಯ ನಮಃ । ಓಂ ಶ್ವೇತದ್ವೀಪಾಯ ನಮಃ । ಓಂ ಮಣಿಮಂಡಪಾಯ ನಮಃ । ಓಂ ಕಲ್ಪವೃಕ್ಷಾಯ ನಮಃ । ಓಂ





ಮಣಿವೇದಿಕಾಯೈ ನಮಃ । ಓಂ ರತ್ನಸಿಂಹಾಸನಾಯ ನಮಃ

ನಂತರ ಆಗ್ನೇಯಾದಿ ಕೋನಗಳಲ್ಲಿ – ಧರ್ಮ ಮುಂತಾದವುಗಳನ್ನು, ಪೂರ್ವಾದಿ ದಿಶೆಗಳಲ್ಲಿ ಅಧರ್ಮ ಮುಂತಾದವುಗಳನ್ನು ಪೂಜೆ ಮಾಡಬೇಕು.

ಓಂ ಧರ್ಮಾಯ ನಮಃ ಆಗ್ನೇಯೆ, ಓಂ ಜ್ಞಾನಾಯ ನಮಃ ನೈಋತ್ಯೆ ।
ಓಂ ವೈರಾಗ್ಯಾಯ ನಮಃ ವಾಯುವ್ಯೆ, ಓಂ ಐಶ್ವರ್ಯಾಯ ನಮಃ ಈಶಾನ್ಯೆ
ಓಂ ಅಧರ್ಮಾಯ ನಮಃ ಪೂರ್ವೆ, ಓಂ ಅಜ್ಞಾನಾಯ ನಮಃ ದಕ್ಷಿಣೆ ।
ಓಂ ಅವೈರಾಗ್ಯಾಯ ನಮಃ ಪಶ್ಚಿಮೆ, ಓಂ ಅನೈಶ್ವರ್ಯಾಯ ನಮಃ ಉತ್ತರೆ।

ಪುನಃ ಪೀಠದ ಮಧ್ಯದಲ್ಲಿ ಅನಂತಾದಿಗಳನ್ನು ಈ ಪ್ರಕಾರ ಪೂಜಿಸಬೇಕು. ಓಂ ಅನಂತಾಯ ನಮಃ, ಓಂ ಪದ್ಮಾಯ ನಮಃ, ಓಂ ಅಂ ಸೂರ್ಯಮಂಡಲಾಯ ದ್ವಾದಶಕಲಾತ್ಮನೆ ನಮಃ

ಓಂ ಉಂ ಸೋಮಮಂಡಲಾಯ ಷೋಡಶಕಲಾತ್ಮನೆ ನಮಃ
ಓಂ ರಂ ವಹ್ನಿಮಂಡಲಾಯ ದಶಕಲಾತ್ಮನೆ ನಮಃ ।
ಓಂ ಸಂ ಸತ್ವಾಯ ನಮಃ, ಓಂ ರಂ ರಜಸೆ ನಮಃ
ಓಂ ತಂ ತಮಸೆ ನಮಃ, ಓಂ ಆಂ ಆತ್ಮನೆ ನಮಃ ।
ಓಂ ಅಂ ಅಂತರಾತ್ಮನೆ ನಮಃ,
ಓಂ ಪಂ ಪರಮಾತ್ಮನೆ ನಮಃ,
ಓಂ ಹ್ರೀಂ ಜ್ಞಾನಾತ್ಮನೆ ನಮಃ ಪೂರ್ವೆ

ಕೇಶರಗಳ ಅಷ್ಟ ದಿಕ್ಕುಗಳಲ್ಲಿ ಮತ್ತು ಮಧ್ಯದಲ್ಲಿ, ವಿಮಲಾ ಮುಂತಾದ ಶಕ್ತಿಗಳನ್ನು ಪೂಜೆ ಮಾಡಬೇಕು.

ಓಂ ವಿಮಲಾಯೈ ನಮಃ, ಓಂ ಉತ್ಕರ್ಷಿಣ್ಯೈ ನಮಃ
ಓಂ ಜ್ಞಾನಾಯೈ ನಮಃ, ಓಂ ಕ್ರಿಯಾಯೈ ನಮಃ ।
ಓಂ ಯೋಗಾಯೈ ನಮಃ, ಓಂ ಪ್ರಹ್ವ್ಯೈ ನಮಃ ।
ಓಂ ಸತ್ಯಾಯೈ ನಮಃ, ಓಂ ಈಶಾನಾಯೈ ನಮಃ ಮಧ್ಯೆ ।
ಓಂ ಅನುಗ್ರಹಾಯೈ ನಮಃ

ನಂತರ "ಓಂ ನಮೋ ಭಗವತೆ ವಿಷ್ಣವೇ ಸರ್ವಭೂತಾತ್ಮ ಸಂಯೋಗ ಯೋಗಪದ್ಮಪೀಠಾತ್ಮನೆ ನಮಃ" ಈ ಪೀಠ ಮಂತ್ರದಿಂದ ಪೀಠವನ್ನು ಪೂಜೆ ಮಾಡಿ ಆಸನ, ಧ್ಯಾನ, ಆವಾಹನಾದಿ ಉಪಚಾರಗಳಿಂದ ಹನುಮಂತನನ್ನು

ಅರ್ಥಾತ್ (ಹಸ್ರೈಂ) ಇದು ದ್ವಿತೀಯ ಬೀಜವಾಗಿದೆ. ರುದ್ರ (ಎ) ಮತ್ತು ಬಿಂದು ಅನುಸ್ವಾರ ಸಹಿತ ಗದಿ (ಖ), ಪಾಂತ (ಫ) ಮತ್ತು ಅಗ್ನಿ (ರ್) ಅರ್ಥಾತ್ (ಖ್ಫ್ರೇಂ) ಇದು ತೃತೀಯ ಬೀಜವಾಗಿದೆ. ಮನು (ಔ) ಚಂದ್ರ (ಅನುಸ್ವಾರ) ಸಹಿತ ಹ್.ಸ್.ರ್ ಅರ್ಥಾತ್ (ಹಸ್ರೌಂ) ಇದು ಚತುರ್ಥ ಬೀಜವಾಗಿದೆ. (ಎ) ಮತ್ತು ಬಿಂದು (ಅನುಸ್ವಾರ) ಸಹಿತ ಹ್.ಸ್.ಖ್. ಫ್ ಮತ್ತು ರ್ ಅರ್ಥಾತ್ (ಹಸಖ್ಫ್ರೇಂ) ಇದು ಪಂಚಮ ಬೀಜವಾಗಿದೆ. ಮನು (ಔ) ಇಂದು ಅನುಸ್ವಾರ ಸಹಿತ್ ಹ ಮತ್ತು ಸ್ ಅರ್ಥಾತ್ (ಹಸೌಂ) ಇದು ಷಷ್ಠಮ ಬೀಜವಾಗುತ್ತದೆ. ಇದರ ನಂತರ ಚತುರ್ಥ್ಯಂತ ಹನುಮಾನ್ (ಹನುಮತೆ) ನಂತರ ಅಂತ್ಯದಲ್ಲಿ ಹಾರ್ದಂ (ನಮಃ) ಸೇರಿಸುವುದರಿಂದ ದ್ವಾದಶ (12) ಅಕ್ಷರಗಳ ಮಂತ್ರದ ರಚನೆಯಾಗುತ್ತದೆ. "ಹೌಂ ಹಸ್ರೈಂ ಖ್ಫ್ರೇಂ ಹಸೌಂ ಹಸಖ್ಫ್ರೇಂ ಹಸೌಂ ಹನುಮತೆ ನಮಃ"

ಯುತೊ ಹನುಮಾನ್ಹಾರ್ದಾ ಮಂತ್ರೋಽಯಂ ದ್ವಾದಶಾಕ್ಷರಃ ।
ರಾಮಚಂದ್ರೋ ಮುನಿಶ್ಚಾಸ್ಯ ಜಗತೀಛಂದ ಈರಿತಮ್ ॥ 4 ॥

ಹನುಮಾನ್ ದೇವತಾ ಬೀಜಂ ಷಷ್ಠಂ ಶಕ್ತಿರ್ದ್ವಿತೀಯಕಮ್ ।
ಷಡ್ಬೀಜೈರಂಗಷಟ್ಕಂ ಸ್ಯಾಮೂರ್ಧ್ನಿ ಭಾಲೆ ದೃಶೋರ್ಮುಖೆ ॥ 5 ॥

ಕಂಠೆ ಚ ಬಾಹುದ್ವಿತಿಯೆ ಹೃದಿ ಕುಕ್ಷೌ ಚ ನಾಭಿತಃ ।
ಲಿಂಗೆ ಜಾನುದ್ವಯೆ ಪಾದದ್ವಯೆ ವರ್ಣಾನ್ ಕ್ರಮಾನ್ ನ್ಯಸೇತ್ ॥ 6 ॥

ಷಡ್‌ಬೀಜಾನಿ ಪದದ್ವಂದೆ ಮೂರ್ಧ್ನಿ ಭಾಲೆ ಮುಖೆ ಹೃದಿ ।
ನಾಭಾವೂರ್ವೋರ್ಜಂಘಯೋಶ್ಚ ಪಾದಯೋರ್ವಿನ್ಯಸೇತ್ ಕ್ರಮಾತ್ ॥ 7 ॥

ಈ ಮಂತ್ರದ ರಾಮಚಂದ್ರ ಋಷಿ, ಜಗತಿ ಛಂದ, ಹನುಮಾನ್ ದೇವತೆ ಇರುತಾರೆ. ಷಷ್ಠ ಹಸೌಂ ಬೀಜ, ದ್ವಿತಿಯ ಹಸ್ರೈಂ ಶಕ್ತಿ ಇರುತ್ತಾರೆ.

ವಿನಿಯೋಗ : ಓಂ ಅಸ್ಯ ಶ್ರೀ ಹನುಮನ್ಮಂತ್ರಸ್ಯ ರಾಮಚಂದ್ರ ಋಷಿಃ ಜಗತಿ ಛಂದ, ಹನುಮಾನ್ ದೇವತಾ ಹಸೌಂ ಬೀಜಂ ಹಸ್ರೈಂ ಶಕ್ತಿಃ ಆತ್ಮನೋಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಷಡಂಗ ಮತ್ತು ವರ್ಣನ್ಯಾಸ : ಹನುಮತ್ಮಂತ್ರದ ಆರು ಬೀಜಾಕ್ಷರಗಳಿಂದ ಷಡಂಗನ್ಯಾಸ ಮಾಡಬೇಕು. ನಂತರ ಮಂತ್ರದ ಒಂದೊಂದು ವರ್ಣದ, ಕ್ರಮವಾಗಿ ಶಿರ, ಲಲಾಟ, ನೇತ್ರ, ಮುಖ, ಕಂಠ, ಎರಡೂ ಕರಗಳು, ಹೃದಯ, ಎರಡೂ ಕುಕ್ಷಿ, ನಾಭಿ, ಲಿಂಗ ಎರಡೂ ಜಾನು ಮತ್ತು ಪಾದಗಳಲ್ಲಿ, ಈ ಪ್ರಕಾರ 12 ಸ್ಥಾನಗಳಲ್ಲಿ 12 ವರ್ಣಗಳಿಂದ ನ್ಯಾಸ ಮಾಡಬೇಕು.





ಷಡಂಗನ್ಯಾಸ : ಹೌಂ ಹೃದಯಾಯ ನಮಃ, ಹಸ್ರೈಂ ಶಿರಸೆ ಸ್ವಾಹಾ, ಖ್ಫ್ರೇಂ ಶಿಖಾಯೈ ವಷಟ್, ಹಸ್ರೌಂ ಕವಚಾಯ ಹುಮ್, ಹಸಖ್ಫ್ರೇಂ ನೇತ್ರತ್ರಯಾಯ ವೌಷಟ್

ವರ್ಣನ್ಯಾಸ : ಹೌಂ ನಮಃ ಮೂರ್ಧ್ನಿ, ಹಖ್ಫ್ರೆ ನಮಃ ಲಲಾಟೆ, ಖ್ಫ್ರೇಂ ನಮಃ ನೇತ್ರಯೊ, ಹಸ್ರೌಂ ನಮಃ ಮುಖೆ, ಹಸಖ್ಫ್ರೇಂ ನಮಃ ಕಂಠೆ, ಹಸೌಂ ನಮಃ ಬಾಹೋ, ಹಂ ನಮಃ ಹೃದಿ,

ನುಂ ನಮಃ ಕುಕ್ಷೌ ಮಂ ನಮಃ ನಾಭೌ ತೆ ನಮಃಲಿಂಗೆ, ನಂ ನಮಃ ಜಾನ್ವೋ ಮಂ ನಮಃ ಪಾದಯೋ

ಪದನ್ಯಾಸ : ಆರು ಬೀಜಗಳಿಂದ ಮತ್ತು ಎರಡೂ ಪದಗಳಿಂದ ಕ್ರಮವಾಗಿ ಲಲಾಟ, ಮುಖ, ಹೃದಯ, ನಾಭಿ, ಉರು, ತೊಡೆ ಮತ್ತು ಪಾದಗಳಲ್ಲಿ ನ್ಯಾಸ ಮಾಡಬೇಕು.

ಹೌಂ ನಮಃ ಮೂರ್ಧ್ನಿ, ಹಸ್ರೈಂ ನಮಃ ಲಲಾಟೆ, ಖ್ಫ್ರೇಂ ನಮಃ ಮುಖೆ, ಹಸ್ರೌಂ ನಮಃ ಹೃದಿ, ಹಸ್ಖಂಫ್ರೆಂ ನಮಃ ನಾಭೌ ಹಸೌಂ ನಮಃ ಊರ್ವೋಃಹನುಮತೆ ನಮಃ ಜಂಘಯೋ, ನಮಃ ನಮಃ ಪಾದಯೋ

ಹನುಮತ್ ಧ್ಯಾನಮ್

ಬಲಾರ್ಕಾಯುತತೇಜಸಂ ತ್ರಿಭುವನ ಪ್ರಕ್ಷೋಭಕಂ ಸುಂದರಂ ।
ಸುಗ್ರೀವಾದಿ ಸಮಸ್ತವಾನರಗಣೈಃ ಸಂಸೇವ್ಯ ಪಾದಾಂಬುಜಮ್ ॥
ನಾದೇನೈವ ಸಮಸ್ತರಾಕ್ಷಸಗಣಾನ್ ಸಂತ್ರಾಸಯಂತಂ ಪ್ರಭುಂ ।
ಶ್ರೀಮದ್ರಾಮ ಪದಾಂಬುಜಸ್ಮೃತಿರತಂ ಧ್ಯಾಯಾಮಿ ವಾತಾತ್ಮಜಂ ॥ 8 ॥

ಉದಯಿಸುತ್ತಿರುವ ಬಾಲರವಿಯ ಸಮಾನ ಕಾಂತಿಯುಳ್ಳ ಮೂರೂ ಲೋಕಗಳನ್ನು ಪ್ರಕ್ಷುಬ್ಧಗೊಳಿಸುವ, ಸುಂದರ, ಸುಗ್ರೀವಾದಿಸಮಸ್ತ ವಾನರ ಸಮುದಾಯದಿಂದ ಸೇವ್ಯಮಾನ ಚರಣವುಳ್ಳ, ತನ್ನ ಭಯಂಕರ ಸಿಂಹನಾದದಿಂದ ರಾಕ್ಷಸ ಸಮುದಾಯವನ್ನು ಭಯಭೀತಗೊಳಿಸುವ, ಶ್ರೀ ರಾಮನ ಚರಣಾರವಿಂದಗಳನ್ನು ಸ್ಮರಣೆ ಮಾಡುವ ಹನುಮಂತನನ್ನು ನಾನು ಧ್ಯಾನಿಸುತ್ತೇನೆ.

ಏವಂ ಧ್ಯಾತ್ವಾ ಜಪೇದರ್ಕಸಹಸ್ರಂ ಜಿತಮಾನಸಃ ।
ದಶಾಂಶಂ ಜುಹುಯಾದ್ ವ್ರೀಹೀನ ಪಯೋದಧ್ಯಾಜ್ಯಸಂಯುತಾನ್ ॥9॥
ವಿಮಲಾದಿಯುತೆ ಪೀಠೆ ಪೂಜಾ ಕಾರ್ಯಾ ಹನೂಮತಃ ।

ಆದರ ಹೊರಗೆ, ಪೂರ್ವಾದಿ ದಿಕ್ಕುಗಳಲ್ಲಿ ಮತ್ತು ಮಧ್ಯದಲ್ಲಿ ನವನಿಧಿಯರನ್ನು ಪೂಜಿಸಬೇಕು.

ಮಹಾಪದ್ಮಾಯ ನಮಃ ಪೂರ್ವೆ ।
ಪದ್ಮಾಯ ನಮಃ ಆಗ್ನೆಯೆ ।
ಶಂಖಾಯ ನಮಃ ದಕ್ಷಿಣೆ ।
ಮಕರಾಯ ನಮಃ ನೈಋತ್ಯೆ ।
ಕಚ್ಛಪಾಯ ನಮಹ ಪಶ್ಚಿಮೆ ।
ಮುಕುಂದಾಯ ನಮಃ ವಾಯುವ್ಯೆ ।
ಕುಂದಾಯ ನಮಃ ಉತ್ತರೆ ।
ನೀಲಾಯ ನಮಃ ಈಶಾನ್ಯೆ ।
ಖರ್ವಾಯ ನಮಃ ಮಧ್ಯೆ

ಇದರ ನಂತರ ತ್ರಿಪುರ ಸುಂದರಿ ಸಾಧನಾದಲ್ಲಿ ವಿವರಿಸಿದಂತೆ ನವ ಆವರಣಗಳನ್ನು ಪೂಜಿಸಬೇಕು. ಆವರಣ ಪೂಜೆಯ ನಂತರ ಧೂಪ-ದೀಪಾದಿಗಳಿಂದ ಗೋಪಾಲ ಸುಂದರಿಯನ್ನು ಪೂಜೆ ಮಾಡಬೇಕು.

ಈ ಪ್ರಕಾರ ಪ್ರತಿನಿತ್ಯ ಗೋಪಾಲಸುಂದರಿ ಮಂತ್ರ ಸಾಧನಾವನ್ನು ಮಾಡುವ ಸಾಧಕರ ಸಮಸ್ತ ಕಾಮನೆಗಳು ಪೂರ್ಣವಾಗುತ್ತವೆ. ಮತ್ತು ಅಂತ್ಯದಲ್ಲಿ ಅವನು ಬ್ರಹ್ಮಸ್ವರೂಪವನ್ನು ಪಡೆದುಕೊಳ್ಳುತ್ತಾನೆ.

[ಈ ಪ್ರಕಾರ ಶ್ರೀಮನ್ಮಹೀಧರ ವಿರಿತ ಮಂತ್ರೋಮಹೋದಧಿಯ ದ್ವಾದಶ ತರಂಗವು ಸಂಪೂರ್ಣವು]





# ॥ ತ್ರಯೋದಶ ತರಂಗ ॥



ಅಥೋಚ್ಯಂತೆ ಹುನುಮತೊ ಮಂತ್ರಾಃ ಸರ್ವೇಷ್ಟಸಿದ್ಧಯೆ ।
ಹನುಮತ್ ಮಂತ್ರಸಾಧನಾ

ಇಂದ್ರಸ್ವರೇಂದುಸಂಯುಕ್ತೋ ವರಾಹೊ ಹಸಫಾಗ್ನಯಃ ॥ 1 ॥
ಝಿಂಟೀಶಬಿಂದುಸಂಯುಕ್ತಾ ದ್ವಿತಿಯಂ ಬೀಜಮೀರಿತಮ್ ।
ಗದೀಪಾಂತಾಗ್ನಿರುದ್ರೇಂದುಸಂಯುತಃ ಸ್ಯಾತ್ತೃತೀಯಕಮ್ ॥ 2 ॥

ಹಸರಾಮನುಂ ಚಂದ್ರಾಢ್ಯಾಶ್ಚತುರ್ಥ ಹಸಖಾಃ ಫರಾಃ ।
ಶಿವೇಂದ್ವಾಢ್ಯಾಃ ಪಂಚಮಃ ಸ್ಯಾದ್ಧಸೌ ಮಬಿಂದುಗೌ ಪರಮ್ ॥ 3 ॥

ಈಗ ಸರ್ವ ಇಷ್ಟಾರ್ಥ ಸಿದ್ಧಿಗಾಗಿ ಶ್ರೀ ಹನುಮತಾ ಮಂತ್ರಗಳನ್ನು ಹೇಳಲಾಗುತ್ತದೆ.

ಇಂದ್ರ ಸ್ವರ (ಔ) ಮತ್ತು ಇಂದು (ಅನುಸ್ವಾರ) ಈ ಎರಡರ ಜೊತೆಗೆ ವರಾಹ (ಹ್) ಅರ್ಥಾತ್ (ಹೌಂ) ಇದು ಪ್ರಥಮ ಬೀಜವಾಗಿದೆ. ನಂತರ ಝಿಂಟೀಶ (ಏ) ಬಿಂದು (ಅನುಸ್ವಾರ) ಸಹಿತ ಹ್,ಸ್,ಫ್ ಮತ್ತು ಅಗ್ನಿ (ರ್)

ಈ ಪ್ರಕಾರ ಗೋಪಾಲನನ್ನು ಧ್ಯಾನ ಮಾಡಿ ಗೋಪಾಲಸುಂದರಿ ಮಂತ್ರ ಒಂದು ಲಕ್ಷ ಜಪ ಮಾಡಬೇಕು. ನಂತರ ಪಾಯಸದಿಂದ ಅದರ ದಶಾಂಶ ಹೋಮ ಮಾಡಬೇಕು. ನಂತರ ವೈಷ್ಣವ ಪೀಠದ ಮೇಲೆ ಗೋಪಾಲ ಸುಂದರಿಯನ್ನು ಪೂಜಿಸಬೇಕು.

ಪ್ರಪ್ರಥಮವಾಗಿ ಅಂಗಪೂಜೆ ಮಾಡಿ ಪೂರ್ವಾದಿ ದಿಕ್ಕುಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರನ್ನು ಪೂಜಿಸಬೇಕು. ನಂತರ ಆಗ್ನೇಯಾದಿಕೋನಗಳಲ್ಲಿ ಶಾಂತಿ, ಶ್ರೀ ಸರಸ್ವತಿ ಮತ್ತು ರತಿಯರನ್ನು ಪೂಜೆ ಮಾಡಬೇಕು. ಪುನಃ ಪೂರ್ವಾದಿ ದಿಕ್ಕುಗಳಲ್ಲಿ ರುಕ್ಮಿಣಿ, ಸತ್ಯಭಾಮಾ, ಕಾಲಿಂದಿ, ಜಾಂಬವತಿ, ಮಿತ್ರವಿಂದಾ, ಸುನಂದಾ, ಸುಲಕ್ಷಣಾ ಮತ್ತು ನಾಗ್ನಜಿತಿ ಈ ಎಂಟು ಪಟ್ಟದ ರಾಣಿಯರ ಪೂಜೆ ಮಾಡಬೇಕು. ನಂತರ ನವ ನಿಧಿಯರನ್ನು ಪೂಜಿಸಬೇಕು. ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ ಮತ್ತು ಖರ್ವ ಇವು ನವನಿಧಿಗಳಾಗಿರುತ್ತವೆ.

**ಮಹಾಪದ್ಮಶ್ಚ ಪದ್ಮಶ್ಚ ಶಂಖೊ ಮಕರಕಚ್ಛಪೊ ।**
**ಮುಕುಂದಕುಮದನೀಲಾಶ್ಚ ಖರ್ವಶ್ಚ ನಿಧಯೋ ನವಃ ॥ 171**

**ತತಶ್ಚ ಸುಂದರಿ ಪ್ರೋಕ್ತಾವೃತಿ ಪೂಜಾಂ ಸಮಾಚರೇತ್ ।**
**ಪ್ರಯೋಗಾನಪಿ ತತ್ರೋಕ್ತಾನ್ ಕುರ್ಯಾದಿಷ್ಟಪ್ರಸಿದ್ಧಯೆ ॥ 172 ॥**

**ಏವಂ ಯೋ ಭಜತೆ ನಿತ್ಯಂ ಶ್ರೀಮದ್ ಗೋಪಾಲಸುಂದರೀಮ್ ।**
**ಸರ್ವಾನ್ ಕಾಮಾನವಾಪ್ಯಾಂತೆ ಸಾಯುಜ್ಯಂ ಬ್ರಹ್ಮಣೋ ವ್ರಜೇತ್ ॥173॥**

ಇದರ ನಂತರ ಶ್ರೀಮತ್ರಿಪುರಸುಂದರಿಯ ಪ್ರಯೋಗದಲ್ಲಿ ವಿವರಿಸಿದಂತೆ ನವಾವರಣಗಳನ್ನು ಪೂಜಿಸಬೇಕು. ಮತ್ತು ತನ್ನ ಅಭೀಷ್ಟ ಸಿದ್ಧಿಗಾಗಿ ಅಲ್ಲಿ ಹೇಳಿದ ಪ್ರಯೋಗಗಳಿಗನುಗುಣವಾಗಿ ಅನುಷ್ಠಾನ ಮಾಡಬೇಕು.

**ವಿಧಾನ :** ಗೋಪಾಲಸುಂದರಿಯ ಆವರಣ ಪೂಜೆಗಾಗಿ ವೃತ್ತಾಕಾರದ ಕರ್ಣಿಕಾ, ಅಷ್ಟದಳ ಮತ್ತು ಭೂಪುರ ಸಹಿತವಾದ ಯಂತ್ರವನ್ನು ನಿರ್ಮಾಣ ಮಾಡಬೇಕು. ಆ ಯಂತ್ರದ ಮೇಲೆ ಸಾಮಾನ್ಯ ಪೂಜಾ ಪದ್ಧತಿಗೆ ಅನುಸಾರ ಪೀಠ ದೇವತೆಗಳನ್ನು ಮತ್ತು ವಿಮಲಾ ಆದಿ ವೈಷ್ಣವೀ ಪೀಠಶಕ್ತಿಗಳನ್ನು ಪೂಜಿಸಿ 12.166 ಶ್ಲೋಕದ ಅನುಸಾರ ಧ್ಯಾನ ಮಾಡಿ ಆವಾಹನಾದಿ ಉಪಚಾರಗಳಿಂದ ಪುಷ್ಪಾಂಜಲಿ ಪರ್ಯಂತ ಪೂಜೆ ಮಾಡಿ ಆವರಣ ಪೂಜೆ ಮಾಡಬೇಕು. ಪ್ರಾರಂಭದಲ್ಲಿ ಆಗ್ನೇಯಾದಿ ಕೋನಗಳಲ್ಲಿ ಷಡಂಗನ್ಯಾಸ ಮಾಡಬೇಕು.





ಕ್ಲೀಂ ಶ್ರೀಂ ಕ್ಲೀಂ ಹೃದಯಾಯ ನಮಃ ಆಗ್ನಯೆ,
ಕೃಷ್ಣಾಯ ಶಿರಸೆ ಸ್ವಾಹಾ ನೈಋತ್ಯೆ, ಗೋವಿಂದಾಯ ಶಿಖಾಯೈ ವೌಷಟ್ ವಾಯುವ್ಯೆ. ಗೋಪಿಜನ ಕವಚಾಯ ಹುಮ್, ವಲ್ಲಭಾಯ ನೇತ್ರತ್ರಯಾಯ ವೌಷಟ್ ಅಗ್ರೆ ಸ್ವಾಹಾ ಅಸ್ತ್ರಾಯ ಫಟ್ ಚತುರ್ದಿಕ್ಷುಃ

ನಂತರ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ–

ಓಂ ವಾಸುದೇವಾಯ ನಮಃ ಪೂರ್ವೆ,
ಓಂ ಸಂಕರ್ಷಣಾಯ ನಮಃ ದಕ್ಷಿಣೆ,
ಓಂ ಪ್ರದ್ಯುಮ್ನಾಯ ನಮಃ ಪಶ್ಚಿಮೆ,
ಓಂ ಅನಿರುದ್ಧಾಯ ನಮಃ ಉತ್ತರೆ,

ಆಮೇಲೆ ಆಗ್ನೇಯಾದಿ ನಾಲ್ಕು ಕೋನಗಳಲ್ಲಿ,

ಶಾಂತ್ಯೈ ನಮಃ ಆಗ್ನಯೆ ।
ಶ್ರೀಯ್ಯೈ ನಮಃ ನೈಋತ್ಯೆ ।
ಸರಸ್ವತ್ಯೈ ನಮಃ ವಾಯುವ್ಯೆ ।
ರತ್ಯೈ ನಮಃ ಈಶಾನ್ಯೆ

ಅಷ್ಟದಳದಲ್ಲಿ ಪೂರ್ವಾದಿ ದಿಕ್ಕುಗಳ ಕ್ರಮದಲ್ಲಿ ಪಟ್ಟದ ರಾಣಿಯರು–

ಓಂ ರುಕ್ಮಿಣ್ಯೈ ನಮಃ ಪೂರ್ವೆ ।
ಓಂ ಸತ್ಯಭಾಮಾಯ್ಯೈ ನಮಃ ಆಗ್ನೆಯೆ ।
ಓಂ ಕಾಲಿಂದ್ಯೈ ನಮಃ ದಕ್ಷಿಣೆ ।
ಓಂ ಜಾಂಬವತ್ಯೈ ನಮಃ ನೈಋತ್ಯೆ ।
ಓಂ ಮಿತ್ರಾವಿಂದಾಯ್ಯೈ ನಮಃ ಪಶ್ಚಿಮೆ ।
ಓಂ ಸುನಂದಾಯ್ಯೈ ನಮಃ ವಾಯುವ್ಯೆ ।
ಓಂ ಸುಲಕ್ಷಣಾಯ್ಯೈ ನಮಃ ಉತ್ತರೆ ।
ಓಂ ನಾಗ್ನಿಜಿತ್ಯೈ ನಮಃ ಈಶಾನ್ಯೆ

ಸಂಹಾರನ್ಯಾಸ :

| | |
|---|---|
| ಕ್ಷ್ರೀಂ ನಮಃ ಪದಯೋ । | ಶ್ರೀ ನಮಃ ಗುಲ್ಫಯೋಃ । |
| ಕ್ಲೀಂ ನಮಃ ಜಂಘಯೋ । | ಕೃಂ ನಮಃಜಾನ್ವೋಃ । |
| ಷ್ಣಾಂ ನಮಃ ಕಟ್ಯಾಂ । | ಯಂ ನಮಃ ಗುದೆ । |
| ಗೋಂ ನಮಃ ಲಿಂಗೆ । | ವಿಂ ನಮಃ ನಾಭೌ । |
| ದ್ಲಾಂ ನಮಃ ಉದರೆ । | ಯಂ ನಮಃ ಹೃದಿ । |
| ಗೋಂ ನಮಃ ಬಾಹುಮೂಲೆ । | ಪಿ ನಮಃ ಕಂಠೆ । |
| ಜಂ ನಮಃ ಚಿಬುಕೆ । | ನಂ ನಮಃ ಮುಖೆ । |
| ವಂ ನಮಃ ನಸೋಃ । | ಲ್ಲಂ ನಮಃ ಕರ್ಣಯೋ । |
| ಭಾಂ ನಮಃ ನೇತ್ರಯೋ । | ಯಂ ನಮಃ ಭ್ರುವೋಃ । |
| ಸ್ವಾಂ ನಮಃ ಲಲಾಟೆ । | ಹ್ರಾಂ ನಮಃ ಮೂರ್ಧ್ನಿ |

ಗೋಪಾಲಸುಂದರಿ ಮಂತ್ರದಿಂದ ಈ ರೀತಿಯಲ್ಲಿ ಸೃಷ್ಟಿ, ಸ್ಥಿತಿ ಮತ್ತು ಸಂಹಾರನ್ಯಾಸ ಮಾಡಿಪುನಃ ಸೃಷ್ಟಿನ್ಯಾಸ ಮತ್ತು ಸ್ಥಿತಿನ್ಯಾಸ ಮಾಡಬೇಕು.

ನಂತರ ಪೂರ್ವೋಕ್ತ ವಿಧಾನದಿಂದ ಕರಶುದ್ಧಿನ್ಯಾಸ ಮತ್ತು ವಾಗ್ದೇವತಾನ್ಯಾಸ, ಆಸನನ್ಯಾಸ ಮಾಡಿ ಮೂರು ಕೂಟಗಳಿಂದ ಶಿರ, ಮುಖ ಮತ್ತು ಹೃದಯದಲ್ಲಿ ನ್ಯಾಸ ಮಾಡಬೇಕು. ಪುನಃ ಮೂರು ಕೂಟಗಳ ಎರಡು ಆವೃತ್ತಿಗಳಿಂದ ಷಡಂಗನ್ಯಾಸ ಮಾಡಬೇಕು. ಇದರ ನಂತರ ಶ್ರೀಚಕ್ರಸ್ಥಿತ ಕಮಲಾ ಮತ್ತು ಮಾಧವ ಜೊತೆಗೆ ಶ್ರೀಹರಿಯ ಧ್ಯಾನ ಮಾಡಬೇಕು.

ಏಕಾದಶ ತರಂಗದಲ್ಲಿ ವಿವರಿಸಿದಂತೆ ಕರಶುದ್ಧಿನ್ಯಾಸ, ಆಸನನ್ಯಾಸ, ವಾಗ್ದೇವತಾನ್ಯಾಸ ಮಾಡಿ ತ್ರಿಕೂಟ ದ್ವಾರಾ ಈ ಪ್ರಕಾರ ನ್ಯಾಸಮಾಡಬೇಕು.

ಕೃಷ್ಣಾಯ ನಮಃ ಮೂರ್ಧ್ನಿ, ಗೋವಿಂದಾಯ ನಮಃ ಮುಖೆ, ಗೋಪಿಜನ ವಲ್ಲಭಾಯ ನಮಃ ಹೃದಿ

ಷಡಂಗನ್ಯಾಸ :

| | |
|---|---|
| ಕೃಷ್ಣಾಯ | ಹೃದಯಾಯ ನಮಃ । |
| ಗೋವಿಂದಾಯ | ಶಿರಸೆ ಸ್ವಾಹಾ । |
| ಗೋಪಿಜನವಲ್ಲಭಾಯ | ಶಿಖಾಯೈ ವಷಟ್ । |
| ಕೃಷ್ಣಾಯ | ಕವಚಾಯ ಹುಮ್ । |
| ಗೋವಿಂದಾಯ | ನೇತ್ರತ್ರಯಾಯ ವೌಷಟ್ । |
| ಗೋಪಿಜನವಲ್ಲಭಾಯ | ಅಸ್ತ್ರಾಯ ಫಟ್ |





ಧ್ಯಾನ-ಜಪ-ಪೀಠಪೂಜಾ ವಿಧಾನ

ಕ್ಷೀರಾಂಭೋದಿಸ್ಥ ಕಲ್ಪದ್ರುಮವನವಿಲಸದ್ರತ್ನಯುಗ್ಮಂಡಪಾಂತಃ ।
ಶ್ರೀಮದ್ಯಚ್ಛಪೀಠಸ್ಥಂ ಕರಧೃತಜಲಜಾರೀಷುಚಾಪಾಂಕುಶೇಷಮ್ ॥ 166 ॥
ಪಾಶಂ ವೀಣಾಂ ಸುವೇಣುಂ ದಧತಮವನಿಮಾಶೋಭಿತಂ ರಕ್ತಕಾಂತಿಂ।
ಧ್ಯಾಯೇದ್ ಗೋಪಾಲಮೀಶಂವಿಧಿಮುಖವಿಬುಧೈರೀಡ್ಯಮಾನಂ ಸಮಂತಾತ್।

ಏವಂ ಧ್ಯಾತ್ವಾ ಜಪೇಲ್ಲಕ್ಷಂ ದಶಾಂಶಂ ಪಾಯಸಾಂಧಸಾ ।
ಜುಹುಯಾದ್ವೈಷ್ಣವೆ ಪೀಠೆ ಪೂಜಯೇತ್ ಸುಂದರಿಹರಿಮ್ ॥ 167 ॥

ಆದಾವಂಗಾನಿ ಸಂಪೂಜ್ಯ ಪ್ರಾಗಾದ್ಯಶಾಸು ಪೂಜಯೇತ್ ।
ವಾಸುದೇವಂ ಸಂಕರ್ಷಣಂ ಪ್ರದ್ಯುಮ್ನಮನಿರುದ್ಧಕಮ್ ॥ 168 ॥

ಪೂಜ್ಯಾವಹ್ನಾದಿಕೋಣೇಷು ಶಾಂತಿಃ ಶ್ರೀಶ್ಚ ಸರಸ್ವತಿ ।
ರತಿಃ ಪುನರ್ದಿಕ್ಷು ಪೂಜ್ಯಾ ರುಕ್ಮಿಣಿ ಸತ್ಯಭಾಮಿಕಾ ॥ 169 ॥

ಕಾಲಿಂದಿ ಜಾಂಬವತ್ಯಾಖ್ಯಾ ಮಿತ್ರಾವಿಂದಾಸುನಂದಯಾ ।
ಸುಲಕ್ಷಣಾನಾಗ್ನಿಜಿತಿ ತತೋರ್ಚ್ಯಾ ನಿಧಯೋಪಿ ಚ॥ 170 ॥

ಕ್ಷೀರಸಾಗರದ ಮಧ್ಯದಲ್ಲಿ ಸ್ಥಿತ ಕಲ್ಪವೃಕ್ಷದ ವನದಲ್ಲಿ ಶೋಭಾಯಮಾನ ರತ್ನಮಂಟಪದ ಒಳಗೆ, ಶ್ರೀಪೀಠದ ಮೇಲೆ ವಿರಾಜಮಾನಳಾದ, ತನ್ನ ಎಂಟು ಕೈಗಳಲ್ಲಿ ಕ್ರಮವಾಗಿ ಪದ್ಮ, ಚಕ್ರ, ಇಕ್ಷುಚಾಪ, ಬಾಣ, ಅಂಕುಶ, ಪಾಶ, ವೀಣಾ ಮತ್ತು ಕೊಳಲುಗಳನ್ನು ಹಿಡಿದು ರಕ್ತವರ್ಣದ ಪ್ರಭೆಯುಕ್ತ ಭೂದೇವಿ ಮತ್ತು ಲಕ್ಷ್ಮಿಯಿಂದ ಶೋಭಿತ ಮತ್ತು ಬ್ರಹ್ಮಾದಿ ದೇವತೆ ಗಳಿಂದ ಸ್ತುತಿಸಲ್ಪಡುವ ಗೋಪಾಲ ನಂದನನನ್ನು ಧ್ಯಾನಿಸುತ್ತೇನೆ.



ಇದರ ಅಂತ್ಯದಲ್ಲಿ 'ಸ್ವಾಹಾ' ಸೇರಿಸುವುದರಿಂದ 20 ಅಕ್ಷರಗಳ ಗೋಪಾಲಸುಂದರಿ ಮಂತ್ರವು ರಚನೆಯಾಗುತ್ತದೆ.

**"ಹ್ರೀಂ ಶ್ರೀಂ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪಿಜನವಲ್ಲಭಾಯ ಸ್ವಾಹಾ"**

**ವಿನಿಯೋಗ :** ಈ ಗೋಪಾಲಸುಂದರಿ ವಿದ್ಯೆಗೆ ವಿಧಾತ್ರಾ ಮತ್ತು ಆನಂದಭೈರವ ಈರ್ವರು ಋಷಿಗಳಿರುತ್ತಾರೆ. ದೇವಿ ಗಾಯತ್ರಿ ಛಂದ, ಗೋಪಾಲ ಸುಂದರಿ ದೇವತಾ, ಕಾಮಬೀಜ ಕ್ಲೀಂ ಮತ್ತು ಸ್ವಾಹಾ ಇದರ ಶಕ್ತಿಯಾಗಿರುತ್ತದೆ. ಮಾಯಾ (ಹ್ರೀಂ) ಶ್ರೀ (ಶ್ರೀಂ) ಕಾಮಬೀಜ (ಕ್ಲೀಂ) ದಿಂದ ಹೃದಯದಲ್ಲಿ, ಕೃಷ್ಣಾಯದಿಂದ ಶಿರದಲ್ಲಿ, ಗೋವಿಂದಾಯದಿಂದಶಿಖಾ, ಗೋಪಿಜನದಿಂದ ಕವಚ 'ವಲ್ಲಭಾಯ'ದಿಂದ ನೇತ್ರ ಮತ್ತು ಸ್ವಾಹಾದಿಂದ ಅಸ್ತ್ರನ್ಯಾಸ ಮಾಡಬೇಕು.

**ಅಸ್ಯ ಶ್ರೀ ಗೋಪಾಲಸುಂದರಿ ಮಂತ್ರಸ್ಯ ವಿಧಾತ್ರಾನಂದ ಭೈರವ ಋಷಿ ದೇವಿ ಗಾಯತ್ರಿ ಛಂದಃ ಗೋಪಾಲಸುಂದರಿ ದೇವತಾ ಕ್ಲೀಂಬೀಜಂ ಸ್ವಾಹಾಶಕ್ತಿ ಮಮಾಭಿಷ್ಟಸಿದ್ಧಯೆ ಜಪೆ ವಿನಿಯೋಗಃ**

**ಮೂರ್ಧ್ನಿ ಭಾಲೆ ಭ್ರುವೋರಕ್ಷ್ಣೋಃ ಕರ್ಣಯೋರ್ನಾಸಯೋರ್ಮುಖೆ ।**
**ಚಿಬುಕೆ ಚ ಗಲೆ ಬಾಹ್ವೋರ್ಹೃದಯೆ ಜಠರೇ ನ್ಯಸೇತ್ ॥ 161 ॥**

**ನಾಭೌ ಲಿಂಗೆ ಗುದೆ ಸಕ್ಥೋರ್ಜಾನುನೋರ್ಜಂಘಯೋರಪಿ ।**
**ಗುಲ್ಫಯೊಃ ಪಾದಯೋರ್ವರ್ಣಾನ್ ಕೂಟತ್ರಯವಿವರ್ಜಿತಾನ್ ॥ 162 ॥**

**ಸೃಷ್ಟಿ ನ್ಯಾಸೋಯಮುದಿತಾ ಹೃದಾದ್ಯಂ ಸಾಂತಿಕಾಸ್ಥಿತಿಃ।**
**ಸಂಹಾರೋಂಧ್ಯಾದಿಮೂರ್ಧಾಂತಃ ಪುನಃ ಸೃಷ್ಟಿಂ ಸ್ಥಿತಿಂ ಚರೇತ್ ॥ 163॥**

**ಕರಶುದ್ಧ್ಯಾ ಸನನ್ಯಾಸೌ ನ್ಯಾಸಂ ವಾಗ್ದೇವತಾಭಿವಮ್ ।**
**ಕೃತ್ವಾ ಪೂರ್ವೋದಿತಾನ ಕೂಟತ್ರಯಂ ಕಾಸ್ಯಹೃದಿ ನ್ಯಸೇತ್ ॥ 164 ॥**

**ಕೂಟತ್ರಯದ್ವಿರಾವೃತ್ಯಾ ಷಡಗಂ ಪುನರಾಚರೇತ್ ।**
**ಕಮಲಾವಸುಧಾಯುಕ್ತಂ ಧ್ಯಾಯೇಚ್ಛಿಚಕ್ರಗಂ ಹರಿಮ್ ॥ 165 ॥**

**ಷಡಂಗನ್ಯಾಸ :** ಹ್ರೀಂ ಶ್ರೀಂ ಕ್ಲೀಂ ಹೃದಯಾಯ ನಮಃ ಕೃಷ್ಣಾಯ ಶಿರಸೆ ಸ್ವಾಹಾ, ಗೋವಿಂದಾಯ ಶಿಖಾಯೈ ವಷಟ್, ಗೋಪಿಜನವಲ್ಲಭಾಯ ಹುಮ್, ವಲ್ಲಭಾಯ ನೇತ್ರತ್ರಯಾಯ ವೌಷಟ್, ಸ್ವಾಹಾ ಅಸ್ತ್ರಾಯ ಫಟ್





ಸೃಷ್ಟಿ–ಸ್ಥಿತಿ–ಸಂಹಾರ ನ್ಯಾಸಗಳು – ಶಿರ, ಲಲಾಟ, ಹುಬ್ಬು, ನೇತ್ರ, ಕರ್ಣ, ನಾಸಿಕ, ಬಾಯಿ, ಗದ್ದ, ಕಂಠ, ಹೆಗಲು, ಹೃದಯ, ಉದರ, ನಾಭಿ, ಲಿಂಗ, ಗುದಾ, ಸೊಂಟ, ಜಾನು, ತೊಡೆ, ಗುಲ್ಫ ಮತ್ತು ಕಾಲುಗಳಲ್ಲಿ ಕೂಟತ್ರಯವನ್ನು ಬಿಟ್ಟು ವರ್ಣಗಳಿಂದ ನ್ಯಾಸ ಮಾಡಬೇಕು. ಇದು ಸೃಷ್ಟಿನ್ಯಾಸವಾಗಿದೆ. ಹೃದಯದಿಂದ ಹೆಗಲಿನವರೆಗೆ ಸ್ಥಿತಿನ್ಯಾಸ ಮತ್ತು ಪಾದಗಳಿಂದ ನೆತ್ತಿಯ ವರೆಗಿನ ನ್ಯಾಸವನ್ನು ಸಂಹಾರನ್ಯಾಸವೆಂದು ಕರೆಯಲಾಗುತ್ತದೆ. ಇದರ ನಂತರ ಪುನಃ ಸೃಷ್ಟಿನ್ಯಾಸ ಮಾಡಬೇಕು.

**ಸೃಷ್ಟಿನ್ಯಾಸ :**

| | |
|---|---|
| ಹ್ರೀಂ ನಮಃ ಮೂರ್ಧ್ನಿ । | ಶ್ರೀಂ ನಮಃ ಲಲಾಟೆ । |
| ಕ್ಲೀಂ ನಮಃ ಭ್ರುವೋ । | ಕೃಂ ನಮಃ ನೇತ್ರಯೊ । |
| ಷ್ಣಾಂ ನಮಃ ಕರ್ಣಯೋ । | ಯಂ ನಮಃ ನಾಸಿಕಯೊ । |
| ಗೋಂ ನಮಃ ಮುಖೆ । | ವಿಂ ನಮಃ ಚಿಬುಕೆ । |
| ದ್ಹಾಂ ನಮಃ ಕಂಠೆ । | ಯಂ ನಮಃ ಬಾಹುಮೂಲೆ । |
| ಗೋಂ ನಮಃ ಹೃದಿ । | ಪಿಂ ನಮಃ ಉದರೆ । |
| ಜಂ ನಮಃ ನಾಭೌ । | ನಂ ನಮಃ ಲಿಂಗೆ । |
| ವಂ ನಮಃ ಗುದೆ । | ಲ್ಲಂ ನಮಃ ಕಟ್ಯಾಂ । |
| ಭಾಂ ನಮಃ ಜಾನ್ವೋ । | ಯಂ ನಮಃ ಜಂಘಯೊ । |
| ಸ್ವಾಂ ನಮಃ ಗುಲ್ಫಯೊಃ । | ಹಾಂ ನಮಃ ಪಾದಯೊ । |

**ಸ್ಥಿತಿನ್ಯಾಸ :**

| | |
|---|---|
| ಹ್ರೀಂ ನಮಃ ಹೃದಿ । | ಶ್ರೀಂ ನಮಃ ಉದರೆ। |
| ಕ್ಲೀಂ ನಮಃ ನಾಭೌ । | ಕೃಂ ನಮಃ ಲಿಂಗೆ । |
| ಷ್ಣಾಂ ನಮಃ ಮೂಲಾಧಾರೆ । | ಯಂ ನಮಃ ಕಟ್ಯಾಂ । |
| ಗೋಂ ನಮಃ ಜಾನ್ವೋ । | ವಿಂ ನಮಃ ಜಂಘಯೋ । |
| ದ್ಹಾಂ ನಮಃ ಗುಲ್ಫಯೋ । | ಯಂ ನಮಃ ಪಾದಯೋಃ । |
| ಗೋಂ ನಮಃ ಮೂರ್ಧ್ನಿ । | ಪಿಂ ನಮಃ ಲಲಾಟೆ । |
| ಜಂ ನಮಃ ಭ್ರುವೊ । | ನಂ ನಮಃ ನೇತ್ರಯೋ । |
| ವಂ ನಮಃ ಕರ್ಣಯೊ । | ಲ್ಲಂ ನಮಃ ನಸೋಃ । |
| ಭಾಂ ನಮಃ ಮುಖೆ । | ಯಂ ನಮಃ ಚಿಬುಕೆ । |
| ಸ್ವಾಂ ನಮಃ ಕಂಠೆ । | ಹಾಂ ನಮಃ ಬಾಹುಮೂಲೆ । |

ಲಕ್ಷ ಆಹುತಿಗಳನ್ನು ಕೊಟ್ಟರೆ ಚಕ್ರವರ್ತಿಯು ವಶವಾಗುತ್ತಾನೆ. ದ್ರಾಕ್ಷಿಯ ಹೋಮದಿಂದ ಇಷ್ಟಾರ್ಥ ಸಿದ್ಧಿ, ಬಿಲ್ವದ ಹೋಮದಿಂದ ಮಂತ್ರಿಯು ವಶವಾಗುತ್ತಾನೆ. ತೆಂಗಿನಕಾಯಿ ಹೋಮದಿಂದ ಸಂಪತ್ತು, ತಿಲಹೋಮದಿಂದ ಎಲ್ಲ ಅಭೀಷ್ಟ ಪದಾರ್ಥಗಳು ಪ್ರಾಪ್ತವಾಗುತ್ತವೆ. ಗುಗ್ಗುಲದ ಹೋಮದಿಂದ ದುಃಖನಾಶ, ಸಕ್ಕರೆ ಮತ್ತು ಬೆಲ್ಲದ ಹೋಮದಿಂದ ಸಕಲ ಮನೋರಥಗಳು ಪೂರ್ಣವಾಗುತ್ತವೆ.

**ಪಾಯಸೈರ್ಧನಧಾನ್ಯಾಪ್ತಿರ್ಬಂಧೂಕೈಃ ಪ್ರಾಣಿನೊ ವಶಾಃ ।**
**ಪಕ್ವೈಶ್ಚೂತಫಲೈರ್ಹೋಮಾಲ್ಲಕ್ಷ ಮಾತ್ರಾದ್ ಧರಾವಶಾ ॥ 149 ॥**

**ಲವಣೈ ರಾಜಿಕಾಯುಕ್ತೈರ್ಹೋಮಾದ್ ದುಷ್ಟ ವಿನಾಶಮ್ ।**
**ಕರ್ಪೂರ ಹೋಮಾಲ್ಲಭತೆ ವಾಕ್ಪತಿತ್ವಂ ನರೋಚಿರಾತ್ ॥ 150 ॥**

**ಕರಂಜಫಲಹೋಮೇನ ಭೂತಪ್ರೇತಾದಯೊ ವಶಾಃ ।**
**ಬಿಲ್ವೈಃ ಸ್ಯಾದತುಲಾಲಕ್ಷ್ಮಿರಿಕ್ಷುದಂಡೈಃ ಸುಖಾಪ್ತಯಃ ॥ 151 ॥**

ಪಾಯಸದ ಹೋಮದಿಂದ ಧನ-ಧಾನ್ಯ ಪ್ರಾಪ್ತಿಯಾಗುತ್ತದೆ. ಬಂಧೂಕ ಪುಷ್ಪಗಳಿಂದ ಹೋಮ ಮಾಡಿದರೆ ಪ್ರಾಣಿ ಸಂಕುಲವು ವಶವಾಗುತ್ತವೆ. ಪಕ್ವವಾದ ಮಾವಿನ ಹಣ್ಣುಗಳ ಒಂದು ಲಕ್ಷ ಆಹುತಿಗಳನ್ನು ಕೊಡುವುದರಿಂದ ಭೂಮಂಡಲದಲ್ಲಿರುವ ಎಲ್ಲ ಪ್ರಾಣಿಗಳು ಸಾಧಕನ ವಶವರ್ತಿಯಾಗುತ್ತವೆ.

ಸಾಸಿವೆ ಮಿಶ್ರಿತ ಉಪ್ಪಿನಿಂದ ಹೋಮ ಮಾಡಿದರೆ ದುಷ್ಟರ ನಾಶವಾಗುತ್ತದೆ. ಕರ್ಪೂರದ ಹೋಮದಿಂದ ಶೀಘ್ರವಾಗಿ ಕವಿತ್ವವು ಪ್ರಾಪ್ತವಾಗುತ್ತದೆ. ಹೊಂಗೆ ಮರದ ಫಲಗಳಿಂದ ಹೋಮ ಮಾಡಿದರೆ ಭೂತ ಪ್ರೇತಾದಿಗಳು ವಶವಾಗುತ್ತವೆ. ಬಿಲ್ವಫಲದ ಹೋಮದಿಂದ ಅತುಲ ಐಶ್ವರ್ಯ ಮತ್ತು ಕಬ್ಬಿನ ಜಲ್ಲೆಗಳ ಹೋಮದಿಂದ ಸುಖ ಪ್ರಾಪ್ತವಾಗುತ್ತದೆ.

**ಘೃತಹೋಮಾದೀಪ್ಸಿತಾಪ್ತಿಃ ಶಾಂತಿಃ ಸ್ಯಾತ್ತಿಲತಂಡುಲೈಃ ।**
**ಕಿಂಬಹುಕ್ತೇನ ದೇವೇಶಿ ಸರ್ವೇಷ್ಟಂ ಸಾಧಿತಂ ನೃಣಾಮ್ ॥ 152 ॥**

**ಮಧ್ಯೆ ಕೂಟತ್ರಿಕೆ ಭೇದಾ ವರ್ಣಾಂತರನಿಯೋಜನಾತ್ ।**
**ಬಹವೋಸ್ಯೇನ ಗದಿತಾ ಗ್ರಂಥಗೌರವಭೀತಿತಃ ॥ 153 ॥**

ತುಪ್ಪದ ಹೋಮದಿಂದ ಅಭೀಷ್ಟ ವಸ್ತುಗಳ ಪ್ರಾಪ್ತಿಯಾಗುತ್ತದೆ. ಮತ್ತು ಎಳ್ಳು





ಮಿಶ್ರಿತ ಅಕ್ಕಿಯ ಹೋಮದಿಂದ ಶಾಂತಿ ಪ್ರಾಪ್ತವಾಗುತ್ತವದೆ. ಹೇ ದೇವೇಶಿ! ಈ ಮಂತ್ರದ ಮೂಲಕ ಮಾನವರು ತಮ್ಮ ಸಮಸ್ತ ಅಭೀಷ್ಟಗಳನ್ನು ಸಿದ್ಧಿಸಿಕೊಳ್ಳುತ್ತಾರೆ ಎನ್ನುವುದರಲ್ಲಿ ಸಂದೇಹವಿಲ್ಲ.

ಕೂಟತ್ರಿತಯದ ಮಧ್ಯದಲ್ಲಿ ಅನ್ಯ ವರ್ಣಗಳನ್ನು ಸೇರಿಸುವುದರಿಂದ ಶ್ರೀ ವಿದ್ಯೆಯ ಅನೇಕ ಪ್ರಕಾರಗಳು ರಚನೆಯಾಗುತ್ತವೆ. ಆದರೆ ಗ್ರಂಥ ವಿಸ್ತಾರದ ಭಯದಿಂದ ಅವುಗಳನ್ನು ಇಲ್ಲಿ ವಿವರಿಸಲಾಗುತ್ತಿಲ್ಲ.

**ಅಪರೀಕ್ಷಿತಶಿಷ್ಯಾಯ ನ ದೇಯೇಯಂ ಕದಾಚನ ।**
**ಪುತ್ರಾಯವಾ ಸುಶೀಷ್ಯಾಯ ದತ್ತಾಭಿಷ್ಟ ಪ್ರದಾಯಿನಿ ॥ 154 ॥**

ಅಪರೀಕ್ಷಿತ ಶಿಷ್ಯರಿಗೆ ಶ್ರೀ ವಿದ್ಯೆಯನ್ನು ಉಪದೇಶಿಸಬಾರದು. ಅಭೀಷ್ಟ ಫಲದಾಯಕವಾದ ಈ ವಿದ್ಯೆಯನ್ನು ಸುಪರೀಕ್ಷಿತರಾದ ಶಿಷ್ಯರಿಗೆ ಮತ್ತು ಪುತ್ರನಿಗೆ ಕೊಡಬೇಕು.

## ಗೋಪಾಲ ಸುಂದರಿ ಮಂತ್ರ

**ಗೋಪಾಲಸುಂದರಿ ವಕ್ಷೆ ಭೋಗಮೋಕ್ಷ ಪ್ರದಾಯಿಕಾಮ್ ।**
**ಮಾಯಾರಮಾಚಿತ್ತಜನ್ಮಾ ಕೃಷ್ಣಾಯೇತಿ ಪದಂ ತತಃ ॥ 155 ॥**

**ಆದ್ಯಂ ವಾಕ್ಕೂಟಮುಚ್ಚಾರ್ಯ ಗೋವಿಂದಾಯ ಪದಂ ವದೇತ್ ।**
**ದ್ವಿತಿಯಂ ತು ತತಃ ಕೂಟಂ ಗೋಪಿಜನ ಪದಂ ತತಃ ॥ 156 ॥**

**ವಲ್ಲಭಾಯಪದಾಂತಂ ತು ತೃತಿಯಂ ಕೂಟಮುಚ್ಚರೇತ್ ।**
**ಸ್ವಾಹಾಂತಾ ವಹ್ನಿಯುಗ್ಮಾರ್ಣಾ ಸ್ಮೃತಾಂ ಗೋಪಾಲಸುಂದರಿ ॥ 157 ॥**

**ವಿದ್ಯಾಯಾದೌ ಮುನಿ ಉಕ್ತಾ ವಿಧಾತ್ರಾನಂದ ಭೈರವಾ ।**
**ಛಂದಸ್ತು ದೈವಿಗಾಯತ್ರಿ ದೇವತಾ ಸುಂದರಿಯುತಾ ॥ 158 ॥**

**ಗೋಪಾಲೋ ಮನ್ಮಥೋ ಬೀಜಂ ಶಕ್ತಿಃ ಪಾವಕವಲ್ಲಭಾ ।**
**ಮಾಯಾಶ್ರೀರ್ಮನ್ಮಥೈರ್ಹತ್ ಸ್ಯಾತ್ ಕೃಷ್ಣಾಯ ಶಿರ ಈರಿತಮ್ ॥ 159॥**

**ಗೋವಿಂದಾಯ ಶಿಖಾಗೋಪಿಜನೇತಿ ಕವಚಂ ಮತಮ್ ।**
**ವಲ್ಲಭಾಯ ಸ್ಮೃತಂ ನೇತ್ರಮಸ್ತ್ರಂ ಪಾವಕಭಾರ್ಯಯಾ ॥ 160 ॥**

ಮಾಯಾ (ಹ್ರೀಂ), ರಮಾ (ಶ್ರೀಂ) ಚಿತ್ತಜನ್ಮಾ (ಕ್ಲೀಂ) ನಂತರ 'ಕೃಷ್ಣಾಯ' ಈ ಪ್ರಕಾರ ಪ್ರಥಮ ವಾಕ್ಕೂಟದ ಉಚ್ಚಾರಣೆ ಮಾಡಿ ದ್ವಿತಿಯ ಕೂಟ 'ಗೋವಿಂದಾಯ' ಮತ್ತು ತೃತಿಯ ಕೂಟ 'ಗೋಪಿಜನವಲ್ಲಭಾಯ' ಹೇಳಬೇಕು.

ದಿಶಿಗಗನತಲೇ ಭೂತಲೇ ನಿಷ್ಕಲೇ ವಾ ಪಾತಾಲೇ ವಾ ತಲೇ ವಾ ಸಲಿಲಪ...
ಯೋರ್ಯತ್ರಿ ಕುತ್ರ ಸ್ಥಿತಾಂ ವಾ ।

ಕ್ಷೇತ್ರಪೀಠೋಪಪೀಠಾದಿಷು ಚ ಕೃತಪದಾ ಧೂಪದೀಪಾದಿಕೇನ ಪ್ರೀ...
ದೇವ್ಯಃ ಸದಾ ನಃ ಶುಭಬಲಿವಿಧಿನಾ ಪಾತು ವೀರೇಂದ್ರ ವಂದ್ಯಾಃ

ಯಾಂ ಯೋಗಿನಿಭ್ಯೋ ನಮಃ ಈ ಮಂತ್ರದಿಂದ ಅನಾಮಿಕಾ, ... ಮತ್ತು ಅಂಗುಷ್ಠಗಳನ್ನು ಸೇರಿಸುವುದರಿಂದ ಉತ್ಪನ್ನವಾಗುವ ಮುದ್ರಾ ... ಹುತಶೇಷ ದ್ರವ್ಯಗಳಿಂದ ಯೋಗಿನಿಯರಿಗೆ ಬಲಿ ಕೊಡಬೇಕು. ನಂತರ

"ಕ್ಷಾಂ ಕ್ಷಿಂ ಕ್ಷೂಂ ಕ್ಷೇಂ ಕ್ಷೌಂ ಕ್ಷಃ ಹುಂ ಸ್ಥಾನಕ್ಷೇತ್ರಪಾಲೇಶ ಸರ್ವಕಾಮಾ... ಪೂರಯ ಸ್ವಾಹಾ" ಈ ಮಂತ್ರದಿಂದ ಎಡಗೈಯ ಅಂಗುಷ್ಠ ಮತ್ತು ಅನಾಮಿ... ಗಳನ್ನು ಸೇರಿಸಿದಾಗ ಉತ್ಪನ್ನವಾಗುವ ಮುದ್ರೆಯನ್ನು ಪ್ರದರ್ಶಿಸುತ್ತ ಹುತಶೇ... ದ್ರವ್ಯಗಳಿಂದ ಶ್ರೀ ಚಕ್ರದ ನೈರುತ್ಯ ಕೋಣದಲ್ಲಿ ಕ್ಷೇತ್ರಪಾಲನಿಗೆ ಬಲಿ ಪ್ರದಾ... ಮಾಡಬೇಕು.

ನಂತರ "ಗಾಂ ಗೀಂ ಗೂಂ ಗಂ ಗಣಪತೆಯ ವರ ವರದ ಸರ್ವ ಜನ... ಮೆ ವಶಮಾನಯ ಸರ್ವೋಪಚಾರ ಸಹಿತಂ ಬಲಿಂ ಗೃಹ್ಣ ಗೃಹ್ಣ ಸ್ವಾಹಾ" ಈ ಮಂತ್ರವನ್ನು ಹುತಶೇಷ ದ್ರವ್ಯದಿಂದ ಶ್ರೀ ಚಕ್ರದ ವಾಯುವ್ಯ ಕೋಣದಲ್ಲಿ ಗಣಪತಿ ಬಲಿ ಪ್ರದಾನ ಮಾಡಬೇಕು.

ಕಾಮ್ಯ ಪ್ರಯೋಗಗಳು

ಅಥ ಪ್ರಯೋಗಾ ವಕ್ಷಂತೆ ಸಾಧಕಾಭಿಷ್ಟಸಿದ್ಧಿದಾಃ ॥ 140 ॥
ನವಲಕ್ಷಜಪೇನಾಸ್ಯ ರುದ್ರರೂಪೋ ನರೋ ಭವೇತ್ ।
ಮಲ್ಲಿಕಾಮಾಲತಿಪುಷ್ಪೈರ್ಹೋಮಾದ್ ವಾಗೀಶತಾಮಿಯಾತ್ ॥ 141 ॥
ಕರವೀರೈರ್ಜಪಾಪುಷ್ಪೈರ್ಹೋಮನ್ಮೋಹಯುತೆ ಜಗತ್ ।
ಚಂದ್ರಕುಂಕುಮಕಸ್ತೂರಿ ಹೋಮಾತ್ ಕಾಮಾಧಿಕೋ ಭವೇತ್ ॥ 142 ॥
ಚಂಪಕೈಃ ಪಾಟಲೈರ್ವಿಶ್ವಂ ವಶಮಾನಯತೆಚಿರಾತ್ ।
ಲಾಜಾಹೋಮೋಃ ರಾಜ್ಯದಾಯಿ ಮಧುನೋದ್ರವಕ್ಷಯಃ ॥ 143 ॥
ನಿಶಿಚ್ಛಾಗಪಲೈರ್ಹೋಮೊ ರಿಪುಸೈನ್ಯವಿನಾಶಕೃತ ।
ದಧ್ಯಾಜ್ಯದುಗ್ಧಮಧುಭಿಃ ಕ್ರಮಾದ್ಧೋಮಾದವಾಪ್ನುಯುಯಾತ್ ॥ 144 ॥

ಈಗ ಸಾಧಕರ ಅಭೀಷ್ಟ ಸಿದ್ಧಿದಾಯಕ ಪ್ರಯೋಗಗಳನ್ನು ಕುರಿತು ಹೇಳಲಾಗುತ್ತದೆ.





ಈ ಮಂತ್ರದ 9 ಲಕ್ಷ ಜಪ ಮಾಡುವುದರಿಂದ ಸಾಧಕನು ರುದ್ರ ಸ್ವರೂಪವನ್ನು ಪಡೆದುಕೊಳ್ಳುತ್ತಾನೆ. ಈ ಮಂತ್ರದಿಂದ ಮಲ್ಲಿಗೆ ಮತ್ತು ಮಾಲತಿ ಪುಷ್ಪಗಳಿಂದ ಹೋಮ ಮಾಡಿದರೆ ಸಾಧಕರು ವಾಗೀಶರಾಗುತ್ತಾರೆ. ಕಣಗಿಲೆ ಮತ್ತು ಜಪಾಕುಸುಮಗಳ ಹೋಮದಿಂದ ಸಾಧಕರು ಇಡಿ ಪ್ರಪಂಚವನ್ನೇ ವಶಪಡಿಸಿಕೊಳ್ಳುತ್ತಾರೆ.

ಕರ್ಪೂರ, ಕುಂಕುಮ ಮತ್ತು ಕಸ್ತೂರಿಗಳಿಂದ ಹೋಮ ಮಾಡುವುದರಿಂದ ಸಾಧಕರು ಕಾಮದೇವನಿಗಿಂತಲೂ ಅಧಿಕ ರೂಪಸಂಪನ್ನನಾಗುತ್ತಾನೆ. ಚಂಪ ಮತ್ತು ಗುಲಾಬಿ ಹೂಗಳಿಂದ ಹೋಮ ಮಾಡುವುದರಿಂದ ವ್ಯಕ್ತಿಯು ಶೀಘ್ರವಾಗಿ ಪ್ರಪಂಚವನ್ನು ತನ್ನ ವಶವರ್ತಿಯಾಗಿ ಮಾಡಿಕೊಳ್ಳುತ್ತಾನೆ.

ಭತ್ತದ ಅರಳಿನಿಂದ ಹೋಮ ಮಾಡಿದರೆ ರಾಜ್ಯ ಪ್ರಾಪ್ತಿಯಾಗುತ್ತದೆ. ಜೇನುತುಪ್ಪದ ಹೋಮದಿಂದ ಸಮಸ್ತ ಉಪದ್ರವಗಳು ಶಾಂತವಾಗುತ್ತವೆ. ರಾತ್ರಿಯ ಸಮಯದಲ್ಲಿ ಹೋತದ ಮಾಂಸದಿಂದಹೋಮ ಮಾಡುವುದರಿಂದಶತ್ರು ಸೇನೆಯು ನಷ್ಟವಾಗುತ್ತದೆ. ಮೊಸರಿನ ಹೋಮದಿಂದ ಆರೋಗ್ಯ, ತುಪ್ಪದ ಹೋಮದಿಂದ ಸಂಪತ್ತು,ಹಾಲಿನ ಹೋಮದಿಂದ ಗ್ರಾಮ, ಜೇನು ತುಪ್ಪದ ಹೋಮದಿಂದ ಧನಪ್ರಾಪ್ತಿಯಾಗುತ್ತದೆ.

ಆರೋಗ್ಯಂ ಸಂಪದಂ ಗ್ರಾಮಂ ಧನಂ ಶರ್ಕರಯಾಸುಖಮ್ ।
ಕಮಲೈರ್ಧನ ಸಂಪತ್ತಿರ್ದಾಡಿಮ್ಯೈ ರಾಜವಶ್ಯತಾಮ್ ॥ 145 ॥
ಕ್ಷತ್ರಿಯಾಮಾತುಲಿಂಗೈಸ್ತು ವೈಶ್ಯಾ ನಾರಂಜ್ಯೈಃ ಫಲೈಃ ।
ಶೂದ್ರಾಃ ಕೂಷ್ಮಾಂಡಸಂಭೂತೈರ್ವಶ್ಯಾಃ ಸ್ಯುರಚಿರಾದ್ಧ್ರುತೈಃ ॥ 146 ॥
ಪನಸಾನಾಂ ಲಕ್ಷ ಹೋಮದ್ದಶ್ಯಾಸ್ಸ್ಯುಶ್ಚಕ್ರವರ್ತಿನಃ ।
ದ್ರಾಕ್ಷಾಫಲೈರಿಷ್ಟಸಿದ್ಧಿ ರಂಭಾಭಿರ್ಮಂತ್ರಿನಾ ವಶಾಃ ॥ 147 ॥
ನಾರಿಕೇಲೈಸ್ತು ಸಂಪತ್ತಿಸ್ತಿಲೈಃ ಸರ್ವೇಷ್ಟಸಿದ್ಧಯ ।
ಗುಗ್ಗುಲೈರ್ದುಃ ಖನಾಶಃ ಸ್ಯಾತ್ ಸರ್ವೇಷ್ಟಂ ಶರ್ಕರಾಗುಡೈಃ ॥ 148 ॥

ಕಮಲ ಪುಷ್ಪಗಳ ಹೋಮದಿಂದ ಧನ ಸಂಪತ್ತು ದೊರೆಯುತ್ತದೆ. ದಾಳಿಂಬದ ಹೋಮದಿಂದ ರಾಜನು ವಶವರ್ತಿಯಾಗುತ್ತಾನೆ. ಬಿಜೌರಾದ ಹೋಮದಿಂದ ಕ್ಷತ್ರಿಯ, ಕಿತ್ತಳೆ ಹಣ್ಣಿನ ಹೋಮದಿಂದ ಕ್ಷತ್ರಿಯ ಮತ್ತು ಬೂದುಗುಂಬಳಕಾಯಿ ಹೋಮದಿಂದ ಶೂದ್ರರು ವಶವರ್ತಿಯಾಗಿರುತ್ತಾರೆ. ಹಲಸಿನ ಹಣ್ಣಿನಿಂದ ಒಂದು

ಈ ಪ್ರಕಾರ ಪೂಜೆ ಮಾಡಿದ ನಂತರ ಮೂಲಮಂತ್ರದಿಂದ ಪುಷ್ಪಾಂಜಲಿ ಸಮರ್ಪಿಸಿ "ಸರ್ವಸಿದ್ಧಿಪ್ರದೆ ಚಕ್ರೆ ಇಮಾ ಅತಿರಹಸ್ಯಾ ಯೋಗಿನ್ಯ ಪೂಜಿತಾ ಸಂತು ನಿರಂತರಂ ಮಂಗಲಂ ದಿಶಾಂತು" ಈ ಪ್ರಕಾರ ಪ್ರಾರ್ಥನೆ ಮಾಡಿ ಬೀಜಮುದ್ರೆಯನು ಪ್ರದರ್ಶಿಸಬೇಕು.

ಬಿಂದೌ ಸಂಪೂಜಯೇತ್ ಪಶ್ಚಾಚ್ಛ್ರಿಮತ್ತ್ರಿಪುರಸುಂದರೀಮ್ ।
ಮೂಲವಿದ್ಯಾಂ ಸಮುಚ್ಚಾರ್ಯ ಧ್ಯಾತ್ವಾ ಪೂರ್ವೋಕ್ತವರ್ತ್ಮನಾ ॥ 133 ॥

ಸರ್ವಾನಂದಮಯೆ ಚಕ್ರೆ ಸರ್ವಾಭಿಷ್ಟವಿಧಾಯಿನೀಮ್ ।
ಪರಾಪರರಹಸ್ಯಾಖ್ಯಾಂ ಯೋಗಿನಿ ಪೂಜಿತಾಸ್ತು ಮೆ ॥ 134 ॥

ಯೋನಿಮುದ್ರಾಂ ಪ್ರದಶ್ಯಾಥ ತರ್ಪಣಂ ತ್ರಿ ಸಮಾಚರೇತ್ ।
ಧೂಪಂ ದೀಪಂ ಚ ನೈವೇಧ್ಯಮನ್ನೈರ್ನಾನಾವಿಧೈರ್ದಿಶೇತ ॥ 135 ॥

ವಹ್ನಿಂ ಸಂಪೂಜ್ಯ ಪೂರ್ವೋಕ್ತವಿಧಿನಾ ತತ್ರ ಸುಂದರೀಮ್ ।
ಆವಾಹ್ಯ ಜುಹುಯಾದ್ ದ್ರವ್ಯಂ ಪಂಚವಿಶಂತಿಸಂಖ್ಯಯಾ ॥ 136 ॥

**ನವಮಾವರಣ ವಿಧಾನ**

ಬಿಂದುವಿನ ಮೇಲೆ ವಿಧಿವತ್ಧ್ಯಾನ ಮಾಡಿ ಪೂರ್ವೋಕ್ತ ವಿಧಾನದಿಂದ ಮೂಲವಿದ್ಯಾ ಮಂತ್ರವನ್ನು ಹೇಳುತ್ತ ತ್ರಿಪುರಸುಂದರಿಯ ಪೂಜೆ ಮಾಡಬೇಕು. ನಂತರ "ಸ್ವಾನಂದಮಯೆ ಚಕ್ರೆ ಸರ್ವಾಭಿಷ್ಟವಿಧಾಯಿನಿಂ ಪರಾತ್ಪರರಹಸ್ಯ ಯೋಗಿನಿ ಶ್ರೀ ಮತ್ರಿಪುರಸುಂದರಿ ಪೂಜಿತಾಸ್ತು'' ಎಂದು ಪ್ರಾರ್ಥನೆ ಮಾಡಿ ಯೋನಿಮುದ್ರೆಯನ್ನು ಪ್ರದರ್ಶಿಸಿ ಮೂರು ಬಾರಿ ತರ್ಪಣ ಮಾಡಬೇಕು. ನಂತರ ಧೂಪ-ದೀಪಾದಿ ಮತ್ತು ಅನೇಕ ಪ್ರಕಾರದ ಭಕ್ಷ ತಯಾರಿಸಿ ನೈವೇದ್ಯಗಳನ್ನು ದೇವಿಗೆ ಅರ್ಪಿಸಬೇಕು.

**ಪೂಜಾ ವಿಧಾನ**

"ಬಾಲಾರ್ಕಾಯುತತೇಜಸಂ ತ್ರಿನಯನಾಂ ರಕ್ತಾಂಬರೋಲ್ಲಾಸಿನಿಂ ।
ನಾನಾಲಂಕೃತಿರಾಜಮಾನವಪುಷಂ ಬಾಲೋಡುರಾಟ್‌ಶೇಖರಾಮ್
ಹಸ್ತೈರಿಕ್ಷುಧನುಃ ಸೃಣಿಂ ಸುಮಶರಂ ಪಾಶಂ ಮುದಾ ಬಿಭ್ರತಿಂ ।
ಶ್ರೀ ಚಕ್ರಸ್ಥಿತ ಸುಂದರಿಂ ತ್ರಿಜಗತಾಮಾಧಾರಭೂತಾಂ ಸ್ಮರೇತ್ ॥"

ಈ ಶ್ಲೋಕದ ಅನುಸಾರ ದೇವಿಯ ಸ್ವರೂಪವನ್ನು ಧ್ಯಾನ ಮಾಡಿ ಬಿಂದುವಿನ ಮೇಲೆ ಮೂಲಮಂತ್ರ "ಶ್ರೀಮತ್ತಿಪುರಸುಂದರಿ ಶ್ರೀಪಾದುಕಾಂ ಪೂಜಯಾಮಿ" ಯಿಂದ ಶ್ರೀ ಶ್ರೀವಿದ್ಯಾಳನ್ನು ಪೂಜೆ ಮಾಡಿ ಪುಷ್ಪಾಂಜಲಿ ಸಮರ್ಪಿಸಬೇಕು.





ನಂತರ "ಸರ್ವಾನಂದ ಮಯೆ ಚಕ್ರೆ ಶ್ರೀಮತ್ತಿಸುಂದರಿ ಪೂಜಿತಾಸ್ತು" ಎಂದು ಪ್ರಾರ್ಥನೆ ಮಾಡಿ ಮಹಾಯೋನಿ ಮುದ್ರಾ ಪ್ರದರ್ಶಿಸಬೇಕು.

ನಂತರ ಮೂಲಮಂತ್ರದಿಂದ ಮೂರು ಬಾರಿ ತರ್ಪಣ ಮಾಡಿ ಧೂಪದೀಪಾದಿ ಉಪಚಾರಗಳಿಂದ ದೇವಿಯ ಪೂಜೆ ಮಾಡಿ ವಿವಿಧ ನೈವೇದ್ಯಗಳನ್ನು ನಿವೇದಿಸಬೇಕು. ನಂತರ ಅಗ್ನಿದೇವನನ್ನು ಪೂಜೆ ಮಾಡಿ ಅದರಲ್ಲಿ ತ್ರಿಪುರಸುಂದರಿಯನ್ನು ಆವಾಹನೆ ಮಾಡಿ ಹವ್ಯದ್ರವ್ಯಗಳಿಂದ ಮೂಲಮಂತ್ರ ಪಠಿಸುತ್ತ 25 ಆಹುತಿಗಳನ್ನು ಕೊಡಬೇಕು.

**ಹೋಮ-ಬಟುಕಾದಿ ಬಲಿ ವಿಧಾನ**

ಶ್ರೀ ಚಕ್ರಸ್ಯ ಬಲಿಂ ದಧ್ಯಾದಧುತಶೇಷೇನ ಸಂಯುತಃ ।
ಈಶಾನಾಗ್ನೇಯನೈಋತ್ಯವಾಯು ಕೋಣೇಷು ಚ ಕ್ರಮಾತ್ ॥ 137 ॥

ಬಟುಕಸ್ಯ ಚ ಯೋಗಿನ್ಯಾಃ ಕ್ಷೇತ್ರೇಶ ಗಣನಾಥಯೋಃ ।
ನಿಜೈರ್ಮಂತ್ರೈಃ ಸ್ವಮುದ್ರಾಭಿಃ ಪೂರ್ವಸಂಕೀರ್ತಿತೈರ್ಮಯಾ ॥ 138 ॥

ಪ್ರದಕ್ಷಿಣಾನತಿಃ ಕೃತ್ವಾ ಮೂಲವಿದ್ಯಾಂ ತತೋ ಯಜೇತ್ ।
ಏವಂ ಶ್ರೀ ಸುಂದರಿಂ ನಿತ್ಯಂ ಪೂಜಯನ್ವಿ ಜಿತೇಂದ್ರಿಯಃ ॥ 139 ॥
ಸವಾಪ್ನತಿಯುತಾಂ ಸರ್ವಾನ್ ಕಾಮಾನಿಷ್ಟಾನವಾಪ್ನುಯಾತ್ ।

ಶ್ರೀ ಚಕ್ರದ ಈಶಾನ್ಯ, ಆಗ್ನೇಯ, ನೈಋತ್ಯ ಮತ್ತು ವಾಯುವ್ಯ ಕೋಣಗಳಲ್ಲಿ ಹುತಶೇಷ ದ್ರವ್ಯಗಳಿಂದ, ಆಯಾ ಮಂತ್ರ ಮತ್ತು ಮುದ್ರಾಗಳಿಂದ ಕ್ರಮವಾಗಿ, ಬಟುಕ, ಯೋಗಿನಿ, ಕ್ಷೇತ್ರಪಾಲ ಮತ್ತು ಗಣಪತಿಯರನ್ನು ಈ ಹಿಂದೆ ವಿವರಿಸಿದ ವಿಧಾನರೀತ್ಯಾ ಬಲಿ ಪ್ರದಾನ ಮಾಡಬೇಕು.

ನಂತರ ಪ್ರದಕ್ಷಿಣಾ ಮತ್ತು ನಮಸ್ಕಾರ ಮಾಡಿ ಮೂಲವಿದ್ಯಾ ಜಪ ಮಾಡಬೇಕು. ಈ ಪ್ರಕಾರ ಜಿತೇಂದ್ರಿಯನಾದ ಸಾಧಕನು ಪ್ರತಿದಿನ 9 ಆವರಣಗಳ ಜೊತೆಗೆ ಶ್ರೀಮತ್ತಿಪುರ ಸುಂದರಿಯ ಪೂಜೆ ಮಾಡಿ ತಮ್ಮ ಸಮಸ್ತ ಇಷ್ಟಾರ್ಥಗಳನ್ನು ಸಿದ್ಧಿಸಿಕೊಳ್ಳಬೇಕು.

**ಬಲಿದಾನ ವಿಧಾನ :**

"ಏಹ್ಯೇಹಿ ದೇವಿಪುತ್ರ ಬಟುಕನಾಥ ಕಪಿಲಜಟಾಭಾರ ಭಾಸುರ ತ್ರಿನೇತ್ರಜ್ವಾಲಾಮುಖ ಸರ್ವವಿಘ್ನಾನ್ನಾಶಯ ನಾಶಯ ಸರ್ವೋಪಚಾರ ಸಹಿತಂ ಇಮಂ ಬಲಿಂ ಗೃಹ್ಣ ಗೃಹ್ಣ ಸ್ವಾಹಾ" ಈ ಮಂತ್ರದಿಂದ ತರ್ಜನಿ ಮತ್ತು ಅಂಗುಷ್ಠ ಸೇರಿಸಿ ಬಟುಕಮುದ್ರಾ ಪ್ರದರ್ಶಿಸಿ ಹುತಶೇಷ ದ್ರವ್ಯಗಳಿಂದ ಈಶಾನ ಕೋಣದಲ್ಲಿ ಬಟುಕನಿಗೆ ಬಲಿ ಕೊಡಬೇಕು. ನಂತರ, ಊರ್ಧ್ವ ಬ್ರಹ್ಮಾಂಡತೊ ವಾ

(ಅಂ ಹ್ರಿಂ) ಮತ್ತು ಅಂಕುಶದ ಮೊದಲು ಅಂಕುಶ ಬೀಜ (ಕ್ರೌಂ) ಸೇರಿಸಬೇಕು.

**ನಾನಾರತ್ನವಿಭೂಷಾಢ್ಯಾಃ ಸ್ವಸ್ವಾಯುಧ ಸಮನ್ವಿತಾಃ ।**
**ವಿದ್ಯುದ್ದಾಮಸಮಾನಾಂಗ್ಯೋ ಯೌವನೋನ್ಮದ ಮಂಥರಾ**

**ಅಗ್ನ್ಯಾದಿ ಕೋಣತ್ರಿತಯೆ ಪೂಜ್ಯಾಃ ಕೂಟತ್ರಯಾದಿಕಾಃ ।** ॥ 126 ॥
**ಕಾಮೇಶ್ವರಿ ಚ ವಜ್ರೇಶಿ ತೃತೀಯಾ ಭಗಮಾಲಿನಿಃ**

**ಕಾಮೇಶ್ವರಿ ರುದ್ರಶಕ್ತಿಃ ಶರಚ್ಚಂದ್ರಶತಪ್ರಭಾ ।** ॥ 127 ॥
**ಸ್ಮರ್ತವ್ಯಾ ದಧತಿ ಹಸ್ತೈಃ ಪುಸ್ತಕಾಭೀವರಸ್ರಜಃ**

**ವಜ್ರೇಶ್ವರಿ ವಿಷ್ಣುಶಕ್ತಿರುಧ್ಯನ್ಮಾರ್ತಾಂಡಸಪ್ರಭಾ ।** ॥ 128 ॥
**ಈಕ್ಷುಚಾಪವರಾಭೀತಿ ಪುಷ್ಪ ಬಾಣಲಸತ್ಕರಾ**

॥ 129 ॥

ಅನೇಕ ರತ್ನಗಳಿಂದ ಶೋಭಿಸುತ್ತಿರುವ, ತಮ್ಮ ತಮ್ಮ ಆಯುಧಗಳನ್ನು ಹಿಡಿದು, ವಿದ್ಯುತ್ ಪ್ರಭೆಯ ಸಮಾನ ದೇದೀಪ್ಯಮಾನ ಅಂಗವುಳ್ಳವರು, ಮತ್ತು ಯೌವನದ ಉನ್ಮಾದದಿಂದ ಜಂಬದಿಂದ ನಡೆಯುತ್ತಿರುವ ಆ ದೇವಿಯರನ್ನು ಧ್ಯಾನಿಸಬೇಕು.

ಆಗ್ನೇಯಾದಿ ಮೂರು ಕೋಣಗಳಲ್ಲಿ ಕೂಟತ್ರಯ ಸಹಿತ ಕಾಮೇಶ್ವರಿ, ವಜ್ರೇಶಿ ಮತ್ತು ಭಗಮಾಲಿನಿಯರನ್ನು ಪೂಜಿಸಬೇಕು.

**ಕಾಮೇಶಿ ಧ್ಯಾನ**

ಶರತ್ಕಾಲದ ಚಂದ್ರನಂತೆ ಸ್ವಚ್ಛ ಮುಖಕಾಂತಿಯುಳ್ಳವಳು, ಕೈಗಳಲ್ಲಿ ಪುಸ್ತಕ, ಅಭಯ, ವರ ಮತ್ತು ಮಾಲೆಗಳನ್ನು ಧರಿಸಿರುವ ರುದ್ರಶಕ್ತಿಯಾದ ಕಾಮೇಶ್ವರಿಯನ್ನು ಧ್ಯಾನಿಸುತ್ತೇನೆ.

**ವಜ್ರೇಶಿ ಧ್ಯಾನ**

ಉದಯಿಸುತ್ತಿರುವ ಸೂರ್ಯನ ಸಮಾನ ಕಾಂತಿಯುಕ್ತ, ಕಬ್ಬಿನ ಜಲ್ಲೆಯ ಬಿಲ್ಲು, ಪುಷ್ಪಬಾಣ, ವರ ಅಭಯಗಳನ್ನು ಕೈಗಳಲ್ಲಿ ಹಿಡಿದುಕೊಂಡ ವಿಷ್ಣುಶಕ್ತಿಯಾದ ವಜ್ರೇಶ್ವರಿಯನ್ನು ಧ್ಯಾನಿಸಬೇಕು.

**ಭಗಮಾಲಬ್ರಹ್ಮಶಕ್ತಿಸ್ತಪ್ತಹಾಟಕ ಸಪ್ರಭಾ**
**ಜ್ಞಾನ ಮುದ್ರಾಂ ವರಂ ಪಾಶಾಮಂಕುಶಂ ದಧತಿ ಕರೈಃ** ॥ 130 ॥

**ಏವಂ ತ್ರಿಕೋಣಂ ಸಂಪೂಜ್ಯ ಯಚ್ಛೇತ್ ಪುಷ್ಪಾಂಜಲಿ ತತಃ ।**
**ಬೀಜಮುದ್ರಾಂ ಪ್ರದರ್ಶ್ಯಾರ್ಘ ಪ್ರಾರ್ಥಯೇತ್ ಸುಂದರಿಮಿದಮ್** ॥ 131 ॥





**ಸರ್ವಸಿದ್ಧಿಪ್ರದೆ ಚಕ್ರೆ ಯೋಗಿನ್ಯಃ ಪೂಜಿತಾ ಮಯಾ ।**
**ದಿಶಾಂತ್ವತಿರಹಸ್ಯಾಖ್ಯಾಂ ಮಂಗಲಂ ಮೆ ನಿರಂತರಮ್** ॥ 132 ॥

**ಭಗಮಾಲಿನಿ ಧ್ಯಾನ**

ಕಾಯಿಸಿದ ಬಂಗಾರದ ಸಮಾನ ಹೊಳೆಯುತ್ತಿರುವ ಕೈಗಳಲ್ಲಿ ಜ್ಞಾನಮುದ್ರೆ, ವರ, ಪಾಶ ಮತ್ತು ಅಂಕುಶಗಳನ್ನು ಹಿಡಿದ ಬ್ರಹ್ಮ ದೇವನ ಶಕ್ತಿ ಭಗಮಾಲಿನಿಯನ್ನು ಧ್ಯಾನ ಮಾಡಬೇಕು.

ಈ ಪ್ರಕಾರ ತ್ರಿಕೋಣದಲ್ಲಿ ದೇವಿಯರನ್ನು ಪೂಜೆ ಮಾಡಿ ಪುಷ್ಪಾಂಜಲಿ ಅರ್ಪಿಸಬೇಕು. ನಂತರ ಬೀಜಮುದ್ರಾ ಪ್ರದರ್ಶಿಸಿ, ಸರ್ವಸಿದ್ಧಿಪ್ರದೆ ಚಕ್ರೆ ಇಮಾ ಅತಿರಹಸ್ಯಾ ಯೋಗಿನ್ಯಃ ಪೂಜಿತಾಃ ಸಂತು ಮೆ ನಿರಂತರಂ ಮಂಗಲಂ ದಿಶಾಂತು ಈ ಪ್ರಕಾರ ತ್ರಿಪುರ ಸುಂದರಿಯನ್ನು ಪ್ರಾರ್ಥಿಸಬೇಕು.

ಪೂಜಾ ವಿಧಾನ : 'ನಾನಾರತ್ನಂ' ಶ್ಲೋಕದ ಅನುಸಾರ ದೇವಿಯರನ್ನು ಧ್ಯಾನ ಮಾಡಿ ಅ, ಕ, ಥ ವರ್ಣಗಳಿಂದ ಸಂಯುಕ್ತ ತ್ರಿಕೋಣದಲ್ಲಿ ಪಶ್ಚಿಮದಿಂದ ನಾಲ್ಕು ಕಡೆಗೆ, ಅನುಲೋಮ ಕ್ರಮದಿಂದ ತಮ್ಮ ತಮ್ಮ ಬೀಜ ಮಂತ್ರಗಳಿಂದ ಕಾಮೇಶ್ವರ ಮತ್ತು ಕಾಮೇಶ್ವರಿಯರ ಬಾಣ, ಧನುಷ್ ಆದಿಗಳನ್ನು ಈ ಪ್ರಕಾರ ಪೂಜಿಸಬೇಕು.

**"ಯಾಂ ರಾಂ ಲಾಂ ವಾಂ ಶಾಂ ದ್ರಾಂ ದ್ರೀಂ ಕ್ಲಿಂ ಬ್ಲೂಂ ಸಃ ಕಾಮೇಶ್ವರ ಕಾಮೇಶ್ವರಿ ಜಂಭಬಾಣ ಶ್ರೀ ಪಾದುಕಾಂ ಪೂಜಯಾಮಿ –ಪಶ್ಚಿಮೆ**

**ಥಂ ಥಂ ಕಾಮೇಶ್ವರಕಾಮೇಶ್ವರಿ ಮೋಹನಧನುಃ ಶ್ರೀಪಾದುಕಾಂ ಪೂಜಯಾಮಿ –ಪೂರ್ವೆ । ಕ್ರೋಂ ಕಾಮೇಶ್ವರ ಕಾಮೇಶ್ವರಿ ಸ್ತಂಭನಾಂಕುಶ ಶ್ರೀಪಾದುಕಾಂ ಪೂಜಯಾಮಿ –ದಕ್ಷಿಣೆ**

ಇದರ ನಂತರ ತ್ರಿಕೋಣದಲ್ಲಿ ಆಗ್ನೇಯಾದಿ ಕೋನಗಳಲ್ಲಿ 12.128 ಶ್ಲೋಕದ ಅನುಸಾರ ಕಾಮೇಶ್ವರಿ ರುದ್ರ ಶಕ್ತಿಯ, 12.129 ಶ್ಲೋಕದ ಅನುಸಾರ ವಜ್ರೇಶ್ವರಿ ವಿಷ್ಣುಶಕ್ತಿಯ ಮತ್ತು 12.130 ಶ್ಲೋಕದ ಅನುಸಾರ ಬ್ರಹ್ಮಶಕ್ತಿ ಭಗಮಾಲಿನಿಯ ಧ್ಯಾನ ಮಾಡಿ ಈ ಕೆಳಗಿನಂತೆ ಮಂತ್ರಗಳಿಂದ ಪೂಜಿಸಬೇಕು.

**ಕಏಈಲಹ್ರೀಂ ಕಾಮೇಶ್ವರಿಪೀಠೆ ಕಾಮೇಶ್ವರಿ ರುದ್ರಶಕ್ತಿ ಶ್ರೀ ಪಾದುಕಾಂ ಪೂಜಯಾಮಿ । ಹಸಕಹಲಹ್ರೀಂ ಪೂರ್ಣಗಿರಿಪೀಠೆ ವಜ್ರೇಶ್ವರಿ ವಿಷ್ಣುಶಕ್ತಿ ಶ್ರೀಪಾದುಕಾಂ ಪೂಜಯಾಮಿ**

**ಸಕಲಹ್ರೀಂ ಜಾಲಂಧರ ಪೀಠೆ ಭಗಮಾಲಿನಿ ಬ್ರಹ್ಮಶಕ್ತಿ ಶ್ರೀಪಾದುಕಾಂ ಪೂಜಯಾಮಿ**

ಪ್ರಕಾರ ಪ್ರಾರ್ಥನೆ ಮಾಡಬೇಕು.

**ಪೂಜಾ ವಿಧಾನ** : ಸರ್ವರತ್ನಾಕರೆ ಚಕ್ರೆ (12.113) ಶ್ಲೋಕದಲ್ಲಿ ವರ್ಣಿತ ದೇವಿಯರ ಸ್ವರೂಪವನ್ನು ಧ್ಯಾನ ಮಾಡಿ ಸರ್ವಜ್ಞಾ ಮುಂತಾದ ಹತ್ತು ನಿಗರ್ಭಾ ಯೋಗಿನಿಯರನ್ನು ಪೂಜೆ ಮಾಡಬೇಕು. "ಹ್ರೀಂ ಶ್ರೀಂ ಮಂ ಸರ್ವಜ್ಞಾದೇವಿ ಶ್ರೀ ಪಾದುಕಾಂ ಪೂಜಯಾಮಿ" ಈ ಪ್ರಕಾರ ಪ್ರಾರಂಭದಲಿ ಹ್ರೀಂ ಶ್ರೀಂ ಮತ್ತು ಮುಂದಿನ ಅಕ್ಷರವನ್ನು ಜೋಡಿಸಿ ದೇವಿಯರ ಹೆಸರಿನ ಮುಂದೆ ಶ್ರೀ ಪಾದುಕಾಂ ಪೂಜಯಾಮಿ ಯಿಂದ ಹತ್ತೂ ಯೋಗಿನಿಯರನ್ನು ಪೂಜಿಸಬೇಕು. ನಂತರ ಮೂಲಮಂತ್ರದಿಂದ ಪುಷ್ಪಾಂಜಲಿ ಅರ್ಪಿಸಿ, "ಸರ್ವರತ್ನಾಕರ ಚಕ್ರೆ ಇಮಾ ದಶನಿಗರ್ಭಾಯೋಗಿನ್ಯಃ ಪೂಜಿತಾಃ ಸಂತುಃ ಎಂದು ಪ್ರಾರ್ಥನೆ ಮಾಡಿ ಮಹಾಂಕುಶ ಮುದ್ರಾ ಪ್ರದರ್ಶಿಸಬೇಕು.

**ಸಂಪ್ರಾರ್ಥ್ಯೈವಮಾಥಾಷ್ಟಾರೆ ದಾಡಿಮಿಪುಷ್ಪಸನ್ನಿಭಾಃ ।**
**ರಕ್ತಾಂಶುಕಾಧನುರ್ಬಾಣವಿದ್ಯಾವರಲಸತ್ಕರಾಃ** || 117 ||

**ಅಕಾರಾಧ್ಯಷ್ಟವರ್ಗಾಢ್ಯಾ ಪಶ್ಚಿಮಾದಿವಿಲೋಮತಃ ।**
**ಪೂಜಯೇತ್ ಪೂರ್ವ ಸಂಪ್ರೋಕ್ತಾ ಬೀಜಾಢ್ಯಾ ಅಷ್ಟದೇವತಾ** || 118 ||

**ವಶಿನಿ ಚಾಪಿ ಕೌಮಾರಿ ಮೋದಿನಿ ವಿಮಲಾರುಣಾ ।**
**ಜಯಿನಿ ಚಾಪಿ ಸರ್ವೇಶಿ ಕೌಲಿನಿತ್ಯುದಿತಾಃ ಪುರಾ** || 119 ||

**ಸರ್ವರೋಗಹರೆ ಚಕ್ರೆ ರಹಸ್ಯಾಃ ಪೂಜಿತಾ ಮಯಾ ।**
**ತರ್ಪಿತಾಃ ಪೂಜಿತಾಃ ಸಂತ್ವಿತ್ಯುಕ್ತ್ವಾ ದಧ್ಯಾತ್ ಸುಮಾಂಜಲಿಮ್** || 120 ||

**ಸಪ್ತಮಾವರಣ ಪೂಜಾ**

ದಾಳಿಂಬ ಪುಷ್ಪದ ವರ್ಣದ ಕಾಂತಿಯುಳ್ಳ, ಕೆಂಪು ಬಣ್ಣದ ವಸ್ತ್ರಗಳಿಂದ ಅಲಂಕೃತ, ಕೈಗಳಲ್ಲಿ ಧನುಷ್ಯ, ಬಾಣ, ವಿದ್ಯಾ ಮತ್ತು ವರ ಧಾರಣ ಮಾಡಿರುವ ನ್ಯಾಸೋಕ್ತ ವಶಿನಿ ಆದಿ ಅಷ್ಟದೇವಿಯರನ್ನು ಧ್ಯಾನ ಮಾಡಿ ಅಕಾರಾದಿ ಅಷ್ಟವರ್ಣಗಳಿಂದ ಸುಶೋಭಿತ ಅಷ್ಟದಳದಲ್ಲಿ ಪೂರ್ವೋಕ್ತ ಬೀಜಗಳ ಜೊತೆ ಅಷ್ಟದೇವಿಯರನ್ನು ಪಶ್ಚಿಮದಿಂದ ವಿಲೋಮ ಕ್ರಮದ ಮೂಲಕ ಪೂಜೆ ಮಾಡಬೇಕು.

1. ವಶಿನಿ 2. ಕೌಮಾರಿ 3. ಮೋದಿನಿ 4. ವಿಮಲಾ 5. ಪರುಣಾ 6. ಜಯಿನಿ 7. ಸರ್ವೇಶಿ 8. ಕೌಲಿನಿ ಇವು ಎಂಟು ದೇವಿಯರಿರುತ್ತಾರೆ. ಇವರ ಪೂಜೆಯ





ನಂತರ ಸರ್ವ ರೋಗಹರೆ ಚಕ್ರೆ ಅಷ್ಟಾರೆ ಇಮಾ ರಹಸ್ಯಯೋಗಿನ್ಯಃ ಪೂಜಿತಾಃ ತರ್ಪಿತಾಃ ಸಂತುಃ ಎಂದು ಪ್ರಾರ್ಥನೆ ಮಾಡಿ ಪುಷ್ಪಾಂಜಲಿ ಅರ್ಪಿಸಬೇಕು. ನಂತರ ಖೇಚರಿಮುದ್ರಾವನ್ನು ಪ್ರದರ್ಶಿಸಬೇಕು.

ಪೂಜಾ ವಿಧಾನಃ ಸರ್ವರೋಗಹರೆ....ಶ್ಲೋಕದನುಸಾರ ದೇವಿಯರನ್ನು ಧ್ಯಾನ ಮಾಡಿ ಅಕಾರಾದಿ ವಿಭೂಷಿತ ಅಷ್ಟದಳದಲ್ಲಿ ವಶಿನಿ ಆದಿ ಯೋಗಿನಿಯರನ್ನು ಪೂಜೆ ಮಾಡಬೇಕು. ಹ್ರೀಂ ಶ್ರೀಂ ಅಂ ಆಂ ವಶಿನಿವಾಗ್ದೇವತಾ ಶ್ರೀ ಪಾದುಕಾಂ ಪೂಜಯಾಮಿ ನಮಃ । ಹ್ರೀಂ ಶ್ರೀಂ ಇ ಈ ಕೌಮಾರಿವಾಗ್ದೇವತಾ ಶ್ರೀಪಾದುಕಾಂ ಪೂಜಯಾಮಿ ನಮಃ ಇತ್ಯಾದಿ

ಈಪ್ರಕಾರ ಈ ಮೊದಲು ವಿವರಿಸಿದ ವಿಧಾನದಿಂದ ಯೋಗಿನಿಯರ ಪೂಜೆಮಾಡಿ ಮೂಲಮಂತ್ರದಿಂದ ಪುಷ್ಪಾಂಜಲಿ ಸಮರ್ಪಿಸಿ. ಸರ್ವರೋಗಹರೆ ಚಕ್ರೆ ಅಷ್ಟಾರೆ ಇಮಾ ರಹಸ್ಯ ಯೋಗಿನ್ಯಃ ಪೂಜಿತಾಃ ಸಂತು ಪ್ರಾರ್ಥನೆ ಮಾಡಿಖೇಚರಿ ಮುದ್ರಾವನ್ನು ಪ್ರದರ್ಶಿಸಬೇಕು.

**ಖೇಚರಿ ದರ್ಶಯೇನ್ಮುದ್ರಾಂ ಸುಂದರಿಂ ತೋಷಯೇತ್ತತಃ ।**
**ತ್ರಿಕೋಣೇತ್ವಕಥಾಧ್ಯಾರ್ಣರಚಿತೆ ಪಶ್ಚಿಮಾದಿತಃ** || 122 ||

**ಯಜೇತ್ ಕಾಮೇಶಕಾಮೇಶ್ಯೋರ್ಬಾಣಾಂಶ್ಚಾಪಂ ಚ ಪಾಶಕಮ್ ।**
**ಅಂಕುಶಂ ಚಾನುಲೋಮೇನ ಚತುರ್ದಿಕ್ಷು ಸಮಾಹಿತಃ** || 123 ||

**ಜಂಭಮೋಹವಶಸ್ತಂಭಟದಾಢ್ಯನ್ ಬೀಜಪೂರ್ವಕಾನ್ ।**
**ಬಾಣಬೀಜಾನಿ ಬಾಣಾದ್ ಮೀನಕೃಷೌ ಸಬಿಂದುಕೌ** || 124 ||

**ಚಾಪಾದೌ ಪಾಶಕಸ್ಯಾದೌ ಪಾಶಾಮಾಯೆ ನಿಯೋಜಯೇತ್ ।**
**ಅಂಕುಶಂ ತ್ವಂಕುಶಸ್ಯಾದೌ ಸ್ಮರ್ತವ್ಯಾ ಹೇತಿದೇವತಾಃ** || 125 ||

**ಅಷ್ಟಮಾವರಣ ಪೂಜಾ**

ಅ, ಕ, ಥ ಈ ಮೂರು ವರ್ಣಗಳಿಂದ ವಿಭೂಷಿತ, ತ್ರಿಕೋಣದಲ್ಲಿ ಪಶ್ಚಿಮಾದಿ ಅನುಲೋಮ ಕ್ರಮದಿಂದ ನಾಲ್ಕು ದಿಕ್ಕುಗಳಲ್ಲಿ ಸ್ವಸ್ಥಚಿತ್ತರಾಗಿ, ತಮ್ಮ ತಮ್ಮ ಬೀಜಗಳ ಸಹಿತ,ಜಂಭ, ಮೋಹ, ವಶ ಮತ್ತು ಸ್ತಂಭ ಸಂಜ್ಞೆಯುಳ್ಳ ಕಾಮೇಶ್ವರ ಮತ್ತು ಕಾಮೇಶ್ವರಿಯರ ಬಿಲ್ಲುಬಾಣ, ಪಾಶ ಮತ್ತು ಅಂಕುಶಗಳ ಮೊದಲು ಸಾನುಸ್ವಾರ ಮೀನ ಕೃಷ್ಣ (ಥಂ ಥಂ) ಪಾಶದ ಮೊದಲು ಪಾಶಮತ್ತುಮಾಯಾ ಬೀಜ

ಸರ್ವಕಾಮಪ್ರದಾ ಪಶ್ಚಾತ್ ಸರ್ವದುಃಖವಿಮೋಚನಿ
ಸರ್ವಮೃತ್ಯುಪ್ರಶಮನಿಸರ್ವವಿಘ್ನನಿವಾರಿಣೀ । ॥ 109 ॥
ಸರ್ವಾಂಗಸುಂದರಿ ಚಾನ್ಯಾ ಸರ್ವಸೌಭಾಗ್ಯ ದಾಯಿನಿ
ಬಿಂದೌ ಪುಷ್ಪಂ ಸಮಪ್ಯಾರ್ಥೋನ್ಮಾದಮುದ್ರಾಂ ಪ್ರದರ್ಶಯೇತ್ । ॥ 110 ॥
ಸರ್ವಾರ್ಥಸಾಧಕೆ ಚಕ್ರೆ ಪಂಚಮೆ ಸರ್ವತಃ ಸ್ಥಿತಾ
ಪೂಜಿತಾಃ ಕುಲಯೋಗಿನ್ಯಃ ಸಂತುಮೇಭಿಷ್ಟಸಿದ್ಧಿದಾಃ । ॥ 111 ॥
ಇತಿ ಸಂಪ್ರಾರ್ಥ್ಯ ಸಂಪೂಜ್ಯ ಮಾದಿಕ್ಷಾಂತವಿಭೂಷಿತೆ ॥ 112 ॥

ಣ ಕಾರದಿಂದ ಭಕಾರದ ವರೆಗೆ ವರ್ಣಗಳಿಂದ ಸುಶೋಭಿತ ದಶದಲದಲ್ಲಿ ಜಪಾಕುಸುಮದ ಸಮಾನ ಕಾಂತಿಯುಕ್ತ, ಹೊಳೆಯುತ್ತಿರುವ ಆಭೂಷಣಗಳಿಂದ ಅಲಂಕೃತಳಾದ ಮತ್ತು ಕೈಗಳಲ್ಲಿ ಪಾಶ ಮತ್ತು ಅಂಕುಶಗಳನ್ನು ಧರಿಸಿರುವ ದಶಕುಲ ಯೋಗಿನಿಯರನ್ನು, ಪಶ್ಚಿಮದಿಂದ ವಿಲೋಮ ಕ್ರಮದಿಂದ ಆರಂಭಿಸಿ ಪೂಜೆ ಮಾಡಬೇಕು. 1. ಸರ್ವಸಿದ್ಧಿಪ್ರದಾ 2. ಸರ್ವಸಂಪತ್ಪ್ರದಾ 3. ಸರ್ವ ಪ್ರಿಯಂಕರಿ 4. ಸರ್ವಮಂಗಲಕಾರಿಣೀ 5. ಸರ್ವಕಾಮಪ್ರದಾ 6. ಸರ್ವದುಃಖವಿಮೋಚನಿ 7. ಸರ್ವಮೃತ್ಯುಪಶಮನಿ. 8. ಸರ್ವವಿಘ್ನನಿವಾರಿಣೀ 9. ಸರ್ವಾಂಗಸುಂದರಿ ಮತ್ತು 10. ಸರ್ವಸೌಭಾಗ್ಯದಾಯಿನಿ ಈ ರೀತಿ ಹತ್ತು ಕುಲಯೋಗಿನಿಯರು ಇರುತ್ತಾರೆ. ಬಿಂದುವಿನಮೇಲೆ ಪುಷ್ಪಗಳನ್ನು ಸಮರ್ಪಿಸಿ ಉನ್ಮಾದ ಮುದ್ರಾ ಪ್ರದರ್ಶನ ಮಾಡಬೇಕು ಮತ್ತು "ಸರ್ವಾರ್ಥಸಾಧಕೆ ಚಕ್ರೆ ಇಮಾ ದಶ ಕುಲಯೋಗಿನ್ಯಃ ಪೂಜಿತಾಃ ಮೇಭಿಷ್ಟಸಿದ್ಧಿದಾಃ ಚ ಸಂತು"ದಿಂದ ಪ್ರಾರ್ಥನೆ ಮಾಡಬೇಕು.

**ಪೂಜಾ ವಿಧಾನ :**

12.107 ನೆಯ ಶ್ಲೋಕದನುಸಾರವಾಗಿ ಯೋಗಿನಿ ಸ್ವರೂಪವನ್ನು ಧ್ಯಾನಿಸಿ, ಪಶ್ಚಿಮ ದಿಕ್ಕಿನಿಂದ ವಿಲೋಮ ಕ್ರಮದಿಂದ ಹ್ರೀಂ ಶ್ರೀಂ ಣಂ ಸರ್ವಸಿದ್ಧಿಪ್ರದಾದೇವಿ ಶ್ರೀಪಾದುಕಾಂ ಪೂಜಯಾಮಿ ನಮಃದಿಂದ ಯೋಗಿನಿಯರನ್ನು ಪೂಜೆ ಮಾಡಬೇಕು. ಇದೇ ಪ್ರಕಾರ ಪ್ರಥಮವಾಗಿ ಮಾಯಾ, ನಂತರ ಲಕ್ಷ್ಮಿ ಬೀಜ, ಆಮೇಲೆ ಭಕಾರದವರೆಗೆ ಮಾತೃಕಾವರ್ಣದ ಒಂದೊಂದು ಅಕ್ಷರ, ನಂತರ ಹೆಸರು, ಅದರ ಮುಂದೆ 'ದೇವಿ' 'ಶ್ರೀಪಾದುಕಾಂ ಪೂಜಯಾಮಿ ನಮಃ' ಹೇಳುತ್ತ ದಶದಳಗಳಲ್ಲಿ ದಶದೇವಿಯರನ್ನು ಪೂಜೆ ಮಾಡಬೇಕು. ಈ ಪ್ರಕಾರ





ಕುಲಯೋಗಿನಿಯರನ್ನು ಪೂಜಿಸಿ, "ಸರ್ವಾರ್ಥಸಾಧಕೆ ಚಕ್ರೆ ಇಮಾ ದಶಕುಲಯೋಗಿನ್ಯಃ ಪೂಜಿತಾ ಸಂತು' ಮಂತ್ರವನ್ನು ಪಠಿಸುತ್ತ ಪುಷ್ಪಾಂಜಲಿಯನ್ನು ಅರ್ಪಿಸಬೇಕು ಮತ್ತು ಉನ್ಮಾದ ಮುದ್ರಾ ಪ್ರದರ್ಶಿಸಬೇಕು. ಈ ಪ್ರಕಾರ ಪಂಚಮಾವರಣ ಪೂಜೆಯನ್ನು ಸಮಾಪ್ತಗೊಳಿಸಬೇಕು.

ಪರೆ ದಶಾರೆ ಯೋಗಿನ್ಯ ಉದ್ಯದ್ ಭಾಸ್ಕರಸನ್ನಿಭಾಃ ।
ಜ್ಞಾನಮುದ್ರಾಟಂಕಪಾಶವರಧಾರಿ ಕರಾಂಬುಜಾ ॥ 113 ॥
ಸರ್ವಜ್ಞಾ ಸರ್ವಶಕ್ತಿಶ್ಚ ಸರ್ವೈಶ್ವರ್ಯಫಲಪ್ರದಾ ।
ಸರ್ವಜ್ಞಾನಮಯಿ ಪಶ್ಚಾತ್ ಸರ್ವವ್ಯಾಧಿವಿನಾಶಿನಿ ॥ 114 ॥
ಸರ್ವಧಾರಾಸ್ವರೂಪಾ ಚ ಸರ್ವ ಪಾಪಹರಾಪರಾ ।
ಸರ್ವಾನಂದ ಮಯಿ ದೇವಿ ಸರ್ವರಕ್ಷಾಸ್ವರೂಪಿಣೀ ॥ 115 ॥
ಸರ್ವೇಪ್ಸಿತಾರ್ಥಫಲದಾ ಪಶ್ಚಿಮಾದಿವಿಲೋಮಗಾಃ ।
ಪುಷ್ಪಂ ಮೂಲೇನ ದತ್ವಾಥೊ ಕುರ್ಯಾನ್ಮುದ್ರಾಂ ಮಹಾಂಕುಶಾಮ್ ॥
ಸರ್ವರಕ್ಷಾಕರೆ ಚಕ್ರೆ ನಿಗರ್ಭಾಃ ಪೂಜಿತಾ ಇಮಾಃ !
ಯೋಗಿನ್ಯಸ್ತರ್ಪಿತಾಃ ಸಂತು ಮಮಾಭಿಷ್ಟೋಲಪ್ರದಾ : ॥ 117 ॥

**ಷಷ್ಠಾವರಣ ಪೂಜಾ**

ಮಕಾರದಿಂದ ಕ್ಷಕಾರದವರೆಗೆ 10 ವರ್ಣಗಳಿಂದ ಸುಶೋಭಿತ ದ್ವಿತಿಯ ದಶದಳದಲ್ಲಿ ಉದಯಿಸುತ್ತಿರುವ ಸೂರ್ಯನಂತೆ ಕಂಗೊಳಿಸುತ್ತಿರುವ, ಕೈಗಳಲ್ಲಿ ಜ್ಞಾನಮುದ್ರೆ, ನಾಣ್ಯಗಳು, ಪಾಶ, ವರಮುದ್ರಾ ಧಾರಣ ಮಾಡಿರುವ ಸರ್ವಜ್ಞಾ ಮುಂತಾದ ದಶಯೋಗಿನಿಯರನ್ನು ಪಶ್ಚಿಮ ದಿಕ್ಕಿನಿಂದ ಪ್ರಾರಂಭಿಸಿ ವಿಲೋಮ ಕ್ರಮದ್ವಾರಾ ಪೂಜೆ ಮಾಡಬೇಕು.

1. ಸರ್ವಜ್ಞಾ 2. ಸರ್ವಶಕ್ತಿ 3. ಸರ್ವೈಶ್ವರ್ಯಫಲಪ್ರದಾ 4.ಸರ್ವಜ್ಞಾನಮಯಿ 5. ಸರ್ವವ್ಯಾಧಿವಿನಾಶಿನಿ 6. ಸರ್ವಾಧಾರ ಸ್ವರೂಪಾ 7. ಸರ್ವಪಾಪಹರಾ 8. ಸರ್ವಾನಂದ ಮಯಿ 9. ಸರ್ವ ರಕ್ಷಾಸ್ವರೂಪಿಣೀ 10. ಸರ್ವೇಪ್ಸಿತಾರ್ಥ ಫಲದಾ ಇವು ಹತ್ತು ಯೋಗಿನಿಯರಾಗಿರುತ್ತಾರೆ. ಇವರನ್ನು ಪೂಜೆ ಮಾಡಿ ಮೂಲಮಂತ್ರದಿಂದ ಪುಷ್ಪಾಂಜಲಿ ಸಮರ್ಪಿಸಿ ಮಹಾಂಕುಶಾ ಮುದ್ರಾ ಪ್ರದರ್ಶಿಸಬೇಕು. ಮತ್ತು "ಸರ್ವರತ್ನಾಕರೆ ಚಕ್ರೆ ಇಮಾ ದಶ ನಿಗರ್ಭಾ ಯೋಗಿನ್ಯಃ ಪೂಜಿತಾಃ ಸಂತು ತರ್ಪಿತಾಃ ಸಂತು ಮಮಾಭಿಷ್ಟ ಫಲಪದಾ ಸಂತು ಈ

ವಿತಾ ಅಷ್ಟೌ ಗುಪ್ತತರಾ ಯೋಗಿನ್ಯಃ ಪೂಜಿತಾಃ ಸಂತು" ಎಂದು ಹೇಳುತ್ತ ಆಕರ್ಷಣೀ ಮುದ್ರಾ ಪ್ರದರ್ಶಿಸಬೇಕು.

ವಿಧಾನ : ಅಷ್ಟದಳದಲ್ಲಿ ಪೂರ್ವಾದಿ ದಿಶಾದಲ್ಲಿ ಅನುಲೋಮ ಕ್ರಮದಿಂದ ಅನಂಗಕುಸುಮಾದಿ ಅಷ್ಟ ಮಹಾಯೋಗಿನಿಯರ ಧ್ಯಾನ ಮಾಡಬೇಕು.

ಸರ್ವ ಸಂಕ್ಷೋಭಣೆ ಚಕ್ರೆ ಬಂಧೂಕ ಕುಸುಮಪ್ರಭಾಃ ।
ಅನಂಗಕುಸುಮಾದ್ಯಷ್ಟೌ ಪಾಶಾಂಕುಶಲಸತ್ಕರಾ ಃ ।

ಈ ಪ್ರಕಾರ ಧ್ಯಾನ ಮಾಡಿ ಹ್ರೀಂ ಶ್ರೀಂ ಅನಂಗಕುಸುಮಾ ಶ್ರೀಪಾದುಕಾಂ ಪೂಜಯಾಮಿ' ಇತ್ಯಾದಿ ಮಂತ್ರಗಳಿಂದ ಯೋಗಿನಿ ಶಕ್ತಿಗಳನ್ನು ಪೂಜೆ ಮಾಡಬೇಕು. ನಂತರ ಸರ್ವಕ್ಷೋಭಣಿ ಚಕ್ರೆ ವಿತಾ ಅಷ್ಟೌ ಗುಪ್ತತರಾ ಯೋಗಿನ್ಯಃ ಪೂಜಿತಾಃ ಸಂತು" ಎಂದು ಪ್ರಾರ್ಥನೆ ಮಾಡಿ ಪುಷ್ಪಾಂಜಲಿ ಸಮರ್ಪಿಸಬೇಕು. ನಂತರ ಆಕರ್ಷಿಣಿ ಮುದ್ರಾ ಪ್ರದರ್ಶಿಸಬೇಕು.

ಚತುರ್ದಶಾರೆ ಸಂಪೂಜ್ಯಾಃ ಕಾದಿಥಾಂತಾರ್ಣರಾಜಿತೆ ॥ 99 ॥
ಇಂದ್ರಗೋಪನಿಭಾ ರಮ್ಯಾಃ ಮದೋನ್ಮತ್ತಾಃ ಸಭೂಷಣಾಃ ।
ಬಿಭ್ರತ್ಯೋ ದರ್ಪಣಂ ಪಾನಪಾತ್ರಂ ಪಾಶಾಂಕುಶಾವಪಿ ॥ 100 ॥
ಪಶ್ಚಿಮಾದಿ ವಿಲೋಮೇನ ಚತುರ್ಥಾವರಣಸ್ಥಿತಾಃ ।
ಸರ್ವಸಂಕ್ಷೋಭಿಣಿಪೂರ್ವಾ ಸರ್ವವಿದ್ರಾವಿಣೆ ಪರಾ ॥ 101 ॥
ಸರ್ವಾಕರ್ಷಣಿಕಾ ಚಾನ್ಯಾ ಸರ್ವಾಹ್ಲಾದಕರಿ ಪುನಃ ।
ಸರ್ವಸಮ್ಮೋಹಿನಿ ಚಾಪಿ ಸರ್ವಸ್ತಂಭನಕಾರಿಣಿ ॥ 102 ॥
ಸರ್ವಜೃಂಭಣಿಕಾ ನಾಮಾಷ್ಟಮಿ ಸರ್ವವಶಂಕರಿ ।
ಸರ್ವರಂಜಿನಿಕಾ ಚಾಡಿ ಸರ್ವೋನ್ಮಾದಿನಿ ಕಾ ತಥಾ ॥ 103 ॥
ಸರ್ವಾರ್ಥಸಾಧಿನಿ ಚಾಥಸರ್ವಸಂಪತ್ತಿಪೂರಣಿ ।
ಸರ್ವಮಂತ್ರಮಯಿ ಚಾಂತ್ಯಾ ಸರ್ವದ್ವಂದ್ವಕ್ಷಯಂಕರಿ ॥ 104 ॥
ಮೂಲೇನ ಪುಷ್ಪಂ ದತ್ವಾಥ ವಶ್ಯಮುದ್ರಾಂ ಪ್ರದರ್ಶಯೇತ್ ।
ಸರ್ವಸೌಭಾಗ್ಯದೆ ಚಕ್ರೆ ಸಂಪ್ರದಾಯನಿಭಾ ಇಮಾಃ ॥ 105 ॥
ಯೋಗಿನ್ಯಃ ಪೂಜಿತಾಸ್ತೃಪ್ತಾ ಮಂಗಲಾನಿ ದಿಶಾಂತು ಮೆ ।
ಸಂಪ್ರಾರ್ಥ್ಯೇತಿ ದಶಾರೇಥ ಣಾದಿಭಾಂತಾರ್ಣ ಭೂಪಿತ ॥ 106 ॥

ಕಕಾರದಿಂದ ಥಕಾರದವರೆಗೆ ವರ್ಣಗಳಿಂದ ಸುಶೋಭಿತ ಚತುರ್ದಶ





ದಳಗಳಲ್ಲಿ ಪಶ್ಚಿಮ ದಶಾದಿಂದ ಪ್ರಾರಂಭಿಸಿ ವಿಲೋಮ ಕ್ರಮದಿಂದ ಇಂದ್ರಗೋಪ (ಕೆಂಪು ವರ್ಣದ ಬಳ್ಳಿಯ ಹೂವು) ಸಮಾನವಾದ ಕಾಂತಿಯುಕ್ತ, ಮದೋನ್ಮತ್ತ, ಆಭೂಷಣಗಳಿಂದ ಅಲಂಕೃತರಾಗಿ, ಕೈಗಳಲ್ಲಿ ಕ್ರಮವಾಗಿ ದರ್ಪಣ, ಪಾನಪಾತ್ರೆ, ಪಾಶ, ಮತ್ತು ಅಂಕುಶಗಳನ್ನು ಧರಿಸಿರುವ ಹದಿನಾಲ್ಕು ಶಕ್ತಿಗಳನ್ನು ಪೂಜೆ ಮಾಡಬೇಕು. 1. ಸರ್ವಸಂಕ್ಷೋಭಿಣಿ 2. ಸರ್ವವಿದ್ರಾವಿಣಿ 3. ಸರ್ವಾಕರ್ಷಣಿಕಾ 4. ಸರ್ವಾಹ್ಲಾದಕರಿ 5. ಸರ್ವ ಸಮ್ಮೋಹಿನಿ 6. ಸರ್ವಸ್ತಂಭನಕಾರಿಣಿ 7. ಸರ್ವಜಂಭಣಿಕಾ 8. ಸರ್ವವಶಂಕರಿ 9. ಸರ್ವರಂಜನಿಕಾ 10. ಸರ್ವೋನ್ಮಾದಿನಿಕಾ 11. ಸರ್ವಾರ್ಥಸಾಧಿನಿ 12. ಸರ್ವಸಂಪತ್ಪೂರಿಣಿ 13. ಸರ್ವಮಂತ್ರಮಯಿ ಮತ್ತು 14. ಸರ್ವದ್ವಂದ್ವಕ್ಷಯಂಕರಿ ಈ ಹದಿನಾಲ್ಕು ಶಕ್ತಿಗಳಿವೆ. ನಮಂತರ ಮೂಲಮಂತ್ರದಿಂದ ಪುಷ್ಪಾಂಜಲಿ ಕೊಟ್ಟು ವಶ್ಯಮುದ್ರಾ ಪ್ರದರ್ಶಿಸಬೇಕು. ಮತ್ತು ಸರ್ವಸೌಭಾಗ್ಯಪ್ರದೆ ಚಕ್ರೆ ಇಮಾಶ್ಚತುರ್ದಶಸಂಪ್ರದಾಯ ಯೋಗಿನ್ಯಃ ಪೂಜಿತಾಃ ಸಂತು ತೃಪ್ತಾಃ ಸಂತು ಮೆ ಮಂಗಲಾನಿ ದಿಶಂತು" ಎಂದು ಪ್ರಾರ್ಥನೆ ಮಾಡಬೇಕು.

ವಿಧಾನ : ಇಂದ್ರಗೋಪನಿಭಾ ರಮ್ಯಾಃ ಮದೋನ್ಮತ್ತಾಃ ಸಭೂಷಣಾ ಬಿಭ್ರತ್ಯೋ ದರ್ಪಣಂ ಪಾನಪಾತ್ರಂ ಪಾಶಾಂಕುಶಾವಪಿ ॥

ಈ ಪ್ರಕಾರ ಧ್ಯಾನ ಮಾಡಿ ಚತುರ್ಥಾವರಣದಲ್ಲಿ ಚತುರ್ದಶದಲದಲ್ಲಿ ಪಶ್ಚಿಮ ದಿಶಾದಲ್ಲಿ ವಿಲೋಮ ಕ್ರಮದಿಂದ ಸರ್ವಸಂಕ್ಷೋಭಿಣಿ ಮುಂತಾದ ಮಹಾಶಕ್ತಿಗಳನ್ನು ಪೂಜೆ ಮಾಡಬೇಕು.

"ಹ್ರೀಂ ಶ್ರೀಂ ಕಂ ಸರ್ವಸಂಕ್ಷೋಭಿಣಿಶಕ್ತಿ ಶ್ರೀ ಪಾದುಕಾಂ ಪೂಜಯಾಮಿ" ಈ ಪ್ರಕಾರ ಪ್ರಾರಂಭದಲ್ಲಿ ಮಾಯಾ ಪದ ಬೀಜಾಕ್ಷರದ ಮುಂದೆ ಒಂದೊಂದು ವರ್ಣ, ನಂತರ ಮಹಾಶಕ್ತಿಯ ಹೆಸರು ಮತ್ತು ಅಂತ್ಯದಲ್ಲಿ 'ಶಕ್ತಿ ಶ್ರೀಪಾದುಕಾಂ ಪೂಜಯಾಮಿ' ಎಂದು ಹೇಳುತ್ತ ಚತುರ್ದಶ ಶಕ್ತಿಗಳನ್ನು ಪೂಜೆ ಮಾಡಬೇಕು. ನಂತರ ಸರ್ವಸೌಭಾಗ್ಯ ಪ್ರದೆ ಚಕ್ರೆ ಇಮಾಶ್ಚತುದಶಸಂಪ್ರದಾಯ ಯೋಗಿನ್ಯಃ ಪೂಜಿತಾ ಸಂತು' ಎಂದು ಪ್ರಾರ್ಥನೆ ಮಾಡಿ ಪುಷ್ಪಾಂಜಲಿ ಸಮರ್ಪಿಸಬೇಕು. ನಂತರ ವಶ್ಯಮುದ್ರಾ ಪ್ರದರ್ಶಿಸಿ ಚತುರ್ಥಾವರಣ ಪೂಜೆಯನ್ನು ಸಮಾಪ್ತಿಗೊಳಿಸಬೇಕು.

ಸಂಪೂಜ್ಯಾ ದಶಯೋಗಿನ್ಯೋ ಜಪಾಪುಷ್ಪಸಮಪ್ರಭಾಃ ।
ಸ್ಫುರನ್ಮಣಿವಿಭೂಷಾಢ್ಯಾ ಪಾಶಾಂಕುಶಲಸತ್ಕರಾಃ ॥ 107 ॥
ಪಶ್ಚಿಮಾದಿವಿಲೋಮೇನ ಸಾಧಕಾಭಿಷ್ಟಸಿದ್ಧಿದಾಃ ।
ಸರ್ವ ಸಿದ್ಧಿಪ್ರದಾ ಪೂರ್ವಾ ಸರ್ವಸಂಪತ್ಪ್ರದಾ ತತಃ ॥ 108 ॥
ಸರ್ವಪ್ರಿಯಂಕರಿ ಚಾನ್ಯಾ ಸರ್ವಮಂಗಲಕಾರಿಣಿ ।

ಹ್ರೀಂ ಶ್ರೀಂ ಆಕರ್ಷಣ ಮುದ್ರಾ ಶ್ರೀ ಪಾದುಕಾಂ ಪೂಜಯಾಮಿ
ಹ್ರೀಂ ಶ್ರೀಂ ವಶ್ಯಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।
ಹ್ರೀಂ ಶ್ರೀಂ ಉನ್ಮಾದಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।
ಹ್ರೀಂ ಶ್ರೀಂ ಮಹಾಂಕುಶಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।
ಹ್ರೀಂ ಶ್ರೀಂ ಖೇಚರಿಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।
ಹ್ರೀಂ ಶ್ರೀಂ ಬೀಜಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।
ಹ್ರೀಂ ಶ್ರೀಂ ಯೋನಿಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।
ಹ್ರೀಂ ಶ್ರೀಂ ತ್ರಿಖಂಡಾಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।

ಈ ಪ್ರಕಾರ ಪ್ರಥಮಾವರಣ ಪೂಜೆ ಮಾಡಿ ಕ್ಷೋಭಮುದ್ರಾ ಪ್ರದರ್ಶಿಸುತ್ತ "ತ್ರೈಲೋಕ್ಯ ಮೋಹನ ಚಕ್ರೆ" (12.88) ಶ್ಲೋಕವನ್ನು ಪಠಿಸುತ್ತ ಪ್ರಾರ್ಥನೆ ಮಾಡಬೇಕು. ನಂತರ ಮೂಲಮಂತ್ರದಿಂದ ಬಿಂದುವಿನ ಮೇಲೆ ಪುಷ್ಪಾಂಜಲಿ ಅರ್ಪಿಸಬೇಕು.

ಕಾಮಾಕರ್ಷಣಿಕಾ ತ್ವಾಧ್ಯಾ ಬುದ್ಧ್ಯಾಕರ್ಷಣಿಕಾ ತತಃ ।
ಅಹಂಕಾರಾಕರ್ಷಿಣೆ ಚ ಶಬ್ದಾ ಕರ್ಷಣಿಕಾ ಪುನಃ ॥ 90 ॥

ಸ್ಪರ್ಶಾಕರ್ಷಣಿಕಾ ತದ್ವದ್ ರೂಪಾಕರ್ಷಣಿಕಾಪಿ ಚ ।
ರಸಾಕರ್ಷಣಿಕಾ ಚಾನ್ಯಾ ಗಂಧಾಕರ್ಷಣಿಕಾ ತಥಾ ॥ 91 ॥

ಚಿತ್ತಾಕರ್ಷಣಿಕಾ ಚಾಪಿ ಧೈರ್ಯಾಕರ್ಷಣಿಕಾ ಪರಾ ।
ನಾಮಾಕರ್ಷಣಿಕಾ ಚಾಪಿ ಬೀಜಾಕರ್ಷಣಿಕಾ ತಥಾ ॥ 92 ॥

ಅಮೃತಾಕರ್ಷಣಿ ಚಾನ್ಯಾ ಸ್ಮೃತ್ಯಾಕರ್ಷಣಿಕಾ ತಥಾ ।
ಶರೀರಾಕರ್ಷಣಿ ಚೈವಮಾತ್ಮಾಕರ್ಷಣಿಕಾ ಪರಾ ॥ 93 ॥

ಸರ್ವಾಶಾಪೂರಕೆ ಚಕ್ರೆ ಷೋಡಶಸ್ವರಸಂಯುತೆ ।
ಗುಪ್ತಾ ಏತಾಸ್ತು ಯೋಗಿನ್ಯಃ ಪೂಜಿತಾಃ ಸಂತ್ವಿದಂ ವದೇತ್ ॥ 94 ॥
ದರ್ಶಯೇದ್ ದ್ರಾವಿಣಿಂ ಮುದ್ರಾಂ ದ್ವಿತಿಯಾವರಣಾರ್ಚನೆ ।

## ದ್ವಿತಿಯಾವರಣ ಪೂಜಾ

ಷೋಡಶದಲದಲ್ಲಿ ಪಶ್ಚಿಮದಿಂದ ವಿಲೋಮ ಕ್ರಮದಿಂದ 16 ಶಕ್ತಿಗಳನ್ನು ಪೂಜಿಸಬೇಕು.





1. ಕಾಮಾಕರ್ಷಣಿಕಾ 2.ಬುದ್ಧ್ಯಾಕರ್ಷಣಿಕಾ 3. ಅಹಂಕಾರಾಕರ್ಷಿಣೆ 4. ಶಬ್ದಾಕರ್ಷಣಿಕಾ 5.ಸ್ಪರ್ಶಾಕರ್ಷಣಿಕಾ 6. ರೂಪಾಕರ್ಷಣಿಕಾ 7. ರಸಾಕರ್ಷಣಿಕಾ 8.ಗಂಧಾಕರ್ಷಣಿಕಾ 9. ಚಿತ್ತಾಕರ್ಷಣಿಕಾ 10. ಧೈರ್ಯಾಕರ್ಷಣಿಕಾ 11. ನಾಮಾಕರ್ಷಣಿಕಾ 12. ಬೀಜಾಕರ್ಷಣಿಕಾ 13. ಅಮೃತಾಕರ್ಷಣಿಕಾ 14. ಸ್ಮೃತ್ಯಾಕರ್ಷಣಿಕಾ 15. ಶರೀರಾಕರ್ಷಣಿಕಾ 16. ಆತ್ಮಾಕರ್ಷಣಿಕಾ ಇವು ಹದಿನಾರು ಶಕ್ತಿಗಳಿವೆ.

ಇದರ ನಂತರ, "ಸರ್ವಾಶಾಪೂರಕೆ ಷೋಡಶಸ್ವರ ಸಂಯುತೆ ಚಕ್ರೆ ಏತಾಃ ಷೋಡಶ ಗುಪ್ತಯೋಗಿನ್ಯಃ ಪೂಜಿತಾಸ್ತರ್ಪಿತಾಃ ಸಂತು" ಈ ಪ್ರಕಾರ ಪ್ರಾರ್ಥನೆ ಮಾಡಬೇಕು. ಈ ಪ್ರಕಾರ ದ್ವಿತಿಯ ಆವರಣ ಪೂಜೆ ಮಾಡಿ ಪುಷ್ಪಾಂಜಲಿ ಅರ್ಪಿಸಿ ದ್ರಾವಿಣಿ ಮುದ್ರೆ ಪ್ರದರ್ಶಿಸಬೇಕು.

ಹ್ರೀಂ ಶ್ರೀಂ ಕಾಮಾಕರ್ಷಿಣಿಶಕ್ತಿ ಶ್ರೀ ಪಾದುಕಾಂ ಪೂಜಯಾಮಿ ಪಶ್ಚಿಮೆ ಈ ಪ್ರಕಾರ ಹದಿನಾರು ಶಕ್ತಿಗಳನ್ನು ಪೂಜಿಸಬೇಕು.

## ತೃತಿಯಾವರಣ ಪೂಜಾ

ಕಾದ್ಯಷ್ಟವರ್ಗಸಂಯುಕ್ತೆಷ್ವಾರೆ ಪೂಜ್ಯಾ ಇಮಾಃ ಪುನಃ ॥ 95 ॥
ಪೂರ್ವಾದಿಷ್ವನುಲೋಮೇನ ಬಂಧೂಕಕುಸುಮಪ್ರಭಾಃ ।
ಅನಂಗ ಕುಸುಮಾತ್ವಾಧ್ಯಾ ದ್ವಿತಿಯಾನಂಗಮೇಖಲಾ ॥ 96 ॥

ಅನಂಗಮದನಾತ್ವದ್ವದ್ ಅನಂಗಮದನಾತುರಾ ।
ಅನಂಗರೇಖಾಚಾನಂಗವೇಗಾನಂಗಾಂಕುಶಾ ಪುನಃ ॥ 97 ॥

ಅನಂಗಮಾಲಿನಿತ್ಯಷ್ಟೌ ಪಾಶಾಂಕುಶಲಸತ್ಕರಾಃ ।
ಸರ್ವಸಂಕ್ಷೋಭಿಣೆ ಚಕ್ರೆ ದೇವ್ಯೋ ಗುಪ್ತತರೀಭಿದಾಃ ॥ 98 ॥
ಪೂಜಿತಾಃ ಸತ್ವಿಂತಿ ಪ್ರೋಜ್ಯಾಕರ್ಷಮುದ್ರಾಂ ಪ್ರದರ್ಶಯೇತ್ ।

ಕವರ್ಗಾದಿ ಅಷ್ಟ ವರ್ಗಗಳಿಂದ ಯುಕ್ತ ಅಷ್ಟದಲದಲ್ಲಿ ಪೂರ್ವಾದಿ ದಿಶೆಗಳಲ್ಲಿ ಅನುಲೋಮ ಕ್ರಮದಿಂದ ಬಂಧೂಕ ಪುಷ್ಪಗಳ ಸಮಾನ ಕಾಂತಿಯುಕ್ತ, ಕೈಗಳಲಿ ಪಾಶ, ಅಂಕುಶಗಳನ್ನು ಧರಿಸಿರುವ ಕುಸುಮಾ ಆದಿ ಶಕ್ತಿಗಳನ್ನು ಪೂಜಿಸಬೇಕು.

1. ಅನಂಗ ಕುಸುಮಾ 2. ಅನಂಗ ಮೇಖಲಾ 3. ಅನಂಗಮದನಾ 4. ಅನಂಗಮದನಾತುರಾ 5. ಅನಂಗರೇಖಾ 6. ಅನಂಗವೇಗಾ 7. ಅನಂಗಕುಶಾ 8. ಅನಂಗಮಾಲಿನಿ ಇವು ಅಷ್ಟಶಕ್ತಿಗಳಾಗಿರುತ್ತವೆ. ನಂತರ "ಸರ್ವಸಂಕ್ಷೋಬಿಣೆ ಚಕ್ರೆ

ತ್ರೈಲೋಕ್ಯಮೋಹನೇ ಚಕ್ರೇ ಯೋಗಿನ್ಯಃ ಪ್ರಕಟಾ ಇಮಾಃ ।
ಪೂಜಿತಾಸ್ತರ್ಪಿತಾಃ ಸಂತು ಸ್ತೇಷ್ಟದಾ ಇತಿ ಪ್ರಾರ್ಥಯೇತ್ ॥ 88 ॥

ಬಿಂದೌ ಪುಷ್ಪಾಂಜಲಿಂ ದತ್ವಾ ಮೂಲೇನಾನ್ಯಾವೃತ್ತಿಂ ಯಜೇತ್ ।
ಷೋಡಶಾರೇ ಪಶ್ಚಿಮಾದಿ ವಿಲೋಮೇನ ಕ್ರಮಾದಿಮಾ ॥ 89 ॥

ಭೂಪುರದ ಮಧ್ಯ ರೇಖೆಗಳಲ್ಲಿ ಮತ್ತು ಪಶ್ಚಿಮಾದಿ ಎಂಟು ದಿಕ್ಕುಗಳಲ್ಲಿ ಬ್ರಾಹ್ಮಿ, ಮಾಹೇಶ್ವರಿ, ಕಾಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ ಮತ್ತು ಮಹಾಲಕ್ಷ್ಮಿಯರನ್ನು ಪೂಜಿಸಬೇಕು.

ಸಂಪೂರ್ಣ ಆಭೂಷಣಗಳಿಂದ ಕಂಗೊಳಿಸುತ್ತಿರುವ ಕರಗಳಲ್ಲಿ ಕ್ರಮವಾಗಿ ಪುಸ್ತಕ, ಶೂಲ,ಶಕ್ತಿ, ಚಕ್ರ, ಗದಾ, ವಜ್ರ, ದಂಡ ಮತ್ತು ಕಮಲಗಳನ್ನು ಹಿಡಿದು, ಸಾಧಕರ ಸಕಲ ಮನೋರಥಗಳನ್ನು ಈಡೇರಿಸುವ ಈ ಮಹಾಶಕ್ತಿಗಳನ್ನು ಧ್ಯಾನ ಮಾಡಬೇಕು.

ಇದರ ನಂತರ ಭೂಪುರ ಮೂರನೆಯ ರೇಖೆಯಲ್ಲಿ ಹತ್ತು ಮುದ್ರಾಗಳನ್ನು ಪೂಜೆ ಮಾಡಬೇಕು. 1. ಕ್ಷೋಭಣ 2. ದ್ರಾವಣ 3. ಆಕರ್ಷಣ 4. ವಶ್ಯ 5. ಉನ್ಮಾದ 6. ಮಹಾಂಕುಶಾ 7. ಖೇಚರಿ 8. ಬೀಜ 9. ಯೋನಿ 10. ತ್ರಿಖಂಡಾ ಈ ಹತ್ತು ಮುದ್ರೆಗಳೆಂದು ಹೇಳಲಾಗಿದೆ.

ತ್ರೈಲೋಕ್ಯ ಮೋಹನ ಚಕ್ರದಲ್ಲಿ ಪ್ರಕಟವಾಗಿರುವ ಈ ಯೋಗಿನಿಯರು ಪೂಜೆ ಮತ್ತು ತರ್ಪಣದಿಂದ ಸಂತುಷ್ಟರಾಗಿ ಅಭೀಷ್ಟ ಫಲಗಳನ್ನು ಕೊಡಲಿ ಎಂದು ಪ್ರಾರ್ಥಿಸಬೇಕು. ನಂತರ ಮೂಲಮಂತ್ರದಿಂದ ಬಿಂದುವಿನ ಮೇಲೆ ಪುಷ್ಪಾಂಜಲಿ ಅರ್ಪಿಸಬೇಕು.

**ಪ್ರಥಮಾವರಣ ಪೂಜಾ**

ಯಂತ್ರದ ಆಗ್ನೇಯಾದಿ ಕೋನಗಳಲ್ಲಿ ಯಥಾಕ್ರಮದಿಂದ ಷಡಂಗಪೂಜಾ ಮಾಡಬೇಕು.

ಶ್ರೀ ಹ್ರೀಂ ಕ್ಲೀಂ ಐಂ ಸೌಃ ಹೃದಯಾಯ ನಮಃ ಆಗ್ನೆಯೆ ।
ಓಂ ಹ್ರೀಂ ಶ್ರೀಂ ಶಿರಸೆ ಸ್ವಾಹಾ ಈಶಾನ್ಯೆ ।
ಕಏಈಲಹ್ರೀಂ ಶಿಖಾಯೈ ವಷಟ್ ನೈಋತ್ಯೆ ।
ಹಸಕಹಲಹ್ರೀಂ ಕವಚಾಯ ಹುಮ್ ವಾಯುವ್ಯೆ ।
ಸಕಲಹ್ರೀಂ ನೇತ್ರತ್ರಯಾಯ ವೌಷಟ್ ಅಗ್ರೆ ।
ಸೌಃ ಐಂ ಕ್ಲೀಂ ಹ್ರೀಂ ಶ್ರೀಂ ಅಸ್ತ್ರಾಯ ಫಟ್ ಚತುರ್ದಿಕ್ಷು ನಂತರ,
ತರ್ಪಹೇಮಸಮಾನಾಭಾಃ ಪಾಶಾಂಕುಶಧರಾಃ ಶುಭಾಃ ।





ಸಾಧಕೇಭ್ಯಃ ಪ್ರಯಚ್ಛಂತಿ ರತ್ನೌಘಂ ತಾಂ ವಿಚಿಂತಯೇತ್ ॥

ಈ ಶ್ಲೋಕದ ಅನುಸಾರ ಧ್ಯಾನ ಮಾಡಬೇಕು.

ಭೂಪುರದ ಪ್ರಥಮ ರೇಖೆಯಲ್ಲಿ ಪೂರ್ವಾದಿ ದಿಶೆಗಳಲ್ಲಿ ಅಣಿಮಾದಿ ದಶಸಿದ್ಧಿಗಳನ್ನು ಈಪ್ರಕಾರ ಪೂಜೆ ಮಾಡಬೇಕು. ।

ಹ್ರೀಂ ಶ್ರೀಂ ಅಣಿಮಾದಿಸಿದ್ಧಿ ಶ್ರೀ ಪಾದುಕಾಂ ಪೂಜಯಾಮಿ ಪೂರ್ವೆ ।
ಹ್ರೀಂ ಶ್ರೀಂ ಮಹಿಮಾಸಿದ್ಧಿ ಶ್ರೀ ಪಾದುಕಾಂ ಪೂಜಯಾಮಿ ನಮಃ ಆಗ್ನೆಯೆ।
ಹ್ರೀಂ ಶ್ರೀಂ ಲಘಿಮಾಸಿದ್ಧಿ ಶ್ರೀಪಾದುಕಾಂ ಪೂಜಯಾಮಿ ನಮಃ ದಕ್ಷಿಣೆ ।
ಹ್ರೀಂ ಶ್ರೀಂ ಈಶಿತಾಸಿದ್ಧಿ ಶ್ರೀಪಾದುಕಾಂ ಪೂಜಯಾಮಿ ನಮಃ ನೈಋತ್ಯೆ ।
ಹ್ರೀಂ ಶ್ರೀಂ ವಶಿತಾಸಿದ್ಧಿ ಶ್ರೀ ಪಾದುಕಾಂ ಪೂಜಯಾಮಿ ನಮಃ ಪಶ್ಚಿಮೆ ।
ಹ್ರೀಂ ಶ್ರೀಂ ಪ್ರಕಾಮ್ಯಾಸಿದ್ಧಿ ಶ್ರೀ ಪಾದುಕಾಂ ಪೂಜಯಾಮಿ ನಮಃ ವಾಯುವ್ಯೆ
ಹ್ರೀಂ ಶ್ರೀಂ ಭುಕ್ತಿಸಿದ್ಧಿ ಶ್ರೀಪಾದುಕಾಂ ಪೂಜಯಾಮಿ ನಮಃ ಉತ್ತರೆ ।
ಹ್ರೀಂ ಶ್ರೀಂ ಇಚ್ಛಾಸಿದ್ಧಿ ಶ್ರೀಪಾದುಕಾಂ ಪೂಜಯಾಮಿ ನಮಃ ಈಶಾನ್ಯೆ ।
ಹ್ರೀಂ ಶ್ರೀಂ ಪ್ರಾಪ್ತಿಸಿದ್ಧಿ ಶ್ರೀ ಪಾದುಕಾಂ ಪೂಜಯಾಮಿ ನಮಃ ಊರ್ಧ್ವಭಾಗೆ।
ಹ್ರೀಂ ಶ್ರೀಂ ಸರ್ವಕಾಮಾಸಿದ್ಧಿ ಶ್ರೀ ಪಾದುಕಾಂ ಪೂಜಯಾಮಿ ನಮಃ ಅಧೋಭಾಗೆ ।

ನಂತರ ಭೂಪುರದ ದ್ವಿತಿಯ ರೇಖಾದಲ್ಲಿ – ಪಶ್ಚಿಮಾದಿ ದಿಶೆಗಳಲ್ಲಿ ಅಷ್ಟ ಮಾತೃಕೆಯರನ್ನು ಪೂಜೆ ಮಾಡಬೇಕು.

ಹ್ರೀಂ ಶ್ರೀಂ ಬ್ರಾಹ್ಮಿ ಮಾತೃಕಾ ಶೀ ಪಾದುಕಾಂ ಪೂಜಯಾಮಿ ಪಶ್ಚಿಮೆ ।
ಹ್ರೀಂ ಶ್ರೀಂ ಮಾಹೇಶ್ವರಿ ಮಾತೃಕಾ ಶ್ರೀ ಪಾದುಕಾಂ ಪೂಜಯಾಮಿ ವಾಯುವ್ಯೆ
ಹ್ರೀಂ ಶ್ರೀಂ ಕೌಮಾರಿಮಾತೃಕಾ ಶ್ರೀ ಪಾದುಕಾಂ ಪೂಜಯಾಮಿ ಉತ್ತರೆ ।
ಹ್ರೀಂ ಶ್ರೀಂ ವೈಷ್ಣವಿ ಮಾತೃಕಾ ಶ್ರೀ ಪಾದುಕಾಂ ಪೂಜಯಾಮಿ ಈಶಾನ್ಯೆ ।
ಹ್ರೀಂ ಶ್ರೀಂ ವಾರಾಹಿ ಮಾತೃಕಾ ಶ್ರೀ ಪಾದುಕಾಂ ಪೂಜಯಾಮಿ ಪೂರ್ವೆ ।
ಹ್ರೀಂ ಶ್ರೀಂ ಇಂದ್ರಾಣಿ ಮಾತೃಕಾ ಶ್ರೀ ಪಾದುಕಾಂ ಪೂಜಯಾಮಿ ಆಗ್ನೆಯೆ।
ಹ್ರೀಂಶ್ರೀಂ ಚಾಮುಂಡಾಮಾತೃಕಾ ಶ್ರೀ ಪಾದುಕಾಂ ಪೂಜಯಾಮಿ ದಕ್ಷಿಣೆ ।

ಭೂಪುರದ ತೃತಿಯ ರೇಖಾದಲ್ಲಿ ಅಷ್ಟ ದಿಕ್ಕುಗಳಲ್ಲಿ ಮತ್ತು ಊರ್ಧ್ವ -ಅಧೋ ಭಾಗಗಳಲ್ಲಿ ದಶಮುದ್ರಾಗಳನ್ನು ಪೂಜೆ ಮಾಡಬೇಕು.

ಹ್ರೀಂ ಶ್ರೀಂ ಕ್ಷೋಭಣಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।
ಹ್ರೀಂ ಶ್ರೀಂ ದ್ರಾವಣಮುದ್ರಾ ಶ್ರೀ ಪಾದುಕಾಂ ಪೂಜಯಾಮಿ ।

ನಾಲ್ಕು ದಿಕ್ಕುಗಳಲ್ಲಿ, ಕೊನೆಯ ದರ್ಶನವನ್ನು ಅಗ್ರಭಾಗದಲ್ಲಿ ಪೂಜೆ ಮಾಡಬೇಕು. ಶೈವ, ಶಾಕ್ತ, ಬ್ರಾಹ್ಮ, ವೈಷ್ಣವ, ಸೌರ ಮತ್ತು ಸೌಗತ ಈ ಆರು ದರ್ಶನಗಳಿರುತ್ತವೆ. ಈ ಪ್ರಕಾರದಿಂದ ದರ್ಶನಗಳನ್ನು ಪೂಜೆ ಮಾಡಿ ಮೂಲಮಂತ್ರದಿಂದ ಮೂರು ಬಾರಿ ಅವುಗಳ ತರ್ಪಣ ಮಾಡಬೇಕು.

**ಶೈವದರ್ಶನ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಮಧ್ಯೆ।**
**ಶಾಕ್ತದರ್ಶನ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಪೂರ್ವೆ**
**ಬ್ರಹ್ಮಾದರ್ಶನ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ದಕ್ಷಿಣೆ**
**ವೈಷ್ಣವ ದರ್ಶನ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಪಶ್ಚಿಮೆ**
**ಸೌರದರ್ಶನ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಉತ್ತರೆ।**
**ಸೌಗತದರ್ಶನ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಅಗ್ರೆ**

ಇದರ ನಂತರ ಅಂತ್ಯದಲ್ಲಿ "ಮಹಾತ್ರಿಪುರಸುಂದರಿ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಈ ಮಂತ್ರದಿಂದ ಮೂರುಬಾರಿ ತರ್ಪಣ ಮಾಡಬೇಕು.

ಶ್ರೀಮತ್ತ್ರಿಪುರ ಸುಂದರಿ ದೇವಿಗೆ ಅಂಗುಷ್ಠ ಮತ್ತು ಅನಾಮಿಕಾ ದ್ವಾರಾ ಪುಷ್ಪಗಳನ್ನು ಸಮರ್ಪಿಸಬೇಕು. ಆದರೆ ಸಮಸ್ತ ದರ್ಶನಗಳಿಗೆ ಜ್ಞಾನ ಮುದ್ರೆಯ ಮೂಲಕ ಪುಷ್ಪಾದಿಗಳನ್ನು ಸಮರ್ಪಿಸುವ ವಿಧಾನವಿದೆ ಎಂದು ಹೇಳಲಾಗಿದೆ. ಅಂಗುಷ್ಠ ಮತ್ತು ತರ್ಜನಿ ಬೆರಳುಗಳನ್ನು ಸೇರಿಸುವುದರಿಂದ ಜ್ಞಾನಮುದ್ರೆಯಾಗುತ್ತದೆ. ಈ ಪ್ರಕಾರ ವೈಂದವ ಚಕ್ರಸ್ಥಿತ ಶ್ರೀಮತ್ತ್ರಿಪುರಸುಂದರಿ ದೇವಿಯನ್ನು ವಿಧಿವತ್ ಪೂಜೆ ಮಾಡಿ ನಂತರ ಅಂಗಾದಿ ವೃತ್ತಿಗಳ ಆವರಣ ಪೂಜೆಯನ್ನು ಮಾಡಬೇಕು.

**ನವಾವರಣ ಪೂಜೆ**

ಭೂಬಿಂಬ್ವಾದ್ ಬಿಂದುಪರ್ಯಂತಂ ನವಾವೃತಿಸಮರ್ಚನಮ್ ।
ಮಯಾಶ್ರೀಬೀಜಪೂರ್ವಾಣಾಂ ನಾಮ್ನಾಮಂತೆ ನಿಯೋಜಯೇತ್ ॥ 78॥

ಶ್ರೀ ಪಾದುಕಾಂ ಪೂಜಯಾಮೀತ್ಯೇತದ್ವರ್ಣಾಶ್ಚ ಸರ್ವತಃ ।
ಅಗ್ನೀಶಾಸುರವಾಯುವ್ಯಂ ಪುರೋದಿಕ್ಷ್ವಂಗಪೂಜನಮ್ ॥ 79 ॥

ಭೂಬಿಂಬಾಸಾಧ್ಯರೇಖಾಯಾಂ ದಿಕ್ಷೂರ್ಧ್ವಾಧರ್ಃ ಕ್ರಮಾದ್ಯಜೇತ್ ।
ಸಿದ್ಧಿರ್ದಶಾಣಿಮಾತ್ವಾದ್ಯಾ ಮಹಿಮಾಲಘಿಮೇಶಿತಾ ॥ 80 ॥

ವಶಿತ್ವ ಸಿದ್ಧಿಃ ಪ್ರಾಕಾಮ್ಯಾಭುಕ್ತಿರಿಚ್ಛಾಷ್ಟಮಿ ಪುನಃ ।





ಪ್ರಾಪ್ತಿಶ್ಚ ಸರ್ವಕಾಮಾಖ್ಯಾ ಸಿದ್ಧಯೊ ದಶಕೀರ್ತಿತಾಃ ॥ 81 ॥

ತಪ್ತಹೇಮಸಮಾನಾಭಾಃ ಪಾಶಾಂಕುಶಧರಾಃ ಶುಭಾಃ ।
ಸಾಧಕೇಭ್ಯಃ ಪ್ರಯಚ್ಛಂತಿ ರತ್ನೌಘಂ ತಾಂ ವಿಚಿಂತಯೇತ್ ॥ 82 ॥

ಭೂಪುರದಿಂದ ಪ್ರಾರಂಭ ಮಾಡಿ ಬಿಂದುವಿನವರೆಗೆ ಪ್ರತಿಲೋಮ ಕ್ರಮದಿಂದ ಒಂಭತ್ತು ಆವರಣಗಳ ಪೂಜೆ ಮಾಡಬೇಕು. ಆವರಣ ದೇವತೆಗಳ ಹೆಸರಿನಿಂದ, ಪ್ರಥಮ ಮಾಯಾ ಬೀಜ, ಶ್ರೀ ಬೀಜ ಮತ್ತು ಅಂತದಲ್ಲಿ "ಶ್ರೀ ಪಾದುಕಾಂ ಪೂಜಯಾಮಿ ನಮಃ" ಇದನ್ನು ಯಾವಾಗಲೂ ಸೇರಿಸಬೇಕು.

ಆಗ್ನೇಯ, ಈಶಾನ, ನೈಋತ್ಯ, ವಾಯುವ್ಯ, ಅಗ್ರಭಾಗ ಮತ್ತು ದಿಶಾಗಳಲ್ಲಿ ಷಡಂಗಪೂಜೆ ಮಾಡಬೇಕು.ಭೂಬಿಂಬದ ಪ್ರಥಮ ರೇಖೆಯ ಅಷ್ಟದಿಕ್ಕುಗಳಲ್ಲಿ ಮತ್ತು ಊರ್ಧ್ವ ಮತ್ತು ಅಧೋ ಭಾಗಗಳಲ್ಲಿ ದಶಸಿದ್ಧಿಗಳನ್ನು ಪೂಜೆ ಮಾಡಬೇಕು. 1. ಅಣಿಮಾ 2. ಮಹಿಮಾ 3. ಲಘಿಮಾ 4. ಈಶಿತಾ 5. ವಶಿತಾ 6. ಪ್ರಾಕಾಮ್ಯ 7. ಭುಕ್ತಿ 8. ಇಚ್ಛಾ 9. ಪ್ರಾಪ್ತಿ ಮತ್ತು ಪ್ರಾಕಾಮ್ಯ ಈ ಹತ್ತು ಸಿದ್ಧಿಗಳಾಗಿವೆ.

ಕಾಯಿಸಿದ ಬಂಗಾರದ ಸಮಾನ ಕಾಂತಿಯುಳ್ಳ, ಪಾಶ ಮತ್ತು ಅಂಕುಶ ಧಾರಣ ಮಾಡಿರುವ, ಸಾಧಕರಿಗೆ ರತ್ನಗಳ ಭಾಂಡಾರವನ್ನೇ ದಯಪಾಲಿಸುವ ಸಿದ್ಧಿದೇವಿಯರ ಧ್ಯಾನಮಾಡಬೇಕು.

ಭೂಪುರೆ ಮಧ್ಯರೇಖಾಲಮಾಂ ಪಶ್ಚಿಮಾದ್ಯರ್ಚಯೇದಿಮಾಃ ।
ಬ್ರಾಹ್ಮಿಂ ಮಾಹೇಶ್ವರಿಂ ಚಾಪಿ ಕೌಮಾರಿಂ ವೈಷ್ಣವೀಮಪಿ ॥ 83 ॥

ವರಾಹಿಂ ಚ ತಥೇಂದ್ರಾಣಿಂ ಚಾಮುಂಡಾಮಥ ಸಪ್ತಮೀಮ ।
ಮಹಾಲಕ್ಷ್ಮಿಮಿಮಾ ಧ್ಯಾಯೇತ್ ಸರ್ವಾಭರಣ ಸಂಯುತಾಃ ॥ 84 ॥

ವಿದ್ಯಾಶೂಲಂ ಶಕ್ತಿ ಚಕ್ರೆ ಗದಾಂ ವಜ್ರಂ ಹಿ ದಂಡಕಮ್ ।
ಪದ್ಮಂ ಕ್ರಮೇಣ ದಧತಿಃ ಸರ್ವಾಭಿಷ್ಟಪ್ರದಾಯಿಕಾಃ ॥ 85 ॥

ತಸ್ಯಾಂ ತೃತಿಯರೇಖಾಯಾಂ ದಶಮುದ್ರಾಃ ಪ್ರಪೂಜಯೇತ್ ।
ಕ್ಷೋಭಣದ್ರಾವಣಾಕರ್ಷವಶ್ಯೋನ್ಮಾದಮಹಾಂಕುಶಾಃ ॥ 86 ॥

ಖೇಚರಿ ಬೀಜಯೋನಿ ಚ ತ್ರಿಖಂಡೇತಿ ಸ್ಮೃತಾ ಇಮಾಃ ।
ಏವಂ ಭೂಬಿಂಬಮಾರಾಧ್ಯ ಕ್ಷೋಭಮುದ್ರಾಂ ಪ್ರದರ್ಶಯೇತ್ ॥ 87 ॥

ಮಂತ್ರವು ತಯಾರಾಗುತ್ತದೆ. ಇದರಿಂದ ಪೂರ್ವದಿಕ್ಕಿನಲ್ಲಿ ಸಿದ್ಧಲಕ್ಷ್ಮಿಯ ಪೂಜೆ ಮಾಡಬೇಕು. ನಂತರ ಅದರ ದಕ್ಷಿಣದಲ್ಲಿ ಮಾತಂಗಿಯನ್ನು ಪೂಜಿಸಬೇಕು.

"ಐಂ ಕ್ಲಿನ್ನೆ ಕ್ಲಿಂ ಮದದ್ರವ ಕುಲೆ ಹಸ್ರೌ:"

ವಾಕ್ಕಾಮಃ ಸೌಃ ಪುನರ್ವಾಣಿ ಮಾಯಾಲಕ್ಷ್ಮಿಧ್ರುವೋ ನಮಃ ।
ಭಗವಾಂತೆ ತಿಮಾತಂಗೀಶ್ವರಿ ಸರ್ವಜನಾರ್ಣಕಾಃ

ಮನೋಹರಿಪದಂ ಪ್ರೋಚ್ಯ ಸರ್ವರಾಜವಶಂಕರಿ । ॥ 69 ॥
ಸರ್ವಾಂತೆ ಮುಖರಂಜ್ಯಂತೆ ಮೇಷೊ ನೇತ್ರಸಮನ್ವಿತಃ

ಸರ್ವ ಸ್ತ್ರೀಪುರುಷಾಂತೆ ತು ವಶಂಕರಿಪದಂ ವದೇತ್ । ॥ 70 ॥
ಸರ್ವದುಷ್ಟಮೃಗಪ್ರಾಂತೆ ದಶಂಕರಿ ಪುನಃ ಪದಮ್ ।
ಸರ್ವಲೋಕವಶಂ ಪಶ್ಚಾತ್ ಕರಿಮಾಯಾಂ ರಮಾಂಗಜಃ ।
ವಾಕ್ತ್ರಿಸಪ್ತತಿ ವರ್ಣೋಽಯಂ ಮಾತಂಗ್ಯಾ ಉದಿತೊ ಮನುಃ ॥ 71 ॥
ಗಗನಂ ವಹ್ನಿನಾ ವಾಮನೇತ್ರೆಂದು ಸಮನ್ವಿತಮ್ ।
ಭುವನೇಶಿ ಮನುಃ ಪ್ರೋಕ್ತಸ್ತೇನ ತಾಂ ಪಶ್ಚಿಮೆ ಯಜೇತ್ ॥ 72 ॥
ತರಂಗೆ ದಶಮೆ ಪ್ರೋಕ್ತೊ ವೇದರುದ್ರಾಕ್ಷರೊ ಮನುಃ ।
ವಾರಾಹ್ಯಾಸ್ತೇನ ತಾಂ ದೇವ್ಯಾ ವಾಮಭಾಗೆ ಸಮರ್ಚಯೇತ್ ॥ 73 ॥

ವಾಕ್ (ಐಂ), ಕಾಮ (ಕ್ಲಿಂ), ಸೌಃ, ನಂತರ ವಾಣಿ (ಐಂ), ಮಾಯಾ (ಹ್ರೀಂ) ಲಕ್ಷ್ಮಿ (ಶ್ರೀಂ) ಮತ್ತು ಧ್ರುವ (ಓಂ) ನಂತರ 'ನಮೋ ಭಗವತಿ ಮಾತಂಗೀಶ್ವರಿ ಸರ್ವಜನ ಮನೋಹರಿ', ಪುನಃ 'ಸರ್ವರಾಜವಶಂಕರಿ ಸರ್ವಮುಖರಾಜಿ' ನೇತ್ರ ಸಹಿತ ಮೇಷ (ನಿ) 'ಸರ್ವಸ್ತ್ರೀಪುರುಷ', 'ವಶಂಕರಿ', 'ಸರ್ವದುಷ್ಟಮೃಗವಶಂಕರಿ', 'ಸರ್ವಲೋಕವಶಂಕರಿ', ನಂತರ ಮಾಯಾ (ಹ್ರೀಂ) ರಮಾ (ಶ್ರೀಂ) ನಂತರ ಅಂಗಜ (ಕ್ಲಿಂ) ಮತ್ತು ವಾಕ್ (ಐಂ) ಸೇರಿಸುವುದರಿಂದ 73 ಅಕ್ಷರಗಳ ಮಾತಂಗಿ ಮಂತ್ರವು ತಯಾರಾಗುತ್ತದೆ. ಈ ಮಂತ್ರದಿಂದ ದಕ್ಷಿಣದಲ್ಲಿ ಮಾತಂಗಿಯನ್ನು ಪೂಜೆ ಮಾಡಬೇಕು.

ವಾಮನೇತ್ರ (ಈ) ಇಂದು ಸಹಿತ ಗಗನ (ಹ) ಮತ್ತು ವಹ್ನಿ (ರ) ಅರ್ಥಾತ್ (ಹ್ರೀಂ) ಇದನ್ನು 'ಭುವನೇಶ್ವರಿ' ಮಂತ್ರವೆಂದು ಕರೆಯಲಾಗುತ್ತದೆ. ಇದರಿಂದ ಪಶ್ಚಿಮದಲ್ಲಿ ಭುವನೇಶ್ವರಿಯನ್ನು ಪೂಜಿಸಬೇಕು.

ದಶಮ ತರಂಗ(10.66–70)ದಲ್ಲಿ ವಿವರಿಸಲಾದ 114 ಅಕ್ಷರಗಳ ವಾರಾಹಿ ಮಂತ್ರದಿಂದ ವಾರಾಹಿ ದೇವಿಯನ್ನು ಉತ್ತರ ದಿಶೆಯಲ್ಲಿ ಪೂಜೆ ಮಾಡಬೇಕು.





1) ಸಿದ್ಧಲಕ್ಷ್ಮಿ ಮಂತ್ರ ಐಂ ಕ್ಲಿನ್ನೆ ಕ್ಲಿಂ ಮದದ್ರವೆ ಕುಲೆ ಹಸ್ರೌ

2) ಮಾತಂಗಿ ಮಂತ್ರ :

ಐಂ ಕ್ಲಿಂ ಸೌಃ ಐಂ ಹ್ರೀಂ ಶ್ರೀಂ ಓಂ ನಮೋ ಭಗವತಿ ಮಾತಂಗೀಶ್ವರಿ ಸರ್ವಜನ ಮನೋಹರಿ ಸರ್ವರಾಜವಶಂಕರಿ, ಸರ್ವಮುಖರಂಜನಿ ಸರ್ವ ಸ್ತ್ರೀಪುರುಷವಶಂಕರಿ ಸರ್ವದುಷ್ಟಮೃಗವಶಂಕರಿ ಸರ್ವಲೋಕವಶಂಕರಿ ಹ್ರೀಂ ಶ್ರೀಂ ಕ್ಲಿಂ ಐಂ

3) ಭುವನೇಶ್ವರಿ ಮಂತ್ರಃ ಶ್ರೀಂ

4) ವಾರಾಹಿ ಮಂತ್ರ :

ಓಂ ಐಂ ಗ್ಲೌಂ ಐಂ ನಮೋ ಭಗವತಿ ವಾರ್ತಾಲಿ ವಾರಾಹಿ ವಾರಾಹಿ ವಾರಾಹಿ ಮುಖಿ ಐಂ ಗ್ಲೌಂ ಐಂ ಅಂಧೆ ಅಂಧಿನಿ ನಮೋ ರುಂಧೆ ರುಂಧಿನಿ ನಮೋ ಜಂಭೆ ಜಂಭಿನಿ ನಮಃ ಮೋಹೆ ಮೋಹಿನಿ ನಮಃ ಸ್ತಂಭೆ ಸ್ತಂಭಿನಿ ನಮಃ ಐಂ ಗ್ಲೌಂ ಐಂ ಸರ್ವದುಷ್ಟಪ್ರದುಷ್ಟಾನಾಂ ಸರ್ವೇಷಾಂ ಸರ್ವವಾಕ್ಚಿತ್ತಚಕ್ಷುರ್ಮುಖಗತಿ ಜಿಹ್ವಾಂ ಸ್ತಂಭಂ ಕುರು ಕುರು ಶೀಘ್ರ ವಶಂ ಕುರು ಕುರು ಐಂ ಗ್ಲೌಂ ಐಂ ಠಃ ಠಃ ಠಃ ಠಃ ಹುಂ ಫಟ್ ಸ್ವಾಹಾ"

**ಪೂಜಾ ವಿಧಾನ :** ಮಂತ್ರಗಳ ಮುಂದೆ, ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಇತ್ಯಾದಿ ಹೇಳುತ್ತ ಆಯಾ ದೇವತೆಗಳನ್ನು ಪೂರ್ವಾದಿ ದಿಶಾ ಕ್ರಮದಲ್ಲಿ ಪೂಜಿಸಬೇಕು.

ಪಂಚಿಕಾ ಏವಮಾರಾಧ್ಯ ದರ್ಶನಾನಿ ಯಜೇಚ್ಚ ಷಟ್ ।
ಆದ್ಯಂ ಮಧ್ಯೆ ಚತುರ್ದಿಕ್ಷು ಚತ್ವಾರಿ ಪುರತೋಂತಿಮಮ್ ॥ 74 ॥

ಶೈವ ಶಾಕ್ತಂ ತಥಾ ಬ್ರಾಹ್ಮಂ ವೈಷ್ಣವಂ ಸೌರಸೌಗತಮ್ ।
ದರ್ಶನಾನ್ಯೆವಮಾರಾಧ್ಯ ಮೂಲೇನ ತ್ರಿಃ ಪ್ರತರ್ಪಯೇತ್ ॥ 75 ॥

ಅಂಗುಷ್ಠಾನಾಮಿಕಾಭ್ಯಾಂ ತಾಂ ಯಚ್ಛೇತ್ ಪುಷ್ಪಂ ತು ಮುದ್ರಯಾ ।
ಜ್ಞಾನಾಖ್ಯಯಾ ಸಾ ಚಾಂಗುಷ್ಠತರ್ಜನೀಯೋಗತೊ ಮತಾ ॥ 76 ॥

ಏವಂ ಸಂಪೂಜ್ಯ ಬಿಂದುಸ್ಥಾ ಶ್ರೀಮತ್ತ್ರಿಪುರ ಸುಂದರೀಮ್ ।
ತತೋಽಗಾಂಧ್ಯಾ ವೃತ್ತೀನಾಂ ತು ಪೂಜನಂ ಸಮ್ಯಗಾಚರೇತ್ ॥ 77 ॥

ಈ ಪ್ರಕಾರ ಪಂಚಪಂಚಿಕಾರನ್ನು ಪೂಜಿಸಿ ಷಡ್‌ದರ್ಶನಗಳ ಪೂಜೆ ಮಾಡಬೇಕು. ಪ್ರಥಮ ದರ್ಶನದ ಮಧ್ಯದಲ್ಲಿ, ಉಳಿದ ನಾಲ್ಕು ದರ್ಶನಗಳನ್ನು

ಪೂಜಾ ವಿಧಾನ :

ಓಂ ಹ್ರೀಂ ಹುಂ ಖೆಂ ಚ ಛೆ ಕ್ಷಃ ಸ್ತ್ರೀಂ ಹುಂ ಕ್ಷೆ ಹ್ರೀಂ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ - ಪೂರ್ವೆ । ಓಂ ಹ್ರೀಂ ಹಂ ಸಂ ಕಂ ಲಂ ಹ್ಶೆಂ ಹ್ರೀಂ ಓಂ ಸರಸ್ವತ್ಯೈ ನಮಃ ಪಾರಿಜಾತೇಶ್ವರಿ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ದಕ್ಷಿಣೆ । ಶ್ರೀ ಹ್ರೀಂ ಕ್ಲೀಂ ತ್ರಿಪುಟಾ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಪಶ್ಚಿಮೆ । ದ್ರಾಂ ದ್ರೀಂ ಕ್ಲೀಂ ಬ್ಲೂಂ ಸಃ ಪಂಚಬಾಣೇಶಿ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಉತ್ತರೆ । ಈಗ ಚತುರ್ಥ ಕಾಮಧೇನು ಪಂಚಕ ದೇವಿಯರ ಮಂತ್ರ ಹೇಳಲಾಗುತ್ತದೆ.

ವಾಕ್ಕಾಮೌ ಭೃಗುರೌ ಸರ್ಗಯುಕ್ತೊ ಮಂತ್ರಸ್ತ್ರಿವರ್ಣಕಃ ॥ 62 ॥

ಪ್ರೋದಿತಾಮೃತ ಪೀಠೇಶಿ ತೇನ ತಾಂ ಪೂರ್ವತೊಯಜೇತ್ ।
ನಭೋ ಭೃಗ್ವಗ್ನಯೊ ವಾಮನೇತ್ರಾಢ್ಯಾಶ್ಚಂದ್ರ ಭೂಷಿತಾಃ ॥ 63 ॥

ಸಾರ್ಣಾಢ್ಯಾಭುವನೇಶ್ರೀಂಶ್ರೀಂ ಕಲಾಢ್ಯಾಂ ಭುವನೇಶ್ವರೀಮ್ ।
ಸುಧಾಶ್ರೀಮಂತ್ರಉದಿತೊ ವೇದಾರ್ಣಸ್ತಾಂ ಯಜೇದವಾಕ್ ॥ 64 ॥

ವಾಕ್ (ಐಂ) ಕಾಮ (ಕ್ಲೀಂ) ನಂತರ ಔ ವಿಸರ್ಗ ಸಹಿತ ಭೃಗು (ಸೌಃ) ಈ ಮೂರು ಅಕ್ಷರಗಳ ಅಮೃತ ಪೀಠೇಶಿ ಮಂತ್ರವು ಸಿದ್ಧವಾಗುತ್ತದೆ. ಈ ಮಂತ್ರದಿಂದ ಪೂರ್ವದಲ್ಲಿ ಅಮೃತಪೀಠೇಶಿಯನ್ನು ಪೂಜಿಸಬೇಕು.

ನಭ (ಹ್), ಭೃಗು (ಸ) ಅಗ್ನಿ (ರ್) ಈ ಮೂರನ್ನು ವಾಮನೇತ್ರ (ಈ) ದಿಂದ ಮತ್ತು ಬಿಂದುವಿನಿಂದ ಯುಕ್ತ ಮಾಡಿ (ಹಸ್ತ್ರೀಂ) ಕೂಟವಾಗುತ್ತದೆ. ಪುನಃ ಇದರ ಪ್ರಾರಂಭದಲ್ಲಿ ಸಕಾರ ಸಹಿತ ಭುವನೇಶಿ (ಸ್ತ್ರೀಂ) ಶ್ರೀಂ ಇದರ ಅಂತದಲ್ಲಿ ಕಲ ಅಕ್ಷರದ ಭುವನೇಶಿ (ಕ್ಲೀಂ) ಜೋಡಿಸುವುದರಿಂದ 4 ಅಕ್ಷರಗಳ ಸುಧಾಶ್ರೀ ಮಂತ್ರವಾಗುತ್ತದೆ. ಇದರಿಂದ ದಕ್ಷಿಣದಲ್ಲಿ ಪೂಜೆ ಮಾಡಬೇಕು.

ಸಕಾರೋನುಗ್ರಹೀಸರ್ಗಿಕಾಮೊ ವಾಗಭ್ರ ತ್ರಿವರ್ಣಮನುವಾ
ಪಶ್ಚಾತ್ ಪೂಜಯೇದಮೃತೇಶ್ವರೀಮ್ ॥ 65 ॥
ವಿಂಶತ್ಯರ್ಣಾನ್ನಪೂರ್ಣೋಕ್ತಾ ತರಂಗೆ ನವಮೆ
ಮಯಾ ತನ್ಮಂತ್ರೇಣೋತ್ತರ ಸ್ಯಾಂ ತು ಪೂಜಯೇದನ್ನದಾಯಿನೀಮ್ ॥ 66 ॥

ಅನುಗ್ರಹಿ ಮತ್ತು ಸರ್ಗಿ ಸಕಾರ (ಸೌಃ) ಕಾಮ (ಕ್ಲೀಂ) ಮತ್ತು ಅಭ್ರಪೂರ್ವಕ





ವಾಕ್ ಹ್ಶೆಂ ಈ ಮೂರು ಅಕ್ಷರಗಳಿಂದ ಅಮೃತೇಶ್ವರಿಯನ್ನು ಪಶ್ಚಿಮದಲ್ಲಿ ಪೂಜೆ ಮಾಡಬೇಕು.

ವೇದಾದಿರ್ಗಿರಿಜಾಪದ್ಮಾಮನ್ಮಥೊ ಹೃದಯಂ ಭಗ ।
ವತಿ ಮಾಹೇಶ್ವರಿ ಪ್ರಾಂತೇನ್ನಪೂರ್ಣೆ ದಹನಾಂಗನಾ ॥

ಈ ಪ್ರಕಾರ ಅನ್ನಪೂರ್ಣಾ ಮಂತ್ರವನ್ನು ಈಗಾಗಲೆ (9.2) ಹೇಳಲಾಗಿದೆ.

ವೇದಾದಿ (ಓಂ) ಗಿರಿಜಾ (ಹ್ರೀಂ) ಪದ್ಮಾ (ಶ್ರೀಂ) ಮನ್ಮಥಾ (ಕ್ಲೀಂ) ಹೃದಯ (ನಮಃ) ನಂತರ 'ಭಗವತಿ ಮಾಹೇಶ್ವರಿ ಅನ್ನಪೂರ್ಣೆ' ಪದ ಮತ್ತು ಅಂತದಲ್ಲಿ ದಹನಾಂಗನಾ (ಸ್ವಾಹಾ) ಸೇರಿಸುವುದರಿಂದ ಇಪ್ಪತ್ತು ಅಕ್ಷರಗಳ ಅನ್ನಪೂರ್ಣಾ ಮಂತ್ರವು ರಚನೆಯಾಗುತ್ತದೆ. "ಓಂ ಹ್ರೀಂ ಶ್ರೀಂ ಕ್ಲೀಂ ನಮೋ ಭಗವತಿ ಮಾಹೇಶ್ವರಿ ಅನ್ನಪೂರ್ಣೆ ಸ್ವಾಹಾ" ಈ ಮಂತ್ರದಿಂದ ಅನ್ನಪೂರ್ಣೆಯ ಪೂಜೆ ಮಾಡಬೇಕು.

ಅಮೃತ ಪಾಠೇಶಿ ಮಂತ್ರ ಐಂ ಕ್ಲೀಂ ಸೌಃ

ಸುಧಾಶ್ರೀ ಮಂತ್ರ : ಹಸ್ತ್ರೀಂ ಸ್ತ್ರೀಂ ಶ್ರೀಂ ಕ್ಲೀಂ ।

ಅಮೃತೇಶ್ವರಿ ಮಂತ್ರ : ಸೌಃ ಕ್ಲೀಂ ಹ್ಶೆಂ ।

ಅನ್ನಪೂರ್ಣಾ ಮಂತ್ರ : ಓಂ ಹ್ರೀಂ ಶ್ರೀಂ ಕ್ಲೀಂ ನಮೋ ಭಗವತಿ ಮಾಹೇಶ್ವರಿ ಅನ್ನಪೂರ್ಣೆ ಸ್ವಾಹಾ

ಪೂಜಾವಿಧಾನ : ಪೂರ್ವದಲ್ಲಿ ವಿವರಿಸಿದಂತೆ, 'ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ' ಸೇರಿಸುವುದರಿಂದ ಪೂಜಾಮಂತ್ರವು ರಚನೆಯಾಗುತ್ತದೆ. ಉದಾಹರಣಾರ್ಥವಾಗಿ –

"ಐಂ ಕ್ಲೀಂ ಸೌಃ ಅಮೃತಪಾಠೇಶಿ ಶ್ರೀ ಪಾದುಕಾಂ ಪೂಜಾಯಮಿ ತರ್ಪಯಾಮಿ ನಮಃ" । ಈಗ ಪಂಚಮರತ್ನ ಪಂಚಕ ಸಂಜ್ಞಕ ದೇವಿಯ ಪೂಜಾ ವಿಧಿ ಮತ್ತು ಮಂತ್ರ ಹೇಳಲಾಗುತ್ತದೆ.

ವಾಣೀಬೀಜಂ ತತಃ ಕ್ಲಿನ್ನೆ ಕಾಮಬೀಜಂ ಮದದ್ರವೆ ।
ಕುಲೆ ವರಾಹಹಂಸಾಗ್ನಿವರ್ಣಾ ಔಸರ್ಗಸಂಯುತಾ ॥ 67 ॥

ಏಕಾದಶಾಕ್ಷರೋ ಮಂತ್ರಃ ಸಿದ್ಧಲಕ್ಷ್ಮ್ಯಾಃ ಸಮೀರಿತಃ ।
ತೇನ ತಾಂ ಪೂಜಯೇತ್ ಪೂರ್ವೆ ಮಾತಂಗಿ ದಕ್ಷಿಣೆ ಪುನಃ ॥ 68 ॥

ವಾಣೀಬೀಜ (ಐಂ), ಕ್ಲಿನ್ನೆ, ಪುನಃ ಕಾಮಬೀಜ (ಕ್ಲೀಂ) ನಂತರ 'ಮದದ್ರವೆ' 'ಕುಲೆ' ಔಂ ವಿಸರ್ಗಸಹಿತ ವರಾಹ (ಹ) ಹಂಸ (ಸ) ಮತ್ತು ಅಗ್ನಿ (ರ) ಇವುಗಳಿಂದ ರಚಿತ ಕೂಟ (ಹಸ್ರೌಃ) ಈ ಪ್ರಕಾರ ಹನ್ನೊಂದು ಅಕ್ಷರಗಳ ಸಿದ್ಧಲಕ್ಷ್ಮಿ

ಶಾಂಭವಿ ಮಂತ್ರವು ಉತ್ಪನ್ನವಾಗುತ್ತದೆ. ಇದರಿಂದ ದಕ್ಷಿಣ ದಿಕ್ಕಿನಲ್ಲಿ ಪೂಜೆ ಮಾಡಬೇಕು.

ಸ ಬಿಂದು ನಭ (ಹಂ), ವಿಸರ್ಗಾಢ್ಯ ಭೃಗು (ಸಃ) ಈ ಎರಡು ಅಕ್ಷರಗಳು ಅಜಪಾ ಮಂತ್ರವಾಗಿದೆ. ಈ ಮಂತ್ರದಿಂದ ಪಶ್ಚಿಮ ದಿಕ್ಕಿನಲ್ಲಿ ಅಜಪಾ ಪೂಜೆ ಮಾಡಬೇಕು.

ಅಕಾರದಿಂದ ಕ್ಷಕಾರ ಪರ್ಯಂತ ಸಾನುಸ್ವಾರ ವರ್ಣಮಾಲಾ ಮಾತೃಕಾ ಮಂತ್ರವಾಗಿದೆ. ಈ ಮಂತ್ರದಿಂದ ಪೂಜೆ ಮಾಡಬೇಕು.

**ಪರಂಜ್ಯೋತಿ ಮಂತ್ರ:**
**ಓಂ ಹ್ರೀಂ ಹಂಸ: ಸೋಹಂ ಸ್ವಾಹಾ**
**ಪರಿನಿಷ್ಕಲಾ ಶಾಂಭವಿ ಮಂತ್ರ:**
**ಓಂ ಪರಿನಿಷ್ಕಲಾಶಾಂಭಾವಿ**
**ಅಜಪಾ ಮಂತ್ರ: ಹಂಸ: ಮಾತೃಕಾ ಮಂತ್ರ: ಅಂ ಆಂ ಇಂ ಈಂ ............**

**ಪೂಜಾವಿಧಾನ**

**ಓಂ ಹ್ರೀಂ ಹಂಸ: ಸೋಹಂ ಸ್ವಾಹಾ ಪರಂಜೋತಿ; ಶ್ರೀಪಾದುಕಾಂ ಪೂಜಯಾಮಿ ನಮ: ಪೂರ್ವೆ । ಓಂ ಪರಾನಿಷ್ಕಲಶಾಂಭವಿ ಪರನಿಷ್ಕಲ ಶ್ರೀಪಾದುಕಾಂ ಪೂಜಯಾಮಿ ತರ್ಪಯಮಿ ನಮ: ದಕ್ಷಿಣೆ । ಹಂಸ: ಅಜಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮ: ಪಶ್ಚಿಮೆ । ಅಂ ಆಂ ............ ಕ್ಷಂ.. ಮಾತೃಕಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮ: ಉತ್ತರೆ** । ಈಗ ತೃತಿಯ ಕಲ್ಪಲತಾ ಪಂಚ ದೇವಿಯರ ಮಂತ್ರ-ಮತ್ತು ಪೂಜೆಯನ್ನು ಹೇಳಲಾಗುತ್ತದೆ.

**ಪ್ರಣವೋ ಭುವನೇಶಿ ಹುಂ ಖೇಚ ಛೇಕ್ಷ: ಪದಂ ಮನಃ** ॥ 57 ॥
**ಸ್ತ್ರೀಂ ಹುಂ ಮೇರುಃ ಸಝಿಂಟೀಶೋ ಮಾಯಾಸ್ತ್ರಂ ದ್ವಾದಶಾಕ್ಷರಃ ।**

**ತ್ವರಿತಾಯ ಮನುಃ ಪ್ರೋಕ್ತಸ್ತೇನ ತಾಂ ಪುರತೋರ್ಚಯೇತ್** ॥ 58 ॥

**ಆಕಾಶ ಹಂಸ ಕ್ರೋಧೀಶಾಪಿನಾಕೀಶಹರಾಧರಾಃ ।**
**ಸೇಂದವಸ್ತಾರಮಾಯಾಭ್ಯಾಂ ಸಂಪುಟಾಷ್ಟ ಸರಸ್ವತಿ** ॥ 59 ॥

**ಹೃದಂತೊ ಮಂತ್ರೋಯಂ ಪ್ರೋಕ್ತಾ ಏಕಾದಶಾಕ್ಷರಃ ।**
**ಅನೇನ ಪಾರಿಜಾತೇಶಿಂ ದಕ್ಷಿಣಸ್ಯಾಂ ಪ್ರಪೂಜಯೇತ್** ॥ 60 ॥





**ರಮಾಮಾಯಾಮನೋಭೂಮಿಸ್ತ್ರಿವರ್ಣಾ ತ್ರಿಪುಟೋದಿತಾ ।**
**ತಾಂ ಯಜೇತ್ ಪಶ್ಚಿಮೆ ಭಾಗೇ ಬಾಣೇಶಿಮುತ್ತರೆ ಮನಃ** ॥ 61 ॥

**ದ್ರಾಂ ದ್ರಿಂ ಕ್ಲಿಂ ಬ್ಲೂಂ ಭೃಗುಃ ಸರ್ಗಿಸೋದಿತಾ ಪಂಚವರ್ಣಕಾ ।**

ಪ್ರಣವ (ಓಂ), ಭುವನೇಶಾನಿ (ಹ್ರೀಂ) 'ಖೇಚ ಛೆ ಕ್ಷ' ನಂತರ 'ಸ್ತ್ರೀಂ ಹುಂ' ಮತ್ತು ಸಝಿಂಟಿಶ ಮೇರು (ಕ್ಷೆ), ಮಾಯಾ (ಹ್ರೀಂ) ಮತ್ತು ಅಂತದಲ್ಲಿ 'ಅಸ್ತ್ರಫಟ್' ಜೋಡಿಸುವುದರಿಂದ 12 ಅಕ್ಷರಗಳ ತ್ವರಿತಾ ಮಂತ್ರವು ಉತ್ಪನ್ನವಾಗುತ್ತದೆ. ಈ ಮಂತ್ರದಿಂದ ತ್ವರಿತಾ ದೇವಿಯನ್ನು ಪೂರ್ವದಲ್ಲಿ ಪೂಜ ಮಾಡಬೇಕು.

ಇಂದ್ರ ಜೊತೆಗೆ ಆಕಾಶ (ಹಂ), ಹಂಸ (ಸಂ), ಕ್ರೋಧೀಶ (ಕಂ), ಪಿನಾಕಿ (ಲಂ) ಮತ್ತು ಧರಾ ಬಿಂದುವಿನಜೊತೆಗೆ ಹರ (ಹೈಂ), ಈ ಕೂಟವನ್ನು ತಾರ (ಓಂ) ಮತ್ತು ಮಾಯಾ (ಹ್ರೀಂ) ದಿಂದ ಸಂಪುಟಿತಗೊಳಿಸಿ ಚತುರ್ಥ್ಯಂತ ಸರಸ್ವತಿ (ಸರಸ್ವತ್ಯೈ), ನಂತರ ಹೃದಯ (ನಮಃ) ಜೋಡಿಸುವುದರಿಂದ 11 ಅಕ್ಷರಗಳ ಪಾರಿಜಾತೇಶ್ವರಿ ಮಂತ್ರವಾಗುತ್ತದೆ. ಇದರಿಂದ ದಕ್ಷಿಣ ದಿಶೆಯಲ್ಲಿ ಪಾರಿಜಾತೇಶ್ವರಿಯನ್ನು ಪೂಜಿಸಬೇಕು.

ರಮಾ (ಶ್ರೀಂ) ಮಾಯಾ (ಹ್ರೀಂ) ಮತ್ತು ಮನೋಭೂಮಿ (ಕ್ಲಿಂ) ಈ ಮೂರುಅಕ್ಷರಗಳ ತ್ರಿಪುಟಾ ಮಂತ್ರವಾಗುತ್ತದೆ. ಈ ಮಂತ್ರದಿಂದ ಪಶ್ಚಿಮ ದಿಕ್ಕಿನಲ್ಲಿ ತ್ರಿಪುಟಾಳನ್ನು ಪೂಜಿಸಬೇಕು.

ದ್ರಾಂ ದ್ರಿಂ ಕ್ಲಿಂ ಬ್ಲೂಂ ಮತ್ತು ಸರ್ಗಿಭೃಗು (ಸಃ) ಈ ಐದಕ್ಷರಗಳಿಂದ ಪಂಚಬಾಣೇಶಿ ಮಂತ್ರವಾಗುತ್ತದೆ. ಈ ಮಂತ್ರದಿಂದ ಉತ್ತರದಲ್ಲಿ ಪಂಚಬಾಣೇಶಿಯನ್ನು ಪೂಜಿಸಬೇಕು.

1) ತ್ವರಿತಾ ಮಂತ್ರ : ಓಂ ಹ್ರೀಂ ಹುಂ ಖೇಚ ಛೆ ಕ್ಷಃ ಸ್ತ್ರೀ ಹುಂ ಕ್ಷೇಂ ಹ್ರೀಂ ಫಟ್ ।

2) ಪಾರಿಜಾತೇಶ್ವರಿ ಮಂತ್ರ : ಓಂ ಹ್ರೀಂ ಹಂ ಸಂ ಕಂ ಲಂ ಹೈಂ ಹ್ರೀಂ ಉಂ ಸರಸ್ವತ್ಯೈ ನಮಃ ।

3) ತ್ರಿಪುಟಾ ಮಂತ್ರ : ಶ್ರೀ ಹ್ರೀಂ ಕ್ಲಿಂ ।

ಪಂಚಬಾಣೇಶಿ ಮಂತ್ರ : ದ್ರಾಂ ದ್ರಿಂ ಕ್ಲಿಂ ಬ್ಲೂಂ ಸಃ

3. ಶ್ರೀವಿದ್ಯಾ, ತ್ವರಿತಾ, ಪಾರಿಜಾತೇಶ್ವರಿ, ತ್ರಿಪುಟಾ ಮತ್ತು ಪಂಚಬಾಣೇಶ್ವರಿ ಈ ಐದು ಕಲ್ಪಲತಾ ಸಂಜ್ಞಕವಿರುತ್ತವೆ.

4. ಶ್ರೀ ವಿದ್ಯಾ, ಅಮೃತಪಾಟೇಶಿ, ಸುಧಾಶ್ರೀ, ಅಮೃತೇಶ್ವರಿ, ಅನ್ನಪೂರ್ಣಾ ಈ ಐದು ಕಾಮಧೇನು ಸಂಜ್ಞೆಯವಾಗಿವೆ.

6. ಶ್ರೀವಿದ್ಯಾ, ಸಿದ್ಧಲಕ್ಷ್ಮೀ, ಮಾತಂಗಿ, ಭುವನೇಶ್ವರಿ ಮತ್ತು ವಾರಾಹಿ ಈ ಪಂಚಕವನ್ನು ಮುನಿಗಳು ರತ್ನಪಂಚಕವೆಂದು ಕರೆಯುತ್ತಾರೆ.

ಶ್ರೀವಿದ್ಯಾ ಮೂಲಮಂತ್ರೇಣ ಮಧ್ಯೇ ಸಂಯೋಜ್ಯ ಪೂಜಯೇತ್ ।
ಕ್ರಮತೋನ್ಯಾಶ್ಚತುರ್ದಿಕ್ಷು ತಾಸಾಂ ಮಂತ್ರಾನ್ ಕ್ರಮಾದ್ ಬ್ರುವೇ ॥ 49॥

ಬಕೇಶೋ ವಹ್ನಿಮಾರೂಢಾ ವಾಮನೇತ್ರೇಂದು ಸಂಯುತಃ ।
ಲಕ್ಷ್ಮೀಮಂತ್ರೋಽಯಮೇಕಾರ್ಣಸ್ತೇನ ಲಕ್ಷ್ಮೀಂ ಪ್ರಪೂಜಯೇತ್ ॥50॥

ತಾರಪದ್ಮಾಶಕ್ತಿಪದ್ಮಾಕಮಲೇ ಕಮಲಾಯೇ ।
ಪ್ರಸೀದಯುಗಲಂ ಲಕ್ಷ್ಮೀರ್ಮಾಯಾ ಪದ್ಮಾ ಧ್ರುವೋ ಮಹಾ ॥ 51 ॥

ಲಕ್ಷ್ಮ್ಯೈ ನೇಮೊಂತೊ ಮಂತ್ರೋಽಯಮಷ್ಟಾವಿಂಶತಿವರ್ಣವಾನ್ ।
ಪೂಜ್ಯಾನೇನ ಮಹಾಲಕ್ಷ್ಮೀಃ ಶ್ರೀ ವಿದ್ಯಾ ದಕ್ಷಿಣೇ ಸ್ಥಿತಾ ॥ 52 ॥

ಲಕ್ಷ್ಮೀರ್ಮಾಯಾ ಮನೋಜನ್ಮಾ ತ್ರಿಶಕ್ತಿರ್ಮನುರೀರಿತಃ ।
ಭೃಗ್ವಾಕಾಶಕಲಾಮಾಯಾರೂಢಾ ಪದ್ಮಾಲಯಾಪುಟಾಃ ।
ತ್ರಿವರ್ಣಾಃ ಸರ್ವಸಾಮ್ರಾಜ್ಯ ತಾಂ ಯಜೇದುತ್ತರ ಸ್ಥಿತಾಮ್ ॥ 54 ॥

ವಾಮನೇತ್ರ ಮತ್ತು ಇಂದು ಸಹಿತ ವಹ್ನಿಯುತ್ ವಕೇಶ (ಶ್ರೀಂ) ಇದು ಒಂದು ಅಕ್ಷರದ ಪೂಜಾ ಮಂತ್ರವಾಗಿದ. ಇದರಿಂದ ಲಕ್ಷ್ಮೀಯನ್ನು ಪ್ರಾರಂಭದಲ್ಲಿ ಪೂಜಿಸಬೇಕು.

ತಾರ (ಓಂ), ಪದ್ಮ (ಶ್ರೀಂ), ಶಕ್ತಿ (ಹ್ರೀಂ) ಮತ್ತು ಕಮಲಾ (ಶ್ರೀಂ), ನಮಥರ 'ಕಮಲೇ ಕಮಲಾಯೆ', ಎರಡು ಬಾರಿ ಪ್ರಸೀದ (ಪ್ರಸೀದ ಪ್ರಸೀದ), ಲಕ್ಷ್ಮೀ (ಶ್ರೀಂ), ಮಾಯಾ (ಹ್ರೀಂ) ಪದ್ಮ (ಶ್ರೀಂ) ಮತ್ತು ಧ್ರುವ (ಓಂ) ಮತ್ತು ಅಂತದಲ್ಲಿ 'ಲಕ್ಷ್ಮ್ಯೈ ನಮಃ' ಈ 28 ಅಕ್ಷರಗಳ ಮಹಾಲಕ್ಷ್ಮೀ ಮಂತ್ರವಾಗಿದ್ದು ಇದರಿಂದ ಶ್ರೀ ವಿದ್ಯಾಳ ದಕ್ಷಿಣದಲ್ಲಿ ಮಹಾಲಕ್ಷ್ಮೀಯನ್ನು ಪೂಜೆ ಮಾಡಬೇಕು.

ಲಕ್ಷ್ಮೀ (ಶ್ರೀಂ), ಮಾಯಾ (ಹ್ರೀಂ) ಮತ್ತು ಮನೋಜನ್ಮಾ (ಕ್ಲೀಂ) ಈ ಮೂರು ತ್ರಿಶಕ್ತಿಯ ಪೂಜಾ ಮಂತ್ರಗಳಾಗಿವೆ. ಇದರಿಂದ ಶ್ರೀ ವಿದ್ಯೆಯ ಪಶ್ಚಿಮಕ್ಕೆ





ತ್ರಿಶಕ್ತಿಯನ್ನು ಪೂಜಿಸಬೇಕು. ಭೃಗು (ಸ), ಆಕಾಶ (ಹ) ನಂತರ ಕಲ ಮತ್ತು ಮಾಯಾ (ಹ್ರೀಂ) ಈ ಪ್ರಕಾರ ಸ್ಹಕ್ಲ್ಹ್ರೀಂ ಈ ಕೂಟವನ್ನು ಪದ್ಮಾಲಯಾ (ಶ್ರೀಂ) ದಿಂದ ಸಂಪುಟಿತಗೊಳಿಸಿದ ನಂತರ ಮೂರು ಅಕ್ಷರಗಳ ಸರ್ವಸಾಮ್ರಾಜ್ಯದ ಮಂತ್ರವು ರೂಪುಗೊಳ್ಳುತ್ತದೆ. ಈ ಮಂತ್ರದಿಂದ ಶ್ರೀ ವಿದ್ಯೆಯ ಉತ್ತರ ದಿಕ್ಕಿನಲ್ಲಿ ಸ್ಥಿತ ಸರ್ವಸಾಮ್ರಾಜ್ಯಳ ಪೂಜೆ ಮಾಡಬೇಕು.

ಲಕ್ಷ್ಮೀ ಮಂತ್ರ – ಶ್ರೀಂ । ಮಹಾಲಕ್ಷ್ಮೀ ಮಂತ್ರ – ಓಂ ಶ್ರೀಂ ಹ್ರೀಂ ಶ್ರೀಂ ಕಮಲಾಲಯೆ ಪ್ರಸೀದ ಪ್ರಸೀದ ಶ್ರೀಂ ಹ್ರೀಂ ಶ್ರೀಂ ಓಂ ಮಹಾಲಕ್ಷ್ಮ್ಯೈ ನಮಃ॥ ತ್ರಿಶಕ್ತಿ ಮಂತ್ರ – ಶ್ರೀ ಹ್ರೀಂ ಕ್ಲೀಂ । ಸರ್ವಸಾಮ್ರಾಜ್ಯ ಮಂತ್ರ– ಶ್ರೀಂ ಸ್ಹಕ್ಲ್ಹ್ರೀಂ ಶ್ರೀಂ

ಪೂಜಾ ವಿಧಾನ :

ಮಧ್ಯದಲ್ಲಿ – ಮೂಲಮಂತ್ರ – "ಮಹಾತ್ರಿಪುರಸುಂದರಿ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ । ಪೂರ್ವದಲ್ಲಿ – ಶ್ರೀಂ ಲಕ್ಷ್ಮೀ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ । ದಕ್ಷಿಣದಲ್ಲಿ – ಓಂ ಶ್ರೀಂ ಹ್ರೀಂ ಶ್ರೀಂ ಮಹಾಲಕ್ಷ್ಮೀ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ॥ ಪಶ್ಚಿಮದಲ್ಲಿ – ಶ್ರೀಂ ಹ್ರೀಂ ಕ್ಲೀಂ ತ್ರಿಶಕ್ತಿ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ । ಉತ್ತರದಲ್ಲಿ – ಶ್ರೀಂ ಸ್ಹಕ್ಲ್ಹ್ರೀಂ ಸರ್ವಸಾಮ್ರಾಜ್ಯಾ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ

ಈಗ ದ್ವಿತಿಯ ಕೋಶಪಂಚಕ ದೇವಿಯ ಮಂತ್ರಗಳನ್ನು ಹೇಳಲಾಗುತ್ತದೆ.

ತಾರೋ ಮಾಯಾ ತತೋ ಹಂಸಃ ಸೋಹಂ ವಹ್ನಿಪ್ರಿಯಾಂತಿಮಃ ।
ಅಷ್ಟವರ್ಣಾಃ ಪರಂಜ್ಯೋತಿರ್ಮನುಸ್ತಾಂ ಪೂರ್ವತೋ ಯಜೇತ್ ॥ 55॥

ತಾರಃ ಪರೋಽನಿಷ್ಕಲಶ್ಚ ಶಾಂಭವೀಜ್ಯಾ ತು ದಕ್ಷಿಣೇ ।
ನಭಃ ಸಬಿಂದುಸರ್ಗಾಢ್ಯೋ ಭೃಗುರ್ದ್ವ್ಯ ಜಿ ಪಾಪರೇ ॥ 56 ॥
ಅಕಾರಾದಿಕ್ಷಕಾರಾಂತಾ ವರ್ಣಾಃ ಪ್ರೋಕ್ತಾ ತುಮಾತೃಕಾ ।

ತಾರ (ಓಂ), ಮಾಯಾ (ಹ್ರೀಂ), ಹಂಸ, ಸೋಹಂ ಇದರ ಅಂತದಲ್ಲಿ ವಹ್ನಿಪ್ರಿಯಾ (ಸ್ವಾಹಾ) ಸೇರಿಸುವುದರಿಂದ ಎಂಟು ಅಕ್ಷರಗಳ ಪರಂಜ್ಯೋತಿ ಮಂತ್ರವು ರಚನೆಯಾಗುತ್ತದೆ. ಇದರಿಂದ ಪೂರ್ವದಲ್ಲಿ ಪೂಜೆ ಮಾಡಬೇಕು.

ತಾರ (ಓಂ), ಪರಿನಿಷ್ಕಲಶಾಂಭವಿ ಈ ಒಂಭತ್ತು ಅಕ್ಷರಗಳ ಪರಿನಿಷ್ಕಲ

ಭೋಗಃ ಕ್ರೀಡಶ್ಚ ಸಮಯಃ ಸಹಜಶ್ಚ ಪರಾವರಃ ।
ಸಿದ್ಧೌಘಗುರುವಶ್ಚೈತೇ ಚತ್ವಾರಃ ಪರಿಕೀರ್ತಿತಾಃ ॥ 37 ॥

ಗಗನೋ ವಿಶ್ವವಿಮಲೌ ಮದನೋ ಭುವನಸ್ತಥಾ ।
ಲೀಲಾಸ್ವಾತ್ಮಾ ಪ್ರಿಯೇತ್ಯಷ್ಟಾ ಮಾನವಾ ಅಪರಾ ಮತಾಃ ॥ 38 ॥

ಆನಂದನಾಥಶಬ್ದಾಂತಾಃ ಪುರುಷಗುರುವಃ ಸ್ಮೃತಾಃ ।
ಅಂಬಾಂತಾಸ್ತು ಸ್ತ್ರಿಯಃ ಕಾರ್ಯಾಃ ಸರ್ವಸಿದ್ಧಿಪ್ರದಾಯಿಕಾಃ ॥ 39 ॥

ಪರಶಕ್ತಿಸ್ತಥಾ ಶುಕ್ಲಾ ದೇವಿ ಕಾಮೇಶ್ವರೀತಿ ಚ ।
ತಿಸ್ರಃ ಸ್ತ್ರೀಯಸ್ತು ದಿವ್ಯೇಷು ಪ್ರಿಯಾಲೀಲೇತಿ ಮಾನವೇ ॥ 40 ॥

ಶ್ರೀಪಾದುಕಾಂ ಪೂಜಯಾಮೀತ್ಯಂತೇ ಸರ್ವತ್ರ ಯೋಜಯೇತ್ ।
ತತೋ ಬಿಂದೋಶ್ಚತುರ್ದಿಕ್ಷು ಯಜೇದಾಮ್ನಾಯ ದೇವತಾಃ ॥ 41 ॥

ಪೂರ್ವಂ ದಕ್ಷಿಣಾಮ್ನಾಯಂ ಪಶ್ಚಿಮಂ ಚೋತ್ತರಂ ತಥಾ ।
ತತಃ ಪ್ರಪೂಜಯೇದ್ ದಿಕ್ಷು ಮಧ್ಯೇತಃ ಪಂಚಪಂಚಿಕಾ ॥ 42 ॥

ದಿವ್ಯೌಘ, ಸಿದ್ಧೌಘ, ಮಾನವಾಘ, ಭೇದಗಳಿಂದ ಮೂರು ಪ್ರಕಾರದ ಗುರುಗಳಿರುತ್ತಾರೆ. 1. ಪರಪ್ರಕಾಶ 2. ಪರಾಶಿವ 3. ಪರಶಕ್ತಿ 4. ಕೋಲೇಶ 5. ಶುಕ್ಲಾದೇವಿ 6. ಕುಲೇಶ್ವರ ಮತ್ತು 7. ಕಾಮೇಶ್ವರಿ ಈ ಏಳು ಪರಮ ದಿವ್ಯೌಘ ಗುರುಗಳಿರುತ್ತಾರೆ. 1. ಭೋಗ 2. ಕ್ರೀಡ 3. ಸಮಯ 4. ಸಹಜ ಈ ನಾಲ್ಕು ಸರ್ವವ್ಯಾಪಕ ಸಿದ್ಧೌಘ ಗುರುಗಳಿರುತ್ತಾರೆ. 1. ಗಗನ 2. ವಿಶ್ವ 3. ವಿಮಲ 4. ಮದನ 5. ಭುವನ 6. ಲೀಲಾ 7. ಸ್ವಾತ್ಮಾ 8. ಪ್ರಿಯಾ ಈ ಎಂಟು ಅಪರ ಮಾನವ ಗುರುಗಳೆಂದು ಹೇಳಲಾಗಿದೆ.

ಪುರುಷ ಗುರುಗಳ ಹೆಸರಿನ ಮುಂದೆ 'ಆನಂದನಾಥ' ಮತ್ತು ಸ್ತ್ರೀ ಗುರುಗಳ ಹೆಸರಿನ ನಂತರ 'ಅಂಬಾ' ಶಬ್ದ ಜೋಡಿಸಿ ಪೂಜೆ ಮಾಡಬೇಕು. ದಿವ್ಯೌಘ ಗುರುಗಳಲ್ಲಿ ಪರಾಶಕ್ತಿ, ಶುಕ್ಲಾ ದೇವಿ ಮತ್ತು ಕಾಮೇಶ್ವರಿ ಈ ಮೂವರು ಸ್ತ್ರೀಯರಿರುತ್ತಾರೆ. ಮತ್ತು ಮಾನವ ಗುರುಗಳಲ್ಲಿ ಲೀಲಾ ಮತ್ತು ಪ್ರಿಯಾ ಈ ಎರಡು ಸ್ತ್ರೀಯರಿರುತ್ತಾರೆ. ಈ ಗುರುಗಳ ಹೆಸರಿನ ಮುಂದೆ "ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಜೋಡಿಸಿ ಪೂಜೆ ಮಾಡಬೇಕು. "ಪರಪ್ರಕಾಶಾನಂದನಾಥ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಇತ್ಯಾದಿ.





ನಂತರ ಬಿಂದುವಿನ ನಾಲ್ಕೂ ದಿಕ್ಕುಗಳಲ್ಲಿ ಪೂರ್ವಾದಿ ದಿಶೆಯಲ್ಲಿ ಬಲ ಕ್ರಮದಿಂದ ಆಮ್ನಾಯ ದೇವತೆಗಳ ಪೂಜೆ ಮಾಡಬೇಕು.

ಹ್ರೀಂ ಶ್ರೀಂ ಪೂರ್ವಾಮ್ನಾಯ ದೇವತಾ ಶ್ರೀಪಾದುಕಾಂ ಪೂಜಯಾಮಿ..........।
ಹ್ರೀಂ ಶ್ರೀಂ ದಕ್ಷಿಣಾಮ್ನಾಯ ದೇವತಾ ಶ್ರೀಪಾದುಕಾಂ ಪೂಜಯಾಮಿ ..............।
ಹ್ರೀಂ ಶ್ರೀಂ ಪಶ್ಚಿಮಾಮ್ನಾಯ ದೇವತಾ ಶ್ರೀ ಪಾದುಕಾಂ ಪೂಜಯಾಮಿ..........।
ಹ್ರೀಂ ಶ್ರೀಂ ಉತ್ತರಾಮ್ನಾಯ ದೇವತಾ ಶ್ರೀ ಪಾದುಕಾಂ ಪೂಜಯಾಮಿ............।

ಪಂಚಪಂಚಿಕಾ ಪೂಜೆ

ಆದ್ಯಾಂ ಮಧ್ಯೇ ಚತಸ್ರೋನ್ಯಾಃ ಪೂರ್ವಾದ್ಯಾಶಾಸು ಪೂಜಯೇತ್ ।
ಪಂಚಸ್ವಪಿ ಗಣೇಷ್ವತ್ರ ಶ್ರೀ ವಿದ್ಯಾದ್ಯಾ ಪ್ರಕೀರ್ತಿತಾ ॥ 43 ॥

ಶ್ರೀ ವಿದ್ಯಾ ಚ ತಥಾ ಲಕ್ಷ್ಮೀರ್ಮಹಾಲಕ್ಷ್ಮೀಸ್ತೃತೀಯಕಾ ।
ತ್ರಿಶಕ್ತಿಃ ಸರ್ವಸಾಮ್ರಾಜ್ಯಾ ಪಂಚಲಕ್ಷ್ಮ್ಯಃ ಪ್ರಕೀರ್ತಿತಾಃ ॥ 44 ॥

ಶ್ರೀವಿದ್ಯಾ ಚ ಪರಂ ಜ್ಯೋತಿ ಪರನಿಷ್ಕಲಶಾಂಭವಿ ।
ಅಜಪಾಮಾತೃಕಾ ಚೇತಿ ಪಂಚಕೋಶಾ ಇಮೆಸ್ಮೃತಾ ॥ 45 ॥

ಶ್ರೀವಿದ್ಯಾ ತ್ವರಿತಾ ಚೈವ ಪರಾಜಿತೇಶ್ವರಿ ಪುನಃ ।
ತ್ರಿಪುಟಾ ಪಂಚಬಾಣೇಶಿ ಪಂಚ ಕಲ್ಪಲತಾ ಇಮಾಃ ॥ 46 ॥

ಶ್ರೀವಿದ್ಯಾಮೃತಪೀಠೇಶಿ ಸುಧಾಶ್ರೀರಮೃತೇಶ್ವರಿ ।
ಅನ್ನಪೂರ್ಣೇತಿ ವಿಖ್ಯಾತಾಃ ಪಂಚೈತಾಃ ಕಾಮಧೇನವಃ ॥ 47 ॥

ಶ್ರೀ ವಿದ್ಯಾಸಿದ್ಧಲಕ್ಷ್ಮೀಶ್ಚ ಮಾತಂಗಿ ಭುವನೇಶ್ವರಿ ।
ವಾರಾಹಿಚ ಸ್ಮೃತಂ ಚೈತನ್ಮುನಿಭಿಃ ರತ್ನಪಂಚಕಮ್ ॥ 48 ॥

ಗುರು ಪೂಜೆಯ ನಂತರ, ಮಧ್ಯದಲ್ಲಿ ಮತ್ತು ಪೂರ್ವಾದಿ ನಾಲ್ಕೂ ದಿಶೆಗಳಲ್ಲಿ ಪಂಚಪಂಚಿಕೆಯರನ್ನು ಪೂಜೆ ಮಾಡಬೇಕು. ಮಧ್ಯದಲ್ಲಿ ಆದ್ಯಾಳ ಮತ್ತು ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಅನ್ಯ ನಾಲ್ಕು ದೇವತೆಗಳನ್ನು ಪೂಜೆ ಮಾಡಬೇಕು. ಪಂಚಿಕೆಯರ ಐದೂ ವರ್ಗಗಳಲ್ಲಿ ಆದ್ಯಾ ಶ್ರೀ ವಿದ್ಯೆಯೆ ಎಂದು ಹೇಳಲಾಗಿದೆ.

1. ಶ್ರೀವಿದ್ಯಾ, ಲಕ್ಷ್ಮೀ, ಮಹಾಲಕ್ಷ್ಮೀ, ತ್ರಿಶಕ್ತಿ, ಸರ್ವಸಾಮ್ರಾಜ್ಯ ಈ ಐದು ಮಹಾಲಕ್ಷ್ಮಿಯರೆಂದು ಹೇಳಲಾಗಿದೆ. ಈ ಪ್ರಥಮಪಂಚಕವು ಲಕ್ಷ್ಮಿ ಸಂಜ್ಞಕವಾಗಿದೆ.

2. ಶ್ರೀವಿದ್ಯಾ, ಪರಂಜ್ಯೋತಿ ಪರಾನಿಷ್ಕಲಶಾಂಭವಿ, ಅಜಯಾ ಮತ್ತು ಮಾತೃಕಾ ಈ ಐದು ಪಂಚಕೋಶ ಸಂಜ್ಞೆಯಾಗಿವೆ.

ಕ್ರೋಂ ನಿತ್ಯಮದದ್ರವೆ ಹೂಂ ಕ್ರೋಂ ನೀಲಪತಾಕಿನಿ ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಎಂದು ಹೇಳುತ್ತ ನೀಲಪತಾಕಿನಿಯ ಪೂಜೆ ಮಾಡಬೇಕು.

### ವಿಜಯಾಮಂತ್ರ

ಪದ್ಮನಾಭ (ಎ) ಮತ್ತು ಇಂದು ಸಹಿತ ವರಾಹ (ಹ), ಹಂಸ (ಸ) ಚಂಡೀಶ (ಖ), ಜನಾರ್ಧನ (ಫ್ರಂ) ಮತ್ತು ಕೃಶಾನು (ರ ಹಸಖಫ್ರೆಂ) ನಂತರ 'ವಿಜಯಾಯೈ ನಮಃ' ಈ 9 ಅಕ್ಷರಗಳ ವಿಜಯಾ ಮಂತ್ರವು ಉತ್ಪನ್ನವಾಗುತ್ತದೆ. (ಏಂ) ಹಸಖಫ್ರೆಂ ವಿಜಯಾಯೈ ನಮಃ ಇದರ ಮುಂದೆ ವಿಜಯಾ ನಿತ್ಯಾ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಎಂದು ಹೇಳುತ್ತ ಪೂಜೆ ಮಾಡಬೇಕು.

### ಸರ್ವಮಂಗಲಾ – ಜ್ವಾಲಾಮಾಲಿನಿ –ವಿಚಿತ್ರಾ ಮಂತ್ರ

ತಾರಾಢ್ಯೌ ಭೃಗುಖಡ್ಗೀಶೌ ತಾತ್ಯಾತ್ಸರ್ವಮಂಗಲಾ
ನಮೋಂತೊ ಮನುರಾಖ್ಯಾತೊ ನವಾರ್ಣಃ ಸರ್ವಮಂಗಲಃ । ॥ 29 ॥
ತಾರೋ ನಮೊ ಭಗವತಿಜ್ವಾಲಾಮಾಲಿನಿ ತತ್ಪರಮ್ ॥ 30 ॥
ದೇವ್ಯಂತೆ ಸರ್ವಭುತಾಂತೆ ಸಂಹಾರಾಂತೆ ತು ಕಾರಿಕೆ ।
ಜಾತವೇದಸಿವರ್ಣಾಂತೆ ಜ್ವಲಂತಿ ಪ್ರಜ್ವಲಂತಿ ಚ ॥ 31 ॥
ಜ್ವಲದ್ವಯಂ ಪ್ರಜ್ವಲಾಂತೆ ಕವಚಂ ಪಾವಕದ್ವಯಮ್ ।
ವರ್ಮಾಸ್ತ್ರಾಂತೋದಿತಾಜ್ವಾಲಾಮಾಲಿನ್ಯಷ್ಟಯುಗಾಕ್ಷರಾ ॥ 32 ॥
ಕೂರ್ಮಃ ಕ್ರೋಧೀಶಮನ್ವಿಂದುಸಂಯುತೊ ಹ್ರೋಕವರ್ಣಕಃ ।
ವಿಚಿತ್ರಾಯಾ ಮನುಶ್ಚೈತಾ ನಿತ್ಯಾಃ ಪಂಚದಶೋದಿತಾಃ ॥ 33 ॥

### ಸರ್ವಮಂಗಲಾ ಮಂತ್ರ

ತಾರ (ಓಂ) ಸಹಿತ ಭೃಗು ಮತ್ತು ಖಡ್ಗೀಶ ಸ್ವೊಂ ನಂತರ ಚತುರ್ಥ್ಯಂತ ಸರ್ವಮಂಗಲಾ (ಸರ್ವಮಾಂಗಲ್ಯೈ) ಇದರ ಅಂತದಲ್ಲಿ ನಮಃ ಸೇರಿಸುವುದರಿಂದ 9 ಅಕ್ಷರಗಳ ಸರ್ವಮಂಗಲಾ ಮಂತ್ರವು ಸಿದ್ಧವಾಗುತ್ತದೆ.

(ಓಂ) "ಸ್ವೋಂ ಸರ್ವಮಂಗಲಾಯೈ ನಮಃ" ಇದರ ಮುಂದೆ ಸರ್ವಮಂಗಲಾ ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಹೇಳುತ್ತ ಪೂಜೆ ಮಾಡಬೇಕು.





### ಜ್ವಾಲಾಮಾಲಿನಿ ಮಂತ್ರ

ತಾರ (ಓಂ) ನಂತರ 'ನಮೋ ಭಗವತಿ ಜ್ವಾಲಾಮಾಲಿನಿ' ದೇವಿ ಸರ್ವಭೂತಸಂಹಾರಕಾರಿಕೆ ಜಾತವೇದಸಿ ಜ್ವಲಂತೆ ಪ್ರಜ್ವಲಂತಿ" ಇದರ ನಂತರ ಎರಡು ಬಾರಿ ಜ್ವಲ (ಜ್ವಲ ಜ್ವಲ) ನಂತರ 'ಪ್ರಜ್ವಲ' ಕವಚ (ಹುಂ)ದ ನಂತರ ಎರಡು ಬಾರಿ ಪಾವಕ (ರಂ ರಂ). 'ಹುಂ' ಮತ್ತು ಅಂತದಲ್ಲಿ ಅಸ್ತ್ರ (ಫಟ್) ಸೇರಿಸುವುದರಿಂದ 48 ಅಕ್ಷರಗಳ ಜ್ವಾಲಾಮಾಲಿನಿ ಮಂತ್ರವು ಸಿದ್ಧವಾಗುತ್ತದೆ. (ಓಂ) "ಓಂ ನಮೋ ಭಗವತಿ ಜ್ವಾಲಾಮಾಲಿನಿ ದೇವಿ ಸರ್ವಭೂತಸಂಹಾರಕಾರಿಕೆ ಜಾತವೇದಸಿ ಜ್ವಲಂತಿ ಪ್ರಜ್ವಲಂತಿ ಜ್ವಲ ಜ್ವಲ ಪ್ರಜ್ವಲ ಹುಂ ರಂ ರಂ ಹುಂ ಫಟ್" ಇದರ ನಂತರ "ಜ್ವಾಲಾಮಾಲಿನಿ ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಸೇರಿಸಿ ಜ್ವಾಲಾಮಾಲಿನಿಯ ಪೂಜೆ ಮಾಡಬೇಕು.

### ವಿಚಿತ್ರಾಮಂತ್ರ

ಮನು (ಓಂ) ಬಿಂದು ಸಹಿತ ಕೂರ್ಮ (ಚಕಾರ) ಮತ್ತು ಕ್ರೋಧೀಶ ಕ (ಕ್ಚಿಂ) ಇದು ವಿಚಿತ್ರಾದ ಏಕಾಕ್ಷರ ಮಂತ್ರವಾಗಿದೆ. ಈ ಪ್ರಕಾರ ಒಟ್ಟು 15 ನಿತ್ಯಾರನ್ನು ಪೂಜೆ ಮಾಡಬೇಕು. ಅಂ) ಕ್ಚಿಂ ವಿಚಿತ್ರಾ ನಿತ್ಯಾ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಇದು ವಿಚಿತ್ರಾ ಪೂಜೆಯ ಮಂತ್ರವಾಗಿದೆ.

ಮೂಲೇನ ಷೋಡಶಿಂ ಮಧ್ಯೆ ಯಜೇತ್ ತ್ರಿಪುರಸುಂದರೀಮ್ ।
ಬಿಂದುತ್ರಿಕೋಣಯೋರ್ಮಧ್ಯೆ ತ್ರಿಭಂಗಿರ್ಭಿಗುರೂನ್ ಯಜೇತ್ ॥ 34 ॥

ತ್ರಿಕೋಣದಲ್ಲಿ ಒಟ್ಟು 15 ನಿತ್ಯಾರನ್ನು ಪೂಜಿಸಿ, ಮಧ್ಯ, ಬಿಂದುವಿನಲ್ಲಿ ಮೂಲಮಂತ್ರದಿಂದ 16ನೆಯ ಮಹಾತ್ರಿಪುರಸುಂದರಿಯನ್ನು ಪೂಜಿಸಬೇಕು. ನಂತರ ಬಿಂದು ಮತ್ತು ತ್ರಿಕೋಣದ ಮಧ್ಯದ ಮೂರು ಪಂಕ್ತಿಗಳಲ್ಲಿ ಗುರುಗಳನ್ನು ಪೂಜಿಸಬೇಕು.

(ಅಃ) "ಮೂಲಂ ಮಹಾತ್ರಿಪುರಸುಂದರಿ ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ"

### ಗುರು ಪೂಜಾ ವಿಧಾನ

ದಿವ್ಯೌಘೌಶ್ಚಾಪಿ ಸಿದ್ಧೌಘಮಾನವೌಘಸ್ತ್ರಿಧಾ ಹಿತೆ ।
ಪರಪ್ರಕಾಶಃ ಪ್ರಥಮಸ್ತತಃ ಪರಶಿವಾಭಿಧಃ ॥ 35 ॥
ಪರಶಕ್ತಿಶ್ಚ ಕೌಲೇಶಃ ಶುಕ್ಲಾದೇವಿ ಕುಲೇಶ್ವರಃ ।
ಕಾಮೇಶ್ವರೀತಿ ಸಪ್ತೈವ ದಿವ್ಯೌಘೌ ಗುರುವಃ ಪರಾ ॥ 36 ॥

ಮತ್ತು ಅಂತದಲ್ಲಿ ಸ್ವಾಹಾ ಸೇರಿಸುವುದರಿಂದ 14 ಅಕ್ಷರಗಳ ಮಹಾವಿದ್ಯೇಶ್ವರಿ ಮಂತ್ರವು ರೂಪುಗೊಳ್ಳುತ್ತದೆ.

(ಊ) "ಓಂ ಹ್ರೀಂ ಫ್ರೇಂ ಸಃ ನಿತ್ಯಕ್ಲಿನ್ನೆ ಮದದ್ರವೆ ಸ್ವಾಹಾ" ಇದರ ನಂತರ "ಮಹಾವಿದ್ಯೇಶ್ವರಿ ನಿತ್ಯಾ ಶ್ರೀ ಪಾದುಕಾಂ ಪೂಜಯಾಮಿ ನಮಃ" ಜೋಡಿಸಿ ಮಹಾವಿದ್ಯೇಶ್ವರಿಯನ್ನು ಪೂಜಿಸಬೇಕು.

## ಶಿವದೂತಿ ತ್ವರಿತಾ ಕುಲಸುಂದರಿ ಮಂತ್ರ

ಶಿವದೂತಿಚತುರ್ಥ್ಯಂತಾ ಮಾಯಾಧ್ಯಾಹೃದಯಾಂತಿಕಾ

ಶಿವದೂತಿ ಮನುಃ ಪ್ರೋಕ್ತಃ ಸಪ್ತವರ್ಣೋಽಖಿಲೇಷ್ಟದಃ । ॥ 21 ॥
ತಾರಃ ಪರಾವರ್ಮಖೆ ಚ ಭೆ ಕ್ಷಃ ಸ್ತ್ರೀವಾಮಕರ್ಣಯುಕ್

ಗಗನಂ ಶಶಿಸಂಯುಕ್ತಂ ಮೇರುರ್ಭಗಯುತೋದ್ರಿಜಾ । ॥ 22 ॥
ಫಡಂತೊ ದ್ವಾದಶಾರ್ಣೋಽಯಂ ತ್ವರಿತಾಯಾ ಮನುರ್ಮತಃ

ದಾಮೋದರೋ ಬಿಂದುಯುತಃ ಕಲೌಶಾಂತಿಂದು ಸಂಯುತ್ । ॥ 23 ॥
ಭೃಗುರ್ಮನುವಿಸರ್ಗಾಢ್ಯಸ್ತ್ರ್ಯಕ್ಷರಾ ಕುಲಸುಂದರಿ ॥ 24 ॥

### ಶಿವದೂತಿ ಮಂತ್ರ

ಚತುರ್ಥ್ಯಂತ ಶಿವದೂತಿ (ಶಿವದೂತ್ಯೈ)ಯ ಪ್ರಾರಂಭದಲ್ಲಿ ಮಾಯಾ (ಹ್ರೀಂ) ಮತ್ತು ಅಂತದಲ್ಲಿ ಹೃದಯ (ನಮಃ) ಜೋಡಿಸುವುದರಿಂದ ಸಪ್ತಾಕ್ಷರಗಳ ಸರ್ವಾಭಿಷ್ಟ ಫಲಪ್ರದ ಶಿವದೂತಿ ಮಂತ್ರವು ಉತ್ಪನ್ನವಾಗುತ್ತದೆ.

(ಋ) "ಹ್ರೀಂ ಶಿವದೂತ್ಯೈ ನಮಃ' ಇದರ ಮುಂದೆ ಶಿವದೂತಿ ನಿತ್ಯಾ ಶ್ರೀ ಪಾದುಕಾಂ ಪೂಜಯಾಮಿ ನಮಃ ಜೋಡಿಸಿ ಶಿವದೂತಿಯ ಪೂಜೆ ಮಾಡಬೇಕು.

### ತ್ವರಿತಾ ಮಂತ್ರ

ತಾರ (ಓಂ), ಪರಾ (ಹ್ರೀಂ) ವರ್ಮ (ಹುಂ) ನಂತರ 'ಖೇಚ ಛೆ ಕ್ಷಃ ಸ್ತ್ರೀ ಆಮೇಲೆ ವಾಮಕರ್ಣ ಮತ್ತು ಶಶಿ ಸಹಿತ ಗಗನ (ಹೂಂ), ಭಗಯುಕ್ತ ಮೇರು (ಕ್ಷೆ) ಅದ್ರಿಜಾ (ಹ್ರೀಂ) ಮತ್ತು ಅಂತದಲ್ಲಿ ಫಟ್ ಜೋಡಿಸುವುದರಿಂದ 12 ಅಕ್ಷರಗಳ ತ್ವರಿತಾ ಮಂತ್ರವು ರೂಪುಗೊಳ್ಳುತ್ತದೆ.

(ಋಂ) "ಓಂ ಹ್ರೀಂ ಹುಂ ಖೆ ಚ ಛೆ ಕ್ಷ ಸ್ತ್ರೀಂ ಕ್ಷೆ ಹ್ರೀಂ ಫಟ್" ಇದರ ನಂತರ "ತ್ವರಿತಾ ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಜೋಡಿಸಿ ಪೂಜೆ ಮಾಡಬೇಕು.





### ಕುಲಸುಂದರಿ ಮಂತ್ರ

ಬಿಂದುಯುತ ದಾಮೋದರ (ಐಂ) ಶಾಂತಿ ಇಂದು ಸಹಿತ ಕ್ ಲ್ (ಕ್ಲೀಂ) ಮನು (ಔಂ) ಮತ್ತು ವಿಸರ್ಗ ಸಹಿತ ಭೃಗು (ಸೌಃ) ಈ ಪ್ರಕಾರ ಮೂರು ಅಕ್ಷರಗಳ ಕುಲಸುಂದರಿ ಮಂತ್ರವು ನಿಷ್ಪನ್ನವಾಗುತ್ತದೆ.

(ಲ್ರೂಂ) ಐಂ ಕ್ಲೀಂ ಸೌಃ ಇದರ ನಂತರ ಕುಲಸುಂದರಿ ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃದಿಂದ ಕುಲಸುಂದರಿಯ ಪೂಜೆ ಮಾಡಬೇಕು.

## ನಿತ್ಯಾನೀಲಪತಾಕಿನಿ ವಿಜಯಾಮಂತ್ರ

ಭೈರವಿ ಬಾಲಾಯಾಯುಕ್ತಾ ಪ್ರಾಕ್ಪಶ್ಚಾಚ್ಚ ಕ್ರಮೋತ್ಕ್ರಮಾತ್ ।
ತದಂತೆ ಪಂಚಬಾಣಾಃ ಸ್ಯುರ್ನಿತ್ಯಾಮನ್ವಕ್ಷರೇರಿತಾ ॥ 25 ॥

ತಾರೊ ಮಾಯಾಫಾಂತರೇಫೌ ಝಿಂಟಿಶಶಶಿಸಂಯುತಾ ।
ಹಂಸೋಗ್ನ್ಯರ್ಘೀಶಬಿಂದ್ವಾಢ್ಯೋ ಹೃಲ್ಲೇಖಾಂಕುಶನಿತ್ಯಮ್ ॥ 26 ॥

ದದ್ರ ವೇವರ್ಮ ಸೃಣ್ಯಂತಾ ಪ್ರೋಕ್ತಾ ನೀಲಪತಾಕಿನಿ ।
ಚತುರ್ದಶಾಕ್ಷರಾ ಸರ್ವತ್ರೈಲೋಕ್ಯಾಕರ್ಷಣಕ್ಷಮಾ ॥ 27 ॥

### ನಿತ್ಯಾ ಮಂತ್ರ

ಮುಂದೆ ಕ್ರಮ ಮತ್ತು ಹಿಂದೆ ವ್ಯುತ್ಕ್ರಮದಿಂದ ಬಾಲಾಮಂತ್ರ (ಐಂ ಕ್ಲೀಂ ಸೌಃ) ದಿಂದ ಸಂಪುಟಿತ ತ್ರಿಪುರ ಭೈರವಿ, ಅದರೆ ನಂತರ ಪಂಚಬಾಣಬೀಜ ಈ ಪ್ರಕಾರ ಒಟ್ಟು ಹದಿನಾಲ್ಕು ಅಕ್ಷರಗಳ ನಿತ್ಯಾಮಂತ್ರವು ಉತ್ಪನ್ನವಾಗುತ್ತದೆ.

(ಲ್ರೂಂ) ಐಂ ಕ್ಲೀಂ ಸೌಃ ಹಸೌಃ ಹರವ್ಲರಿಂ ಹಸೌಃ ಸೌಃ ಕ್ಲೀಂ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಎಂದು ಹೇಳುತ್ತ ಪೂಜೆ ಮಾಡಬೇಕು.

### ನೀಲಪತಾಕಿನಿ ಮಂತ್ರ

ತಾರ (ಓಂ) ಮಾಯಾ (ಹ್ರೀಂ) ಝಿಂಟೀಶ ಮತ್ತು ಶಶಿ ಸಹಿತ ಫ ಮತ್ತು ರೇಫ (ಫ್ರೆಂ), ಅಗ್ನಿ, ಅರ್ಘೀಶ ಮತ್ತು ಬಿಂದು ಸಹಿತ ಹಂಸ (ಸ್ತ್ರೌಂ) ನಂತರ ಹೃಲ್ಲೇಖಾ (ಹ್ರೀಂ) ಅಂಕುಶ (ಕ್ರೋಂ) ಮತ್ತು 'ನಿತ್ಯ ಮುದದ್ರವೆ' ವರ್ಮ (ಹೂಂ) ಮತ್ತು ಅಂತದಲ್ಲಿ ಸೃಣಿ (ಕ್ರೋಂ) ಜೋಡಿಸುವುದರಿಂದ 14 ಅಕ್ಷರಗಳ ಸಮಸ್ತ ಮೂರೂ ಲೋಕಗಳನ್ನು ಆಕರ್ಷಣೆಗೊಳಿಸುವ ನೀಲಪತಾಕಿನಿ ಮಂತ್ರವು ರೂಪುಗೊಳ್ಳುತ್ತದೆ.(ಐಂ) ಓಂ ಹ್ರೀಂ ಫ್ರೆಂ ಸ್ತ್ರೌಂ ಹ್ರೀಂ

ವಾಗ್ಬೀಜಂ (ಐಂ), 'ಭಗ', ಕರ್ಣಾಬ್ಯಾ ನಿದ್ರಾ (ಘು) ನಂತರ 'ಗೆ ಭಗಿ' 'ಭಗೋದರಿ ಭಗಮಾಲೆ ಭಗಾವಹೆ ಭಗಗುಹ್ಯೋ ಭಗ' ದ ನಂತರ 'ಯೋನಿ ಭಗನಿಪಾತಿನಿ' 'ಸವಭಗ', ವಶಂಕರಿಭಗ', 'ರೂಪೆ ನಿತ್ಯ' 'ಕ್ಲಿನ್ನೆ ಭಗಸ್ವ' ನಂತರ ಸದೀಪಕ ಅಗ್ನಿ (ರು), 'ಪೆ ಸರ್ವಭ' ದೀರ್ಘಸ್ಮೃತಿ (ಗಾ), ನ ಮೆ ಹ್ಯಾನಯ ಮತ್ತು ಅಗ್ನಿ (ರ), ನಂತರ 'ದೆ ರೇತಸು' ಮತ್ತು ಸಝಿಂಟಿತ ಪಾವಕ (ರೆ), 'ಭ ಭಗ', 'ಕ್ಲಿನ್ನೆ ಕ್ಲಿನ್ನ ದ್ರವೆ ಕ್ಲೇದಯ ದ್ರಾವಯ' ಮತ್ತು ಕೇಶವ (ಅ) ಅನಂತ ಮೋಘಭಗ, ವಿಚ್ಚೆ, ಕ್ಷುಭ ಕ್ಷೋಭಯ ಸರ್ವ' 'ಸತ್ವಾನ್ ಭಗೇಶ್ವರಿ', ನಂತರ ವಾ (ಐಂ) 'ಬ್ಲೂಂ ಜಂ ಬ್ಲೂಂ' 'ಭೆಂ ಬ್ಲೂಂ ಮೋಂ ಬ್ಲೂಂ ಹೆಂ ಬ್ಲೂಂ ಹೋ 'ಕ್ಲಿನ್ನೆ ಸರ್ವಾಣಿಭ' 'ಗಾನಿ ಮೆ ವಶಮಾನ' ಮತ್ತು ಮಾರುತ (ಯ) ನಂತರ 'ಸ್ತ್ರೀಂ' 'ಹರ' ಬ್ಲೆಂ ಮತ್ತು ಅಂತದಲ್ಲಿ ಮಾಯಾ (ಹ್ರೀಂ) ಜೋಡಿಸುವುದರಿಂದ ಒಂದನೂರು ಮೂವತ್ತಾರು ಅಕ್ಷರಗಳ ಭಗಮಾಲಿನಿ ಮಂತ್ರವು ಉತ್ಪನ್ನವಾಗುತ್ತ

(ಆಂ) ಐಂ ಭಗಭುಗೆ ಭಗಿನಿ ಭಗೋದರಿ ಭಗಮಾಲೆ ಭಗಾವಹೆ ಭಗಗುಹ್ಯೋ ಭಗಯೋನೆ ಭಗನಿಪಾತಿನಿ ಸರ್ವಭಗವಶಂಕರಿ ಭಗರೂಪೆ ನಿತ್ಯಕ್ಲಿನ್ನೆ ಭಗಸ್ವರೂಪೆ ಸರ್ವಭಗಾನಿ ಮೆ ಜ್ಞಾನಯ ವರದೆ ರೇತೆ ಸುರೇತೆ ಭಗಕ್ಲಿನ್ನೆ ಕ್ಲಿನ್ನದ್ರವೆ ಕ್ಲೇದಯ ದ್ರಾವಯ ಅಮೋಘೆ ಭಗವಿಚ್ಚೆ ಕ್ಷುಭಕ್ಷೋಭಯ ಸರ್ವಸತ್ವಾನ್ ಭಗೇಶ್ವರಿ ಐಂ ಬ್ಲೂಂ ಜಂ ಬ್ಲೂಂ ಭೆಂ ಬ್ಲೂಂ ಮೋಂ ಬ್ಲೂಂ ಹೆಂ ಬ್ಲೂಂ ಹೋ ಕ್ಲಿನ್ನೆ ಸರ್ವಾಣಿ ಭಗಾನಿ ಮೆ ವಶಮಾನಯ ಸ್ತ್ರೀಂ ಹರ ಬ್ಲೆಂ ಹ್ರೀಂ

ಇದರ ನಂತರ 'ಭಗಮಾಲಿನಿ ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ' ಜೋಡಿಸಿ ಭಗಮಾಲಿನಿಯ ಪೂಜೆ ಮಾಡಬೇಕು.

### ನಿತ್ಯಕ್ಲಿನ್ನಾಮಂತ್ರ

ನಿತ್ಯಕ್ಲಿನ್ನೆ ಮದದ್ರಾಂತೆ ಪದ್ಮಾನಾಭಯುತಂಜಲಮ್ ॥ 16 ॥
ಮಾಯಾದ್ಯಾಗ್ನಿ ಪ್ರಿಯಾಂತೇಯಂ ನಿತ್ಯಕ್ಲಿನ್ನಾ ಶಿವಾಕ್ಷರಃ ।

'ನಿತ್ಯಕ್ಲಿನ್ನೆ ಮದದ್ರ' ದ ನಂತರ ಪದ್ಮಾಯ ಸಹಿತ ಜಲ (ವೆ) ಇದು ಪ್ರಾರಂಭದಲ್ಲಿ ಮಾಯಾ ಮತ್ತು ಅಂತದಲ್ಲಿ ಅಗ್ನಿಪ್ರಿಯಾ (ಸ್ವಾಹಾ) ಸೇರಿಸುವುದರಿಂದ 11 ಅಕ್ಷರಗಳ ನಿತ್ಯಕ್ಲಿನ್ನಾ ಮಂತ್ರವು ಉತ್ಪನ್ನವಾಗುತ್ತದೆ.

"ಇಂ ಹ್ರೀಂ ನಿತ್ಯಕ್ಲಿನ್ನೆ ಮದದ್ರವೆ ಸ್ವಾಹಾ"

ಇದರ ನಂತರ 'ನಿತ್ಯಕ್ಲಿನ್ನಾ ನಿತ್ಯಾ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ ಸೇರಿಸಿ ನಿತ್ಯಕ್ಲಿನ್ನಾಳನ್ನು ಪೂಜಿಸಬೇಕು.





### ಭೇರುಂಡ ಮಂತ್ರ

ಪಾಂತೋ ರೇಫಾಸನಸ್ವಾರಸಂಯುತೋಂ ಕುಶಸಂಪುಟಃ ॥ 17 ॥
ಚ ವರ್ಗವರ್ಣಾಶ್ಚತ್ವಾರೊ ವಹ್ನಿಮಸ್ತಿಂದು ಸಂಯುತಾಃ ।
ವಹ್ನಿಪ್ರಿಯಾಂತಸ್ತಾರಾದ್ಯೋ ಭೇರುಂಡಾಯ ದಶಾಕ್ಷರಃ ॥ 18 ॥

ತಾರ ಸಂಯುಕ್ತ ರೇಫಾಸನ ವಾಂತ (ಭ್ರೋಂ) ಅಂಕುಶ (ಕ್ರೋಂ) ದಿಂದ ಸಂಪುಟಿತಗೊಂಡು (ಕ್ರೋಂ ಭ್ರೋಂ ಕ್ರೋಂ) ನಂತರ ವಹ್ನಿ ಮನು ಮತ್ತು ಬಿಂದು ಸಂಯುಕ್ತ ಚ ವರ್ಗದ ನಾಲ್ಕು ವರ್ಣ (ಚ್ರೋಂ ಛ್ರೋಂ ಜ್ರೋಂ ಝ್ರೋಂ) ಇದರ ಅಂತದಲ್ಲಿ ಅಗ್ನಿಪ್ರಿಯಾ (ಸ್ವಾಹಾ) ಮತ್ತು ಪ್ರಾರಂಭದಲ್ಲಿ ತಾರ (ಓಂ) ಸೇರಿಸುವುದರಿಂದ 10 ಅಕ್ಷರಗಳ ಭೇರುಂಡ ಮಂತ್ರವು ಉತ್ಪನ್ನವಾಗುತ್ತದೆ.

"(ಈ) ಓಂ ಕ್ರೋಂ ಭ್ರೋಂ ಕ್ರೋಂ ಚ್ರೋಂ ಛ್ರೋಂ ಜ್ರೋಂ ಝ್ರೋಂ ಸ್ವಾಹಾ" ಇದರ ನಂತರ "ಭೇರುಂಡಾ ನಿತ್ಯಾ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಸೇರಿಸಿ ಭೇರುಂಡ ಪೂಜೆ ಮಾಡಬೇಕು.

### ವಹ್ನಿವಾಸಿನಿ ಮಂತ್ರ

ಮಾಯಾಂತೆ ವಹ್ನಿವಾಸಿನ್ಯೈ ಪ್ರಣವಾದ್ಯೋ ನಮೋಂತಿಕಃ ।
ಮಂತ್ರೋಯಂ ವಹ್ನಿವಾಸಿನ್ಯಾ ನವವರ್ಣಾಃ ಸಮೀರಿತಃ ॥ 19 ॥

ಮಾಯಾ (ಹ್ರೀಂ) ಅದರ ನಂತರ ವಹ್ನಿವಾಸಿನ್ಯೈ ಅಂತದಲ್ಲಿ 'ನಮಃ' ಮತ್ತು ಪ್ರಾರಂಭದಲ್ಲಿ ಪ್ರಣವ (ಓಂ) ಸೇರಿಸುವುದರಿಂದ 9 ಅಕ್ಷರಗಳ ವಹ್ನಿವಾಸಿನಿ ಮಂತ್ರವು ರಚಿತವಾಗುತ್ತದೆ.

(ಉ) "ಓಂ ಹ್ರೀಂ ವಹ್ನಿವಾಸಿನ್ಯೈ ನಮಃ' ಇದರ ನಂತರ 'ವಹ್ನಿವಾಸಿನಿ ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ' ಜೋಡಿಸಿ ವಹ್ನಿವಾಸಿನಿಯ ಪೂಜೆ ಮಾಡಬೇಕು.

### ಮಹಾವಿದ್ಯೇಶ್ವರಿ ಮಂತ್ರ

ತಾರೊ ಮಾಯಾಶಿಖಿವಹ್ನಿಪದ್ಮಾನಾಭೇಂದು ಸಂಯುತಃ ।
ಸವಿಸರ್ಗೊ ಭೃಗುರ್ನಿತ್ಯಾ ಕ್ಲಿನ್ನೆ ಪಶ್ಚಾನ್ಮದದ್ರವೆ ॥ 20 ॥
ಸ್ವಾಹಾಂತೊ ಮನುವರ್ಕೋಯಂ ಮಹಾವಿದ್ಯೇಶ್ವರಿ ಮನುಃ ।

ತಾರ (ಓಂ), ಮಾಯಾ (ಹ್ರೀಂ), ವಹ್ನಿಪದ್ಮನಾಭ ಮತ್ತು ಇಂದುಸಹಿತ ಶಿಖಿ (ಫ್ರೆಂ) ನಂತರ ವಿಸರ್ಗ ಸಹಿತ ಭೃಗು (ಸಃ) ನಂತರ ನಿತ್ಯಕ್ಲಿನ್ನೆ ಮದದ್ರವೆ

ಈಗ ಶ್ರೀವಿದ್ಯಾ ಆವರಣ ಪೂಜಾ ವಿಧಾನವನ್ನು ಹೇಳಲಾಗುತ್ತಿದೆ. ಈ ಪೂಜೆಯಿಂದ ಸಾಧಕನು ಇಚ್ಛಿತ ಫಲಗಳನ್ನು ಪಡೆಯುತ್ತಾನೆ.

ಶುಕ್ಲಪಕ್ಷದಿಂದ ಕಾಮೇಶ್ವರಿಯಿಂದ ವಿಚಿತ್ರಾ ಪರ್ಯಂತ ಮತ್ತು ಕೃಷ್ಣಪಕ್ಷದಲ್ಲಿ ವಿಚಿತ್ರಾದಿಂದ ಕಾಮೇಶ್ವರಿ ಪರ್ಯಂತ 15 ನಿತ್ಯೆಯರನ್ನು ತ್ರಿಕೋಣದ ಪ್ರತ್ಯೇಕ ರೇಖೆಯ ಮೇಲೆ 5–5–5 ಕ್ರಮದಲ್ಲಿ ವಾಮಾವರ್ತ ಪೂಜೆ ಮಾಡಬೇಕು. ನಂತರ ಮಧ್ಯಬಿಂದುವಿನಲ್ಲಿ ಷೋಡಶಿಯ ಪೂಜೆಯನ್ನು ಮೂಲಮಂತ್ರದಿಂದ ಮಾಡಬೇಕು.

ಮೊದಲು ಒಂದೊಂದು ಸ್ವರ, ನಂತರ ವಕ್ಷ್ಯಮಾಣ ನಿತ್ಯೆಯರನ್ನು ಒಂದೊಂದು ಮಂತ್ರ ನಂತರ ಕಾಮೇಶ್ವರಿ ಇತ್ಯಾದಿ ಹೆಸರು ನಂತರ "ನಿತ್ಯಾ ಶ್ರೀಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಸೇರಿಸಿ ಪೂಜೆ ಮಾಡಬೇಕು.

ಮಧ್ಯಬಿಂದುವಿನಿಂದ ಮೇಲೆ ತ್ರಿಕೋಣದಲ್ಲಿ ಆರಂಭದಿಂದ ಹಿಡಿದು ಅಂತಿಮ ಬಿಂದುವಿನವರೆಗೆ ವಾಮಾವರ್ತ ಕ್ರಮದಿಂದ ಅವುಗಳ ಕಲ್ಪನೆ ಮಾಡಬೇಕು. ಬಲಗೈಯಿಂದ 'ಪೂಜಯಾಮಿ' ಉಚ್ಚರಿಸುತ್ತ ಪುಷ್ಪಗಳನ್ನು ಸಮರ್ಪಿಸಬೇಕು. ಮತ್ತು ಎಡಗೈಯಿಂದ ತರ್ಪಯಾಮಿ ಹೇಳುತ್ತ ನೀರು ಅಥವಾ ಆಕಳಿನ ಹಾಲನ್ನು ಹಾಕಬೇಕು. ಕೆಲವು ಆಚಾರ್ಯರು ಹಸಿಶುಂಠಿ ಮಿಶ್ರಿತ ನೀರನ್ನು ಹಾಕಬೇಕು ಎಂದು ಅಭಿಪ್ರಾಯ ಪಡುತ್ತಾರೆ. ಈ ಪ್ರಕಾರ ತ್ರಿಕೋನದ ಪ್ರತ್ಯೇಕ ರೇಖೆಯ ಮೇಲೆ 5.5 ರ ಕ್ರಮದಿಂದ ವಾಮಾವರ್ತ ಈ ನಿತ್ಯಾರನ್ನು ಪೂಜಿಸಬೇಕು.

**ಪಂಚದಶ ನಿತ್ಯಾದೇವಿ ಮಂತ್ರಗಳು**

ನಿತ್ಯಾಮಂತ್ರಾಃ ಪ್ರವಕ್ಷ್ಯಂತೆ ಸ್ಮೃತಾಃ ಸರ್ವೇಷ್ಟಸಿದ್ಧಿದಾಃ ।
ಬಾಲಾ ತಾರೊ ನಮಃ ಕಾಮೇಶ್ವರಿ ದೃಗ್ದೀರ್ಘಜಾದಿಮಃ ॥ 7 ॥

ಕಾಮಫಲಪ್ರದೆ ಸರ್ವಸತ್ವವಾಂತೆ ತು ಶಂಕರಿ ।
ಸರ್ವಾಂತೆ ತು ಜಗದ್ವರ್ಣಾತ್ ಕ್ಷೋಭಣಾಂತೆ ಕರೀತಿ ಚ ॥ 8 ॥

ವರ್ಮತ್ರಯಂ ಪಂಚಬಾಣಾಃ ಪ್ರತಿಲೋಮಾಕುಮಾರಿಕಾ ।
ಕಾಮೇಶ್ವರಿಮನುಃ ಪ್ರೋಕ್ತಃ ಷಟ್‌ಚತ್ವಾರಿಂಶದರ್ಣವಾನ್ ॥ 9 ॥

ಸ್ಮರಣ ಮಾತ್ರದಿಂದ ಸಮಸ್ತ ಇಷ್ಟಾರ್ಥಗಳನ್ನು ಪೂರೈಸುವ ನಿತ್ಯಾದೇವಿಯ ಮಂತ್ರಗಳನ್ನು ಹೇಳಲಾಗುತ್ತದೆ.





**ಕಾಮೇಶ್ವರಿ ಮಂತ್ರ**

ಬಾಲಾ (ಐಂ ಕ್ಲೀಂ ಸೌಃ), ತಾರ (ಓಂ) ಮತ್ತು 'ನಮಃ ಕಾಮೇಶ್ವರಿ' ನಂತರ ದೃಕ್ ಮತ್ತು ದೀರ್ಘ ಆದಿ (ಇಚ್ಛಾ) ನಂತರ 'ಕಾಮಫಲಪ್ರದೆ', 'ಸರ್ವಸತ್ವವ', 'ಶಂಕರಿ' ನಂತರ 'ಸರ್ವಜಗ ತ್ಕೋಭಣಕರಿ' ವರ್ಮತ್ರಯ (ಹುಂ ಹುಂ ಹುಂ) ನಂತರ ಪಂಚಬಾಣ (ದ್ರಾಂ ದ್ರೀಂ ಕ್ಲೀಂ ಬ್ಲೂಂ ಸಃ) ಮತ್ತು ಅಂತದಲ್ಲಿ ಪ್ರತಿಲೋಮಾ ಬಾಲಾ (ಸೌಃ ಕ್ಲೀಂ ಐಂ) ಜೋಡಿಸುವುದರಿಂದ 46 ಅಕ್ಷರಗಳ ಕಾಮೇಶ್ವರಿ ಮಂತ್ರವು ಸಿದ್ಧವಾಗುತ್ತದೆ.

(ಅಂ) ಐಂ ಕ್ಲೀಂ ಸೋಃ ಓಂ ನಮಃ ಕಾಮೇಶ್ವರಿ ಇಚ್ಛಾಕಾಮ ಫಲಪ್ರದೆ ಸರ್ವ ಸತ್ವವಶಂಕರಿ ಸರ್ವಜಗತ್ಕೋಭಣಕರಿ ಹುಂ ಹುಂ ಹುಂ ದ್ರಾಂ ದ್ರೀಂ ಕ್ಲೀಂ ಸ ಸೌಃ ಕ್ಲೀಂ ಐಂ" ಇದರ ನಂತರ "ಕಾಮೇಶ್ವರಿ ನಿತ್ಯಾ ಶ್ರೀ ಪಾದುಕಾಂ ಪೂಜಯಾಮಿ ತರ್ಪಯಾಮಿ ನಮಃ" ಹೇಳುತ್ತ ಕಾಮೇಶ್ವರಿಗೆ ಹೂವು ಮತ್ತು ಜಲ ಸಮರ್ಪಿಸಬೇಕು.

**ಭಗಮಾಲಿನಿ ಮಂತ್ರ**

ವಾಗ್ಬೀಜಂ ಭಗಕರ್ಣಾಢ್ಯಾ ನಿದ್ರಾಗ್ರೆ ಭಗನೀತಿ ಚ ।
ಭಗೋದರೀತಿವರ್ಣಾಂತೆ ಭಗಮಾಲೆ ಭಗಾವಹೆ ॥ 10 ॥

ಭಗಗುಹ್ಯೇ ಭಗಾಂತೆ ಸಾಧ್ಯೋನೆ ಭಗನಿಪಾತಿನಿ ।
ಸರ್ವಾಂತೆ ಭಗಶಬ್ದಾಂತೆ ವಶಂಕರಿ ಭಗೋತಿ ಚ ॥ 11 ॥

ರೂಪೆ ನಿತ್ಯಪದಂ ಕ್ಲಿನ್ನೆ ಭಗಸ್ವಸ್ನಿಃ ಸದೀಪಕಃ ।
ಪೇಸರ್ವಭಸ್ಮತಿ ದೀರ್ಘಾನಿ ಮೆಹ್ರಾನಯ ವಾಗ್ನಯಃ ॥ 12 ॥

ದೇರೆತೇಸು ಸರ್ಝಿಂಟೀಶಃ ಪಾವಕಸ್ತೆ ಭಗಾರ್ಣಕಾಃ ।
ಕ್ಲಿನ್ನೇಕ್ಲಿನ್ನದ್ರವೆಕ್ಲೇದಯದ್ರಾವಯ ಚ ಕೇಶವಃ ॥ 13 ॥

ಮೋಘೆಭಗಾಂತೆ ವಿಚ್ಚೆ ಚ ಕ್ಷುಭ ಕ್ಷೋಭಯ ಸರ್ವ ಚ ।
ಸತ್ವಾನ್ಭಗೇಶ್ವರಿ ಪ್ರಾಂತೆ ವಾಗ್‌ಬ್ಲೂಂ ಜಂಬ್ಲೂಂ ಚ ಭೇಂಪುನಃ ॥ 14 ॥

ಬ್ಲೂಂಮೋಬ್ಲೂಂಹೇಪುನಃ ಬ್ಲೂಂಹೊಂಕ್ಲಿನ್ನೆ ಸರ್ವಾಣಿ ಭಾಕ್ಷರಮ್ ।
ಗಾನಿ ಮೆ ವಶಮಾನಂತೆ ಮಾರುತಃ ಸ್ತ್ರೀಂ ಹರೇತಿ ಚ ॥ 15 ॥

ಬ್ಲೆಂಮಾಯಾಂಗತ್ರಿಭೂವರ್ಣಾ ಪ್ರೋದಿತಾಭಗಮಾಲಿನಿ ।

ತ್ರಿಖಂಡ ಮುದ್ರಾ ಪ್ರದರ್ಶಿಸುತ್ತ ಮನಃ ಪುಷ್ಪಾಂಜಲಿ ಕೊಟ್ಟು ದೇವಿಯಿಂದ ತನ್ನನ್ನು ಅಭಿನ್ನ ಎಂದು ಭಾವಿಸಿ **ಬಾಲಾರ್ಕ ಮಂಡಲಾಭಾಸಾಂ ಚತುರ್ಬಾಹುಂ ತ್ರಿಲೋಚನಮ್ । ಪಾಶಾಕುಶಶರಾಂಶ್ಚಾಪಂಧಾರಯಂತಿ ಶಿವಾಂ ಭಜೆ"** ಮಂತ್ರದಿಂದ ಧ್ಯಾನ ಮಾಡಿ ಸ್ಥಾಪನಾ ಆದಿ ಮುದ್ರೆಗಳನ್ನು ಪ್ರದರ್ಶಿಸಬೇಕು.

**ಸ್ಥಾಪನಾ ಮುದ್ರಾ** : ಅಧೋಮುಖಿ ಕೃತ್ವಾ ಸ್ಯೈವ ಸ್ಥಾಪನೀತಿ ನಿಗದ್ಯತೆ ।

**ಸನ್ನಿಧಾನ** – ಆಶ್ಲಿಷ್ಟ ಮುಷ್ಟಿಯುಗತಾ ಪ್ರೋನ್ನತಾಂಗುಷ್ಠಯುಗ್ಮಕಾ – ಸನ್ನಿಧಾನೆ ಸಮುದಿಷ್ಟಾ ಮುದ್ರೇಯಂ ತಂತ್ರವೇದಿಭಿಃ ।

**ಸನ್ನಿರೋಧ** – ಅಂಗುಷ್ಠಗರ್ಭಿಣಿ ಸ್ಯೈವ ಸನ್ನಿರೋಧೆ ಸಮೀರಿತಾ ।

**ಸಮ್ಮುಖೀರಣ** – ಹೃದಿ ಬದ್ಧಾಂಜಲಿಮುದ್ರಾ ಸಮ್ಮುಖಿಕರಣೆ ಮತಾ ।

**ಸಕಲೀಕರಣ** – ದೇವಾಂಗೇಷು ಷಡಂಗಾನಾಂ ನ್ಯಾಸಃ ಸ್ಯಾತ್ಸಕಲೀಕೃತಿಃ ।

**ಅವಗುಂಠನ** – ಸವ್ಯಹಸ್ತಕೃತಾ ಮುಷ್ಟಿಃ ದೀರ್ಘಾಧೋಮುಖತರ್ಜನೀ ಅವಗುಂಠನ ಮುದ್ರೆಯ ಮಾಮಿತೊ ಭ್ರಾಮಿತಾ ಭವೇತ್

**ಅಮೃತೀಕರಣ** – ಅನ್ಯೋನ್ಯಾಭಿಮುಖೌ ಶ್ಲಿಷ್ಟೌ ಕನಿಷ್ಠಾನಾಮಿಕಾ ಪುನಃ ತಥಾ ತು ತರ್ಜನೀಮಧ್ಯಾ ಧೇನುಮುದ್ರಾ ಪ್ರಕೀರ್ತಿತಾ ಅಮೃತೀಕರಣಂ ಕುರ್ಯಾತ್ತಯಾ ದೇಶಿಕಸತ್ತಮಃ ।

**ಪರಮೀಕರಣ** – ಅನ್ಯೋನ್ಯ ಗ್ರಥಿತಾಂಗುಷ್ಠೌ ಪ್ರಸಾರಿತಕರಾಂಗುಲಿ ಮಹಾಮುದ್ರೇಯಮುದಿತ ಪರಮೀಕರಣಂ ಬುಧೈಃ

[ಈ ಪ್ರಕಾರ ಶ್ರೀ ಮನ್ ಮಹೀಧರ ವಿರಚಿತ ಮಂತ್ರ ಮಹೋದಧಿಯ ಏಕಾದಶ ತರಂಗ ಸಂಪೂರ್ಣವು ]







# ದ್ವಾದಶ ತರಂಗ



## ಶ್ರೀ ವಿದ್ಯಾ ಪರಿವಾರ ಪೂಜಾ

ಶ್ರೀವಿದ್ಯಾಯಾ ಅಥೋ ವಕ್ಷೆ ಪರಿವಾರ ಪ್ರಪೂಜನಮ್ ।
ಕೃತೇನ ಏನ ಮಂತ್ರಜ್ಞೋ ಲಭತೆ ವಾಂಛಿತಾಧಿಕ ಮ್ ॥ 1 ॥

ಶ್ರೀ ವಿದ್ಯಾ ಪರಿವಾರ ಪೂಜಾ

ಶುಕ್ಲಪಕ್ಷೆ ಯಜೇನ್ನಿತ್ಯಾಃ ಕಾಮೇಶ್ವರ್ಯಾದಿಷೋಡಶ ।
ಕೃಷ್ಣಪಕ್ಷೆ ವಿಚಿತ್ರಾದ್ಯಾಃ ಕಾಮೇಶ್ವರ್ಯವಸಾನಕಾಃ ॥ 2 ॥
ಷೋಡಶಂ ಚ ಯಜೇನ್ಮಧ್ಯೆ ವಕ್ಷೆ ತದ್ಯಜನಕ್ರಮಮ್ ।
ಏಕೈಕಂ ಸ್ವರಮುಚ್ಚಾರ್ಯ ನಿತ್ಯಾಮಂತ್ರಂ ಸಮುಚ್ಚರೇತ್ ॥ 3 ॥
ಕಾಮೇಶ್ವರ್ಯಾದಿನಾಮಾಂತೆ ನಿತ್ಯಾಶ್ರೀಪಾದುಕಾಂ ಪಠೇತ್ ।
ಪೂಜಯಾಮಿ ತರ್ಪಯಾಮಿ ಹೃದಯಂ ಪ್ರೋಚ್ಯ ಪೂಜಯೇತ್ ॥ 4 ॥
ಬಿಂದುಂ ಪರಿತ ಆಕಲ್ಪ್ಯ ತ್ರಿಕೋಣೆ ಬಿಂದುತೋಂತಿಮಮ್ ।
ದಕ್ಷಹಸ್ತೇನ ಪುಷ್ಪಾದಿವಾಮೇನಾಂಭೊ ವಿನಿಃ ಕ್ಷಿಪೇತ್ ॥ 5 ॥
ಕೇಚಿದಾಹುರೆಹಾಚಾರ್ಯಾ ಆದ್ರಕೇನ ಜಲಂ ಕ್ಷಿಪೇತ್ ।
ವಾಮಾವರ್ತೇನ ಸಂಪೂಜ್ಯಾಃ ಕೋಣಪಾರ್ಶ್ವೆಷು ಪಂಚಶಃ ॥ 6 ॥

ಮಹಾಪದ್ಮವನಾಂತಸ್ಥೆ ಕಾರಣಾನಂದ ವಿಗ್ರಹೆ ।
ಸರ್ವಭೂತ ಹಿತೆ ಮಾತರೆಹ್ರೋಹಿ ಪರಮೇಶ್ವರಿ

ಮಹಃ ಪೂಜಾಭಚೈತನ್ಯಸಂಯುಕ್ತ ಕುಸುಮಾಂಜಲಿಮ್ । ॥ 103 ॥
ಶ್ರೀ ಚಕ್ರರಾಜೆ ಸಂಯೋಜ್ಯ ತತಃ ಶ್ಲೋಕದ್ವಯಂ ಪಠೇತ್ ॥ 104 ॥

ಪ್ರಥಮ 'ಪ್ರಕಟ ಗುಪ್ತತರ'ದ ನಂತರ 'ಸಂಪ್ರದಾಯ' ಕುಲದ ನಂತರ ನೇತ್ರಯುಕ್ತ ಮೇಷ (ನಿ) ನಂತರ 'ಗರ್ಭರ' ಹೇಳಬೇಕು. ನಂತರ ಹ್ಯ ಅತಿರಹಸ್ಯ ಪರಾಪರ ರಹಸ್ಯ ಸಂಜ್ಞಕ ಶ್ರೀ ಚಕ್ರಗತಯೋಗಿನಿ ಪಾದುಕಾ, ಮನಃ 'ಭ್ಯೋ' 'ನಮ' ಹೇಳಬೇಕು. ಪ್ರಾರಂಭದಲ್ಲಿ ಮಾಯಾ (ಹ್ರೀಂ) ಮತ್ತು ರಮಾ (ಶ್ರೀಂ) ಬೀಜ ಜೋಡಿಸುವುದರಿಂದ ಐವತ್ತೊಂದು ಅಕ್ಷರಗಳ ಸರ್ವಸಿದ್ಧಿದಾಯಕ ಪುಷ್ಪಾಂಜಲಿ ಅರ್ಪಣಾ ಮಂತ್ರವು ಉತ್ಪನ್ನವಾಗುತ್ತದೆ.

"ಹ್ರೀಂ ಶ್ರೀಂ ಪ್ರಕಟಗುಪ್ತಗುಪ್ತತರ ಸಂಪ್ರದಾಯಕುಲನಿಗರ್ಭರಹಸ್ಯಾತಿ ರಹಸ್ಯಪರಾಪರ ರಹಸ್ಯ ಸಂಜ್ಞಕ ಶ್ರೀ ಚಕ್ರಗತ ಯೋಗಿನಿ ಪಾದುಕಾಭ್ಯೋ ನಮಃ

ಪುಷ್ಪಾಂಜಲಿಯನ್ನು ಕೊಡಲು ಮೊದಲು ತ್ರಿಖಂಡಾಮುದ್ರಾ ಮಾಡಬೇಕು. ನಂತರ ಅಂಜಲಿಯಲ್ಲಿ ಪುಷ್ಪಗಳನ್ನು ತೆಗೆದುಕೊಂಡು (11,51) ದೇವಿಯ ಸ್ವರೂಪವನ್ನು ಧ್ಯಾನಮಾಡಿ ಮೂಲಮಂತ್ರದ ಉಚ್ಚಾರಣೆ ಮಾಡುತ್ತ ಪುಷ್ಪಾಂಜಲಿ ಅರ್ಪಿಸಬೇಕು. ನಂತರ ಹೃದಯ ಕಮಲದಿಂದ ನಾಸಿಕ ರಂಧ್ರದಿಂದ ನಿರ್ಗತ ಮತ್ತು ಬ್ರಹ್ಮರಂಧ್ರದಿಂದ ಯೋಜಿತ ಚೈತನ್ಯಕ್ಕೆ ಪುಷ್ಪಾಂಜಲಿಯಲ್ಲಿ ತೆಗೆದುಕೊಂಡು ಆ ಚೈತನ್ಯ ತೇಜವನ್ನು ಶ್ರೀ ಚಕ್ರರಾಜದ ಮೇಲೆ ಸ್ಥಾಪಿಸಬೇಕು. ನಂತರ ಕೆಳಗಿನ ಶ್ಲೋಕಗಳನ್ನು ಹೇಳುತ್ತ ದೇವಿಯ ಆವಾಹನೆ ಮಾಡಬೇಕು.

ದೇವೇಶಿ ಭಕ್ತಿಸುಲಭೆ ಸರ್ವಾವರಣ ಸಂಯುತೆ ।
ಯಾವತ್ವಾಂ ಪೂಜಯಿಷ್ಯಾಮಿ ತಾವತ್ವಂ ಸುಸ್ಥಿರಾಭವ ॥ 105 ॥

ಇದಮಾವಾಹನಂ ಪ್ರೋಕ್ತಂ ತತಃ ಸ್ಥಾಪನಮಾಚರೇತ್ ।
ಭೈರವೀಮಂತ್ರಮುಚ್ಚಾರ್ಯ ಶ್ರೀ ಮತ್ತ್ರಿಪುರ ಸುಂದರಿ ॥ 106 ॥

ಚಕ್ರೇಶ್ವಿನ್ ಕುರು ಸಾನಿಧ್ಯಂ ನಮೋಂತ ಸ್ಥಾಪನೆ ಮನುಃ ।
ದರ್ಶಯೇತ್ ಸ್ಥಾಪನಿಂ ಮುದ್ರಾಂ ಸನ್ನಿಧಿಂ ಸನ್ನಿರೋಧನಮ್ ॥ 107 ॥

ಸಮ್ಮುಖಿಕರಣಂ ತತ್ತನ್ಮುದ್ರಾಭಿರ್ಮಂತ್ರಿವಿಚ್ಚರೇತ್ ।
ನ್ಯಸೇತ್ ಷಡಂಗ ದೇವಂಗೆ ಸಕಲೀಕರಣ ತ್ರಿದಮ್ ॥ 108 ॥





ಅವಗುಂಠಾಮೃತಿಕಾರಪರಮೀಕರಣಾನಿ ಚ ।
ತತ್ತನ್ಮುದ್ರಾಭಿರಾರಾಧ್ಯ ಮೂಲೇನ ತ್ರಿಃ ಪ್ರಪೂಜಯೇತ್ ॥ 109 ॥

ತತಃ ಪಾದ್ಯಾದಿಕಾನ್ಸರ್ವ್ಯಗುಪಚಾರಾನ್ ಪ್ರಕಲ್ಪಯೇತ್ ।
ಮೂಲಮಂತ್ರೇಣ ಪುಷ್ಪಾಂತಾನ್ ಪುನಃ ಸಂತರ್ಪಯೇತ್ತ್ರಿಧಾ ॥ 110 ॥

ಪುಷ್ಪಾಂಜಲಿಂ ವಿಧಾಯಾಥ ಧ್ಯಾತ್ವಾ ದೇವಿಂ ಯಥಾವಿಧಿ ।
ಅನುಜ್ಞಾಂ ಪ್ರಾರ್ಥಯೇನ್ಮಂತ್ರಿ ಪರಿವಾರಸಮರ್ಚನೆ ॥ 111 ॥
ಮಹಾಪದ್ಮವನಾಂತಸ್ಥೆ ಕಾರಣಾನಂದವಿಗ್ರಹೆ ।
ಸರ್ವಭೂತಹಿತೆ ಮಾತರೆ ಹ್ರೋಹಿ ಪರಮೇಶ್ವರಿ ॥
ದೇವೇಶಿ ಭಕ್ತಿಸುಲಭೆ ಸರ್ವಾವರಣಸಂಯುತೆ ।
ಯಾವತ್ವಾಂ ಪೂಜಯಿಷ್ಯಾಮಿ ತಾವತ್ವಂ ಸುಸ್ಥಿರಾಭವ ॥

ಈ ಎರಡೂ ಶ್ಲೋಕಗಳನ್ನು ಪಠಿಸುತ್ತ ದೇವಿಯನ್ನು ಆವಾಹನೆ ಮಾಡಬೇಕು. ನಂತರ ಸ್ಥಾಪನೆ ಮಾಡಬೇಕು. ನಂತರ ಪ್ರಥಮ ಭೈರವೀ ಮಂತ್ರ (ಹಸ್ಶ್ಯೆಂ ಹಸ್ಕ್ಲ್ರೀಂ ಹಸೌಃ) ಹೇಳುತ್ತ "ಶೀಮತ್ತ್ರಿಪುರಸುಂದರಿ ಚಕ್ರೇಶ್ವಿನ್ ಕುರು ಸಾನಿಧ್ಯಂ ನಮಃ" ಈ ಸ್ಥಾಪನಾ ಮಂತ್ರದಿಂದ ಸ್ಥಾಪನೆ ಮಾಡಿ ಸ್ಥಾಪನಿ ಮುದ್ರೆಯನ್ನು ಪ್ರದರ್ಶಿಸಬೇಕು. ನಂತರ ಸಾಧಕನು ಸನ್ನಿಧಿ, ಸನ್ನಿರೋಧ ಮತ್ತು ಸಂಮುಖಿ ಕರಣ ಮುದ್ರಾ ಪ್ರದರ್ಶನ ಮಾಡುತ್ತ ದೇವಿಯ ಅಂಗಗಳಲ್ಲಿ ಷಡಂಗನ್ಯಾಸ ಮಾಡಬೇಕು. ಈ ಪ್ರಕಾರದ ಪ್ರಕ್ರಿಯೆಯನ್ನು ಸಕಲೀಕರಣ ಎನ್ನುತ್ತಾರೆ.

ಇದರ ನಂತರ ಅವಗುಂಠನ, ಅಮೃತೀಕರಣ, ಪರಮೀಕರಣ ಮುದ್ರೆಗಳನ್ನು ಪ್ರದರ್ಶಿಸುತ್ತ ಮೂರು ಬಾರಿ ಮೂಲ ಮಂತ್ರವನ್ನು ಉಚ್ಚಾರಣೆ ಮಾಡುತ್ತ ಪಾದ್ಯ ಮುಂತಾದ ಉಪಚಾರಗಳಿಂದ ಪುಷ್ಪಾಂಜಲಿ ಪರ್ಯಂತ ದೇವಿಯನ್ನು ಪೂಜಿಸಿ ಮೂರು ಬಾರಿ ತರ್ಪಣ ಕೊಡಬೇಕು. ಪುನಃ ಪುಷ್ಪಾಂಜಲಿ ಕೊಟ್ಟು ವಿಧಿವತ್ತಾಗಿ ದೇವಿಯನ್ನು ಧ್ಯಾನ ಮಾಡಿ ಆವರಣ ಪೂಜೆಗಾಗಿ ದೇವಿಯ ಅಜ್ಞೆಯನ್ನು ಪಡೆದುಕೊಳ್ಳಬೇಕು.

## ಸಂಕ್ಷಿಪ್ತ ಪೂಜಾ ವಿಧಾನ

ಪೀಠ ಪೂಜೆಯನ್ನು ಮಾಡಿದ ನಂತರ "ಹ್ರೀಂ ಶ್ರೀಂ ಪ್ರಗಟ ಗುಪ್ತತರ ಸಂಪ್ರದಾಯ ಕುಲನಿರ್ಗಮ ರಹಸ್ಯಾತಿ ರಹಸ್ಯ ಪರಾಪರ ರಹಸ್ಯ ಸಂಜ್ಞಕ ಶ್ರೀ ಚಕ್ರಗತ ಯೋಗಿನಿ ಪಾದುಕೇಭ್ಯೋ ನಮಃ" ಮಂತ್ರದಿಂದ ಪುಷ್ಪಾಂಜಲಿಯನ್ನು ಕೊಟ್ಟು

ಓಂ ಕೂರ್ಮಾಯ ನಮಃ । ಓಂ ಶೇಷಾಯ ನಮಃ,
ಓಂ ವರಾಹಾಯ ನಮಃ । ಓಂ ಪೃಥಿವ್ಯೈ ನಮಃ,
ಓಂ ಸುಧಾಂಬುಧಯೆ ನಮಃ । ಓಂ ರತ್ನದ್ವೀಪಾಯ ನಮಃ,
ಓಂ ಮೇರವೆ ನಮಃ । ಓಂ ನಂದನವನಾಯ ನಮಃ,
ಓಂ ಕಲ್ಪವೃಕ್ಷಾಯ ನಮಃ ।

ನಂತರ ಕರ್ಣಿಕಾದ ಮಧ್ಯದಲ್ಲಿ –

ಓಂ ವಿಚಿತ್ರಾನಂದ ಭೂಮ್ಯೈ ನಮಃ । ಓಂ ಶ್ರೀ ರತ್ನಮಂದಿರಾಯ ನಮಃ, ಓಂ ರತ್ನವೇದಿಕಾಯ್ಯೆ ನಮಃ । ಓಂ ಛತ್ರಾಯ ನಮಃ, ಓಂ ರತ್ನಸಿಂಹಾಸನಾಯ ನಮಃ । ಆಮೇಲೆ ಪೀಠದ ನಾಲ್ಕು ದಿಕ್ಕುಗಳಲ್ಲಿ, ಪೂರ್ವಾದಿ ಕ್ರಮದಿಂದ, ।

ಓಂ ಧರ್ಮಾಯ ನಮಃ, ಓಂ ಜ್ಞಾನಾಯ ನಮಃ । ಓಂ ವೈರಾಗ್ಯಾಯ ನಮಃ, ಓಂ ಐಶ್ವರ್ಯಾಯ ನಮಃ ।

ಪೀಠದ ನಾಲ್ಕೂ ಮೂಲೆಗಳಲ್ಲಿ –

ಓಂ ಅಧರ್ಮಾಯ ನಮಃ । ಓಂ ಅಜ್ಞಾನಾಯ ನಮಃ, ಓಂ ಅವೈರಾಗ್ಯಾಯ ನಮಃ । ಓಂ ಅನಾಶ್ವೈರ್ಯಾಯ ನಮಃ । ಪುನಃ ಮಧ್ಯದಲ್ಲಿ ಓಂ ಆನಂದಕಂದಾಯ ನಮಃ । ಓಂ ಸವಿನ್ನಾಲಯ ನಮಃ, ಓಂ ಸರ್ವತತ್ವಾತ್ಮಕ ಪದ್ಮಾಯ ನಮಃ । ಓಂ ಪ್ರಕೃತಿಮಯ ಪತ್ರೇಭ್ಯೋ ನಮಃ, ಓಂ ವಿಕಾರಮಯ ಕೇಸರೇಭ್ಯೋ ನಮಃ, ಓಂ ಪಂಚಾಶದ್‌ಬೀಜಾಢ್ಯಕರ್ಣಿಕಾಯ ನಮಃ

ಈ ಪ್ರಕಾರ ಪೂಜೆ ಮಾಡಿ ಪುನಃ ತತ್ರೈವ

ಓಂ ಅಂ ದ್ವಾದಶಕಲಾತ್ಮನೆ ಸೂರ್ಯಮಂಡಲಾಯ ನಮಃ । ಓಂ ಉಂ ಷೋಡಶಕಲಾತ್ಮನೆ ಸೋಮಮಂಡಲಾಯ ನಮಃ । ಓಂ ಮಂ ದಶಕಲಾತ್ಮನೆ ವಹ್ನಿಮಂಡಲಾಯ ನಮಃ । ಓಂ ಸಂ ಸತ್ವಾಯ ನಮಃ, ಓಂ ರಂ ರಜಸೆ ನಮಃ ಓಂ ತಂ ತಮಸೆ ನಮಃ, ಓಂ ಅಂ ಆತ್ಮಸೆ ನಮಃ । ಓಂ ಉಂ ಅಂತರಾತ್ಮನೆ ನಮಃ, ಓಂ ಮಂ ಪರಮಾತ್ಮನೆ ನಮಃ । ಓಂ ಹ್ರೀಂ ಜ್ಞಾನಾತ್ಮನೆ ನಮಃ । ಪುನಃ ತತ್ರೈವ – ಓಂ ಮಾಂ ಮಾಯಾತತ್ವಾಯ ನಮಃ । ಓಂ ಕಂ ಕಲಾತತ್ವಾಯ ನಮಃ, ಓಂವಿಂ ವಿದ್ಯಾತತ್ವಾಯ ನಮಃ । ಓಂ ಪಂ ಪರತತ್ವಾಯ ನಮಃ, । ಪುನಃ ಅದೇ ಸ್ಥಾನದಲ್ಲಿ – ಓಂ ಬಂ ಬ್ರಹ್ಮಪ್ರೇತಾಯ ನಮಃ ।





ಓಂ ಎಂ ವಿಷ್ಣುಪ್ರೇತಾಯ ನಮಃ, ಓಂ ರುಂ ರುದ್ರಪ್ರೇತಾಯ ನಮಃ । ಓಂ ಈಂ ಈಶ್ವರಪ್ರೇತಾಯ ನಮಃ, ಓಂ ಸಂ ಸದಾಶಿವಪ್ರೇತಾಯ ನಮಃ । ಪುನಃ ತತ್ರೈವ – ಓಂ ಸುಧಾರ್ಣ ವಾಸನಾಯ ನಮಃ । ಓಂ ಪ್ರೇತಾಂಬುಜಾಸನಾಯ ನಮಃ, ಓಂ ದಿವ್ಯಾಸನಾಯ ನಮಃ । ಓಂ ಚಕ್ರಾಸನಾಯ ನಮಃ, ಓಂ ಸರ್ವ ಮಂತ್ರಾಸನಾಯ ನಮಃ । ಓಂ ಸಾಧ್ಯಸಿದ್ಧಾಸನಾಯ ನಮಃ

ಆಮೇಲೆ ಈ ಪ್ರಕಾರ ಚಕ್ರರಾಜ ಪೂಜೆ ಮಾಡಬೇಕು.

ಮೊದಲು ಎಂಟು ದಿಕ್ಕುಗಳಲ್ಲಿ ಮತ್ತು ಮಧ್ಯದಲ್ಲಿ ಇಚ್ಛಾದಿ ನವಪೀಠ ಶಕ್ತಿಗಳನ್ನು ಪೂರ್ವಾದಿ ದಿಶಾ ಕ್ರಮದಲ್ಲಿ – ಓಂ ಇಂ ಇಚ್ಛಾಯೈ ನಮಃ, ಓಂ ಜ್ಞಾಂ ಜ್ಞಾನಾಯೈ ನಮಃ । ಓಂ ಕ್ರಿಂ ಕ್ರಿಯಾಯೈ ನಮಃ, ಓಂ ಕಾಂ ಕಾಮಿನ್ಯೈ ನಮಃ । ಓಂ ಕಂ ಕಾಮದಾಯಿನ್ಯೈ ನಮಃ, ಓಂ ರಂ ರತ್ಯೈ ನಮಃ । ಓಂ ರಂ ರತಿಪ್ರಿಯಾಯೈ ನಮಃ, ಓಂ ನಂ ನಂದಾಯೈ ನಮಃ । ಮಧ್ಯದಲ್ಲಿ – ಓಂ ಮಂ ಮನೋನ್ಮನ್ಯೈ ನಮಃ

ನಂತರ "ಏಂ ಪರಾಯೈ ಅಪರಾಯೈ ಪರಾಪರಾಯೈ ಹಸೌಃ ಸದಾಶಿವ ಮಹಾಪ್ರೇತ ಪದ್ಮಾಸನಾಯ ನಮಃ" ಮಂತ್ರದಿಂದ ಚಕ್ರರಾಜ ಪೂಜೆ ಮಾಡಬೇಕು. ಈ ಪ್ರಕಾರ ಪೀಠ ಪೂಜೆ ಮಾಡಿದ ನಂತರ ಪುಷ್ಪಾಂಜಲಿ ಸಮರ್ಪಿಸಬೇಕು.

### ಪುಷ್ಪಾಂಜಲಿ ಮಂತ್ರ

ಪ್ರಕಟಾಂತಂ ಗುಪ್ತಗುಪ್ತತರಾಂತೆ ಸಂಪ್ರದಾಯ ಚ ।
ಕುಲಾಂತೆ ನೇತ್ರಯುಗ್ಮೇಷೊ ಗರ್ಭರೇತಿ ತತಃ ಪಠೇತ್ ॥ 98 ॥

ಹಸ್ಯಾಂತೇತಿ ರಹಸ್ಯಾರ್ಣಾಪರಾಪರಾರಹಸ್ಯ ಚ ।
ಸಂಜ್ಞಕಃ ಶ್ರೀ ಚಕ್ರಗತೊ ಯೋಗಿನೀಪಾದುಕಾಪದಮ್ ॥ 99 ॥

ಭ್ಯೋನಮೊಂತೊ ಧರಾಬಾಣವರ್ಣೊ ಮಾಯೂರಮಾದಿಕಃ ।
ಮಂತ್ರಪುಷ್ಪಾಂಜಲಿರ್ದಾನೆ ಸರ್ವಸಿದ್ಧಿ ಪ್ರದಾಯಕಃ ॥ 100 ॥

ಮುದ್ರಾಂ ತ್ರಿಖಂಡಾಂ ಕೃತ್ವಾಥ ಪುಷ್ಪಾಣ್ಯಾದಾಯಚಾಂಜತಾ ।
ಧ್ಯಾತ್ವಾ ಪೂರ್ವೋದಿತಾಂ ದೇವಿಂ ಮೂಲವಿದ್ಯಾಂ ಸಮುಚ್ಚರೇತಾ ॥ 101॥

ಚೈತನ್ಯಂ ಹೃತ್ಕಮಲತೊ ನಾಸಿಕಾರಂಧ್ರನಿರ್ಗತಮ್ ।
ಬ್ರಹ್ಮರಂಧ್ರಸ್ಯ ಮಾರ್ಗಣ ಯೋಜಿತಂ ಕುಸುಮಾಂಜತೌ ॥ 102 ॥

ತಾರಾಮಾತ್ರಾತ್ರಯಾಧ್ಯಂ ತತ್ತ್ವವರ್ಣಾಧ್ಯಾನ್ಸುಗ್ಣಾನ್ ಯಜೇತ್ ।
ಮಾತ್ರಾತ್ರಯಾಧ್ಯಮಾತ್ಮಾನಮಂತರಾತ್ಮಾನಮೇವ ಚ
ತೃತಿಯಂ ಪರಮಾತ್ಮನಂ ಜ್ಞಾನಾತ್ಮಾನಂ ಪರಾದಿಕಮ್ । ॥ 89 ॥

ಮಂಡೂಕ, ಕಾಲಾಗ್ನಿರುದ್ರ, ಮೂಲಪ್ರಕೃತಿ, ಆಧಾರಶಕ್ತಿ, ಕರ್ಮ, ಶೇಷ, ವರಾಹ, ಮೇದಿನಿ, ಸುಧಾಂಬುಧಿ, ರತ್ನದ್ವೀಪ, ಮೇರು, ನಂದನವನ ಮತ್ತು ಕಲ್ಪವೃಕ್ಷಗಳ ಪೀಠದ ಮೇಲೆ ಪೂಜೆ ಮಾಡಬೇಕು. ನಂತರ ಮಂಧ್ಯದಲ್ಲಿ ವಿಚಿತ್ರಾನಂದ ಭೂಮಿ, ಶ್ರೀ ರತ್ನಮಂದಿರ, ರತ್ನವೇದಿಕಾ, ಛತ್ರ ಮತ್ತು ಸಿಂಹಾಸನದ ಪೂಜ್ಯೆಯನ್ನು ಮಾಡಿ ಸಿಂಹಾಸನದ ಪಾದಭೂತ, ಧರ್ಮ (ಜ್ಞಾನ, ವೈರಾಗ್ಯ, ಐಶ್ವರ್ಯಗಳ ಮತ್ತು ಅಧರ್ಮ, ಅಜ್ಞಾನ, ಮೋಹ ಇತ್ಯಾದಿಗಳ) ಗಳ ಪೂಜೆ ಮಾಡಬೇಕು. ನಂತರ ಪದ್ಮ ಆನಂದಕಂದ ಮತ್ತು ಜ್ಞಾನನಾಲದ ಕರ್ಣಿಕಾದಲ್ಲಿ ಪೂಜೆ ಮಾಡಿ ಓಂಕಾರದ ಮೂರು ಸ್ವರಗಳ (ಅಂ, ಉಂ, ಮಂ) ಜೊತೆ ಸೂರ್ಯ, ಚಂದ್ರ ಮತ್ತು ಅಗ್ನಿಮಂಡಲಗಳು ತಮ್ಮ ಕಲೆಗಳ ಜೊತೆಗೆ ಯಜ್ಞ ಮಾಡಬೇಕು. ಈ ಪ್ರಕಾರ ತಮ್ಮ ನಾಮದ ಮೊದಲಕ್ಷರದಿಂದ ಯುಕ್ತ ಸತ್ವ, ರಜ ಮತ್ತು ತದೋ ಗುಣಗಳನ್ನು ಕೂಡಾ ಪೂಜಿಸಬೇಕು. ನಂತರ ಮೂರು ಸ್ವರಗಳ ಜೊತೆಗೆ ಆತ್ಮ, ಅಂತರಾತ್ಮ ಮತ್ತು ಪರಮಾತ್ಮರ, ಮಾಯಾಬೀಜದ ಜೊತೆಗೆ ಜ್ಞಾನಾತ್ಮದ ಮತ್ತು ತನ್ನ ವರ್ಣಗಳೊಂದಿಗೆ ಮಾಯಾತತ್ವ, ಕಲಾತತ್ವ, ವಿದ್ಯಾತತ್ವ ಮತ್ತು ಪರತತ್ವಗಳನ್ನು ಪೂಜೆ ಮಾಡಬೇಕು. ನಂತರ ತಮ್ಮ ತಮ್ಮ ಹೆಸರಿನ ಮೊದಲಕ್ಷರವನ್ನು ಪ್ರಾರಂಭದಲ್ಲಿ ಜೋಡಿಸಿ ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಮತ್ತು ಸದಾಶಿವ ಈ 5 (ಪ್ರೇತ) ದೇವರನ್ನು ಪೂಜಿಸಬೇಕು.

ಸುಧಾರ್ಣವಾಸನಂ ಪಶ್ಚಾದ್ಯಜೇತ್ ಪ್ರೇತಾಂಬುಜಾಸನಮ್ ।
ದಿವ್ಯಾಸನಂ ಚಕ್ರಾಸನಂ ಸರ್ವಮಂತ್ರಾಸನಂ ತತಃ ॥ 92 ॥

ಸಾಧ್ಯಸಿದ್ಧಾಸನಂ ಪ್ರಾರ್ಚ್ಯ ಚಕ್ರರಾಜಂ ಪ್ರಪೂಜಯೇತ್ ।
ಪೀಠಶಕ್ತಿಸ್ತತಃ ಕಾಷ್ಟಸ್ವಿಚ್ಛಜ್ಞಾನಂ ಕ್ರಿಯಾ ತಥಾ ॥ 93 ॥

ಕಾಮಿನಿ ಕಾಮದಾಯಿನ್ಯೌ ರತಿರೇವಂ ರತಿಪ್ರಿಯಾ ।
ನಂದಾಮನೋನ್ಮನಿ ಚೇತಿ ವರಾಭಯಕರಾಸ್ತು ತಾ ॥ 94 ॥
ತತ ಆಸನಮಂತ್ರೇಣ ಪೂಜಯೇಚ್ಚಕ್ರನಾಯಕಮ್ ।





ನಂತರ ಸುಧಾರ್ಣವಾಸನ, ಪ್ರೇತಾಂಬುಜಾಸನ, ದಿವ್ಯಾಸನ, ಚಕ್ರಾಸನ, ಸರ್ವ ಮಂತ್ರಾಸನ ಮತ್ತು ಸಾಧ್ಯಾಸಿದ್ಧಾಸನದ ಪೂಜೆ ಮಾಡಿ ಚಕ್ರ ರಾಜನ ಪೂಜೆಯನ್ನು ಮಾಡಬೇಕು.

ಚಕ್ರರಾಜದ ಅಷ್ಟದಿಶೆಗಳಲ್ಲಿ ಮತ್ತು ಮಧ್ಯದಲ್ಲಿ ವರದ ಮತ್ತು ಅಭಯ ಮುದ್ರೆ ಧರಿಸಿರುವ ಪೀಠಶಕ್ತಿಗಳನ್ನು ಪೂಜಿಸಬೇಕು. 1. ಇಚ್ಛಾ 2. ಜ್ಞಾನ 3. ಕ್ರಿಯಾ 4. ಕಾಮಿನಿ 5. ಕಾಮದಾಯಿನಿ 6. ರತಿ 7. ರತಿಪ್ರಿಯಾ 8. ನಂದಾ ಮತ್ತು ಮನೋನ್ಮನಿ ಈ ಒಂಭತ್ತು ಪೀಠಶಕ್ತಿಗಳಾಗಿವೆ. ಇದರ ನಂತರ ಆಸನ ಮಂತ್ರದಿಂದ ಚಕ್ರರಾಜ ಪೂಜೆ ಮಾಡಬೇಕು.

### ಪೀಠಮಂತ್ರ

ವಾಕ್ಪರಾಯೈ ಕೇಶವೋಥ ಪರಾಯೈ ಚ ಪರಾಪರಾ ॥ 95 ॥
ಬಾಲಿದಾಮೋದರಾರೂಢಸ್ತಾರ್ತಿಯಂ ಚ ಸದಾಶಿವ ।
ಮಹಾಪ್ರೇತಂ ಪಠೇತ್ ಪದ್ಮಾಸನಾಯ ಹೃದಯಾಂತಿಕಃ ॥ 96 ॥

ಏಕೋನತ್ರಿಂಶದರ್ಣಾಢ್ಯೋ ಮನುರಾಸನಸಂಜ್ಞಕಃ ।
ಏವಂ ಪೀಠಂ ಸಮಭ್ಯರ್ಚ ದಧ್ಯಾತ್ ಪುಷ್ಪಾಂಜಲಿಂ ತತಃ ॥ 97 ॥

ವಾಗ್ (ಐಂ), 'ಪರಾಯೈ' ಪದ, ನಂತರ ಕೇಶವ (ಅ), 'ಅಪರಾಯೈ' ಪದ, ನಂತರ 'ಪರಾಪರಾ' ಮತ್ತು ದಾಮೋದರಾರೂಢ ವಾಲಿ (ಯೈ), ನಂತರ ತಾರ್ತಿಯ ಬೀಜ ಹಸೌಃ, ಸದಾಶಿವ ಮಹಾಪ್ರೇತ, 'ಪದ್ಮಾಸನಾಯ' ಪದ, ಅದರ ಅಂತದಲ್ಲಿ ಹೃದಯ (ನಮಃ) ಜೋಡಿಸುವುದರಿಂದ 29 ಅಕ್ಷರಗಳ ಆಸನ ಮಂತ್ರವು ಉತ್ಪನ್ನವಾಗುತ್ತದೆ. "ಐಂ ಪರಾಯೈ ಅಪರಾಯೈ ಪರಾಪರಾಯೈ ಹಸೌಃ ಸದಾಶಿವಮಹಾಪ್ರೇತಪದ್ಮಾಸನಾಯ ನಮಃ"

ಪೀಠಪೂಜಾ ವಿಧಾನ: ಅರ್ಘ್ಯ ಪಾತ್ರ ಸ್ಥಾಪನೆಯ ನಂತರ, ವಿಧಿವತ್ ದೇವಿಯ ಧ್ಯಾನ ಮಾಡಿ ಮಾನಸೋಪಚಾರಗಳಿಂದ ಪೂಜೆ ಮಾಡಬೇಕು. ನಂತರ ಶ್ರೀ ಚಕ್ರಾತ್ಮಕ ಯಂತ್ರರಾಜದ ಪೀಠ ದೇವತೆಗಳು ಮತ್ತು ಪೀಠ ಶಕ್ತಿಗಳನ್ನು ಪೂಜೆ ಮಾಡಬೇಕು. ಕರ್ಣಿಕಾದಲ್ಲಿ –

ಓಂ ಮಾಂಡೂಕಾಯ ನಮಃ ಓಂ ಕಾಲಾಗ್ನಿರುದ್ರಾಯ ನಮಃ,
ಓಂ ಮೂಲಪ್ರಕೃತ್ಯೈ ನಮಃ । ಓಂ ಆಧಾರಶಕ್ತ್ಯೈ ನಮಃ,

ಊಂ ರತ್ಯೈ ನಮಃ ರತಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ
ಋಂ ಧೃತ್ಯೈ ನಮಃ ಧೃತಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ
ೠಂ ಶಶಿನ್ಯೈ ನಮಃ ಶಶಿನಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ ।
ಲ್ರುಂ ಚಂದ್ರಿಕಾಯೈ ನಮಃ ಚಂದ್ರಿಕಾಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ
ಲ್ರೂಂ ಕಾಂತ್ಯೈ ನಮಃ ಕಾಂತಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ
ಎಂ ಜೋತ್ಸ್ನಾಯೈ ನಮಃ ಜ್ಯೋತ್ಸ್ನಕಲಾ ಶ್ರೀ ಪಾದುಕಾಂ ಪೂಜಯಾಮಿ
ನಮಃ।

ಏಂ ಶ್ರೀಯೈ ನಮಃ ಶ್ರೀಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ
ಓಂ ಪ್ರೀತ್ಯೈ ನಮಃ ಪ್ರೀತಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ ।
ಔಂ ಅಂಗದಾಯೈ ನಮಃ ಅಂಗದ ಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ
ಅಂ ಪೂರ್ಣಾಯೈ ನಮಃ ಪೂರ್ಣಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ
ಅಃ ಪೂರ್ಣಾಮೃತಾಯೈ ನಮಃ
ಪೂರ್ಣಾಮೃತಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಇದರ ನಂತರ ನೀರಿನಲ್ಲಿ "ಹರಕ್ಷ್ಮಲ್ಲರೂ ಆನಂದ ಭೈರವಾಯ ವೌಷಟ್" ಮಂತ್ರದಿಂದ ಮತ್ತು ರಹಕ್ಷಮ್ಲ್ವ್ರೂ ಸುಧಾದೇವ್ಯೈ ನಮಃ ಈ ಮಂತ್ರದಿಂ ರೇಖೆಗಳನ್ನು ಮಾಡಿ ಅದರ ಮೇಲೆ ಭೈರವ ಮತ್ತು ಸುಧಾದೇವಿಯನ್ನು ಪೂಜಿಸಬೇಕು. ನಂತರ ಮತ್ಸ್ಯ ಅಸ್ತ್ರ, ಕವಚ, ಧೇನು, ಸನ್ನಿರೋಧ, ಮುಸ ಚಕ್ರ, ಮಹಾಮುದ್ರಾ ಮತ್ತು ಯೋನಿ ಮುದ್ರಾಗಳನ್ನು ದೇವಿಯ ಪ್ರೀತ್ಯರ್ಥ ಪ್ರದರ್ಶಿಸಬೇಕು.

ಕಲಶ ಸ್ಥಾಪನೆ ಮಾಡುವಾಗ ಅದರ ಬಲ ಭಾಗದಲ್ಲಿ ಶಂಖ ಮತ್ತು ಅರ್ಘ್ಯವನ್ನು ಅದೇ ಪ್ರಕಾರ ಸ್ಥಾಪನೆ ಮಾಡಬೇಕು. ಆಗ ಕಲಶ ಪದದ ಸ್ಥಾನದಲ್ಲಿ ಶಂಖ ಮತ್ತು ವಿಶೇಷಾರ್ಘ್ಯ ಪದಗಳನ್ನು ಜೋಡಿಸಿ ಮಂತ್ರವನ್ನು ಉಚ್ಚರಿಸಬೇಕು.

ನಂತರ ಅರ್ಘ್ಯಪಾತ್ರದಲ್ಲಿ ಅಕಾರಾದಿ ಹದಿನಾರು ಸ್ವರಗಳಿಂದ ಕಕಾರಾದಿ 16 ಮತ್ತು ಥಕಾರಾದಿ 16 ವರ್ಣಗಳಿಂದ ಮೂರು ರೇಖೆಗಳನ್ನು ಮಾಡಿ ಮಧ್ಯದಲ್ಲಿ ಹ ಕ್ಷ ವರ್ಣ ಬರೆಯಬೇಕು. ಈ ಪ್ರಕಾರ ನಿರ್ಮಿತ ತ್ರಿಕೋಣದ ಮಧ್ಯದಲ್ಲಿ "ಓಂ ಹ್ರೀಂ ಹಂ ಸಃ ಸೌ ಹಂ ಸ್ವಾಹಾ" ಈ ಅಷ್ಟಾಕ್ಷರಿ ಮಂತ್ರದಿಂದ ಜಾ





ದೇವಿಯ ಪೂಜೆ ಮಾಡಬೇಕು. ನಂತರ ಮೂರು ಬಾರಿ ಮೂಲಮಂತ್ರವನ್ನು ಜಪ ಮಾಡಿ ಈ ಹಿಂದಿನಂತೆ ಮತ್ಸ್ಯಾದಿ ಒಂಭತ್ತು ಮುದ್ರೆಗಳನ್ನು ಪ್ರದರ್ಶಿಸಬೇಕು.

ಈ ಪ್ರಕಾರ ಪಾತ್ರಗಳನ್ನು ವಿಧಿವತ್ತಾಗಿ ಸ್ಥಾಪನೆ ಮಾಡಿ ಅರ್ಘ್ಯ ಪಾತ್ರೆಯಿಂದ ನೀರು ತೆಗೆದುಕೊಂಡು ಮೂಲಮಂತ್ರವನ್ನು ಹೇಳುತ್ತ ಪೂಜಾ ಸಾಮಗ್ರಿ ಮತ್ತು ತನ್ನ ಮೇಲೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ನಂತರ (11.51) ದೇವಿಯ ಸ್ವರೂಪವನ್ನು ಧ್ಯಾನ ಮಾಡಿ ಮಾನಸಿ ಪೂಜೆಯನ್ನು ಮಾಡಬೇಕು.

ಓಂ ಲಂ ಪೃಥಿವ್ಯಾತ್ಮಕಂ ಮಹಾದೇವ್ಯೈ ಗಂಧಂ ಸಮರ್ಪಯಾಮಿ ನಮಃ
ಅಂಗುಷ್ಠಕನಿಷ್ಠಾಭ್ಯಾಮ್ ।

ಓಂ ಹಂ ಆಕಾಶಾತ್ಮಕಂ ಮಹಾದೇವ್ಯೈ ಪುಷ್ಪಾಣಿ ಸಮರ್ಪಯಾಮಿ ನಮಃ
ಅಂಗುಷ್ಠ ಅನಾಮಿಕಾಭ್ಯಾಮ್ ।

ಓಂ ವಂ ವಾಯುವಾತ್ಮಕಂ ಮಹಾದೇವ್ಯೈ ಧೂಪಂ ಆಘ್ರಾಪಯಾಮಿ ನಮಃ
ಅಂಗುಷ್ಠಮಧ್ಯಮಾಭ್ಯಾಮ್ ।

ಓಂ ರಂ ವಹ್ನ್ಯಾತ್ಮಕಂ ಮಹಾದೇವ್ಯೈ ದೀಪಂ ದರ್ಶಯಾಮಿ ನಮಃ
ಅಂಗುಷ್ಠಾತರ್ಜನೀಭ್ಯಾಮ್ ।

ಓಂ ವಂ ಅಮೃತಾತ್ಮಕಂ ಮಹಾದೇವ್ಯೈ ನೈವೇದ್ಯ ನಿವೇದಯಾಮಿ ನಮಃ
ಅಂಗುಷ್ಠಾನಾಮಿಕಾಭ್ಯಾಮ್।

ಪೀಠ ಪೂಜಾ

ಮಂಡೂಕಂ ಕಾಲವಹ್ನೀಶಂ ತನ್ಮೂಲಪ್ರಕೃತಿಂ ಯಜೇತ್ ।
ಆಧಾರಶಕ್ತಿಂ ಕೂರ್ಮಂ ಚ ಶೇಷವಾರಾಹ ಮೋಹಿನಿ ॥ 85 ॥
ಸುಧಾಬ್ಧಿಂ ರತ್ನದೀಪಂ ಚ ಸ್ವರ್ಣಾದ್ರಿಂ ನಂದನಂ ವನಮ್ ।
ದೃಷ್ಟ್ವಾ ಕಲ್ಪತರೂನ್ ಮಧ್ಯೆ ವಿಚಿತ್ರಾನಂದಭೂಮಿಕಾಮ್ ॥ 86 ॥
ಶ್ರೀ ರತ್ನಮಂದಿರಂ ರತ್ನದೇವಿಕಾಂ ಧರ್ಮವಾರಣಮ್ ।
ರತ್ನಸಿಂಹಾಸನಂ ತಸ್ಯ ಪಾದಾಂಧರ್ಮಾದಿಕಾನ್ ಯಜೇತ್ ॥ 87 ॥
ಗಾತ್ರಾಣಿ ತಾಂಶ್ಚ ನ ಪೂರ್ವಾಣ್ಯದ್ಯಂ ಚಾನಂದಕಂದಕಮ್ ।
ಜ್ಞಾನಲಾಲಂ ಕರ್ಣಿಕಾಂ ಚ ಸೂರ್ಯಸೋಮಾಗ್ನಿಮಂಡಲಮ್ ॥ 88॥

## ಪಾತ್ರ ಸ್ಥಾಪನಾ ವಿಧಾನ

ಪಾತ್ರ ಸ್ಥಾಪನೆಗಾಗಿ, ಪ್ರಥಮವಾಗಿ ದಕ್ಷಿಣ ಅಥವಾ ವಾಮ ಯಾವ ಸ್ವಾಸ ಚಲಿಸುತ್ತಿದೆಯೊ ಆ ಕೈಯಿಂದ ತ್ರಿಕೋಣ, ಅದರ ಮೇಲೆ ಷಟ್ಕೋಣ, ವೃತ್ತ ಮತ್ತು ಭೂಪುರಯುಕ್ತ ಯಂತ್ರವನ್ನು ಬರೆಯಬೇಕು. ಅದರ ಮಧ್ಯಭಾಗದಲ್ಲಿ 'ಐಂ ಕ್ಲಿಂ ಸೌಃ' ಮಂತ್ರದಿಂದ ಪೂಜೆ ಮಾಡಬೇಕು. ಮತ್ತು ಮೂರು ಬಾರಿ ಬೀಜಗಳಿಂದ ತ್ರಿಕೋಣದ ಒಂದೊಂದು ಕೋನಗಳ, ನಂತರ ಅದೇ ಬೀಜಗಳನ್ನು ಅನುಲೋಮ ಮತ್ತು ವಿಲೋಮ 'ಐಂ ಕ್ಲಿಂ ಸೌಃ' ಮತ್ತು ಸೌಃ ಐಂ ಕ್ಲಿಂ' ಈ ಆರು ಬೀಜಗಳಿಂದ ಪೂಜಿಸಬೇಕು.

ನಂತರ 'ಅಸ್ತಾಯ ಫಟ್' ಮಂತ್ರದಿಂದ ಪ್ರಕ್ಷಾಳಿತ ಪಾತ್ರಾಧಾರವನ್ನು ಯಂತ್ರದ ಮಧ್ಯದಲ್ಲಿಟ್ಟು "ಓಂ ರಾಂ ರೀಂ ಮ್ಲ್ವ್ಯೂಂ ರಂ ಅಗ್ನಿಮಂಡಲಾಯ ಧರ್ಮಪ್ರದದಶಕಲಾತ್ಮನೆ ಐಂ ಕಲಾಶಾಧಾರಾಯ ನಮಃ" ಮಂತ್ರದಿಂದ ಆಧಾರ ಪಾತ್ರೆಯನ್ನು ಪೂಜಿಸಬೇಕು. ನಂತರ ಆಧಾರ ಪಾತ್ರದ ಮೇಲೆ ಅಗ್ನಿಯ ದಶಕಲಾಗಳನ್ನು ಪೂಜಿಸಬೇಕು.

ಯಂ ಧೂಮ್ರಾರ್ಚಿಷೆ ನಮಃ ಧೂಮ್ರಾರ್ಚಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ರಂ ಊಷ್ಮಾಯೈ ನಮಃ ಊಷ್ಮಾರ್ಚಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಲಂ ಜ್ವಲಿನ್ಯೈ ನಮಃ ಜ್ವಲಿನಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ।

ವಂ ಜ್ವಾಲಿನ್ಯೈ ನಮಃ ಜ್ವಾಲಿನಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಶಂ ವಿಸ್ಫುಲಿಂಗಿನ್ಯೈ ನಮಃ ವಿಸ್ಫುಲಿಂಗಿನಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಷಂ ಸುಶ್ರಿಯೈ ನಮಃ ಸುಶ್ರೀಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಸಂ ಸುರೂಪಾಯೈ ನಮಃ ಸುರೂಪಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಹಂ ಕಪಿಲಾಯೈ ನಮಃ ಕಪಿಲಾಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಳಂ ಹವ್ಯವಹಾಯೈ ನಮಃ ಹವ್ಯವಹಾಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಕ್ಷಂ ಕವ್ಯವಹಾಯೈ ನಮಃ ಕವ್ಯವಹಾಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ನಂತರ ಈ ಕಲಾಗಳ ಮೇಲೆ 'ಅಸ್ಯೈ ಪ್ರಾಣಾ ಪ್ರತಿಷ್ಠಂತು' ಇತ್ಯಾದಿ ಮಂತ್ರಗಳಿಂದ ಪ್ರತಿಯೊಂದರ ಪ್ರಾಣಪ್ರತಿಷ್ಠೆ ಮಾಡಬೇಕು. ಆಮೇಲೆ ಆಧಾರದ ಮೇಲೆ ಅಸ್ತಾಯ ಫಟ್ ಈ ಮಂತ್ರದಿಂದ ಪ್ರಕ್ಷಾಲಿತ ಸ್ವರ್ಣಾದಿ ನಿರ್ಮಿತ ಕಲಶವನ್ನಿಟ್ಟು "ಓಂ ಃಅಂ ಹ್ರೀಂ ಹೂಂ ಹಮ್ಲ್ರಯೂ ಹಂ ಸೂರ್ಯಮಂಡಲಾಯ ವಸುಪ್ರದ ದ್ವಾದಶ ಕಲಾತ್ಮನೆ ಕ್ಲಿಂ ಕಲಶಾಯ ನಮಃ ಮಂತ್ರದಿಂದ ಕಲಶ ಪೂಜೆ





ಮಾಡಬೇಕು. ನಂತರ ಆ ಕಲಶದ ಮೇಲೆ ತಪಿನಿ ಮುಂತಾದ ಸೂರ್ಯನ ಹನ್ನೆರಡು ಕಲಾಗಳನ್ನು ಪೂಜೆ ಮಾಡಬೇಕು.

ಕಂ ಭಂ ತಪಿನ್ಯೈ ನಮಃ ತಪಿನಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ।

ಖಂ ಬಂ ತಾಪಿನ್ಯೈ ನಮಃ ತಾಪಿನಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಗಂ ಫಂ ಧೂಮ್ರಾಯೈ ನಮಃ ಧೂಮ್ರಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ। ಘಂ ಪಂ ಮರೀಚ್ಯೈ ನಮಃ ಮರೀಚಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಙಂ ನಂ ಜ್ವಾಲಿನ್ಯೈ ನಮಃ ಜ್ವಾಲಿನಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ।

ಚಂ ಧಂ ರುಚ್ಯೈ ನಮಃ ರುಚಿಕಲಾ ಶ್ರೀ ಪಾದುಕಾರಂ ಪೂಜಯಾಮಿ ನಮಃ

ಛಂ ದಂ ಸುಷುಮ್ನಾಯೈ ನಮಃ ಸುಷುಮ್ನಾಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ।

ಜಂ ಥಂ ಭೋಗದಾಯೈ ನಮಃ ಭೋಗದಾಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಝಂ ತಂ ವಿಶ್ವಾಯೈ ನಮಃ ವಿಶ್ವಾಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ।

ಞಂ ಣಂ ಬೋಧಿನ್ಯೈ ನಮಃ ಬೋಧಿನಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಟಂ ಢಂ ಧಾರಿಣ್ಯೈ ನಮಃ ಧಾರಿಣಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ।

ಠಂ ಡಂ ಕ್ಷಮಾಯೈ ನಮಃ ಕ್ಷಮಾಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ತತ್ಪಶ್ಚಾತ್, ಅಂ ದಿಂದ ಕ್ಷಂ ವರೆಗೆ ಸ್ವರವ್ಯಂಜನಾಂತ 51 ಮಾತೃಕೆಗಳ ಜೊತೆಗೆ ಮೂಲಮಂತ್ರ ಹೇಳುತ್ತ ಕಲಶವನ್ನು ನೀರಿನಿಂದ ತುಂಬಬೇಕು. ನಂತರ 'ಓಂ ಸಾಂ ಸಿಂ ಸೂಂ ರಮ್ಲ್ವ್ಯೂಂ ಸಂ ಸೋಮಮಂಡಲಾಯ ಕಾಮಪ್ರದ ಷೋಡಶಕಲಾತ್ಮನೆ ಸೌಃ ಕಲಶಾಮೃತಾಯ ನಮಃ' ಮಂತ್ರದಿಂದ ಕಲಶೋದಕವನ್ನು ಪೂಜೆ ಮಾಡಬೇಕು. ನಂತರ ಕಲಶದ ಜಲದಲ್ಲಿ ಅಮೃತಾ ಮುಂತಾದ 16 ಚಂದ್ರ ಕಲಾಗಳನ್ನು ಪೂಜಿಸಬೇಕು.

ಅಂ ಅಮೃತಾಯೈ ನಮಃ ಅಮೃತಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ।

ಆಂ ಮಾನದಾಯೈ ನಮಃ ಮಾನದಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಇಂ ಪೂಷ್ಣಾಯೈ ನಮಃ ಪೂಷ್ಪಕಲಾ ಶ್ರೀಪಾದುಕಾಂ ಪೂಜಯಾಮಿ ನಮಃ ।

ಈಂ ತುಷ್ಟ್ಯೈ ನಮಃ ತುಷ್ಟಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ

ಉಂ ಪುಷ್ಟ್ಯೈ ನಮಃ ಪುಷ್ಟಿಕಲಾ ಶ್ರೀ ಪಾದುಕಾಂ ಪೂಜಯಾಮಿ ನಮಃ ।

## ಅಮೃತಾದಿ ಷೋಡಶಚಂದ್ರ ಕಲಾ ಕಥನ

ಚಾಂದ್ರೀಃ ಕಲಾಃ ಸ್ವರಾಢ್ಯಾಸ್ತು ಯಜೇತ್ ಷೋಡಶತಜ್ಜಲೇ ।
ಅಮೃತಾಮಾನದಾಪೂಷಾ ತುಷ್ಟಿಪುಷ್ಟಿರತಿಧೃತಿಃ
ಶಶಿನಿಚಂದ್ರಿಕಾಕಾಂತಿಜ್ಯೋತ್ಸ್ನಾಶ್ರೀಃ ಪ್ರೀತಿರಂಗದಾ । ॥ 73 ॥
ಪೂರ್ಣಾಪೂರ್ಣಾಮೃತಾ ಚೇತಿ ಪೂಜನಂ ಪೂರ್ವವನ್ಮತಮ್ ॥ 74 ॥

ನಂತರ ಕಲಶದ ಜಲದಲ್ಲಿ 16 ಸ್ವರಗಳ ಜೊತೆಗೆ ಚಂದ್ರ ಕಲಾಗಳನ್ನು ಮೊದಲಿನಂತೆ ಪೂಜೆ ಮಾಡಬೇಕು. 1. ಅಮೃತಾ 2. ಮಾನದಾ . ಪೂಷಾ 4. ತುಷ್ಟಿ 5. ಪುಷ್ಟಿ 6. ರತಿ 7. ಧೃತಿ 8. ಶಶಿನಿ 9. ಚಂದ್ರಿಕಾ 10. ಕಾಂತಿ 11. ಜ್ಯೋತ್ಸ್ನಾ 12. ಶ್ರೀ 13. ಪ್ರೀತಿ 14. ಅಂಗದಾ 15. ಪೂರ್ಣಾ ಮತ್ತು 16. ಪೂರ್ಣಾಮೃತಾ ಇವುಗಳ ಚಂದ್ರನ ಹದಿನಾರು ಕಲೆಗಳಾಗಿರುತ್ತವೆ.

## ಭೈರವ ಮತ್ತು ಸುಧಾ ಮಂತ್ರ

ಭೈರವಂ ಚ ಸುಧಾದೇವಿಂ ಸ್ವಮಂತ್ರಾಭ್ಯಾಂ ಯಜೇಜ್ಜಲೇ ।
ಸಹಕ್ಷಮಲ ಪಾನೀಯವಹ್ನಿರಾರ್ಘೀಶ ಬಿಂದುಮತ್
ಬೀಜಮಾನಂದಭೈರವಾಂತೆ ಬೀಜಂ ಪೂರ್ವೋದಿತಂ ಸುಧಾ ॥ 75 ॥ ॥ 76 ॥
ದೇವ್ಯೈ ವೌಷಟ್ ತಯೋಮಂತ್ರಾ ದಶಮುನ್ಯಕ್ಷರೌ ಕ್ರಮಾತ್ ।
ತತೋ ಮತ್ಸ್ಯಾಸ್ತ್ರಕವಚಧೇನುಮುದ್ರಾಃ ಪ್ರದರ್ಶಯೇತ್ ॥ 77 ॥
ಸುಂರೋಧಿನ್ಯಾ ಸಂನಿರುಧ್ಯ ಮುಸಲಂ ಚಕ್ರಸಂಜ್ಞಕಮ್ ।
ಮಹಾಮುದ್ರಾಂ ಯೋನಿಮುದ್ರಾಂ ಕುರ್ಯಾತ್ ಕುಂಭಾಮೃತೆ ಪುನಃ ॥78॥
ಏವಂ ಕಲಶಾಮಾಸ್ಥಾಪ್ಯ ತಸ್ಯ ದಕ್ಷಿಣ ದೇಶತಃ
ಶಂಖಂ ಚಾಪಿ ವಿಶೇಷಾರ್ಘ್ಯ ಸ್ಥಾಪಯೇತ್ ಪೂರ್ವವತ್ ಕ್ರಮಾತ್ ॥79॥
ಅರ್ಘ್ಯೆ ತ್ರಿಕೋಣಂ ಸಂಚಿಂತ್ಯಾ ಕಥಾದ್ಯೈಃ ಷೋಡಶಾಕ್ಷರೈಃ ।
ಹಕ್ಷಾಭ್ಯಾಂ ಶೋಭಿತಂ ಮಧ್ಯೆ ತತ್ರ ಬಾಲಾಂ ಪ್ರಪೂಜಯೇತ್ ॥ 80 ॥

ಇದೇ ಪ್ರಕಾರ ಭೈರವ ಮತ್ತು ಸುಧಾ ದೇವಿಯರನ್ನು ಆಯಾ ಮಂತ್ರಗಳಿಂದ ಪೂಜಿಸಬೇಕು. ಹ್ ಸ್ ಕ್ಷ್ ಮ್ ಲ್ ಪಾನೀಯ (ವ್) ವಹ್ನಿ (ರ್) ಇವುಗಳನ್ನು ಅರ್ಘೀಶ ಬಿಂದುವಿನಿಂದ ಯುಕ್ತ ಮಾಡುವುದರಿಂದ ಹರಕ್ಷಮ್ಲ್ವ್ರು ಈ ಬೀಜ ಇದರ ನಂತರ 'ಆನಂದ ಭೈರವಾಯ ವೌಷಟ್' ಈ ಹತ್ತು ಅಕ್ಷರಗಳ ಬಾಲಾ ಭೈರವ ಮಂತ್ರವಾಗುತ್ತದೆ. ಮತ್ತು ಪೂರ್ವೋಕ್ತ ಬೀಜದಲ್ಲಿ ಈ ಏಳು ಅಕ್ಷರಗಳ ಹಸ ದ ವಿಪರ್ಯಾಯ ಮಾಡುವುದರಿಂದ ರಹಕ್ಷಮ್ಲ್ವ್ರು ನಂತರ 'ಸುಧಾ ದೇವ್ಯೈ ವೌಷಟ್' ಸುಧಾ ಮಂತ್ರವು ಸಿದ್ಧವಾಗುತ್ತದೆ. ಈ ಪ್ರಕಾರ ಪೂಜೆ ಮಾಡಿದ





ನಂತರಮತ್ಸ್ಯ, ಅಸ್ತ್ರ, ಕವಚ ಮತ್ತು ಧೇನು ಮುದ್ರೆಗಳನ್ನು ಪ್ರದರ್ಶಿಸಬೇಕು. ನಂತರ ಸನ್ನಿರೋಧಿನಿ ಮುದ್ರೆಯಿಂದ ಸನ್ನಿರೋಧ ಮಾಡಿ ಕಲಶದ ಜಲದಲ್ಲಿ ಮುಶಲ, ಚಕ್ರ ಮಹಾಮುದ್ರಾ ಮತ್ತು ಯೋನಿ ಮುದ್ರೆಗಳನ್ನು ಪ್ರದರ್ಶಿಸಬೇಕು.

ಈ ಪ್ರಕಾರ ಕಲಶಸ್ಥಾಪನೆ ಮಾಡಿ ಅದರ ದಕ್ಷಿಣ ಭಾಗದಲ್ಲಿ ಈ ಹಿಂದೆ ವಿವರಿಸಿದ ವಿಧಾನದಿಂದ ಶಂಖ ಮತ್ತು ವಿಶೇಷಾರ್ಘ್ಯವನ್ನು ಸ್ಥಾಪಿಸಬೇಕು. ಪುನಃ ಅರ್ಘ್ಯದಲಿ ಅಕಾರಾದಿ, ಕಕಾರಾದಿ ಮತ್ತು ಥಕಾರಾದಿ ರೇಖೆಗಳಿಂದ ಮತ್ತು ಮಧ್ಯದಲ್ಲಿ ಹ,ಕ್ಷ ವರ್ಣಗಳಿಂದ ಸುಶೋಭಿತ ತ್ರಿಕೋಣಧ ಧ್ಯಾನ ಮಾಡಿ ಅದರಲ್ಲಿ ಐಂ ಕ್ಲೀಂ ಸೌಃ ಮಂತ್ರದಿಂದ ಬಾಲಾ ದೇವಿಯನ್ನು ಪೂಜಿಸಬೇಕು.

## ಅಷ್ಟವರ್ಣ ಮಂತ್ರ

ಅಷ್ಟಾವರ್ಣನಮಂತ್ರೇಣ ದೇವಿಂ ಜ್ಯೋತಿರ್ಮಯಿಂ ಯಜೇತ್ ।
ತಾರೋ ಮಾಯೇಂದುಯುಗ್ವ್ಯೋಮ ಭೃಗುಸರ್ಗಿಸಸದ್ಯಸಃ ॥ 81 ॥
ವಾರಾಹೋ ಬಿಂದುಯುಕ್ತ ಸ್ವಾಹಾ ವಸುವರ್ಣಃ ಸ್ಮೃತೋ ಮನುಃ ।

ನಂತರ ಅಷ್ಟಾಕ್ಷರ ಮಂತ್ರದಿಂದ ಜ್ಯೋತಿರ್ಮಯಿಯಳಾದ ದೇವಿಯನ್ನು ಪೂಜಿಸಬೇಕು. ತಾರ (ಓಂ) ಮಾಯಾ (ಹ್ರೀಂ) ಇಂದ್ರಯುಕ್ತ ವ್ಯೋಮ (ಹಂ) ಸರ್ಗಿಭೃಗು (ಸಃ) ಸಸದ್ಯ ಭೃಗು ಸೌಃ, ಬಿಂದುಯುಕ್ ವರಾಹ (ಹಂ) ಮತ್ತು ಸ್ವಾಹಾ ಸೇರಿಸುವುದರಿಂದ ಅಷ್ಟಾಕ್ಷರ ಮಂತ್ರವು ಸಿದ್ಧವಾಗುತ್ತದೆ.

"ಓಂ ಹ್ರೀಂ ಹಂಸಃ ಸೋಃ ಹಂ ಸ್ವಾಹಾ"

ನಂತರ ಮೂಲಮಂತ್ರವನ್ನು ಮೂರು ಬಾರಿ ಜಪ ಮಾಡಿ ಮತ್ಸ್ಯ ಮುಂತಾದ ಈ ಹಿಂದೆ ಹೇಳಿದ 9 ಮುದ್ರೆಗಳನ್ನು ಪ್ರದರ್ಶಿಸಬೇಕು. ಶಂಖ ಮತ್ತು ಅರ್ಘ್ಯ ಸ್ಥಾಪನದಲ್ಲಿ ಕಲಶ ಶಬ್ದದ ಸ್ಥಾನದಲ್ಲಿ ಶಂಖ ಪದವನ್ನು ಮತ್ತು ಅರ್ಘ್ಯ ಪದವನ್ನು ಹೇಳಬಹುದು.

ಮೂಲಂ ತ್ರಿರಭಿಜಪ್ಯಾಯ ಕುರ್ಯಾನ್ಮುದ್ರಾಃ ಸಮೀರಿತಾಃ ॥ 82 ॥
ಶಂಖಾರ್ಘ್ಯಸ್ಥಾಪನೆ ಕಾರ್ಯ ಊಹಃ ಕಲಶನಾಮಾನಿ ।
ಏವಂ ಪಾತ್ರಾಣಿ ಸಂಸ್ಥಾಪ್ಯ ಗೃಹೀತ್ವಾರ್ಘ್ಯೋದಕಂ ತತಃ ॥ 83 ॥
ಪೂಜಾವಸ್ತೂನಿ ಚಾತ್ಮಾನಂ ಪ್ರೋಕ್ಷೆನ್ಮೂಲಮನುಃ ಸ್ಮರನ್ ।
ವಿಧಾಯ ಮಾನಸಿಂ ಪೂಜಾಂ ಪೀಠಪೂಜಾ ಮಥಾಚರೇತ್ ॥ 84 ॥

ಈ ಪ್ರಕಾರ ಪಾತ್ರಗಳನ್ನು ಸ್ಥಾಪನೆ ಮಾಡಿದ ನಂತರ ಅರ್ಘ್ಯಪಾತ್ರದ ನೀರನ್ನು ತೆಗೆದುಕೊಂಡು ನೀರನ್ನು ಪೂಜಾ ಸಾಮಗ್ರಿಗಳ ಮೇಲೆ ಮತ್ತು ತನ್ನ ಮೇಲೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ನಂತರ ಮಾನಸೋಪಚಾರದಿಂದ ದೇವಿಯ ಪೂಜೆ ಮತ್ತು ಪೀಠ ಪೂಜೆಯನ್ನು ಮಾಡಬೇಕು.

ಪೂಜೆಯ ನಂತರ ಆಧಾರ ಪಾತ್ರದ ಮೇಲೆ ಪ್ರದಕ್ಷಿಣಾ ಕ್ರಮದಲ್ಲಿ ಅಗ್ನಿಯ ದಶಕಲೆಗಳನ್ನು ಪೂಜೆ ಮಾಡಬೇಕು. 1. ಧೂಮ್ರಾರ್ಚಿ 2. ಊಷ್ಮಾ 3. ಜ್ವಲಿನಿ 4. ಜ್ವಾಲಿನಿ 5. ವಿಸ್ಫುಲಿಂಗಿನಿ 6. ಸುಶ್ರೀ 7. ಸುರೂಪಾ 8. ಕಪಿಲಾ 9. ಹವ್ಯವಹಾ ಮತ್ತು ಕವ್ಯವಹಾ ಈ ಸಬಿಂದು ಯ ಕಾರಾದಿ ದಶವರ್ಣಗಳೊಂದಿಗೆ ಅಗ್ನಿಯ ಕಲೆಗಳಾಗಿರುತ್ತವೆ. ಈ ಹೆಸರುಗಳ ನಂತರ ಕಲಾಶ್ರೀ 'ಪಾದುಕಾಂ ಪೂಜಯಾಮಿ' ಪದವನ್ನು ಸೇರಿಸಿ ಪೂಜೆ ಮಾಡಬೇಕು. ಆಮೇಲೆ ಅದರಲ್ಲಿ ಪ್ರಾಣಪ್ರತಿಷ್ಠೆ ಮಾಡಬೇಕು.

### ಕಲಶಾರ್ಚನ ಮಂತ್ರ

**ವಿಯದ್‌ದೀರ್ಘತ್ರಯೇಂದ್ವಾಢ್ಯಂ ಹಮಮಾಂಸಂವರಾನಿಲಃ**
**ಅರ್ಘೀಶಬಿಂದುಸಂಯುಕ್ತಾಃ ಸೇಂದುಖಂಸೂರ್ಯಮಂಡಲಾ । ॥ 64 ॥**
**ವಾಯುರ್ವಸುಪ್ರದಾಂತೇ ಸ್ಯಾದ್ ದ್ವಾದಶಾಂತೇ ಕಲಾತ್ಮನೆ**
**ಮನ್ಮಥಃ ಕಲಶಾಯೇತಿ ನಮೋಂತಃ ಪ್ರಣವಾದಿಕಃ । ॥ 65 ॥**
**ತ್ರಿಂಶದ್‌ವರ್ಣಾತ್ಮಕೊ ಮಂತ್ರಃ ಕಲಶಸ್ಯಾರ್ಚನೆ ಮತಃ ॥ 66 ॥**

ಈಗ ಆಧಾರ ಪಾತ್ರದ ಮೇಲೆ ಸ್ಥಾಪಿಸಲಾಗುವ ಕಲಶದ ಪೂಜೆಯನ್ನು ಕುರಿತು ಹೇಳಲಾಗುತ್ತದೆ. ಮೊದಲು ಅಸ್ತ್ರಾಯ ಫಟ್ ಈ ಮಂತ್ರದಿಂದ ಸುವರ್ಣಾದಿಗಳಿಂದ ನಿರ್ಮಿತವಾದ ಕಲಶವನ್ನು ಪ್ರಕ್ಷಾಳನೆ ಮಾಡಿರಿ. ನಂತರ ಅದೇ ಆಧಾರ ಪಾತ್ರದ ಮೇಲೆ ಇಟ್ಟು ವಕ್ಷಮಾಣ 30 ಅಕ್ಷರಗಳ ಮಂತ್ರದಿಂದ ಅದರ ಪೂಜೆ ಮಾಡಬೇಕು.

ದೀರ್ಘತ್ರಯಿಂದು ಸಹಿತ ವಿಯತ್ (ಹಾಂ ಹಿಂ ಹೂಂ) ನಂತರ ಹಮ ವಾಂಸ (ಲ), ವರ ಅನಿಲ (ಯ) ಎಲ್ಲ ಅರ್ಘೀಶಬಿಂದು ಸಹಿತ (ಹಮ್ಲ್ವ್ರಯೂ) ನಂತರ ಸೇಂದು ಖ (ಹಂ) ನಂತರ ಸೂರ್ಯಮಂಡಲಾ ವಾಯು (ಯ) ನಂತರ 'ವಸುಪ್ರದದ್ವಾದಶಕಲಾತ್ಮನೆ' ಪದ, ಮನ್ಮಥ (ಕ್ಲೀಂ), 'ಕಲಶಾಯ ನಮಃ' ಈ ಮಂತ್ರದ ಪ್ರಾರಂಭದಲ್ಲಿ ಪ್ರಣವ ಜೋಡಿಸುವುದರಿಂದ 30 ಅಕ್ಷರಗಳ ಕಲಶ ಪೂಜಾ ಮಂತ್ರವು ರಚನೆಯಾಗುತ್ತದೆ.

**"ಓಂ ಹಾಂ ಹಿಂ ಹೂಂ ಹಮ್ಲ್ವ್ರ್‌ಯೂ ಹಂ ಸೂರ್ಯಮಂಡಲಾಯ ವಸುಪ್ರದದ್ವಾದಶಕಲಾತ್ಮನೆ ಕ್ಲೀಂ ಕಲಶಾಯ ನಮಃ"**

### ದ್ವಾದಶ ಸೂರ್ಯಕಲಾಕಥನ

**ಕಲಾದ್ವಾದಶಸೂರ್ಯಸ್ಯ ಕಲಶೋಪರಿ ಪೂಜಯೇತ್ ।**
**ತಪಿನಿತಾಪಿನಿಧೂಮ್ರಾಮರೀಚಿಜ್ವಾಲಿನಿರುಚಿಃ ॥ 67 ॥**





**ಸುಷುಮ್ನಾಭೋಗದಾ ವಿಶ್ವಾಬೋಧಿನಿಧಾರಿಣಿ ಕ್ಷಮಾ ।**
**ಅನುಲೋಮವಿಲೋಮಾಭ್ಯಾಂ ಕಾದಿಭಾಧ್ಯರ್ಣಯುಗ್ಮತಾ ॥ 68 ॥**
**ಪೂರ್ವವತ್ತಾಃ ಸಮಾಪೂಜ್ಯಾಃ ಕಲಶೇ ಪೂರಯೇಜ್ಜಲಮ್ ।**
**ಉಚ್ಚರನ್ಮಾತೃಕಾವರ್ಣಾನ್ಮೂಲವಿದ್ಯಾಂ ಚ ಮಂತ್ರವಿತ್ ॥ 69 ॥**
**ದಂತಾಕ್ಷರೇಣ ಮನುನಾ ಕಲಶೋದಕಮರ್ಚಯೇತ್ ।**
**ಭೃಗುರ್ದೀರ್ಘತ್ರಯೇಂದ್ವಾಢ್ಯಃ ಸಮಲಾಂಬ್ವಗ್ನಿವಾಯವಃ ॥ 70 ॥**

ಕಲಶದ ಮೇಲೆ ಸೂರ್ಯನ ದ್ವಾದಶ ಕಲೆಗಳನ್ನು ಪೂಜೆ ಮಾಡಬೇಕು. 1. ತಪಿನಿ 2. ತಾಪಿನಿ 3. ಧೂಮ್ರಾ 4. ಮರೀಚಿ 5. ಜ್ವಾಲಿನಿ 6. ರುಚಿರ 7. ಸುಷುಮ್ನಾ 8. ಭೋಗದಾ 9. ವಿಶ್ವಾ 10. ಬೋಧಿನಿ 11. ಧಾರಿಣಿ ಮತ್ತು ಕ್ಷಮಾ ಈ ಕಲೆಗಳ ಅನುಲೋಮ ಕಕಾರಾದಿ ಮತ್ತು ವಿಲೋಮ ಭಕಾರಾದಿ ಕ್ರಮಗಳಿಂದ ಜೋಡಿಸಿ ಪೂಜೆ ಮಾಡಬೇಕು.

ಈ ಪ್ರಕಾರ ಸೂರ್ಯನ ದ್ವಾದಶ ಕಲೆಗಳ ಪೂಜೆಯ ನಂತರ ಮಾತೃಕಾ ವರ್ಣಗಳೊಂದಿಗೆ ಮೂಲಮಂತ್ರವನ್ನು ಹೇಳುತ್ತ ಕಲಶವನ್ನು ನೀರಿನಿಂದ ತುಂಬಬೇಕು. ನಂತರ ಮೂವತ್ತೆರಡು ಅಕ್ಷರಗಳ ವಕ್ಷಮಾಣ ಮಂತ್ರದಿಂದ ಕಲಶ ಪೂಜೆ ಮಾಡಬೇಕು.

**ಅರ್ಘೀಶೇಂದುಯುತಾಃ ಸೇಂದುಹಂಸಾಂತೆ ಸೋಮಮಂಡಲಾ ।**
**ಯಕಾಮಪ್ರದಷೋಢಾಂತೇಶ ಕಲಾತ್ಮಾ ತು ಯುತಃ ॥ 71 ॥**
**ಭೃಗುರ್ಮನುರ್ವಿಸರ್ಗಾಢ್ಯೋ ಯುತಂ ಕಲಶಾಮೃತಮ್ ।**
**ತಾರಾದಿಹೃದಯಾಂತೋಯಂ ಮನುಃ ಪಾನೀಯ ಪೂಜನೆ ॥ 72 ॥**

ದೀರ್ಘತ್ರಯ ಮತ್ತು ಬಿಂದುವಿನಿಂದ ಯುಕ್ತ ಭೃಗು (ಸ) ಸ ಮ್ ಲ್ ಅಂಬು (ವ್) ಅಗ್ನಿ (ರ್) ಮತ್ತು ವಾಯು (ಯ್) ಇವುಗಳನ್ನು ಅರ್ಘೀಶೆಂದುವಿನಿಮದ ಯುಕ್ತ ರಮ್ಲ್ವ್ರಯೂ, ನಂಯರ ಹಂಸ (ಸಂ) ಸೋಮಮಂಡಲಾಯ 'ಕಾಮಪ್ರದ ಷೋಡಶ' ದ ನಂತರ ಚತುರ್ಥ್ಯಂತ 'ಕಲಾತ್ಮಾ' ಪದ (ಕಲಾತ್ಮನೆ) ನಂತರ 'ಮನುವಿಸರ್ಗಾಢ್ಯ ಭೃಗು ಸೌಃ' ನಂತರ ಚತುರ್ಥ್ಯಂತ ಕಲಶಾಮೃತ (ಕಲಶಾಮೃತಾಯ) ಈ ಪ್ರಕಾರ ರಚಿತ ಮಂತ್ರದ ಪ್ರಾರಂಭದಲ್ಲಿ ತಾರ (ಓಂ) ಮತ್ತು ಅಂತದಲ್ಲಿ ಹೃದಯ (ನಮಃ) ಜೋಡಿಸುವುದರಿಂದ 32 ಅಕ್ಷರಗಳ ಮಂತ್ರವು ಸಿದ್ಧವಾಗುತ್ತದೆ.

**"ಓಂ ಸಾಂ ಸಿಂ ಸೂಂ ರಮ್ಲ್ವ್ರಯೂ ಸಂ ಸೋಮಮಂಡಲಾಯ ಕಾಮಪ್ರದ ಷೋಡಶಕಲಾತ್ಮನೆ ಸೌಃ ಕಲಶಾಮೃತಾಯ ನಮಃ"**

ಶ್ರೀಮತ್ತ್ರಿಪುರ ಸುಂದರಿ ಮಂತ್ರದ ಒಂದು ಲಕ್ಷ ಜಪ ಮಾಡಬೇಕು ಮತ್ತು ತ್ರಿಮಧುರ ಮಿಶ್ರಿತ ಕಣಗಿಲು ಹೂಗಳಿಂದ ವಿಧಿವತ್ತಾಗಿ ಪೂಜಿತ ಅಗ್ನಿಯಲ್ಲಿ ಹೋಮ ಮಾಡಬೇಕು.

ಶ್ರೀ ಚಕ್ರಸ್ಯೋದ್ಧೃತಿಂ ವಕ್ಷ್ಯೇ ತತ್ರ ಪೂಜನಸಿದ್ಧಯೆ ।
ಬಿಂದುಗರ್ಭಂ ತ್ರಿಕೋಣಂ ತು ಕೃತ್ವಾ ಚಾಷ್ಟಾರಮುದ್ಧರೇತ್

ದಶಾರದ್ವಯಮನ್ವಸ್ರಾಷ್ಟಾರಷೋಡಶಕೋಣಕಮ್ । ॥ 53 ॥
ತ್ರಿರೇಖಾತ್ಮಕ ಭೂಗೇಹವೇಷ್ಟಿತಂ ಯಂತ್ರಮಾಲಿಖೇತ್ ॥ 54 ॥

ಈಗ ಪೂಜೆಗಾಗಿ ಶ್ರೀ ಚಕ್ರಯಂತ್ರವನ್ನು ಉದ್ಧಾರ ಮಾಡಲಾಗುತ್ತದೆ. ಗರ್ಭದಲ್ಲಿ ಬಿಂದು ಸಹಿತ ತ್ರಿಕೋಣ ಬರೆದು, ಅದರ ಮೇಲೆ ಅಷ್ಟದಳ ಕಮಲ ಬರೆಯಬೇಕು. ನಂತರ ಅದರ ಮೇಲೆ ದಶದಳ ಕಮಲ ಬರೆಯಬೇಕು. ಅದರ ಮೇಲೆ ಕ್ರಮವಾಗಿ ಒಂದು ದಶದಳ, ಚತುರ್ದಶ ದಳ, ಅಷ್ಟದಳ ಮತ್ತು ಷೋಡಶದಳ ಬರೆಯಬೇಕು. ಅದನ್ನು ಮೂರು ರೇಖಾಯುಕ್ತ ಭೂಪುರದಿಂದ ವೇಷ್ಟಿತಗೊಳಿಸಬೇಕು.

**ಪೂಜಾ ವಿಧಾನ**

ತತ್ರ ಪೂಜಾಂ ಪ್ರವಕ್ಷ್ಯಾಮಿ ಪಾತ್ರಸ್ಥಾಪನಪೂರ್ವಕಮ್ ।
ವಹನ್ನಾಡಿಸ್ಥ ಹಸ್ತೇನ ಸ್ವಗೃತೊ ಯಂತ್ರಮಾಲಿಖೇತ್ ॥ 55 ॥

ತ್ರಿಕೋಣಮಧ್ಯಷಟ್ಕೋಣವೃತ್ತ ಭೂಮಂಡಲಾತ್ಮಕಮ್ ।
ಬಾಲಯಾ ಪೂಜಯೇನ ಮಧ್ಯಂ ತದ್‌ಬೀಜೈಃ ಕೋಣಕತ್ರಯಮ್ ॥ 56 ॥

ಅನುಲೋಮ ವಿಲೋಮೈಸ್ತೈಃ ಷಟ್ಕೋಣಾನ್ಪೂಜಯೇತ್ತತಃ ।
ಅಸ್ತ್ರಪ್ರಕ್ಷಾಲಿತಂ ಮಧ್ಯೇ ಪಾತ್ರಾಧಾರಂ ನಿಧಾಪಯೇತ್ ॥ 57 ॥

ಏಕತ್ರಿಂಶಾರ್ಣಮನುನಾ ತಮಾಧಾರಂ ಸಮರ್ಚಯೇತ್ ।
ವಹ್ನಿದೀರ್ಘತ್ರಯೇಂಧ್ವಾಢ್ಯೋ ರಭಾಂತಲವರಾನಿಲಾಃ ॥ 58 ॥

ವಾಮಕರ್ಣೇಂದು ಸಂಯುಕ್ತಾರಃ ಸೇಂದುಶ್ಚಾಗ್ನಿಮಂಡಲಾ ।
ವಾಯುರ್ಧರ್ಮಪ್ರದದಶಕಲಾತ್ಮಾಙೆಂಸಮನ್ವಿತಃ ॥ 59 ॥

ವಾಗ್ಬೀಜಂ ಕುಲಶಾಧಾರಾ ಪವನೊ ನಮಸಾನ್ವಿತಃ ।
ತಾರಾದಿರೀರಿತೊ ಮಂತ್ರೊ ಭಾಜನಾಧಾರಪೂಜನೆ ॥ 60 ॥

ಯಾವ ಸ್ವರವು ಸಲಿಸುತ್ತಿದೆಯೊ ಆ ಹಸ್ತದಿಂದ ತನ್ನ ಎದುರು ವಕ್ಷ್ಯಮಾಣ ಯಂತ್ರವನ್ನು ಬರೆಯಬೇಕು. ಮೊದಲು ತ್ರಿಕೋಣ ಬರೆದು ಅದರ ಮೇಲೆ ಷಟ್ಕೋಣ ಬರೆಯಬೇಕು. ನಂತರ ವೃತ್ತ, ಆಮೇಲೆ ಭೂಪುರಗಳನ್ನು ನಿರ್ಮಿಸಬೇಕು. ತ್ರಿಕೋಣದ ಮಧ್ಯದಲ್ಲಿ ಬಾಲಾಮಂತ್ರದಿಂದ ಪೂಜೆ ಮಾಡಬೇಕು.







ನಂತರ ಅದರ ಮೂರೂ ಕೋನಗಳಲ್ಲಿ ಬಾಲಾ ಮಂತ್ರದ ಮೂರು ಬೀಜಗಳಿಂದ ಪೂಜೆ ಮಾಡಬೇಕು. ನಂತರ ಅದೇ ಬೀಜಗಳ ಅನುಲೋಮ ಮತ್ತು ವಿಲೋಮ ಕ್ರಮದಿಂದ ಷಟ್ಕೋನಗಳ ಪೂಜೆ ಮಾಡಬೇಕು.

ನಂತರ ಆ ಯಂತ್ರದ ಮೇಲೆ ಅಸ್ತ್ರಾಯ ಫಟ್ ಮಂತ್ರದಿಂದ ಪ್ರಕ್ಷಾಲಿತ ಆಧಾರ ಪಾತ್ರವನ್ನು ಸ್ಥಾಪಿಸಬೇಕು. ನಂತರ 31 ಅಕ್ಷರಗಳ ವಕ್ಷ್ಯಮಾಣ ಮಂತ್ರದಿಂದ ಆ ಆಧಾರಪಾತ್ರವನ್ನು ಪೂಜಿಸಬೇಕು.

ದೀರ್ಘತ್ರಯೆಂದುಯುಕ್ ವಹ್ನಿ (ರಾಂ ರೀಂ ರುಂ) ನಂತರ ರ ಮತ್ತು ಭಾಂತ (ಮ), 'ಲ ವ ರ' ಮತ್ತು ಅನಿಲ (ಯ) ಇವೆಲ್ಲವೂ ವಾಮಕರ್ಣೆಂದು (ಊ) ದಜೊತೆಗೆ ಅರ್ಥಾತ್ 'ರಮ್ಲ್ವ್ರ್ಯೂಂ' ನಂತರ ಸೇಂದು ರ (ರಂ), 'ಅಗ್ನಿಮಂಡಲಾ' ಪದ ಪುನಃ ವಾಯು (ಯ), ನಂತರ ಚತುರ್ಥ್ಯಂತ 'ಧರ್ಮಪ್ರದದಶ ಕಲಾತ್ಮಾ' ಪುನಃ ವಾಗ್ಬೀಜ (ಐಂ), ಕಲಶಧಾರಾ, ಪವನ (ಯ) ಮತ್ತು ಅಂತದಲ್ಲಿ ನಮಃ ಮತ್ತು ಪ್ರಾರಂಭದಲ್ಲಿ ಪ್ರಣವ (ಓಂ) ಸೇರಿಸುವುದರಿಂದ 31 ಅಕ್ಷರಗಳ ಆಧಾರ ಪಾತ್ರದ ಪೂಜಾ ಮಂತ್ರವು ಸಿದ್ಧವಾಗುತ್ತದೆ.

"ಓಂ ರಾಂ ರೀಂ ರೂಂ ರಮ್ಲ್ವ್ರ್ಯೂಂ ರಂ ಅಗ್ನಿಮಂಡಲಾಯ ಧರ್ಮಪ್ರದದಶಕಲಾತ್ಮನೆ ಏಂ ಕಲಾಶಾಧಾರಾಯ ನಮಃ"

ಪ್ರಾದಕ್ಷಿಣ್ಯಾದ್‌ದೃಶಾಗ್ನೇಯೀಸ್ತದುಪರ್ಯರ್ಚಯೇತ್ ಕಲಾಃ ।
ಧೂಮ್ರಾರ್ಚಿರುಷ್ಮಾಜ್ವಲಿನೀಜ್ವಾಲಿನಿವಿಸ್ಫುಲಿಂಗಿನಿ ॥ 61 ॥

ಸುಶ್ರೀಃ ಸುರೂಪಾಕಪಿಲಾಹವ್ಯಕವ್ಯಾದಿಕಾವಹಾ ।
ಸಬಿಂದುಯಾದಿವರ್ಣಾಢ್ಯಾ ದಶಾಗ್ನೇರೀರಿತಾಃ ಕಲಾಃ ॥ 62 ॥

ಕಲಾಶ್ರೀಪಾದುಕಾಂ ಪೂಜಯಾಮೀತಿ ಪದಮುಚ್ಚರೇತ್ ।
ನಾಮ್ನಾಮಂತೆ ತತಸ್ತಾಸಾಂ ಪ್ರಾಣಸ್ಥಾಪನಮಾಚರೇತ್ ॥ 63 ॥
ಸ್ವರ್ಣಾದಿಪಾತ್ರಮಸ್ತ್ರೇಣ ಕ್ಷಾಲಿತಂ ತತ್ರ ವಿನ್ಯಸೇತ ।

ಹಸಕಹಲಹ್ರೀಂ ನಮಃ
ಸಕಲಹ್ರೀಂ ನಮಃ ದಕ್ಷಪಾದಾಂಗುಲಿ
ಸೌಃ ನಮಃ ವಾಮಪಾದಮೂಲೆ। ದಕ್ಷಪಾದಾಂಗುಲ್ಯಗ್ರೆ
ಕ್ಲಿಂ ನಮಃ ವಾಮಜಂಘಾಯಾಮ್ । ಹ್ರೀಂ ನಮಃ ವಾಮಗುಲ್ಫೆ । ಐಂ ನಮಃ ವಾಮಗುಲ್ಫೆ।
। ಶ್ರೀಂ ನಮಃ ವಾಮಪಾದಾಂಗುಲ್ಯಗ್ರೆ ವಾಮಪಾದಾಂಗುಲಿಮೂಲೆ

ಚತುರ್ಥ ನ್ಯಾಸ :

| | |
|---|---|
| ಶ್ರೀಂ ನಮಃ ಲಲಾಟೆ । | ಹ್ರೀಂ ನಮಃ ಮುಖವೃತ್ತೆ । |
| ಕ್ಲಿಂ ನಮಃ ದಕ್ಷನೇತ್ರೆ । | ಐಂ ನಮಃ ವಾಮನೇತ್ರೆ । |
| ಸೌಃ ನಮಃ ದಕ್ಷಕರ್ಣೆ । | ಓಂ ನಮಃ ವಾಮಕರ್ಣೆ । |
| ಹ್ರೀಂ ನಮಃ ದಕ್ಷನಾಸಾಯಾಮ್। | ಶ್ರೀಂ ನಮಃ ವಾಮನಾಸಾಯಾಮ್ । |
| ಕಏಈಲಹ್ರೀಂ ನಮಃ ಗಂಡೆ । | ಹಸಕಹಲಹದ್ರೀಂ ನಮಃ ವಾಮಗಂಡೆ । |
| ಸಕಲಹ್ರೀಂ ನಮಃ ಊರ್ಧ್ವೋಷ್ಠೆ | ಸೌಃ ನಮಃ ಅಧರೆ । |
| ಐಂ ನಮಃ ಊರ್ಧ್ವದಂತಪಂಕ್ತೌ । | ಕ್ಲಿಂ ನಮಃ ಅಧಃ ದಂತಪಂಕ್ತೌ । |
| ಹ್ರೀಂ ನಮಃ ಬ್ರಹ್ಮರಂಧ್ರೆ । | ಶ್ರೀ ನಮಃ ಮುಖೆ |

ಪಂಚಮನ್ಯಾಸ :

| | |
|---|---|
| ಶ್ರೀಂ ನಮಃ ಲಲಾಟೆ । | ಹ್ರೀಂ ನಮಃ ಕಂಠೆ । |
| ಕ್ಲಿಂ ನಮಃ ಹೃದಿ । | ಐಂ ನಮಃ ನಾಭೌ । |
| ಸೌಃ ನಮಃ ಮೂಲಾಧಾರೆ । | ಓಂ ನಮಃ ಬ್ರಹ್ಮರಂಧ್ರೆ । |
| ಹ್ರೀಂ ನಮಃ ಮುಖೆ । | ಶ್ರೀಂ ನಮಃ ಗುದೆ । |
| ಕಏಈಲಹ್ರೀಂ ನಮಃ ಮೂಲಾಧಾರೆ । | ಹಸಕಹಲಹ್ರೀಂ ನಮಃ ಹೃದಿ । |
| ಸಕಲಹ್ರೀಂ ಬ್ರಹ್ಮರಂಧ್ರೆ । | ಸೌಃ ನಮಃ ದಕ್ಷಿಣಮುಖೆ । |
| ಐಂ ನಮಃ ವಾಮಹಸ್ತೆ । | ಕ್ಲಿಂ ನಮಃ ದಕ್ಷಿಣಪಾದೆ । |
| ಹ್ರೀಂ ನಮಃ ವಾಮಪಾದೆ । | ಶ್ರೀಂ ನಮಃ ಹೃದಿ |

ಈ ಪ್ರಕಾರ ಪಂಚಾವೃತ್ತಿ ನ್ಯಾಸ ಮಾಡಿ, "ಓಂ ಶ್ರೀಂ ಹ್ರೀಂ ಕ್ಲಿಂ ಐಂ ಸೌಃ ಓಂ ಹ್ರೀಂ ಶ್ರೀಂ ಕಏಈಲಹ್ರೀಂ ಹಸಕಹಲಹ್ರೀಂ ಸಕಲಹ್ರೀ ಸೌಃ ಐಂ ಕ್ಲಿಂ ಹ್ರೀಂ ಶ್ರೀಂ" ಮಂತ್ರದಿಂದ ಸಕಲ ಅಂಗಗಳಲ್ಲಿ ವ್ಯಾಪಕನ್ಯಾಸ ಮಾಡಬೇಕು. ನಂತರ ಈ ಮಂತ್ರದ ಕೊನೆಯಲ್ಲಿ 'ನಮಃ' ಸೇರಿಸಿ ಹೃದಯದಲ್ಲಿ ನ್ಯಾಸ ಮಾಡಬೇಕು.





ಷೋಢಾನ್ಯಾಸಾದಯೋ ನ್ಯಾಸಾಃ ಕಾರ್ಯಾಃ ಸೌಭಾಗ್ಯವಾಂಛಯಾ ।
ನೋಚ್ಯಂತೆ ವಿಸ್ತರಭಯಾನ್ನೈವ ಚಾವಶ್ಯಕಾಸ್ತ ತೆ ॥ 48 ॥

ತಮ್ಮ ಭಾಗ್ಯೋದಯದ ಅಪೇಕ್ಷೆಯುಳ್ಳ ಸಾಧಕರು ಷೋಢಾನ್ಯಾಸ ಮತ್ತು ಧ್ಯಾನಗಳನ್ನು ಮಾಡಬೇಕು. ಗ್ರಂಥ ವಿಸ್ತಾರದ ಭಯದಿಂದ ಮತ್ತು ಅದು ಈಗಾಗಲೆ ಪ್ರಚಲಿತವಾಗಿರುವದರಿಂದ ಅದನ್ನು ವಿವರಿಸುವ ಅಗತ್ಯವು ಇರುವುದಿಲ್ಲ.

ಮುದ್ರಾ ಪ್ರದರ್ಶನ

ಮುದ್ರಾಃ ಪ್ರದರ್ಶಯೇತ್ ಕೃತ್ವಾ ಷಡಂಗ ಪ್ರಾಣಸಂಯಮಮ್ ।
ಸಂಕ್ಷೋಭದ್ರಾವಣಾಕರ್ಷವಶ್ಯೋನ್ಮಾದಮಹಾಂಕುಶಾಃ ॥49 ॥
ಖೇಚರಿಬೀಜಯೋನ್ಯಾಖ್ಯಾ ಮುದ್ರಾ ದೇವಿಪ್ರಿಯಾ ನವ ।

ತತೋ ಧ್ಯಾಯೇದ್ ಭಗವತಿಂ ಶ್ರೀಮತ್ತ್ರಿಪುರ ಸುಂದರೀಮ್ ॥ 50 ॥

ಷೋಢಾನ್ಯಾಸ ಮಾಡಿದ ನಂತರ ಪ್ರಾಣಾಯಾಮ ಮಾಡಿ ಷಡಂಗನ್ಯಾಸ ಮಾಡಬೇಕು. ಆಮೇಲೆ ಮುದ್ರೆಗಳನ್ನು ಪ್ರದರ್ಶಿಸಬೇಕು. 1. ಸಂಕ್ಷೋಭಿಣಿ 2. ದ್ರಾವಿಣಿ 3. ಆಕರ್ಷಿಣಿ 4. ವಶ್ಯಾ 5. ಉನ್ಮಾದ 6. ಮಹಾಂಕುಶಾ 7. ಖೇಚರಿ 8. ಬೀಜ ಮತ್ತು 9. ಮಹಾಯೋನಿ ಈ ಒಂಭತ್ತು ಮುದ್ರೆಗಳು ದೇವಿಗೆ ಪ್ರಿಯವಾದ ಮುದ್ರೆಗಳಾಗಿವೆ.

ಧ್ಯಾನ-ಜಪ-ಪೂಜೆ

ಬಾಲಾರ್ಕಾಯುತ ತೇಜಸಾಂ ತ್ರಿನಯನಾಂ ರಕ್ತಾಂಬರೋಲ್ಲಾಸಿನಿರ ।
ನಾನಾಲಂಕೃತಿರಾಜಮಾನವಪುಷಂ ಬಾಲೋಡುರಾಟ್‌ಶೇಖರಾಮ್ ।
ಹಸ್ತೈರಿಕ್ಷುಧನುಃ ಸೃಣಿಂ ಸುಮಶರಂ ಪಾಶಂ ಮುದಾ ಬಿಭ್ರತಂ ।
ಶ್ರೀ ಚಕ್ರಸ್ಥಿತಸುಂದರಿಂ ತ್ರಿಜಗತಾಮಾಧಾರಭೂತಾಂ ಸ್ಮರೇತ್ ॥ 51 ॥

ಲಕ್ಷಮೇಕಂ ಜಪೇನ್ಮಂತ್ರಂ ದಶಾಂಶಂ ಹಯಮಾರಜೈಃ ।
ಪುಷ್ಪೈಸ್ತ್ರಿಮಧುರೋಪೇತೈರ್ಜುಹುಯಾತ್ ಪೂಜಿತೇನಲೆ ॥ 52 ॥

ಉದಯಿಸುತ್ತಿರುವ ಸೂರ್ಯನ ಸಮಾನ ಕಾಂತಿಯುಕ್ತ, ತ್ರಿನೇತ್ರಾ, ಕೆಂಪು ವರ್ಣದ ವಸ್ತ್ರಗಳಿಂದ ಸುಶೋಭಿತ, ಅನೇಕ ಆಭೂಷಣಗಳಿಂದ ಅಲಂಕೃತಳಾದ, ದ್ವಿತಿಯ ಚಂದ್ರನನ್ನು ತನ್ನ ಶಿರದಲ್ಲಿ ಧರಿಸಿರುವ, ತನ್ನ ನಾಲ್ಕು ಕೈಗಳಲ್ಲಿ ಕ್ರಮವಾಗಿ ಈಕ್ಷುಧನು, ಅಂಕುಶ, ಪುಷ್ಪಬಾಣ ಮತ್ತು ಪಾಶಗಳನ್ನು ಧರಿಸಿರುವ ಶ್ರೀಚಕ್ರದ ಮೇಲೆ ವಿರಾಜಮಾನಳಾಗಿರುವ ಮತ್ತು ಮೂರೂ ಲೋಕಗಳ ಆಧಾರಭೂತಳಾದ ಭಗವತಿ ಶ್ರೀಮತ್ತ್ರಿಪುರ ಸುಂದರಿ ದೇವಿಯನ್ನು ಧ್ಯಾನಿಸುತ್ತೇನೆ.

ಈಗ ಸಂಪೂರ್ಣ ಅಭೀಷ್ಟಗಳನ್ನು ಈಡೇರಿಸುವ ಪಂಚಾವೃತ್ತಿ ರೂಪ ಪಂಚವಿಧ ನ್ಯಾಸಗಳನ್ನು ಹೇಳಲಾಗುತ್ತಿದ್ದು, ಅದನ್ನು ಮಾಡುವದರಿಂದ ಸಾಧಕನು ತದ್‌ರೂಪತಾ ಪ್ರಾಪ್ತ ಮಾಡಿಕೊಳ್ಳುತ್ತಾನೆ.

ಏಕೈಕವರ್ಣ ವಿದ್ಯಾಯಾ ಇತ್ಯೇಕೊ ನ್ಯಾಸ ಈರಿತಃ ।
ಶಿಖಾಶಿರೊ ಲಲಾಟಂ ಭ್ರೂರ್ಘ್ರಾಣವಕ್ತ್ರೆ ಷಡರ್ಣಕಾನ್
ಕರಸಂಧಿಷು ಸಾಗ್ರೇಷು ದಶೇತಿ ಸ್ಯಾದ್ ದ್ವಿತಿಯಕಃ । ॥ 43 ॥
ಶಿರೋ ಲಲಾಟನೇತ್ರಾ ಸ್ಯೆಜಿಹ್ವಾಯಾಂ ಷಣ್ನ್ಯಸೇತ್ ಪುನಃ
ಪಾದಸಂಧಿಷು ಸಾಗ್ರೇಷು ದಶೇತಿ ಸ್ಯಾತ್ತೃತಿಯಕಃ । ॥ 44 ॥
ಸ್ವರಸ್ಥಾನೆ ಚತುರ್ಥಸ್ತು ಲಲಾಟೆ ಚ ಗಲೆ ಹೃದಿ
ನಾಭೌ ಚ ಮೂಲಾಧಾರೇಪಿ ಬ್ರಹ್ಮರಂಧ್ರೆ ಮುಖೆ ಗುದೆ । ॥ 45 ॥
ಆಧಾರೆ ಹೃದ್‌ಬ್ರಹ್ಮರಂಧ್ರೆ ಕರಯೋಃ ಪಾದಯೋರ್ಹೃದಿ
ಏವಂ ಪಂಚವಿಧಂ ಕೃತ್ವಾ ವಿದ್ಯಾಂ ಪ್ರಣವಸಂಪುಟಾಮ್ । ॥ 46 ॥
ಸರ್ವಸ್ಮಿನ್ವ್ಯಾಪಯೇದಂಗೆ ನಮೋಂತಾಂ ತಾಂ ಹೃದಿನ್ಯಸೇತ್ ॥ 47 ॥

ಶಿರ, ಬಾಯಿ, ಎರಡೂ ಕಣ್ಣುಗಳು, ಎರಡೂ ಕಿವಿಗಳು, ಎರಡೂ ನಾಸಿಕ ರಂದಗಳು, ಎರಡೂ ಕೆನ್ನೆಗಳು, ಎರಡೂ ತುಟಿಗಳು, ಬಾಯಿಯಂಗಳ ಎರಡೂ ದಂತಪಂಕ್ತಿಗಳು ಮತ್ತು ಬಾಯಿಯಲಿ ಮಂತ್ರದ ಒಂದೊಂದು ವರ್ಣದಿಂದ ನ್ಯಾಸ ಮಾಡಬೇಕು. ಇದು ಪ್ರಥಮ ನ್ಯಾಸವಾಗಿರುತ್ತದೆ.

ಶಿಖೆ, ಶಿರ, ಲಲಾಟ, ಭ್ರೂ, ನಾಸಿಕಾ ಮತ್ತು ಬಾಯಿಯಲ್ಲಿ ಮಂತ್ರದ 6 ವರ್ಣಗಳ ಮತ್ತು ಎರಡೂ ಕೈಗಳ ಸಂಧಿ (ಮಣಿಕಟ್ಟು) ಮತ್ತು ಅಗ್ರಭಾಗದಲ್ಲಿ ಶೇಷ ವರ್ಣಗಳ ನ್ಯಾಸ ಮಾಡಬೇಕು. ಇದು ದ್ವಿತಿಯ ನ್ಯಾಸವಾಗಿರುತ್ತದೆ.

ಶಿರ, ಲಲಾಟ, ಎರಡೂ ಕಣ್ಣುಗಳು, ಬಾಯಿ ಮತ್ತು ನಾಲಿಗೆಯ ಮೇಲೆ ಮಂತ್ರದ 6 ವರ್ಣಗಳ ಮತ್ತು ಎರಡೂ ಕಾಲುಗಳ ಸಂಧಿ ಮತ್ತು ಅವುಗಳ ಅಗ್ರಭಾಗದಲ್ಲಿ ಶೇಷ ವರ್ಣಗಳ ನ್ಯಾಸ ಮಾಡಬೇಕು. ಇದು ತೃತಿಯ ನ್ಯಾಸವಾಗಿರುತ್ತದೆ.

ಮಾತೃಕಾಗಳಿಗೆ ಹೇಳಲಾದ ಸ್ವರಸ್ಥಾನಗಳಲ್ಲಿ (ತ.1:89) ಮಂತ್ರದ 16 ವರ್ಣಗಳ ನ್ಯಾಸ ಮಾಡಬೇಕು. ಇದು ಚತುರ್ಥ ನ್ಯಾಸವಾಗುತ್ತದೆ.

ಲಲಾಟ, ಕಂಠ, ಹೃದಯ, ನಾಭಿ, ಮೂಲಾಧಾರ, ಬ್ರಹ್ಮರಂಧ್ರ, ಬಾಯಿ, ಗುದಾ, ಮೂಲಾಧಾರ, ಹೃದಯ, ಬ್ರಹ್ಮರಂಧ್ರ, ಎರಡೂ ಕೈಗಳು ಮತ್ತು ಹೃದಯ, ಎರಡೂ ಕಾಲುಗಳು, ಮಂತ್ರದ ಒಂದೊಂದು ಅಕ್ಷರದ ನ್ಯಾಸ ಮಾಡಬೇಕು. ಇದು ಪಂಚಮನ್ಯಾಸವಾಗಿರುತ್ತದೆ.





ಈ ಪ್ರಕಾರ ನ್ಯಾಸ ಮಾಡಿದ ನಂತರ ಪ್ರಣವ ಸಂಪುಟಿತ ಶ್ರೀ ವಿದ್ಯಾದ ಸಂಪೂರ್ಣ ಮಂತ್ರಗಳಿಂದ ಸಕಲ ಅಂಗಗಳಲ್ಲಿ ವ್ಯಾಪಕನ್ಯಾಸ ಮಾಡಬೇಕು. ಪುನಃ ಮೂಲಮಂತ್ರಕ್ಕೆ ನಮಃ ಸೇರಿಸಿ ಹೃದಯದಲ್ಲಿ ನ್ಯಾಸ ಮಾಡಬೇಕು.

ಪ್ರಥಮ ನ್ಯಾಸ :

ಓಂ ನಮಃ ಮೂರ್ಧ್ನಿ । ಹ್ರೀಂ ನಮಃ ವಕ್ತ್ರೆ ।
ಕ್ಲೀಂ ನಮಃ ದಕ್ಷಿಣ ನೇತ್ರೆ । ಐಂ ನಮಃ ವಾಮನೇತ್ರೆ ।
ಸೌಃ ನಮಃ ದಕ್ಷಿಣಕರ್ಣೆ । ಓಂ ನಮಃ ವಾಮಕರ್ಣೆ ।
ಹ್ರೀಂ ನಮಃ ದಕ್ಷನಾಸಾಯಾಮ್ । ಶ್ರೀ ನಮಃ ವಾಮನಾಸಾಯಾಮ್ ।
ಕಏಈಲಹ್ರೀಂ ದಕ್ಷಿಣಗಂಡೆ । ಹಸಕಲಹ್ರೀಂ ನಮಃ ವಾಮಗಂಡೆ ।
ಸಕಲಹ್ರೀಂ ಊರ್ಧ್ವೋಷ್ಠೆ । ಸೌಃ ನಮಃ ಅಧರೋಷ್ಠೆ ।
ಐಂ ನಮಃ ವಕ್ತ್ರಮಧ್ಯೆ । ಕ್ಲೀಂ ನಮಃ ಊರ್ಧ್ವದಂತಪಂಕ್ತೌ ।
ಹ್ರೀಂ ನಮಃ ಅಧೋದಂತಪಂಕ್ತೌ । ಶ್ರೀಂ ನಮಃ ವದನೆ।

ದ್ವಿತಿಯ ನ್ಯಾಸ :

| | |
|---|---|
| ಶ್ರೀಂ ನಮಃ ಶಿಖಾಯಾಮ್ । | ಹ್ರೀಂ ನಮಃ ಶಿರಸಿ । |
| ಕ್ಲೀಂ ನಮಃ ಲಲಾಟೆ । | ಐಂ ನಮಃ ಭುವೋಃ । |
| ಸೌಃ ನಮಃ ನಾಸಾಯಾಮ್ । | ಓಂ ನಮಃ ವಕ್ತ್ರೆ । |

ಹ್ರೀಂ ನಮಃ ದಕ್ಷಿಣ ಬಾಹುಮೂಲೆ । ಶ್ರೀ ನಮಃ ದಕ್ಷಿಣ ಕೂರ್ಪರೆ ।
ಕಏಈಲಹ್ರೀಂ ನಮಃ ದಕ್ಷಿಣಮಣಿಬಂಧೆ । ಹಸಕಹಲಹ್ರೀಂ ನಮಃ ಅಂಗುಲಿಮೂಲೆ।

| | |
|---|---|
| ಸಕಲಹ್ರೀಂ ನಮಃ ಅಂಗುಲ್ಯಗ್ರೆ । | ಸೌಃ ನಮಃ ವಾಮಬಾಹುಮೂಲೆ । |
| ಐಂ ನಮಃ ವಾಮಕೂರ್ಪರೆ । | ಕ್ಲೀಂ ನಮಃ ವಾಮಮಣಿಬಂಧೆ । |
| ಹ್ರೀಂ ನಮಃ ಅಂಗುಲಿಮೂಲೆ । | ಶ್ರೀಂ ನಮಃ ಅಂಗುಲ್ಯಗ್ರೆ |

ತೃತಿಯ ನ್ಯಾಸ :

| | |
|---|---|
| ಶ್ರೀಂ ನಮಃ ಶಿರಸಿ । | ಹ್ರೀಂ ನಮಃ ಲಲಾಟೆ । |
| ಕ್ಲೀಂ ನಮಃ ದಕ್ಷಿಣನೇತ್ರೆ । | ಐಂ ನಮಃ ವಾಮನೇತ್ರೆ । |
| ಸೌಃ ನಮಃ ಮುಖೆ । | ಓಂ ನಮಃ ಜಿಹ್ವಾಯಾಮ್ । |
| ಹ್ರೀಂ ನಮಃ ಪದಕ್ಷಪಾದಮೂಲೆ । | ಓಂ ನಮಃ ದಕ್ಷಗುಲ್ಫೆ । |
| ಕಏಈಲಹ್ರೀಂ ನಮಃ | ದಕ್ಷಜಂಘಾಯಾಮ್ । |

ವರವಾಲಾಗ್ನಿಸತ್ಯಾಃ ಸರೇಫಾರೂಢಂ ಜಲಂ ಸ್ಥಿರಾ ।
ಸೇಂದುರ್ಮುಖೋ ಮೆ ವಶಾಂತೆ ಮಾನಯೋಪರ್ಬುಧ ಪ್ರಿಯಾ ॥ 110॥
ಸ್ಮಾತ್ರಯಸ್ತ್ರಿಂಶದರ್ಣಾಡ ಯ್ಯೋ ಮನುಸ್ತ್ರೈಲೋಕ್ಯಮೋಹನಃ ।
ಗಣಕೋಸ್ಯ ಋಷಿಛಂದೋ ಗಾಯತ್ರಿ ದೇವತಾ ಪುನಃ ॥
ತ್ರೈಲೋಕ್ಯಮೋಹನಕರೋ ಗಣೇಶೋ ಭಕ್ತಸಿದ್ಧಿದಃ ।
ರವಿವೇದಶರೋದನ್ವದ್ ರಸನೇತ್ರೈಃ ಷಡಂಗಕಮ್ ॥

ವಕ್ರ ಮತ್ತು ನಂತರ ಕರ್ಣೇಂದು ಸಹಿತ ಣಕಾರಾಂತ 'ತ' ಅರ್ಥಾತ್ ತುಣ್, ಆಮೇಲೆ 'ಏಕದಂಷ್ಟ್ರಾಯ', ನಂತರ ಮನ್ಮಥ (ಕ್ಲೀಂ), ಮಾಯಾ (ಹ್ರೀಂ), ರಮಾ (ಶ್ರೀಂ), ಗಜಮುಖ (ಗಂ), ಆಮೇಲೆ 'ಗಣಪ', ನಂತರ ಭಗೀ... (ತೆ), 'ವರ' ನಂತರ ಬಾಲ (ವ), ಅಗ್ನಿ (ರ), ಸತ್ಯ (ದ) (ವರದ), ... 'ಷ', ರೇಫಾರೂಢ ಜಲ (ವ), ತದನಂತರ ಸ್ಥಿರಾ (ಜ), ಸೇಂದುಮೇಷ (ನಂ), ಆಮೇಲೆ 'ಮೆ ವಶಮಾನಾಯ', ಉಷರ್ಬುಧಕ್ರಿಯಾ (ಸ್ವಾಹಾ) ಜೋಡಿಸುವು... ರಿಂದ ತ್ರೈಲೋಕ್ಯ ಮೋಹನ ಗಣಪತಿ ಮಂತ್ರವು ಸಿದ್ಧವಾಗುತ್ತದೆ. "ವಕ್ರತುಂಡೈಕದಂಷ್ಟ್ರಾಯ ಕ್ಲೀಂ ಹ್ರೀಂ ಶ್ರೀಂ ಗಂ ಗಣಪತೆ ವರವರದ ಸರ್ವಜನಂ ಮೆ ವಶಮಾನಯ ಸ್ವಾಹಾ" ಮೂವತ್ಮೂರು ಅಕ್ಷರಗಳ ಈ ಮಂತ್ರದ ಋಷಿ ಗಣಕ, ಗಾಯತ್ರಿ ಛಂದ ಮತ್ತು ದೇವತೆಯು ಭಕ್ತರ ಕಾಮನೆಗಳನ್ನು ಈಡೇರಿಸುವ ಮತ್ತು ತ್ರೈಲೋಕ್ಯವನ್ನು ಮೋಹಕಗೊಳಿಸುವ ಶ್ರೀ ಗಣೇಶನಾಗಿದ್ದಾನೆ. ಈ ಮಂತ್ರ 12,4,5,4 ಮತ್ತು 6,2 ಅಕ್ಷರಗಳಿಂದ ಷಡಂಗನ್ಯಾಸ ಮಾಡಬೇಕು.

ವಿನಿಯೋಗ :

ಓಂ ಅಸ್ಯ ಶ್ರೀ ತ್ರೈಲೋಕ್ಯಮೋಹನ ಮಂತ್ರಸ್ಯ ಗಣಕ ಋಷಿರ್ಗಾಯತ್ರಿ ಛಂದಃ ಭಕ್ತೇಷ್ಟ ಸಿದ್ಧಿದಾಯಕ ತ್ರೈಲೋಕ್ಯಮೋಹನ ಕಾರಕೊ ಗಣಪತಿರ್ದೇವತಾ ಆತ್ಮನೋಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಷಡಂಗನ್ಯಾಸ : ಓಂ ವಕ್ರತುಂಡೈಕದಂಷ್ಟ್ರಾಯ ಕ್ಲೀಂ ಹ್ರೀಂ ಶ್ರೀಂ ಗಂ ಹೃದಯಾಯ ನಮಃ । ಓಂ ಗಣಪತಿ ಶಿರಸೆ ಸ್ವಾಹಾ । ಓಂ ವರವರದ ಶಿಖಾಯೈ ವಷಟ್ । ಓಂ ಸರ್ವಜನಂ ಕವಚಾಯ ಹುಮ್ । ಓಂ ಮೆ ವಶಮಾನಯ ನೇತ್ರತ್ರಯಾಯ ವೌಷಟ್ । ಓಂ ಸ್ವಾಹಾ ಅಸ್ತ್ರಾಯ ಫಟ್

ನಂತರ ತ್ರೈಲೋಕ್ಯಮೋಹನ ಗಣಪತಿಯ ಧ್ಯಾನ ಮಾಡಬೇಕು.





ಧ್ಯಾನ

ಗದಾಬೀಜಪೂರೆ ಧನುಃ ಶೂಲಚಕ್ರೆ ಸರೋಜೋತ್ಪಲೆ ಪಾಶಧಾನ್ಯಾಗ್ರದಂತಾನ್।
ಕರೈಃ ಸಂಧಧಾನಂ ಸ್ವಶುಂಡಾಗ್ರರಾಜನ್ ಮಣಿಕುಂಭಮಂಕಾಧಿರೂಢಂ
ಸ್ವಪತ್ನ್ಯಾ ॥ 113 ॥
ಸರೋಜನ್ಮನಾಭೂಷಣಾನಾಂಭರಣೋ ಜ್ವಲದ್ಧಸ್ತತನ್ವ್ಯಾ ಸ
ಮಾಲಿಂಗಿತಾಂಗಮ್।
ಕರೀಂದ್ರಾನನಂ ಚಂದ್ರಚೂಡಂ ತ್ರಿನೇತ್ರಂ ಜಗನ್ಮೋಹನಂ ರಕ್ತಕಾಂತಿಂ
ಭಜೇತ್ತಮ್ ॥ 114 ॥

ಬಲಗೈಯಲ್ಲಿ ಗದೆ, ಬೀಜಪೂರ, ಶೂಲ, ಚಕ್ರ ಮತ್ತು ಪದ್ಮ, ಎಡಗೈಯಲ್ಲಿ ಧನುಷ, ಉತ್ಪಲ, ಪಾಶ, ಧಾನ್ಯಮಂಜರಿ (ತೆನೆಯ ಅಗ್ರಭಾಗದಲ್ಲಿರುವ ಕೇಶ), ಮತ್ತು ದಂತ ಧಾರಣ ಮಾಡಿರುವ, ಸೊಂಡಿಲಿನ ಅಗ್ರಭಾಗದಲ್ಲಿ ಮಣಿ ಕಲಶದಿಂದ ಸುಶೋಭಿತ, ಮತ್ತು ಯಾರ ಶ್ರೀ ಅಂಗ ಕಮಲ ಮತ್ತು ಆಭೂಷಣಗಳಿಂದ ಕಂಗೊಳಿಸುತ್ತಿರುವ ಮತ್ತು ತನ್ನ ತೊಡೆಯ ಮೇಲೆ ಕುಳಿತಿರುವ ಉಜ್ವಲ ವರ್ಣಯುಕ್ತ ತನ್ನ ಪತ್ನಿಯಿಂದ ಆಲಿಂಗಿತನಾದ, ತ್ರಿನೇತ್ರ ಮತ್ತು ಗಜವದನನಾಗಿ, ಶಿರದಲ್ಲಿ ಚಂದ್ರಕಲೆಯನ್ನು ಧರಿಸಿರುವ, ಮೂರೂ ಲೋಕಗಳನ್ನು ಮೋಹಿತಗೊಳಿಸುವ, ರಕ್ತವರ್ಣದ ಕಾಂತಿಯುಕ್ತನಾದ ಶ್ರೀ ಗಣೇಶನನ್ನು ಧ್ಯಾನ ಮಾಡುತ್ತೇನೆ.

ಪುರಶ್ಚರಣ ವಿಧಾನ

ವೇದಲಕ್ಷಂ ಜಪೇನ್ಮಂತ್ರಮಷ್ಟದ್ರವ್ಯೈರ್ದಶಾಂಶತಃ ।
ಹುತ್ವಾ ಪೂರ್ವೋದಿತಂ ಪೀಠೆ ಪೂಜಯೇದ್ ಗಣನಾಯಕಮ್ ॥ 115॥
ಅಂಗಾರ್ಚ್ಯೋ ಪೂರ್ವವತ್ಪ್ರೋಕ್ತಾ ಶಕ್ತಿಃ ಪತ್ರೇಷು ಪೂಜಯೇತ್ ।
ವಾಮಾ ಜ್ಯೇಷ್ಠಾ ಚ ರೌದ್ರಿ ಸ್ಯಾತ್ಕಾಲಿ ಕಲಪದಾದಿಕಾ ॥ 116 ॥

ವಿಕರಿಣ್ಯಾಹ್ವಯಾ ತದ್ವದ ಬಲಾಧ್ಯಾ ಪ್ರಮಥನ್ಯಪಿ ।
ಸರ್ವಭೂತ ದಮನ್ಯಾಖ್ಯಾ ಮನೋನ್ಮನ್ಯಪಿ ಚಾಗೃತಃ ॥ 117 ॥

ದಿಕ್ಷು ಪ್ರಮೋದಃ ಸುಮುಖೊ ದುರ್ಮುಖೊ ವಿಘ್ನನಾಶಕಃ ।
ದೀರ್ಘಾದ್ಯಾ ಮಾತರಃ ಪೂಜ್ಯಾ ಇಂದ್ರಾದ್ಯಾ ಆಯುಧಾನ್ಯಪಿ ॥ 118 ॥
ಏವಂ ಸಿದ್ಧೆ ಮನೌ ಕುರ್ಯಾತ್ಪ್ರಯೋಗಾನಿಷ್ಟಸಿದ್ಧಯೆ ॥

ಈ ಮಂತ್ರವನ್ನು ನಾಲ್ಕು ಲಕ್ಷ ಬಾರಿ ಜಪಿಸಬೇಕು. ಮತ್ತು ಅಷ್ಟದ್ರವ್ಯಗಳಿಂದ

ಶ್ರೀ ಗಣೇಶ ಮಂತ್ರವನ್ನು ಧ್ಯಾನ ಮಾಡಿದ ನಂತರ ಇಪ್ಪತ್ತೆಂಟು ಅಕ್ಷರಗಳ ಲಕ್ಷ್ಮಿ ವಿನಾಯಕ ಮಂತ್ರವನ್ನು ನಾಲ್ಕು ಲಕ್ಷ ಜಪ ಮಾಡಬೇಕು. ನಂತರ ಬಿಲ್ವ ವೃಕ್ಷದ ಕಟ್ಟಿಗೆಯಿಂದ ದಶಾಂಶ ಹೋಮ ಮಾಡಬೇಕು. ಪೂರ್ವದಲ್ಲಿ ವಿವರಿಸಿದಂತೆ ಪೀಠದಲ್ಲಿ ಲಕ್ಷ್ಮಿ ವಿನಾಯಕರನ್ನು ಪೂಜೆ ಮಾಡಬೇಕು. ಮೊದಲು ಅಂಗಪೂಜೆ ಮಾಡಬೇಕು. ನಂತರ, 1. ಬಲಾಕಾ 2. ವಿಮಲಾ 3. ಕಮಲಾ 34. ವನಮಾಲಿಕಾ 5. ವಿಭೀಷಿಕಾ 6. ಮಾಲಿಕಾ 7. ಶಾಂಕರಿ 8. ವಸುಬಾಲಿಕಾ ಈ ಎಂಟು ಶಕ್ತಿಗಳನ್ನು ಪೂಜೆ ಮಾಡಬೇಕು. ನಂತರ ಎಡ ಮತ್ತು ಬಲ ಪಾರ್ಶ್ವಗಳಲ್ಲಿ ಪದ್ಮನಿಧಿ ಮತ್ತು ಶಂಖನಿಧಿಗಳನ್ನು ಪೂಜಿಸಬೇಕು. ಬಾಹ್ಯ ಭಾಗದಲ್ಲಿ ಲೋಕಪಾಲರು ಮತ್ತು ಆಯುಧಗಳನ್ನು ಪೂಜೆ ಮಾಡಬೇಕು.

ವಿಧಾನ : ಧ್ಯಾನದ ನಂತರ ಮಾನಸೋಪಚಾರಗಳಿಂದ ಪೂಜೆ ಮಾಡಿ ಗಣೇಶೋಕ್ತ ಪೀಠ ಪೂಜೆ ಮಾಡಬೇಕು. ನಂತರ ಲಕ್ಷ್ಮಿ ವಿನಾಯಕ ಮೂಲಮಂತ್ರವನ್ನು ಉಚ್ಚರಿಸುತ್ತ ಪೀಠದಲ್ಲಿ ಅವರ ಮೂರ್ತಿಗಳನ್ನು ಕಲ್ಪಿಸಿಕೊಳ್ಳಬೇಕು. ನಂತರ ಧ್ಯಾನ, ಆವಾಹನಾದಿ ಪಂಚ ಪುಷ್ಪಾಂಜಲಿಗಳನ್ನು ಸಮರ್ಪಿಸಿ ಆವರಣ ಪೂಜೆಯನ್ನು ಮಾಡಬೇಕು.

**ಷಡಂಗನ್ಯಾಸ : ಓಂ ಶ್ರೀಂ ಗ್ರಾಂ ಹೃದಯಾಯ ನಮಃ । ಓಂ ಶಿರಸೆ ಸ್ವಾಹಾ । ಓಂ ಶ್ರೀಂ ಗೂಂ ಶಿಖಾಯೈ ವಷಟ್ । ಓಂ ಶ್ರೀಂ ಗ್ರೈಂ ಕವಚಾಯ ಹುಮ್ । ಓಂ ಶ್ರೀಂ ಗೌಂ ನೇತ್ರತ್ರಯಾಯ ವೌಷಟ್ । ಓಂ ಶ್ರೀಂ ಗಃ ಅಸ್ತ್ರಾಯ ಫಟ್**

ಈ ಪ್ರಕಾರ ಷಡಂಗನ್ಯಾಸ ಮಾಡಿದ ನಂತರ, ಅಷ್ಟ ದಳಗಳಲ್ಲಿ ಪೂರ್ವಾದಿ ದಿಶೆಗಳಲ್ಲಿ ಕ್ರಮವಾಗಿ –

| | |
|---|---|
| ಓಂ ಬಲಕಾಯೈ ನಮಃ | ಪೂರ್ವೆ । |
| ಓಂ ವಿಮಲಾಯೈ ನಮಃ | ಆಗ್ನೆಯೆ । |
| ಓಂ ಕಮಲಾಯೈ ನಮಃ | ದಕ್ಷಿಣೆ । |
| ಓಂ ವನಮಾಲಿಕಾಯೈ ನಮಃ | ನೈಋತ್ಯೆ । |
| ಓಂ ವಿಭೀಷಿಕಾಯೈ ನಮಃ | ಪಶ್ಚಿಮೆ । |
| ಓಂ ಮಾಲಿಕಾಯೈ ನಮಃ | ವಾಯುವ್ಯೆ । |
| ಓಂ ಶಾಂಕರಿಯೈ ನಮಃ | ಸೌಮ್ಯೆ । |
| ಓಂ ವಸುಬಾಲಿಕಾಯೈ ನಮಃ | ಈಶಾನ್ಯೆ |

ಅಷ್ಟಶಕ್ತಿಗಳನ್ನು ಪೂಜಿಸಬೇಕು. ನಂತರ ಬಲಗಡೆಗೆ "ಓಂ ಶಂಖ ನಿಧಯೆ ನಮಃ ಮತ್ತು ಎಡಗಡೆಗೆ ಓಂ ಪದ್ಮನಿಧಯೆ ನಮಃ ಈ ಮಂತ್ರಗಳಿಂದ ಅಷ್ಟದಳದ





ಎರಡೂ ಭಾಗಗಳಲ್ಲಿ ಎರಡೂ ನಿಧಿಗಳನ್ನು ಪೂಜೆ ಮಾಡಿ. ದಳದ ಅಗ್ರಭಾಗದಲ್ಲಿ **'ಇಂದ್ರಾಯ ನಮಃ'** ಮುಂತಾದ ಮಂತ್ರಗಳಿಂದ ಇಂದ್ರಾದಿ ದಶದಿಕ್ಪಾಲರು ಮತ್ತು ಅವರ ಅಗ್ರಭಾಗದಲ್ಲಿ **'ವಜ್ರಾಯ ನಮಃ'** ಮುಂತಾದ ಮಂತ್ರಗಳಿಂದ ಅವರ ಆಯುಧಗಳನ್ನು ಪೂಜೆ ಮಾಡಬೇಕು. ನಂತರ ಮೂಲ ಮಂತ್ರ **"ಓಂ ಶ್ರೀಂ ಗಂ ಸೌಮ್ಯಾಯ ಗಣಪತಯೆ ವರ ವರದ ಸರ್ವಜನಂ ಮೆ ವಶಮಾನಯ ಸ್ವಾಹಾ"** ದ ನಾಲ್ಕು ಲಕ್ಷ ಜಪ ಮಾಡಬೇಕು. ಮತ್ತು ಉತ್ತರ ಪೂಜೆಯನ್ನು ಮಾಡಬೇಕು. ಜಪದ ದಶಾಂಶ ಹವನವನ್ನು ಬಿಲ್ವ ವೃಕ್ಷದ ಸಮಿಧಾಗಳಿಂದ ಮಾಡಬೇಕು. ನಂತರ ಅದರ ದಶಾಂಶ ತರ್ಪಣ, ಅದರ ದಶಾಂಶ ಮಾರ್ಜನ, ನಂತರ ಮಾರ್ಜನದ ದಶಾಂಶ ಬ್ರಾಹ್ಮಣ ಭೋಜನ ಮಾಡಿಸುವುದರಿಂದ ಮಂತ್ರ ಸಿದ್ಧಿಯಾಗುತ್ತದೆ. ಮತ್ತು ಸಾಧಕನು ಕಾಮ್ಯ ಪ್ರಯೋಗದ ಅಧಿಕಾರಿಯಾಗುತ್ತಾನೆ.

**ಕಾಮ್ಯ ಪ್ರಯೋಗಗಳು**

ಉರೋ ಮಾತ್ರೆ ಜಲೆ ಸ್ಥಿತ್ವಾ ಮಂತ್ರಿ ಧ್ಯಾತ್ವಾರ್ಕಮಂಡಲೆ ।
ಏವಂ ತ್ರಿಲಕ್ಷಂ ಜಪತೊ ಧನವೃದ್ಧಿಃ ಪ್ರಜಾಯತೆ ॥ 106 ॥

ವಿಲ್ವಮೂಲಂ ಸಮಾಸ್ಥಾಯ ತಾವಜ್ಜಪ್ತೆ ಫಲಂ ಹಿ ತತ್ ।
ಅಶೋಕಕಾಷ್ಠೈರ್ಜ್ವಲಿತೆ ವಹ್ನಾವಾಜ್ಯಾಕ್ತತುಂಡುಲೈಃ ॥ 107 ॥

ಹೋಮತೊ ದಶಯೇದ್ವಿಶ್ವಮರ್ಕಕಾಷ್ಠಂ ಶುಭಾವಹಿ ।
ಖಾದಿರಾಗ್ನೌ ನರಪತಿಂ ಲಕ್ಷ್ಮಿಂ ಪಾಯಸ ಹೋಮತಃ ॥ 108 ॥

ಎದೆಯ ಮಟ್ಟದವರೆಗೆ ನೀರಿನಲ್ಲಿ ನಿಂತುಕೊಂಡು ಸೂರ್ಯ ಮಂಡಲದಲ್ಲಿ ಲಕ್ಷ್ಮಿ ವಿನಾಯಕರನ್ನು ಧ್ಯಾನಿಸಿ ಮೂರು ಲಕ್ಷ ಜಪ ಮಾಡಿದರೆ ಧನವೃದ್ಧಿಯಾಗುತ್ತದೆ. ಬಿಲ್ವವೃಕ್ಷದ ಬುಡದಲ್ಲಿ ಕುಳಿತು ಮೂರು ಲಕ್ಷ ಜಪ ಮಾಡಿದರೆ ಅದೇ ಪ್ರಕಾರದಲ್ಲಿ ಧನ ವೃದ್ಧಿಯಾಗುತ್ತದೆ. ಅಶೋಕ ವೃಕ್ಷದ ಸಮಿಧಾಗಳಿಂದ ನಿರ್ಮಿತ ಅಗ್ನಿಯಲ್ಲಿ ತುಪ್ಪ ಮಿಶ್ರಿತ ಅಕ್ಕಿಯ ಆಹುತಿ ನೀಡುವುದರಿಂದ ಸಂಪೂರ್ಣ ವಿಶ್ವವು ವಶವಾಗುತ್ತದೆ. ಖದಿರದ ಪ್ರಜ್ವಲಿತ ಅಗ್ನಿಯಲ್ಲಿ ಎಕ್ಕದ ಸಮಿಧಾದಿಂದ ಹೋಮ ಮಾಡುವುದರಿಂದ ರಾಜನು ವಶೀಭೂತನಾಗುತ್ತಾನೆ. ಈ ಮಂತ್ರದ ಮೂಲಕ ಪಾಯಸದ ಹೋಮ ಮಾಡುವುದರಿಂದ ಲಕ್ಷ್ಮಿ ಪ್ರಸನ್ನಳಾಗುತ್ತಾಳೆ.

## ತ್ರೈಲೋಕ್ಯ ಮೋಹನ ಗಣಪತಿ ಮಂತ್ರ

ವಕ್ರಕರ್ಣೆಂದುಯುಗ್ ಕಾಂತೊ ದೈಕದಂಷ್ಟ್ರಾಯ ಮನ್ಮಥಃ ।
ಮಾಯಾ ರಮಾ ಗಜಮುಖೊ ಗಣಪಾಂತೆ ಭಗೀ ಹರಿಃ ॥ 109 ॥

ಘೃತ ಸಹಿತ ಅನ್ನದ ಆಹುತಿಯನ್ನು ಕೊಡುವುದರಿಂದ ಸಾಧಕನು ಅನ್ನವಂತ ಅಂದರೆ ಧಾನ್ಯಸಂಪನ್ನನಾಗುತ್ತಾನೆ. ಪಾಯಸದ ಹೋಮದಿಂದ ಲಕ್ಷ್ಮಿ ಪ್ರಾಪ್ತಿಯಾಗುತ್ತದೆ. ಕಬ್ಬಿನ ಗಣಿಕೆಯ ಆಹುತಿಯಿಂದ ರಾಜ್ಯಲಕ್ಷ್ಮಿ ಪ್ರಾಪ್ತವಾಗುತ್ತದೆ. ಬಾಳೆಹಣ್ಣು ಮತ್ತು ತೆಂಗಿನಕಾಯಿಯ ಹವನ ಮಾಡುವುದರಿಂದ ಜನ ವಶೀಕರಣದ ಶಕ್ತಿ ಪ್ರಾಪ್ತವಾಗುತ್ತದೆ. ತುಪ್ಪದ ಹವನದಿಂದ ಧನಪ್ರಾಪ್ತಿ ಮತ್ತು ಮಧುಮಿಶ್ರಿತ ಲವಣದ ಹೋಮದಿಂದ ಸ್ತ್ರೀವಶೀಕರಣ ಸಿದ್ಧಿಯಾಗುತ್ತದೆ. ಅಪೂಪಗಳ ಹೋಮದಿಂದ ರಾಜನು ವಶವರ್ತಿಯಾಗುತ್ತಾನೆ.

**ಲಕ್ಷ್ಮಿವಿನಾಯಕ ಮಂತ್ರ**

**ತಾರೌ ರಮಾ ಚಂದ್ರಯುಕ್ತಃ ಖಾಂತಃ ಸೌಮ್ಯಾ ಸಮೀರಣಃ ।**
**ಙೆಂತೋ ಗಣಪತಿಸ್ತೋಯಂ ರವರಾಂತದ ಸರ್ವ ಚ ॥ 98 ॥**

**ಜನಂ ಮೆ ವಶಮಾದೀರ್ಘೋ ವಾಯುಃ ಪಾವಕಕಾಮಿನಿ ।**
**ಅಷ್ಟಾವಿಂಶತಿವರ್ಣೋಯಂ ಮನುರ್ಧನ ಸಮೃದ್ಧಿದಃ ॥ 99 ॥**

**ಅಂತರ್ಯಾಮಿ ಮುನಿಶ್ಛಂದೊ ಗಾಯತ್ರಿದೇವತಾ ಮನೋಃ ।**

**ಲಕ್ಷ್ಮಿವಿನಾಯಕೊ ಬೀಜಂ ರಮಾ ಶಕ್ತಿರ್ವಸುಪ್ರಿಯಾ ।**
**ರಮಾಗಣೇಶಬೀಜಾಭ್ಯಾಂ ದೀರ್ಘಾಢ್ಯಾಭ್ಯಾಂ ಷಡಂಗಕಮ್ ॥ 100 ॥**

ತಾರ (ಓಂ), ರಮಾ (ಶ್ರೀಂ), ನಂತರ ಸಾನುಸ್ವಾರ ಖ ದ ಮುಂದೆ ಗಂ, ನಂತರ **'ಸೌಮ್ಯಾ'**, ಪದ ಸಮೀರಣ ಯ, ಇದರ ನಂತರ ಚತುರ್ಥ್ಯಂತ ಗಣಪತಿ, **'ಗಣಪತಯೆ'**, ಆಮೇಲೆ ತೋಯ (ವ), ರ (ವರ), ಪುನಃ **'ವರದ' "ಸರ್ವಜನ ಮೆ ವಶಂ'** ನಂತರ ಮಾ, ದೀರ್ಘ (ನ), ವಾಯು (ಯ) ಮತ್ತು ಅಂತದಲ್ಲಿ ಪಾವಕಕಾಮಿನಿ (ಸ್ವಾಹಾ) ಜೋಡಿಸುವುದರಿಂದ 28 ಅಕ್ಷರಗಳ, ಧನದಾಯಕ ಮಂತ್ರ ಸಿದ್ಧವಾಗುತ್ತದೆ.

**"ಓಂ ಶ್ರೀಂ ಗಂ ಸೌಮ್ಯಾಯ ಗಣಪತಯೆ ವರ ವರದ ಸರ್ವಜನಂ ಮೆ ವಶಮಾನಯ ಸ್ವಾಹಾ"**

ಈ ಮಂತ್ರದ ಅಂತರ್ಯಾಮಿ ಋಷಿ, ಗಾಯತ್ರಿ ಛಂದ, ಲಕ್ಷ್ಮಿ ವಿನಾಯಕ ದೇವತೆ, ಶ್ರೀಂ ಬೀಜ ಮತ್ತು ಸ್ವಾಹಾ ಶಕ್ತಿಯಾಗಿದೆ. ಶ್ರೀ ಮತ್ತು ಗಂ ದಲ್ಲಿ ಆರು ದೀರ್ಘ ವರ್ಣಗಳನ್ನು ಹಚ್ಚುವುದರಿಂದ ಷಡಂಗನ್ಯಾಸ ಮಾಡಬೇಕು.

**ವಿನಿಯೋಗ :** ಅಸ್ಯ ಶ್ರೀ ಲಕ್ಷ್ಮಿವಿನಾಯಕ ಮಂತ್ರಸ್ಯ ಅಂತರ್ಯಾಮಿ ಋಷಿಃ





ಗಾಯತ್ರಿ ಛಂದಃ ಲಕ್ಷ್ಮಿ ವಿನಾಯಕೊ ದೇವತಾ ಶ್ರೀಂ ಬೀಜಂ ಸ್ವಾಹಾ ಶಕ್ತಿಃ ಆತ್ಮನೋಭಿಷ್ಟಸಿದ್ಧ್ಯರ್ಥೆ ಜಪೇ ವಿನಿಯೋಗಃ

ಋಷ್ಯಾದಿನ್ಯಾಸ : ಓಂ ಅಂತರ್ಯಾಮಿ ಋಷಯೇ ನಮಃ ಶಿರಸಿ ಗಾಯತ್ರಿ ಛಂದಸೆ ನಮಃ ಮುಖೆ ಲಕ್ಷ್ಮಿ ವಿನಾಯಕ ದೇವತಾಯೈ ನಮಃ ಹೃದಿ । ಶ್ರೀ ಬೀಜಾಯ ನಮಃ ಗುಹ್ಯೇ । ಸ್ವಾಹಾ ಶಕ್ತಯೇ ನಮಃ ಪಾದಯೋಃ ।

ಷಡಂಗನ್ಯಾಸ : ಓಂ ಶ್ರೀಂ ಗ್ರಾಂ ಹೃದಯಾಯ ನಮಃ । ಓಂ ಶ್ರೀಂ ಗ್ರೀಂ ಶಿರಸೆ ಸ್ವಾಹಾ । ಓಂ ಶ್ರೀಂ ಗೂಂ ಶಿಖಾಯೈ ವಷಟ್ । ಓಂ ಶ್ರೀ ಗೈಂ ಕವಚಾಯ ಹುಮ್ । ಓಂ ಶ್ರೀ ಗೌಂ ನೇತ್ರತ್ರಯಾಯ ವೌಷಟ್ । ಓಂ ಶ್ರೀ ಗಃ ಅಸ್ತ್ರಾಯ ಫಟ್ ।

ಧ್ಯಾನ ಮಂತ್ರ

ದಂತಾಭಯೆ ಚಕ್ರದರೌ ದಧಾನಂ ಕರಾಗ್ರಗಸ್ವರ್ಣಘಟಂ ತ್ರಿನೇತ್ರಮ್ ।
ಧೃತಾಬ್ಜಯಾ ಲಿಂಗಿತಮಬ್ಧಿಪುತ್ರ್ಯಾ ಲಕ್ಷ್ಮಿಗಣೇಶಂ ಕನಕಾಭಮೀಡೆ ॥ 101 ॥

ಬಲಗೈಯಲ್ಲಿ ದಂತ ಮತ್ತು ಶಂಖ, ಎಡಗೈಯಲ್ಲಿ ಅಭಯ ಮತ್ತು ಚಕ್ರಗಳನ್ನು ಧರಿಸಿ, ಸೊಂಡಿಲಿನ ಅಗ್ರಭಾಗದಲ್ಲಿ ಸುವರ್ಣ ನಿರ್ಮಿತ ಘಟ, ಕೈಯಲ್ಲಿ ಕಮಲವನ್ನು ಹಿಡಿದ ಮಹಾಲಕ್ಷ್ಮಿಯನ್ನು ಆಲಂಗಿಸಿದ, ಮೂರು ಕಣ್ಣುಗಳುಳ್ಳ, ಸುವರ್ಣ ಕಾಂತಿಯುಕ್ತ ಶ್ರೀ ಲಕ್ಷ್ಮಿಗಣೇಶನನ್ನು ನಾನು ವಂದಿಸುತ್ತೇನೆ.

ಪುರಶ್ಚರಣ ವಿಧಾನ

ಚತುರ್ಲಕ್ಷಂ ಜಪೇನ್ಮಂತ್ರಂ ಸಮಿದ್ಭಿರ್ಬಿಲ್ವಶಾಖಿನಃ ।
ದಶಾಂಶಂ ಜುಹುಯಾತ್ ಪೀಠೇ ಪೂರ್ವೋಕ್ತೆ ತಂ ಪ್ರಪೂಜಯೇತ್ ॥ 102 ॥

ಆದಾವಂಗಾನಿ ಸಂಪೂಜ್ಯ ಶಕ್ತಿರಷ್ಟವಿಮಾ ಯಜೇತ್ ।
ಬಲಾಕಾ ವಿಮಲಾ ಪಶ್ಚಾತ್ ಕಮಲಾ ವನಮಾಲಿಕಾ ॥ 103 ॥

ವಿಭೀಷಿಕಾ ಮಾಲಿಕಾ ಚ ಶಾಂಕರಿ ವಸುಬಾಲಿಕಾ ।
ಶಂಖಪದ್ಮನಿಧಿ ಪೂಜ್ಯಾ ಪಾರ್ಶ್ವಯೋರ್ದಕ್ಷವಾಮಯೋಃ ॥ 104 ॥

ಲೋಕಾಧಿಪಾಂಸ್ತದಸ್ತ್ರಾಣಿ ತದ್‌ಬಹಿಃ ಪರಿಪೂಜಯೇತ್ ।
ಏವಂ ಸಿದ್ಧೆ ಮನೌ ಮಂತ್ರಿ ಪ್ರಯೋಗಾಂಕರ್ತುಮರ್ಹತಿ ॥ 105 ॥

**ಶಕ್ತಿವಿನಾಯಕ ಮಂತ್ರ**

ಮಾಯಾ ತ್ರಿಮೂರ್ತಿಚಂದ್ರಸ್ಥೌ ಪಂಚಾಂತಹುತಾಶನೌ ।
ತಾರಾದಿಶಕ್ತಿಬೀಜಾಂತೊ ಮಂತ್ರೋಽಯಂ ಚತುರಕ್ಷರಃ ॥ 89॥
ಭಾರ್ಗವೋಽಸ್ಯ ಮುನಿಶ್ಛಂದೊ ವಿರಾಟ್ ಶಕ್ತಿರ್ಗಣಾಧಿಪ ।
ದೇವೋಮಾಯಾ ದ್ವಿತಿಯೆ ತು ಶಕ್ತಿಬೀಜೆ ಪ್ರಕೀರ್ತಿತೆ ॥ 90 ॥
ಷಡ್‌ದೀರ್ಘಯುಗದ್ವಿತಿಯೇನ ತಾರಾಢ್ಯೇನ ಷಡಂಗಕಮ್ ।
ವಿಧಾಯ ಸಾವಧಾನೇನ ಮನಸಾ ಸಂಸ್ಮರೇತ್ ಪ್ರಭುಮ್ ॥ 91 ॥

ಪ್ರಾರಂಭದಲ್ಲಿ ತಾರ (ಓಂ), ನಂತರ ಮಾಯಾ (ಹ್ರೀಂ), ಆಮೇಲೆ ತ್ರಿಮೂರ್ತಿ ಈಕಾರ, ಚಂದ್ರ (ಅನುಸ್ವಾರ) ಯುಕ್ತ ಪಂಚಾಂತಕ ಗಕಾರ ಹುತಾಶನ ರ ಕಾರ, (ಗ್ರೀಂ) ಮತ್ತು ಅಂತದಲ್ಲಿ ಶಕ್ತಿಬೀಜ (ಹ್ರೀಂ) ಸಂಯೋಜನೆ ಮಾಡುವುದರಿಂದ ನಾಲ್ಕು ಅಕ್ಷರಗಳ ಶಕ್ತಿ ವಿನಾಯಕ ಮಂತ್ರವು ಉತ್ಪನ್ನವಾಗುತ್ತದೆ.

"ಓಂ ಹ್ರೀಂ ಗ್ರೀಂ ಹ್ರೀಂ"

ಈ ಮಂತ್ರದ ಋಷಿ ಭಾರ್ಗವ, ವಿರಾಟ ಛಂದ, ಶಕ್ತಿಯಿಂದ ಯುಕ್ತ ಗಣಪತಿ. ಈ ಮಂತ್ರದ ದೇವತೆಯಾಗಿದೆ. ಮಾಯಾ ಬೀಜ 'ಹ್ರೀಂ' ಶಕ್ತಿಯಾಗಿದೆ, ಮತ್ತು 'ಗ್ರೀಂ' ಬೀಜವಾಗಿದೆ. ಪ್ರಣವ ಸಹಿತ ದ್ವಿತಿಯ 'ಗ್ರ'ದಲ್ಲಿ ಅನುಸ್ವಾರ ಸಹಿತ ಆರು ದೀರ್ಘ ಸ್ವರಗಳನ್ನು ಜೋಡಿಸಿ ಷಡಂಗನ್ಯಾಸ ಮಾಡಬೇಕು. ನಂತರ ಧ್ಯಾನ ಮಾಡಿ ಏಕಾಗ್ರಚಿತ್ತದಿಂದ ಶ್ರೀ ಗಣೇಶನ ಮಂತ್ರ ಜಪಿಸಬೇಕು.

ವಿನಿಯೋಗ : ಅಸ್ಯ ಶ್ರೀಶಕ್ತಿವಿನಾಯಕ ಮಂತ್ರಸ್ಯ ಭಾರ್ಗವ ಋಷಿಃ ವಿರಾಟಛಂದಃ ಶಕ್ತಿಗಣಾಧಿಪೊ ದೇವತಾ ಹ್ರೀಂ ಶಕ್ತಿಃ ಗ್ರೀಂ ಬೀಜಾತ್ಮನೋಽಭೀಷ್ಟ ಸಿದ್ಧ್ಯರ್ಥೆ ಜಪೆ ವಿನಿಯೋಗಃ ।

ಋಷ್ಯಾದಿನ್ಯಾಸ : ಓಂ ಭಾರ್ಗವಾಯ ಋಷಯೇ ನಮಃ ಶಿರಸಿ । ವಿರಾಟಛಂದಸೆ ನಮಃ ಮುಖೆ । ಓಂ ಶಕ್ತಿರ್ಗಣಾಧಿಪದೇವತಾಯೈ ನಮಃ ಹೃದಯೆ । ಓಂ ಗ್ರೀಂ ಬೀಜಾಯ ನಮಃ ಗುಹ್ಯೊ । ಓಂ ಹ್ರೀಂ ಶಕ್ತಯೇ ನಮಃ ಪಾದಯೊ

ಷಡಂಗನ್ಯಾಸ : ಓಂ ಗ್ರಾಂ ಹೃದಯಾಯ ನಮಃ । ಓಂ ಗ್ರೀಂ ಶಿರಸೆ ಸ್ವಾಹಾ । ಓಂ ಗ್ರೂಂ ಶಿಖಾಯೈ ವಷಟ್ । ಓಂ ಗ್ರೈಂ ಕವಚಾಯ ಹುಮ್ । ಓಂ ಗ್ರೌಂ ನೇತ್ರತ್ರಯಾಯ ವೌಷಟ್ । ಓಂ ಗ್ರಃ ಅಸ್ತ್ರಾಯ ಫಟ್ ।





**ಧ್ಯಾನ**

ವಿಷಾಣಾಂ ಕುಶಾವಕ್ಷಸೂತ್ರಂ ಚ ಪಾಶಂ ದಧಾನಂ ಕರೈಮೋದಕಂ ಪುಷ್ಕರೇಣ। ಸ್ವಪತ್ನ್ಯಾ ಯುತಂ ಹೇಮಭೂಷಾಭರಾಢ್ಯಂ ಗಣೇಶಂ ಸಮುದ್ಯದ್ದಿನೇಶಾಭಮೀಡೆ॥92॥

ಬಲಗೈಯಲ್ಲಿ ಅಂಕುಶ ಮತ್ತು ಅಕ್ಷಸೂತ್ರ, ಎಡಗೈಯಲ್ಲಿ ವಿಷಾಣ ಮತ್ತು ಪಾಶವನ್ನು ಧರಿಸಿ, ಸೊಂಡಿಲಿನಲ್ಲಿ ಮೋದಕವನ್ನು ಇರಿಸಿಕೊಂಡು, ಸಪತ್ನಿಕನಾಗಿ, ಸುವರ್ಣ ನಿರ್ಮಿತವಾದ ಅಲಂಕಾರಯುಕ್ತನಾಗಿ ಉದಯಿಸುವ ಸೂರ್ಯನಂತೆ, ಕಂಗೊಳಿಸುತ್ತಿರುವ ಶ್ರೀ ಗಣೇಶನನ್ನು ನಾನು ವಂದಿಸುತ್ತೇನೆ. "ಈ ಪ್ರಕಾರ ಶ್ರೀ ಗಣೇಶನ ಧ್ಯಾನ ಮಾಡಿ ಮಂತ್ರದ ಪುರಶ್ಚರಣವನ್ನು ಪ್ರಾರಂಭಿಸಬೇಕು.

ಏವಂ ಧ್ಯಾತ್ವಾ ಜಪೇಲ್ಲಕ್ಷಚತುಷ್ಕಂ ತದ್ದಶಾಂಶತಃ ।
ಅಪೂಪೈರ್ಜುಹುಯಾದ್ ವಹ್ನೌ ಮಧ್ವಕ್ತೈಸ್ತರ್ಪಯೇಚ್ಚ ತಮ್ ॥ 93 ॥
ಪೂರ್ವೋಕ್ತೆ ಪೂಜಯೇತ್ಪೀಠೆ ಕೇಸರೇಷ್ವಂಗದೇವತಾಃ ।
ದಲೇಷು ವಕ್ರತುಂಡಾದ್ಯಾಂಬ್ರಾಹ್ಮ್ಯಾದ್ಯಾಂದಲಾಗ್ರಗಾನ್ ॥ 94 ॥
ಕಕುಪ್ಪಾಲಾಂಸ್ತದಸ್ತ್ರಾಣಿ ಸಿದ್ಧ ಏವಂ ಭವೇನ್ಮನುಃ ।
ಘೃತಾಕ್ತಮನ್ನಂ ಜುಹುಯಾದಾವರ್ಷಾದನ್ನವಾಂಭವೇತ್ ॥ 95 ॥
ಪರಮಾನ್ನೈರ್ಹುತಾ ಲಕ್ಷ್ಮೀರಿಕ್ಷುದಂಡೈರ್ನೃಪಶ್ರಿಯಃ ।
ರಂಭಾಫಲೈರ್ನಾರಿಕೇಲೈಃ ಪೃಥುಕೈರ್ವಶ್ಯತಾ ಭವೇತ್ ॥ 96 ॥
ಘೃತೇನ ಧನಮಾಪ್ನೋತಿ ಲವಣೈರ್ಮಧು ಸಂಯುತೈಃ ।
ವಾಮನೇತ್ರಾಂ ವಶೀಕುರ್ಯಾದಪೂಪೈಃ ಪೃಥಿವೀಪತಿಮ್ ॥ 97 ॥

ಶ್ರೀ ಗಣೇಶನ ಧ್ಯಾನ ಮಾಡಿದ ನಂತರ ಶಕ್ತಿ ವಿನಾಯಕ ಮಂತ್ರದ ನಾಲ್ಕು ಲಕ್ಷ ಜಪ ಮಾಡಬೇಕು. ನಂತರ ಮಧುಯುಕ್ತ ಅಪೂಪಗಳಿಂದ ದಶಾಂಶ ಹೋಮ ಮಾಡಬೇಕು. ನಂತರ ಅದರ ದಶಾಂಶ ತರ್ಪಣ ಮಾಡಬೇಕು. ಈ ಮೊದಲು ವಿವರಿಸಿದಂತೆ ಪೀಠ ಮತ್ತು ಕೇಶರದಲ್ಲಿ ಅಂಗದೇವತೆಗಳನ್ನು ಪೂಜಿಸಬೇಕು. ದಳಗಳಲ್ಲಿ ವಕ್ರತುಂಡ ಮತ್ತು ದಳದ ಅಗ್ರಭಾಗದಲ್ಲಿ ಬ್ರಾಹ್ಮಿ ಮುಂತಾದ ಮಾತೃಕೆಗಳ, ನಂತರ ದಶದಿಕ್ಕುಗಳಲ್ಲಿ ದಶ ದಿಕ್ಪಾಲರು, ನಂತರ ಅವರ ಆಯುಧಗಳನ್ನು ಪೂಜಿಸಬೇಕು. ಈ ಪ್ರಕಾರ ಯಂತ್ರವನ್ನು ಪೂಜಿಸಿ ಮಂತ್ರದ ಪುರಶ್ಚರಣ ಮಾಡುವುದರಿಂದ ಮಂತ್ರದ ಸಿದ್ಧಿಯಾಗುತ್ತದೆ.

ವಿಷಮ ಪರಿಸ್ಥಿತಿಗಳಲ್ಲಿ ಶ್ವೇತ ಧತ್ತೂರ (ಮಂದಾರ) ಅಥವಾ ಬೇವಿನ ಕಟ್ಟಿಗೆಯ ಪ್ರತಿಮೆಯನ್ನು ತಯಾರಿಸಬೇಕು. ನಂತರ ಕೆಂಪು ಚಂದನ ಮತ್ತು ಕೆಂಪು ಹೂವುಗಳಿಂದ ಅದನ್ನು ವಿಧಿವತ್ತಾಗಿ ಪೂಜಿಸಬೇಕು. ನಂತರ ಅದನ್ನು ಮದ್ಯ ಪಾತ್ರದಲ್ಲಿಟ್ಟು ಒಂದು ಕೈಯಳತೆಯ ಆಳದಲ್ಲಿ ಭೂಮಿಯಲ್ಲಿ ಹೂತಿಡಬೇಕು. ನಂತರ ದಿನಾಲು ಅದರ ಮೇಲೆ ಕುಳಿತು ಹಗಲು-ರಾತ್ರಿ ಈ ಮಂತ್ರವನ್ನು ಜಪಿಸುತ್ತಿರಬೇಕು. ಒಂದು ವಾರದೊಳಗೆ ಅತ್ಯಂತ ಘೋರವಾದ ಉಪದ್ರವಗಳು ನಾಶವಾಗುತ್ತವೆ ಮತ್ತು ಶತ್ರುಗಳು ವಶವಾಗುತ್ತಾರೆ. ಧನ ಸಂಪತ್ತು ಪ್ರಾಪ್ತವಾಗುತ್ತದೆ.

ದುಷ್ಟ ಸ್ತ್ರೀಯ ಎಡಗಾಲಿನ ಧೂಳು, ತನ್ನ ಶರೀರದ ಮಲ-ಮೂತ್ರ-ವೀರ್ಯ, ಕುಂಬಾರರ ಆವಿಯ ಮಣ್ಣು ಎಲ್ಲವನ್ನು ಸೇರಿಸಿ ಗಣೇಶನ ಪ್ರತಿಮೆಯನ್ನು ನಿರ್ಮಾಣ ಮಾಡಬೇಕು. ನಂತರ ಅದನ್ನು ಮದ್ಯಪಾತ್ರದಲ್ಲಿಟ್ಟು ವಿಧಿವತ್ತಾಗಿ ಪೂಜಿಸಬೇಕು. ನಂತರ ಒಂದು ಕೈಯಳತೆಯ ಆಳದಲ್ಲಿ ಭೂಮಿಯಲ್ಲಿ ಅದನ್ನು ಹೂಳಬೇಕು. ನಂತರ ಅದರ ಮೇಲೆ ಅಗ್ನಿಯನ್ನು ಪ್ರತಿಷ್ಠಾಪಿಸಿ, ಕಣಗಿಲ ಹೂವುಗಳ ಒಂದು ಸಾವಿರ ಆಹುತಿ ನೀಡಿದರೆ ಆ ದುಷ್ಟ ಸ್ತ್ರೀಯು ದಾಸಿಯಾಗುತ್ತಾಳೆ.

ಈ ಎಲ್ಲ ಪ್ರಯೋಗಗಳನ್ನು ನವಾರ್ಣ ಮಂತ್ರದಿಂದಲೂ ಮಾಡಬಹುದು.

### ದ್ವಾತ್ರಿಂಶದ್ ವರ್ಣಾತ್ಮಕೋಪರೋ ಮಂತ್ರಃ

ತಾರೊ ಹಸ್ತಿಮುಖಾಯಾಥ ಡೆಂತೊ ಲಂಬೋದರಸ್ತಥಾ ॥ 84 ॥

ಉಚ್ಚಿಷ್ಟಾಂತೆ ಮಹಾತ್ಮಾ ಪಾಶಾಂಕುಶಕಿ ವಾತ್ಮಭೂಃ ।
ಮಾಯಾ ವರ್ಮ್ಮ ಚ ಫೆ ಫೆಉಚ್ಚಿಷ್ಟಾಯ ದಹನಾಂಗನಾ ॥ 85 ॥

ದ್ವಾಂತ್ರಿಶದಕ್ಷರೊ ಮಂತ್ರೊ ಯಜನಂ ಪೂರ್ವವನ್ಮತಮ್ ।
ರಸೇಷು ಸಪ್ತಷಟ್‌ಷಟಕ ನೇತ್ರಾಸ್ತ್ರೈರಂಗಮಿರಿತಮ್ ॥ 86 ॥

ಉಚ್ಚಿಷ್ಟ ಗಜವಕ್ತ್ರಸ್ಯ ಮಂತ್ರೇಷ್ವೇಷು ನ ಶೋಧನಮ್ ।
ಸಿದ್ಧಾದಿಚಕ್ರಂ ಮಾಸಾದೇಃ ಪ್ರಾಪ್ತಸ್ತೆ ಸಿದ್ಧಿದಾ ಗುರೋಃ ॥ 87 ॥

ಮನವೋಮಿ ಸದಾ ಗೋಪ್ಯಾ ನ ಪ್ರಕಾಶ್ಯಾಯತಃ ಕುತಃ ।
ಪರೀಕ್ಷಿತಾಯ ಶಿಷ್ಯಾಯ ಪ್ರದೇಯಾ ನಿಜಸೂನವೆ ॥ 88 ॥

ತಾರ (ಓಂ) ನಂತರ 'ಹಸ್ತಿಮುಖಾಯ', ಆಮೇಲೆ ಕ್ರಮವಾಗಿ ಚತುರ್ಥ್ಯಂತ ಲಂಬೋದರ (ಲಂಬೋದರಾಯ), ನಂತರ 'ಉಚ್ಚಿಷ್ಟ', ನಂತರ ಚತುರ್ಥ್ಯಂತ





'ಮಹಾತ್ಮಾ' ಪದ 'ಉಚ್ಚಿಷ್ಟಮಹಾತ್ಮನೆ', ನಂತರ ಕ್ರಮವಾಗಿ ಪಾಶ (ಆಂ) ಅಂಕುಶ (ಕ್ರೌಂ), ಶಿವಾ (ಹ್ರೀಂ), ಆತ್ಮಭೂಃ (ಕ್ಲೀಂ), ಮಾಯಾ (ಹ್ರೀಂ), ವರ್ಮ (ಹುಮ್), ಆಮೇಲೆ "ಫೆ ಫೆ ಉಚ್ಚಿಷ್ಟಾಯ' ನಂತರ 'ದಹನಾಂಗನಾ' (ಸ್ವಾಹಾ) ಜೋಡಿಸುವುದರಿಂದ ಮೂವತ್ತೆರಡು ಅಕ್ಷರಗಳ ಮಂತ್ರ ಸಿದ್ಧವಾಗುತ್ತದೆ. "**ಓಂ ಹಸ್ತಿಮುಖಾಯ ಲಂಬೋದರಾಯ ಉಚ್ಚಿಷ್ಟ ಮಹಾತ್ಮನೆ ಆಂ ಕ್ರೌಂ ಹ್ರೀಂ ಕ್ಲೀಂ ಹ್ರೀಂ ಹುಂ ಘೆ ಘೆ ಉಚ್ಚಿಷ್ಟಾಯ ಸ್ವಾಹಾ**'

ಈ ಮಂತ್ರದ ಪೂಜೆ ಇತ್ಯಾದಿ ಈ ಹಿಂದಿನ ವಿಧಾನಗಳಂತೆಯೆ ಇರುತ್ತದೆ. ಮಂತ್ರದ 6, 5, 7, 6, 6 ಮತ್ತು 2 ಅಕ್ಷರಗಳಿಂದ ಅಂಗನ್ಯಾಸ ಮಾಡಬೇಕು.

**ವಿನಿಯೋಗ** : ಓಂ ಅಸ್ಯೋಚ್ಚಿಷ್ಟಗಣಪತಿ ಮಂತ್ರಸ್ಯ ಗಣಕಋಷಿಃ । ಗಾಯತ್ರಿಛಂದಃ ಉಚ್ಚಿಷ್ಟಗಣಪತಿರ್ದೇವತಾ ಆತ್ಮನೋಭಿಷ್ಟ ಸಿದ್ಧರ್ಥೆ ಜಪೆ ವಿನಿಯೋಗಃ

**ಷಡಂಗನ್ಯಾಸ** : ಓಂ ಹಸ್ತಿಮುಖಾಯ ಹೃದಯಾಯ ನಮಃ । ಓಂ ಲಂಬೋದರಾಯ ಶಿರಸೆ ಸ್ವಾಹಾ । ಓಂ ಉಚ್ಚಿಷ್ಟಮಹಾತ್ಮನೆ ಶಿಖಾಯೈ ವಷಟ್ । ಓಂ ಆಂ ಕ್ರೌಂ ಹ್ರೀಂ ಕ್ಲೀಂ ಹ್ರೀಂ ಹುಮ್ ಕವಚಾಯ ಹುಮ್ । ಘೆ ಘೆ ಉಚ್ಚಿಷ್ಟಾಯ ನೇತ್ರತ್ರಯಾಯ ವೌಷಟ । ಸ್ವಾಹಾ ಅಸ್ತ್ರಾಯ ಫಟ್

ಈ ಪ್ರಕಾರ ನ್ಯಾಸ ಮಾಡಿ, ಪೀಠ ಪೂಜೆ, ಆವರಣ ಪೂಜೆ, ಮುಂತಾದ ವಿಧಾನಗಳನ್ನು ಪೂರೈಸಿ ಈ ಮಂತ್ರದ ಒಂದು ಲಕ್ಷ ಜಪ, ದಶಾಂಶ ಹವನ, ಮತ್ತು ಅದರ ದಶಾಂಶ ತರ್ಪಣ, ಅದರ ದಶಾಂಶ ಮಾರ್ಜನ ಮತ್ತು ತದ್ದಶಾಂಶ ಬ್ರಾಹ್ಮಣ ಭೋಜನ ಮಾಡುವುದರಿಂದ ಮಂತ್ರದ ಸಿದ್ಧಿಯಾಗುತ್ತದೆ.

ಉಚ್ಚಿಷ್ಟಗಣಪತಿಯ ಮಂತ್ರಗಳ ವಿಶೇಷತೆ ಏನೆಂದರೆ ಈ ಮಂತ್ರಗಳ ಸಿದ್ಧಿಗಾಗಿ ಯಾವುದೇ ಪ್ರಕಾರದ ಸಂಶೋಧನೆ ಅಥವಾ ಸಿದ್ಧಿಚಕ್ರದ ಅವಶ್ಯಕತೆಯಿರುವುದಿಲ್ಲ. ಶುಭ ಮಾಸ ಮುಹೂರ್ತಗಳ ಅವಶ್ಯಕತೆಯೂ ಇಲ್ಲ. ಗುರುವಿನಿಂದ ಪ್ರಾಪ್ತವಾದ ಕೂಡಲೆ ಸಿದ್ಧವಾಗುತ್ತದೆ.

ಈ ಮಂತ್ರಗಳನ್ನು ಸದಾ ರಹಸ್ಯವಾಗಿ ಇಡತಕ್ಕದ್ದು. ಮತ್ತು ಎಲ್ಲಿ ಬೇಕಾದಲ್ಲಿ, ಯಾವಾಗ ಬೇಕಾದರೂ ಪ್ರಕಾಶಗೊಳಿಸಬಾರದು. ಸೂಕ್ತ ಪರೀಕ್ಷೆಯ ನಂತರ ಮಾತ್ರ ಯೋಗ್ಯ ಶಿಷ್ಯನಿಗೆ ಅಥವಾ ಪುತ್ರನಿಗೆ ಈ ಮಂತ್ರವನ್ನು ಉಪದೇಶಿಸತಕ್ಕದ್ದು.

ತಾಂ ಧ್ಯಾತ್ವಾಂ ರವಿಸಾಹಸ್ರಂ ಸಾ ಸಮಾಯಾತಿ ದೂರತಃ ।
ಶ್ವೇತಾರ್ಕಣಾರ್ಥ ನಿಂಬೇನ ಕೃತ್ವಾ ಮೂರ್ತಿಂ ಘೃತಾಸುಕಾಮ್ ॥ 70 ॥

ಚತುರ್ಥ್ಯಾಂ ಪೂಜಯೇದ್‌ರಾತ್ರೌ ರಕ್ತೈಃ ಕುಸುಮಚಂದನೈಃ ।
ಜಪ್ತ್ವಾ ಸಹಸ್ರಂ ತಾಂ ಮೂರ್ತಿಂ ಕ್ಷಿಪೇದ್ ರಾತ್ರೌ ಸರಿತ್ತಟೆ ॥ 71 ॥

ಸ್ವೇಷ್ಟಂ ಕಾರ್ಯ್ಯಂ ಸಮಾಚಷ್ಟೆ ಸ್ವಪ್ನೆ ತಸ್ಯ ಗಣಾಧಿಪಃ ।
ಸಹಸ್ರಂ ನಿಂಬಕಾಷ್ಠಾನಾಂ ಹೋಮಾದುಚ್ಚಾಟಿಯೇದರೀನ್ ॥ 72 ॥

ವಜ್ರೀಣಃ ಸಮಿಧಾಂ ಹೋಮಾದ್ರಿಪುರ್ಯಮಪುರಂ ವ್ರಜೇತ್ ।
ವಾನರಸ್ಯಾಸ್ಥಿಸಂಜಪ್ತಂ ಕ್ಷಿಪ್ತಮುಚ್ಚಾಟಿಯೇದ್ ಗೃಹೆ ॥ 73 ॥

ಜಪ್ತಂ ನರಾಸ್ಥಿಕನ್ಯಾಯಾ ಗೃಹೆ ಕ್ಷಿಪ್ತಂ ತದಪ್ತಿಕೃತ ।
ಕುಲಾಲಸ್ಯ ಮೃದಾ ಸ್ತ್ರೀಣಾಂ ವಾಮಪಾದಸ್ಯ ರೇಣುನಾ ॥ 74 ॥

ಕೃತ್ವಾ ಪುತ್ತಲಿಕಾಂ ತಸ್ಯಾ ಹೃದಿ ಸ್ತ್ರೀನಾಮ ಸಂಲಿಖೇತ್ ।
ನಿಖನೇತ್ಮಂತ್ರ ಸಂಜಪ್ತೈರ್ನಿಂಬಕಾಷ್ಟೈಃ ಕ್ಷಿಪಾವಿಮಾಮ್ ॥ 75 ॥

ಸೋಮತ್ತಾ ಭವತಿ ಕ್ಷಿಪ್ರಮುದ್ಧೃತಾಯಾಂ ಸುಖಿಂ ಭವೇತ್ ।
ಶಸ್ತ್ರೋಶೇಪಂ ಕೃತ್ವಾ ಸಾ ತು ಲಶುನೇನ ಸಮನ್ವಿತಾ ॥ 76 ॥

ಶರಾವಾಂತರ್ಗತಾ ಸಮ್ಯಕ್ಪೂಜಿತಾ ದ್ವಾರಿ ವಿದ್ವಿಷಃ ।
ನಿಖಾತಾ ಪಕ್ಷಮಾತ್ರೇಣ ಶತ್ರುಚ್ಚಾಟನಕೃತ್ಸ್ಮೃತಾ ॥ 77 ॥

## ಪ್ರಯೋಗಗಳು

ಸುಂದರಿಯಾದ ಸ್ತ್ರೀಯ ಎಡಗಾಲಿನ ಮಣ್ಣ (ಧೂಳ)ನ್ನು ತಂದು ಅದನ್ನು ಗಣೇಶನ ಪ್ರತಿಮೆಯ ಬುಡದಲ್ಲಿ ಹಾಕಿ ಆ ಸ್ತ್ರೀಯನ್ನು ಮನಸ್ಸಿನಲ್ಲಿ ಧ್ಯಾನಿಸಿ, ಈ ಮಂತ್ರವನ್ನು ಹನ್ನೆರಡು ಬಾರಿ ಜಪಿಸಿದರೆ, ಅವಳು ದೂರದಲ್ಲಿದ್ದರೂ ವಶವರ್ತಿಯಾಗುತ್ತಾಳೆ.

ಶ್ವೇತ ಮಂದಾರ (ಧತ್ತೂರ) ಅಥವಾ ಬೇವಿನ ಕಟ್ಟಿಗೆಯಿಂದ ಗಣೇಶನ ಪ್ರತಿಮೆಯನ್ನು ಮಾಡಿ ಅದರ ಪ್ರಾಣಪ್ರತಿಷ್ಠೆ ಮಾಡಿರಿ. ನಂತರ ಚತುರ್ಥಿ ತಿಥಿಯಂದು ರಾತ್ರಿಯಲ್ಲಿ ರಕ್ತಚಂದನ ಮತ್ತು ಕೆಂಪು ಪುಷ್ಪಗಳಿಂದ ಪೂಜೆ ಮಾಡಿರಿ. ಆಮೇಲೆ ಒಂದು ಸಾವಿರ ಉಚ್ಛಿಷ್ಟ ಗಣಪತಿ ಮಂತ್ರ ಜಪ ಮಾಡಿ, ರಾತ್ರಿಯಲ್ಲಿ ಪ್ರತಿಮೆಯನ್ನು ನದಿಯ ದಂಡೆಯಲ್ಲಿ ಹಾಕಿದರೆ, ಸ್ವಯಂ ಗಣೇಶನು ಸಾಧಕನ ಸ್ವಪ್ನದಲ್ಲಿ ಒಂದು ಅಭೀಷ್ಟ ಕಾರ್ಯವನ್ನು ಸೂಚಿಸುತ್ತಾನೆ.





ಬೇವಿನ ಕಟ್ಟಿಗೆಯನ್ನು ಸಮಿಧಾ ರೂಪದಲ್ಲಿ ಒಂದು ಸಾವಿರ ಮಂತ್ರಗಳ ಮೂಲಕ ಆಹುತಿ ನೀಡುವುದರಿಂದ ಶತ್ರುವಿನ ಉಚ್ಚಾಟನೆಯಾಗುತ್ತದೆ.

ವಜ್ರಿ ಸಮಿಧಾ ದ್ವಾರಾ ಹೋಮ ಮಾಡುವುದರಿಂದ ಶತ್ರುವು ಮರಣ ಹೊಂದುತ್ತಾನೆ. ಮಂಗನ ಅಸ್ಥಿಯ ಮೇಲೆ ಜಪ ಮಾಡಿ, ಆ ಅಸ್ಥಿಯನ್ನು ಯಾರ ಮನೆಯಲ್ಲಿ ಹಾಕುತ್ತಾರೆಯೊ ಆ ಮನೆಯಲ್ಲಿ ಉಚ್ಚಾಟನೆಯಾಗುತ್ತದೆ.

ಮಾನವರ ಅಸ್ಥಿಯ ಮೇಲೆ ಜಪ ಮಾಡಿ ಕನ್ಯೆಯ (ಸ್ತ್ರೀಯ) ಮನೆಯಲ್ಲಿ ಹಾಕುವುದರಿಂದ ವಶೀಕರಣವಾಗುತ್ತದೆ. ಕುಂಬಾರರ ಆವಿಯ ಮಣ್ಣಿನಲ್ಲಿ ಸ್ತ್ರೀಯ ಎಡಗಾಲಿನ ಧೂಳು ಸೇರಿಸಿ ಗೊಂಬೆಯನ್ನು ಮಾಡಬೇಕು. ನಂತರ ಅದರ ಹೃದಯ ಭಾಗದಲ್ಲಿ ಇಚ್ಛಿತ ಸ್ತ್ರೀಯ ಹೆಸರನ್ನು ಬರೆಯಬೇಕು. ಆ ಗೊಂಬೆಯನ್ನು ಈ ಮಂತ್ರದಿಂದ ಅಭಿಮಂತ್ರಿಸಿ, ಬೇವಿನ ಕಟ್ಟಿಗೆಯ ಜೊತೆಗೆ ಭೂಮಿಯಲ್ಲಿ ಹುಗಿದರೆ ಆ ಸ್ತ್ರೀಯು ತಕ್ಷಣ ವಶವಾಗುತ್ತಾಳೆ. ಆ ಗೊಂಬೆಯನ್ನು ಭೂಮಿಯಿಂದ ಹೊರ ತೆಗೆದರೆ ಸ್ತ್ರೀಯು ಸಾಮಾನ್ಯಳಾಗುತ್ತಾಳೆ. ಇದೇ ಪ್ರಕಾರ ಶತ್ರುವಿನ ಗೊಂಬೆಯನ್ನು ಮಾಡಿ, ಬೆಳ್ಳುಳ್ಳಿಯ ಜೊತೆಗೆ ಮಣ್ಣಿನ ಪಾತ್ರೆಯಲ್ಲಿ ಹಾಕಿ ಪೂಜೆ ಮಾಡಬೇಕು. ನಂತರ ಶತ್ರುವಿನ ಮನೆಯ ಬಾಗಿಲಿನ ಮುಂದೆ ಅದನ್ನು ಹೂಳಿದರೆ ಹದಿನೈದು ದಿನಗಳಲ್ಲಿ ಶತ್ರುವಿನ ಉಚ್ಚಾಟನೆಯಾಗುತ್ತದೆ.

ವಿಷಮೆ ಸಮನುಪ್ರಾಪ್ತೆ ಸಿತಾರ್ಕಾರಿಷ್ಟದರುಜಮ್ ।
ಗಣಪಂ ಪೂಜಿತಂ ಸಮಕ್ಕುಸುಮೈ ರಕ್ತಚಂದನೈ ॥ 78 ॥

ಮದ್ಯಭಾಂಡಸ್ಥಿತಂ ಹಸ್ತಮಾತ್ರೆ ತಂ ನಿಖನೆಸ್ಥಲ್ ।
ತತ್ರೋಪಾವಿಶ್ಯ ಪ್ರಜಪೇನ್ಮಂತ್ರಿ ನಕ್ತಂ ದಿವಾ ಮನುಮ್ ॥ 79 ॥

ಸಪ್ತಾಹಮಧ್ಯೆ ನಶ್ಯಂತಿ ಸರ್ವೆ ಘೋರಾ ಉಪದ್ರವಾಃ ।
ಶತ್ರವೊ ವಶಮಾಯಾಂತಿ ವರ್ದ್ಧಂತೆ ಧನಸಂಪದಃ ॥ 80 ॥

ದುಷ್ಟಸ್ತ್ರೀ ವಾಮಪಾದಸ್ಯ ರಜಸಾ ನಿಜದೇಹಜೈಃ ।
ಮಲೈಮೂತ್ರಪುರೀಷಾದ್ಯೈಃ ಕುಂಭಕಾರಮೃದಾಪಿ ಚ ॥ 81 ॥

ಏತೈಃ ಕೃತ್ವಾ ಗಣೇಶಸ್ಯ ಪ್ರತಿಮಾಂ ಮದ್ಯಭಾಂಡಗಾಮ್ ।
ಸಂಪೂಜ್ಯ ನಿಖನೇದ್ ಭೂಮೌ ಹಸ್ತಾರ್ದ್ಧೆ ಪೂರಿತೆ ಪುನಃ ॥ 82 ॥

ಸಂಸ್ಥಾಪ್ಯ ವಹ್ನಿಂ ಜುಹುಯಾತ್ಕುಸುಮೈರ್ಹಯ ಮಾರ ಜೈಃ ।
ಸಹಸ್ರಂ ಸಾ ಭವೇದ್ದಾಸಿ ತನ್ವಾಚಮನಸಾಧನೈಃ ॥ 83 ॥
ಏವಮಾದಿ ಪ್ರಯೋಗಾಂಸ್ತು ನವಾರ್ಣೆನಾಪಿ ಸಾಧಯೇತ್ ।

ದೇವತಾ ಇರುತ್ತದೆ. ಉಚ್ಛಿಷ್ಟ ಮುಖದಿಂದಲೆ ಈ ಮಂತ್ರದ ಜಪ ಮಾಡಬೇಕು. ಮಂತ್ರದ ಯಥಾಕ್ರಮ 7, 10, 5, 7, 4 ಮತ್ತು 4 ಅಕ್ಷರಗಳಿಂದ ಷಡಂಗನ್ಯಾಸ ಮತ್ತು ಅಂಗಪೂಜಾ ಮಾಡಬೇಕು.

ವಿನಿಯೋಗ : ಅಸ್ಯೋಚ್ಛಿಷ್ಟ ಗಣಪತಿ ಮಂತ್ರಸ್ಯ ಗಣಕಋಷಿ ಗಾಯತ್ರಿ ಛಂದಃ ಉಚಿಷ್ಟ ಗಣಪತಿ ರ್ದೇವತಾ ಆತ್ಮನೋಭಿಷ್ಟಸಿದ್ಧಯೆ

ಉಚ್ಛಿಷ್ಟ ಗಣಪತಿ ಮಂತ್ರ ಜಪೆ ವಿನಿಯೋಗಃ

ಷಡಂಗನ್ಯಾಸ : ಓಂ ನಮೋ ಭಗವತೆ ಹೃದಯಾಯ ನಮಃ । ಓಂ ಏಕದಂಷ್ಟ್ರಾಯ ಹಸ್ತಿಮುಖಾಯ ಶಿರಸೆ ಸ್ವಾಹಾ । ಓಂ ಲಂಬೋದರಾಯ ಶಿಖಾಯೈ ವಷಟ್ । ಓಂ ಉಚ್ಛಿಷ್ಟಮಹಾತ್ಮನೆ ಕವಚಾಯ ಹುಮ್ । ಓಂ ಆಂ ಹ್ರೀಂ ಕ್ರೌಂ ಗಂ ನೇತ್ರತ್ರಯಾಯ ವೌಷಟ್ ।ಓಂ ಘೆ ಘೆ ಸ್ವಾಹಾ ಅಸ್ತ್ರಾಯ ಫಟ್

ಧ್ಯಾನ :

ಶರಾಂಧನುಃ ಪಾಶಾಸೃಣೀಸ್ವಹಸ್ತೈ ರ್ದಧಾನಮಾರಕ್ತಸರೋರುಹಸ್ಥಮ್ ।
ವಿವಸ್ತ್ರಪತ್ನ್ಯಾಂ ಸುರತಪ್ರವೃತ್ತ ಮುಚ್ಛಿಷ್ಟಮಂಬಾಸುತಮಾಶ್ರಯೇಹಮ್ ॥ 61॥

ಎಡಗೈಯಲ್ಲಿ ಬಿಲ್ಲು ಮತ್ತು ಪಾಶ, ಬಲಗೈಯಲ್ಲಿ ಬಾಣ ಮತ್ತು ಅಂಕುಶ ಧರಿಸಿ, ಕೆಂಪು ತಾವರೆಯ ಮೇಲೆ ಆಸೀನಳಾದ ವಿವಸ್ತ್ರಳಾದ ತನ್ನ ಪತ್ನಿಯೊಂದಿಗೆ ಸಂಭೋಗನಿರತನಾದ ಪಾರ್ವತಿ ಪುತ್ರನಾದ ಗಣಪತಿಯನ್ನು ನಾನು ಧ್ಯಾನಿಸುತ್ತೇನೆ.

ನ್ಯಾಸ ಮಾಡಿದ ನಂತರ ಈ ಪ್ರಕಾರ ಉಚ್ಛಿಷ್ಟ ಗಣಪತಿಯ ಧ್ಯಾನ ಮಾಡಬೇಕು.

ಪುರಶ್ಚರಣ ವಿಧಾನ

ಲಕ್ಷಂ ಜಪೇದ್‌ಭೃತ್ಯೈರ್ಹುತ್ವಾ ದ್ದಶಾಂಶಂ ಪ್ರಪೂಜಯೇತ್ ।
ಪೂರ್ವೋಕ್ತ ಪೀಠೆ ಸ್ವಾಭಿಷ್ಟಸಿದ್ಧಯೆ ಪೂರ್ವವದ್ವಿಭುಮ್ ॥ 62 ॥

ಕೃಷ್ಣಾಷ್ಟಮ್ಯಾದಿತದ್‌ಭೂತಂ ಯಾವತ್ತಾವಜ್ಜಪೇನ್ಮನುಮ್ ।
ಪ್ರತ್ಯಹಂ ಸಾಷ್ಟಸಾಹಸ್ರಂ ಜುಹುಯಾತ್ತದ್ದಶಾಂಶತಃ ॥ 63 ॥

ತರ್ಪಯೇದಪಿ ಮಂತ್ರೋಯಂ ಸಿದ್ಧಿಮೇವಂ ಪ್ರಯಚ್ಛತಿ ।
ಧನಂ ಧಾನ್ಯಂ ಸುತಾನ್‌ಪೌತ್ರಾನ್ ಸೌಭ್ಯಾಗ್ಯಮತುಲಂ ಯಶಃ ॥ 64 ॥

ಮೂರ್ತಿಂ ಕುರ್ಯಾದ್ ಗಣೇಶಸ್ಯ ಶುಭಾಹೆ ನಿಂಬದಾರುಣಾ ।
ಪ್ರಾಣಪ್ರತಿಷ್ಠಾಂ ಕೃತ್ವಾಥ ತದಗ್ರೆ ಮಂತ್ರಮಾಜಪೇತ್ ॥ 65 ॥





ಚ ಧ್ಯಾತ್ವಾ ದಾಸವಸ್ತೋಪಿವಶ್ಯೋ ಭವತಿ ನಿಶ್ಚಿತಮ್ ।
ನದೀಜಲಂ ಸಮಾದಾಯ ಸಪ್ತವಿಶಂತಿ ಸಂಖ್ಯಯಾ ॥ 66 ॥

ಮಂತ್ರಯಿತ್ವಾ ಮುಖಂ ತೇನ ಪ್ರಕ್ಷಾಲ್ಯೇಶಸಭಾಂ ವ್ರಜೇತ್ ।
ಪಶ್ಯೇದ್ಯಂ ದೃಶ್ಯತೆ ಯೇನ ಸ ವಶ್ಯೋ ಜಾಯತೆ ಕ್ಷಣಾತ್ ॥ 67 ॥

ಚತುಃ ಸಹಸ್ರಂ ಧತ್ತೂರಪುಷ್ಪಾಣಿ ಮನುನಾರ್ಪಯೇತ್ ।
ಗಣೇಶಾಯ ನೃಪಾದಿನಾಂ ಜನಾನಾಂ ವಶ್ಯತಾಕೃತೆ ॥ 68 ॥

ಸಾಧಕನು ತನ್ನ ಅಭಿಷ್ಟ ಸಿದ್ಧಿಯಾಗಿ ಪೂರ್ವದಲ್ಲಿ ಹೇಳಿದ ಪೀಠದಮೇಲಿ ವಿಧಾನ ಪೂರ್ವಕ ಪೂಜೆ ಮಾಡಿ ಮಂತ್ರದ ಒಂದು ಲಕ್ಷ ಜಪ ಮಾಡಬೇಕು. ನಂತರ ತುಪ್ಪದಿಂದ ಅದರ ದಶಾಂಶ (ಹತ್ತು ಸಾವಿರ) ಹವನ ಮಾಡಬೇಕು.

ಕೃಷ್ಣ ಪಕ್ಷದ ಅಷ್ಟಮಿಯಿಂದ ಪ್ರಾರಂಭಿಸಿ ಚತುರ್ದಶಿಯವರೆಗೆ ಪ್ರತಿದಿನ ಎಂಟು ಸಾವಿರದಾ ಐದನೂರು (8,500) ಸಂಖ್ಯೆಯಲ್ಲಿ ಜಪ ಮತ್ತು ಅದರ ದಶಾಂಶ (850) ಹೋಮ ಮತ್ತು ಅದರ ದಶಾಂಶ (85) ತರ್ಪಣ ಮಾಡಬೇಕು. ಈ ಪ್ರಕಾರ ಮಾಡುವುದರಿಂದ ಮಂತ್ರಸಿದ್ಧಿಯಾಗುತ್ತದೆ. ಧನ-ಧಾನ್ಯ, ಪುತ್ರ-ಪೌತ್ರಾದಿ ಸೌಭಾಗ್ಯ ಮತ್ತು ಯಶಸ್ಸು ಪ್ರಾಪ್ತವಾಗುತ್ತದೆ.

ಶುಭ ಮಹೂರ್ತದಲ್ಲಿ ಬೇವಿನ ಕಟ್ಟಿಗೆಯಿಂದ ಗಣೇಶನ ಮೂರ್ತಿಯನ್ನು ನಿರ್ಮಾಣ ಮಾಡಬೇಕು. ನಂತರ ವಿಧಾನೋಕ್ತವಾಗಿ ಪ್ರಾಣಪ್ರತಿಷ್ಠೆ ಮಾಡಿ ಅದರ ಮುಂದೆ ಜಪ ಮಾಡಬೇಕು.

ಯಾರನ್ನು ಧ್ಯಾನ ಮಾಡಿಕೊಂಡು ಜಪ ಮಾಡುತ್ತಾರೆಯೋ ಅವರು ವಶವರ್ತಿಗಳಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ನದಿಯ ನೀರನ್ನು ತೆಗೆದುಕೊಂಡು 21 ಬಾರಿ ಈ ಮಂತ್ರದಿಂದ ಅಭಿಮಂತ್ರಿಸಿ, ಆ ನೀರಿನಿಂದ ಮುಖ ಪ್ರಕ್ಷಾಳನ ಮಾಡಿಕೊಂಡು ಸಭೆ-ಸಮಾರಂಭಗಳಿಗೆ ಹೋದರೆ, ಸಾಧಕನು ಯಾರನ್ನು ನೋಡುತ್ತಾನೆಯೊ ಅವರು ಈ ಮಂತ್ರದ ಪ್ರಭಾವದಿಂದ ತಕ್ಷಣದಲ್ಲಿ ಸಾಧಕನ ವಶವರ್ತಿಯಾಗುತ್ತಾರೆ.

ರಾಜ ಅಥವಾ ರಾಜನ ಅಧಿಕಾರಿಗಳನ್ನು ವಶಪಡಿಸಿಕೊಳ್ಳಲು, ಈ ಮಂತ್ರದ ನಾಲ್ಕು ಸಾವಿರ ಜಪ ಮಾಡಿ ಸಮಾನ ಸಂಖ್ಯೆಯಲ್ಲಿ ಧತ್ತೂರ ಪುಷ್ಪಗಳನ್ನು ಶ್ರೀ ಗಣೇಶನಿಗೆ ಅರ್ಪಿಸಬೇಕು.

ಸುಂದರಿ ವಾಮಪಾದಸ್ಯ ರೇಣುಮಾದಾಯ ತತ್ರ ತು ।
ಸಂಸ್ಥಾಪ್ಯ ಗಣನಾಥಸ್ಯ ಪ್ರತಿಮಾಂ ಪ್ರಜಪೇನ್ಮನುಮ್ ॥ 69 ॥

ಧ್ರುವ (ಓಂ), ಮಾಯಾ (ಹ್ರೀಂ) ಮತ್ತು ಅನುಸ್ವಾರಯುಕ್ತ ಶಾಂಗಿಃ (ಗಂ) ಈ ಮೂರು ಬೀಜಾಕ್ಷರಗಳನ್ನು ನವಾರ್ಣ ಮಂತ್ರದ ಹಿಂದೆ ಜೋಡಿಸುವುದರಿಂದ ದ್ವಾದಶಾಕ್ಷರ ಮಂತ್ರ ಸಿದ್ಧವಾಗುತ್ತದೆ. ಇದರ ವಿನಿಯೋಗ, ನ್ಯಾಸ, ಧ್ಯಾನಗಳು ನವಾರ್ಣ ಮಂತ್ರದ ಸಮಾನವಾಗಿರುತ್ತವೆ.

"ಓಂ ಹ್ರೀಂ ಗಂ ಹಸ್ತಿಪಿಶಾಚಿ ಲಿಖೆ ಸ್ವಾಹಾ"

ಇದು ದ್ವಾದಶಾಕ್ಷರ ಮಂತ್ರದ ಸ್ವರೂಪವಾಗಿದೆ.

ತಾರಾದ್ಯಷ್ಟ ಗಣೇಶಾಧ್ಯೋ ನವಾರ್ಣೋ ದಶವರ್ಣಕಃ ।
ದ್ವಿವಿಧೋಸ್ಯೋಪಾಸನಂ ತು ಪ್ರೋಕ್ತಮನ್ಯನ್ನವಾರ್ಣವತ್ ॥ 54 ॥

ಆದಿಯಲ್ಲಿ ತಾರ (ಓಂ) ಅದರ ನಂತರ ನವಾರ್ಣಮಂತ್ರ ಜೋಡಿಸುವುದರಿಂದ ಅಥವಾ 'ಗಂ' ದ ನಂತರ ನವಾರ್ಣಮಂತ್ರ ಜೋಡಿಸುವುದರಿಂದ, ಹೀಗೆ ಎರಡು ಪ್ರಕಾರದ ದಶಾಕ್ಷರ ಗಣಪತಿ ಮಂತ್ರಗಳು ರೂಪುಗೊಳ್ಳುತ್ತವೆ.

ಓಂ ಹಸ್ತಿ ಪಿಶಾಚಿಲಿಖೆ ಸ್ವಾಹಾ । ಗಂ ಹಸ್ತಿ ಪಿಶಾಚಿಲಿಖೆ ಸ್ವಾಹಾ

ಈ ಎರಡೂ ಮಂತ್ರಗಳ ವಿನಿಯೋಗ, ನ್ಯಾಸ ಮತ್ತು ಧ್ಯಾನದ ವಿಧಾನಗಳು ಈ ಹಿಂದೆ ವಿವರಿಸಿದಂತೆ ನವಾರ್ಣ ಮಂತ್ರದ ಸಮಾನವಾಗಿರುತ್ತವೆ.

## ಏಕೋನವಿಂಶತಿ ವರ್ಣಾತ್ಮಕ ಉಚ್ಚಿಷ್ಟ ವಿನಾಯಕ ಮಂತ್ರ

ಧ್ರುವೋ ಹೃದಿಚ್ಛಿಷ್ಟಗಣೇಶಾಯ ತೆ ತು ನವಾಕ್ಷರಃ ।
ಏಕೋನವಿಂಶತ್ಯರ್ಣಾಢ್ಯೋ ಮನುರ್ಮುನ್ಯಾದಿ ಪೂರ್ವವತ್ ॥ 55 ॥

ತ್ರಿಭಿಃ ಸಪ್ತಭಿರಕ್ಷಿಭ್ಯಾಂ ತ್ರಿಭಿರ್ದ್ವಾಭ್ಯಾಂ ದ್ವಯೇನ ಚ ।
ಮಂತ್ರೋತ್ಥೈಃ ಸುಧೀರ್ವರ್ಣೈ ಕುರ್ಯಾದಂಗಂ ಪುರಾರ್ಚನಮ್ ॥56॥

ಧ್ರುವ (ಓಂ), ಹೃದ್ (ನಮಃ), ನಂತರ 'ಉಚ್ಚಿಷ್ಟ ಗಣೇಶಾಯ' ನಂತರ ನವಾರ್ಣ ಮಂತ್ರ ಜೋಡಿಸುವುದರಿಂದ ಹತ್ತೊಂಭತ್ತು (19) ಅಕ್ಷರಗಳ ಮಂತ್ರವಾಗುತ್ತದೆ.

"ಓಂ ನಮಃ ಉಚ್ಚಿಷ್ಟಗಣೇಶಾಯ ಹಸ್ತಿಪಿಶಾಚಿ ಲಿಖೆ ಸ್ವಾಹಾ'

ಈ ಮಂತ್ರದ ಋಷಿ, ಛಂದ, ದೇವತಾ ನವಾರ್ಣ ಮಂತ್ರದಂತೆಯೇ ಇರುತ್ತದೆ. ಮಂತ್ರದ 3, 7, 2, 3, 2 ಮತ್ತು 2 ಅಕ್ಷರಗಳಿಂದ ಷಡಂಗನ್ಯಾಸ ಮತ್ತು ಅಂಗಪೂಜೆಯನ್ನು ಈ ಮೊದಲು ವಿವರಿಸಿದ ವಿಧಾನದಂತೆ ಮಾಡಬೇಕು.





ವಿನಿಯೋಗ :

ಓಂ ಅಸ್ಯೋಚ್ಛಿಷ್ಟಗಣಪತಿ ಮಂತ್ರಸ್ಯ ಕಂಕೋಲಋಷಿಃ ವಿರಾಟಛಂದಃ । ಉಚ್ಚಿಷ್ಟ ಗಣಪತಿರ್ದೇವತಾ ಆತ್ಮನಃ ಅಭೀಷ್ಟ ಸಿಧ್ಯರ್ಥೆ ಉಚ್ಚಿಷ್ಟ ಗಣಪತಿ ಮಂತ್ರ ಜಪೇ ವಿನಿಯೋಗಃ

ಷಡಂಗನ್ಯಾಸ

ಓಂ ನಮಃ ಹೃದಯಾಯ ನಮಃ । ಓಂ ಉಚ್ಚಿಷ್ಟಗಣೇಶಾಯ ಶಿರಸೆ ಸ್ವಾಹಾ। ಓಂ ಹಸ್ತಿ ಶಿಖಾಯೈ ವಷಟ್ । ಓಂ ಪಿಶಾಚಿ ಕವಚಾಯ ಹುಮ್ । ಓಂ ಲಿಖೆ ನೇತ್ರತ್ರಯಾಯಾ ವೌಷಟ್ ಓಂ ಸ್ವಾಹಾ ಅಸ್ತ್ರಾಯ ಫಟ್ ।

ಧ್ಯಾನಃ ಚತುರ್ಭುಜಂ ರಕ್ತತನು ತ್ರಿನೇತ್ರಂ..............................(ಶ್ಲೋಕ 34)

## ಸಪ್ತತ್ರಿಂಶದಕ್ಷರಾತ್ಮಕ ಉಚ್ಚಿಷ್ಟ ಗಣೇಶ ಮಂತ್ರ

ತಾರೋ ನಮೋ ಭಗವತೆ ಝಿಂಟಿಶಶ್ಚತುರಾನನಃ ।
ದಂಷ್ಟ್ರಾಯ ಹಸ್ತಿಮುಚ್ಚಾರ್ಯ ಖಾಯ ಲಂಬೋದರಾಯ ಚ ॥ 57 ॥

ಉಚ್ಚಿಷ್ಟಮವಿಯದ್ದೀರ್ಘಾತ್ಮನೆ ಪಾಶೊಂಕುಶಃ ಪರಾ ।
ಸೇಂದುಃ ಶಾಂಗಿಃ ಭಗಯುತೆ ದ್ವೆ ಮೇಘೆ ವಹ್ನಿಕಾಮಿನಿ ॥ 58 ॥

ಉಚ್ಚಿಷ್ಟ ಗಣನಾಥಸ್ಯ ಮನುರದ್ರಿ ಗುಣಾಕ್ಷರಃ ।
ಗಣಕೊ ಮುನಿರಾಖ್ಯಾತೊ ಗಾಯತ್ರಿಚ್ಛಂದಃ ಈರಿತ : ॥ 59 ॥

ಉಚ್ಚಿಷ್ಟಗಣಪೋ ದೇವೊ ಜಪೇದುಚ್ಚಿಷ್ಟ ಏವ ತಮ್ ।
ಸಪ್ತದಿಗ್ಬಾಣಸಪ್ತಾಬ್ಧಿಯುಗಾಕ್ಷೈರಂಕಂ ಮನೋ ॥ 60 ॥

ತಾರ (ಓಂ), ನಂತರ 'ನಮೋಭಗವತೆ', ಪುನಃ ಝಿಂಟೀಶ (ಏ), ಚತುರಾನನ (ಕ), ಆಮೇಲೆ ದಂಷ್ಟ್ರಾಹಸ್ತಿಮು, ಖಾಯ, ಲಂಬೋದರಾಯ, ಪುನಃ ಉಚ್ಚಿಷ್ಟಮ್, ನಂತರ ದೀರ್ಘವಿಯತ್ (ಹಾಂ), ನಂತರ 'ತ್ಮನೆ', ಪಾಶ (ಆ), ಅಂಕುಶ (ಕ್ರೋಂ), ಪರಾ (ಹ್ರೀಂ), ಸೇಂದು ಶಾಂಗಿಂ (ಗಂ), ಭಗಸಹಿತ ದ್ವಿಮೇಘ (ಘೆ, ಘೆ) ಮತ್ತು ಅಂತದಲ್ಲಿ ವಹ್ನಿಕಾಮಿನಿ (ಸ್ವಾಹಾ) ಹಚ್ಚುವುದರಿಂದ 37 ಅಕ್ಷರಗಳ ಮಂತ್ರವು ರೂಪುಗೊಳ್ಳುತ್ತದೆ –

ಓಂ ನಮೋ ಭಗವತೆ ಏಕದಂಷ್ಟ್ರಾಯ ಹಸ್ತಿಮುಖಾಯ । ಲಂಬೋದರಾಯ ಉಚ್ಚಿಷ್ಟ ಮಹಾತ್ಮನೆ ಆಂ ಕ್ರೋಂ ಹ್ರೀಂ ಗಂ ಘೆ ಘೆ ಸ್ವಾಹಾ"

ಈ ಮಂತ್ರದ ಗಣಕ ಋಷಿ, ಗಾಯತ್ರಿ ಛಂದ, ಮತ್ತು ಉಚ್ಚಿಷ್ಟ ಗಣಪತಿ

ಸಾಧಕನು ಕಪಿ (ರಕ್ತಚಂದನ) ಅಥವಾ ಸಿತಭಾನು (ಶ್ವೇತಾರ್ಕ-ಬಿಳಿ ಎಕ್ಕ)ವಿನ ತನ್ನ ಹೆಬ್ಬೆರಳು ಗಾತ್ರದ ಅಳತೆಯ ಗಣೇಶ ಪ್ರತಿಮೆಯನ್ನು ತಯಾರಿಸಬೇಕು. ಲಕ್ಷಣವಾದ ಸುಂದರವಾದ ಮೂರ್ತಿಯನ್ನು ಪ್ರಾಣಪ್ರತಿಷ್ಠೆ ಮಾಡಿ ಜೇನುತುಪ್ಪದಿಂದ ಸ್ನಾನ ಮಾಡಿಸಬೇಕು.

ಕೃಷ್ಣ ಪಕ್ಷದ ಚತುರ್ದಶಿಯಿಂದ ಶುಕ್ಲಪಕ್ಷದ ಚತುರ್ದಶಿಯವರೆಗೆ ಬೆಲ್ಲದಿಂದ ನಿರ್ಮಿತವಾದ ಪಾಯಸವನ್ನು ನೈವೇದ್ಯ ಮಾಡುತ್ತ ಈ ಮಂತ್ರವನ್ನು ಜಪ ಮಾಡಬೇಕು.

ಪ್ರತಿದಿನ ಏಕಾಂತದಲ್ಲಿ ಉಚ್ಛಿಷ್ಟ ಮುಖ ಮತ್ತು ನಗ್ನರಾಗಿ "ನಾನು ಸ್ವಯಂ ಗಣೇಶ' ಈ ಭಾವನೆಯಿಂದ ಜಪ ಮಾಡಬೇಕು. ಪ್ರತಿದಿನ ಹೋಮ ಮಾಡಿ ತುಪ್ಪ ಮತ್ತು ಎಳ್ಳುಗಳ ಆಹುತಿಗಳನ್ನು ಒಂದು ಸಾವಿರದಷ್ಟು ಕೊಡಬೇಕು. ಈ ಪ್ರಯೋಗದಿಂದ ಹದಿನೈದು ದಿನಗಳಲ್ಲಿ ಸಾಧನ ಅಥವಾ ರಾಜಕುಲೋತ್ಪನ್ನ ವ್ಯಕ್ತಿಯು ರಾಜ್ಯವನ್ನು ಪಡೆದುಕೊಳ್ಳುತ್ತಾನೆ.

ಇದೇ ಪ್ರಕಾರ ಕುಂಬಾರನ ಆವಿಯ ಮಣ್ಣಿನಿಂದ ಗಣೇಶ ಪ್ರತಿಮೆಯನ್ನು ತಯಾರಿಸಿ ವಿಧಾನ ಪೂರ್ವಕ ಪೂಜೆ, ಮತ್ತು ಹವನ ಮಾಡುವುದರಿಂದ ನಾನಾ ಪ್ರಕಾರದ ಸಂಪತ್ತು ಪ್ರಾಪ್ತವಾಗುತ್ತದೆ. ಹುತ್ತದ ಮಣ್ಣಿನಿಂದ ಪ್ರತಿಮೆ ತಯಾರಿಸಿ ಪೂಜೆ ಮತ್ತು ಹೋಮ ಮಾಡುವುದರಿಂದ ಮನೋರಥವು ಪೂರ್ಣವಾಗುವುದು. ಬೆಲ್ಲದಿಂದ ನಿರ್ಮಿತ ಪ್ರತಿಮೆಯನ್ನು ಈ ಪ್ರಕಾರ ಪೂಜಿಸುವುದರಿಂದ ಸೌಭಾಗ್ಯ ಪ್ರಾಪ್ತಿಯಾಗುತ್ತದೆ. ಮತ್ತು ಲಾವಣಿ ಪ್ರತಿಮೆಯು ಶತ್ರುಗಳನ್ನು ವಿಪತ್ತಿಗೆ ಈಡು ಮಾಡುತ್ತದೆ.

ನಿಂಬಜಾ ನಾಶಯೇಚ್ಛತ್ರೂನ್ಪ್ರತಿಮೈವಂ ಸಮಾರ್ಚಿತಾ ।
ಮಧ್ವಕ್ತೈರ್ಹೋಮತೋ ಲಾಜೈರ್ವಶಯೇದಖಿಲಂ ಜಗತ್ ॥ 46 ॥

ಸುಪ್ತೋಧಿಶಯ್ಯಮುಚ್ಛಿಷ್ಟೋ ಜಪಂಚ್ಛತ್ರೂನ್ವಶಂ ನಯೇತ್ ।
ಕಟುತೈಲಾಕ್ತೈ ರಾಜೀಪುಷ್ಪೈರ್ವಿದ್ವೇಷಯೇದರೀನ್ ॥ 47 ॥

ಧ್ಯೂತೆ ವಿವಾದೆ ಸಮರೆ ಜಪ್ತೋಯಂ ಜಯಮಾವಹೇತ್ ।
ಕುಬೇರೋಸ್ಯ ಮನೋರ್ಜಾಪಾನ್ನಿಧಿನಾಂ ಸ್ವಾಮಿತಾಮಿಯಾತ್ ॥ 48 ॥

ಲೆಭಾತೆ ರಾಜ್ಯಮನರಿಂ ವಾನರೇಶವಿಭೀಷಣೌ ।
ರಕ್ತವಸ್ತ್ರಾಂರಾಗಾಢ್ಯಸ್ತಾಂಬೂಲಂ ನಿಶದಜ್ಜಪೇತ್ ॥ 49 ॥

ಯದ್ವಾ ನಿವೇದಿತಂ ತಸ್ಮೈ ಮೋದಕಂ ಭಕ್ಷಯಜ್ಜಪೇತ್ ।
ಪಿಶಿತಂ ವಾ ಫಲಂ ವಾಪಿ ತೇನ ತೇನ ಬಲಿಂ ಹರೇತ್ ॥ 50 ॥





ನಿಂಬ (ಬೇವು) ನಿರ್ಮಿತ ಪ್ರತಿಮೆಯನ್ನು ವಿಧಾನ ಪೂರ್ವಕ ಪೂಜೆ, ಜಪ ಮತ್ತು ಹೋಮ ಮಾಡುವುದರಿಂದ ಶತ್ರು ನಾಶವಾಗುತ್ತದೆ. ಮಧುಮಿಶ್ರಿತ ಭತ್ತದ ಅರಳಿನಿಂದ ಹೋಮ ಮಾಡಿದರೆ ಜಗತ್ತು ವಶವಾಗುತ್ತದೆ. ಹಾಸಿಗೆಯ ಮೇಲೆ ಒರಗಿದ ಉಚ್ಛಿಷ್ಟಾವಸ್ಥೆಯಲ್ಲಿ ಜಪ ಮಾಡುವುದರಿಂದ ಶತ್ರು ವಶವಾಗುತ್ತದೆ. ಕಟುತೈಲದಲ್ಲಿ ಸೇರಿಸಿದ ರಾಜೀ ಪುಷ್ಪಗಳಿಂದ ಹವನ ಮಾಡಿದರೆ ಶತ್ರುಗಳಲ್ಲಿ ವಿದ್ವೇಷ ಉಂಟಾಗುತ್ತದೆ.

ಜೂಜು, ವಿವಾದ ಮತ್ತು ಯುದ್ಧ (ಹೋರಾಟ)ಗಳಲ್ಲಿ ಈ ಮಂತ್ರದ ಜಪವು ಜಯಪ್ರದವಾಗುತ್ತದೆ. ಈ ಮಂತ್ರದ ಜಪದ ಪ್ರಭಾವದಿಂದ ಕುಬೇರನ ನವನಿಧಿಗಳು ಪ್ರಾಪ್ತವಾಗುತ್ತವೆ. ಇಷ್ಟೇ ಅಲ್ಲ ಈ ಮಂತ್ರದ ಜಪದಿಂದ ವಿಭೀಷಣ ಮತ್ತು ಸುಗ್ರೀವರಿಗೆ ರಾಜ್ಯಪ್ರಾಪ್ತಿಯಾಗಿತ್ತು ಎಂದು ಪ್ರತೀತಿಯಿದೆ. ಕೆಂಪು ವರ್ಣದ ಬಟ್ಟೆ ಧರಿಸಿ ಕೆಂಪು ಅಂಗರಾಗ ಲೇಪನ ಮಾಡಿಕೊಂಡು ತಾಂಬೂಲ ಚರ್ವಣ ಮಾಡುತ್ತ ರಾತ್ರಿಯ ಸಮಯದಲ್ಲಿ ಈ ಮಂತ್ರವನ್ನು ಜಪ ಮಾಡಬೇಕು. ಅಥವಾ ಗಣೇಶನಿಗೆ ನೈವೇದ್ಯ ಮಾಡಿದ ಲಾಡುವನ್ನು ತಿನ್ನುತ್ತ ಜಪ ಮಾಡಬೇಕು. ನಂತರ ಮಾಂಸ ಅಥವಾ ಹಣ್ಣು ಯಾವುದಾದರೊಂದು ವಸ್ತುವಿನ ಬಲಿ ಕೊಡಬೇಕು.

ಬಲಿದಾನ ಮಂತ್ರ

ಸೇಂದು ಸ್ಮೃತಿಸ್ತಥಾಕಾಶಂ ಮನ್ವಿಂದ್ವಾಢ್ಯೌ ಚ ಸೃಷ್ಟಿತಾ ।
ಪಂಚಾಂತಿಕಶಿವೌ ತದ್ವದುಚ್ಛಿಷ್ಟಗಭಗಾನ್ವಿತಃ ॥ 51 ॥

ಉಮಾಕಾಂತಃ ಶಾಯಮಾಂತೆ ಹಾಯಕ್ಷಾಯಾಸಬಿಂದುಯಃ ।
ಬಲಿರೀತ್ಯೇಷ ಕಥಿತೊ ನವೇಂದ್ವರ್ಣೊ ಬಲೇರ್ಮನುಃ ॥ 52 ॥

ಸಾನುಸ್ವಾರ ಸ್ಮೃತಿ (ಗಂ), ಇಂದು ಸಹಿತ ಆಕಾಶ (ಹಂ), ಅನುಸ್ವಾರ ಮತ್ತು ಔಕಾರ ಯುಕ್ತ ಕಕಾರ ಲಕಾರ, (ಕ್ಲೌಂ) ಈ ಪ್ರಕಾರ ಗಕಾರ ಲಕಾರ (ಗ್ಲೌಂ) ಮತ್ತು ನಂತರ 'ಉಚ್ಛಿಷ್ಟಗ' ಪುನಃ ಏಕಾರ ಯುಕ್ತಣ (ಣೆ), ನಂತರ 'ಶಾಯ' ಪದ ಪುನಃ 'ಮಹಾಯಕ್ಷಾಯಾ', ಆಮೇಲೆ 'ಯಂ' ಮತ್ತು ಅಂತದಲ್ಲಿ 'ಬಲಿಃ' ಜೋಡಿಸುವುದರಿಂದ ಹದಿನಾರು ಅಕ್ಷರಗಳ ಬಲಿದಾನ ಮಂತ್ರವು ರೂಪು ಗೊಳ್ಳುತ್ತದೆ.

"ಗಂ ಹಂ ಕ್ಲೌಂ ಗ್ಲೌಂ ಉಚ್ಛಿಷ್ಟಗಣೇಶಾಯ ಮಹಾಯಕ್ಷಾಯ ಬಲಿಃ

ದ್ವಾದಶಾರ್ಣೋಪರೊ ಮಂತ್ರ

ಧ್ರುವೊ ಮಾಯಾ ಸೇಂದುಶಾಂಗಿರ್ಬಿಜಾಢ್ಯೌ ನವವರ್ಣಕಃ ।
ದ್ವಾದಶಾರ್ಣೊ ಮನುಃ ಪ್ರೋಕ್ತಃ ಸರ್ವಮಸ್ಯ ನವಾರ್ಣವತ್ ॥ 53 ॥

ಮಸ್ತಕದಲ್ಲಿ ಚಂದ್ರನನ್ನು ಧರಿಸಿದ ನಾಲ್ಕು ಭುಜಗಳಿಂದ ಮತ್ತು ಮೂರು ನೇತ್ರಗಳಿಂದ ಶೋಭಿಸುತ್ತಿರುವ, ರಕ್ತ ವರ್ಣದ ಶರೀರವುಳ್ಳ ಕಮಲದಳಗಳ ಮೇಲೆ ವಿರಾಜಮಾನನಾಗಿರುವ ಗಣಪತಿಯನ್ನು ಧ್ಯಾನಿಸುತ್ತೇನೆ.

**ಪುರಶ್ಚರಣ ವಿಧಾನ**

ಲಕ್ಷಮೇಕಂ ಜಪೇನ್ಮಂತ್ರಂ ದಶಾಂಶಂ ಜುಹುಯಾತ್ತಿಲೈಃ ।
ಪೂರ್ವೋಕ್ತೇ ಪೂಜಯೇತ್ಪೀಠೇ ವಿಧಿನೋಚ್ಛಿಷ್ಟ ವಿಘ್ನಪಮ್ ॥ 35 ॥

ಆದಾವಂಗಾನಿ ಸಂಪೂಜ್ಯ ಬ್ರಾಹ್ಮ್ಯಾದ್ಯಾದಿಂಕ್ಷು ಪೂಜಯೇತ್ ।
ಬ್ರಾಹ್ಮಿ ಮಾಹೇಶ್ವರಿ ಚೈವ ಕೌಮಾರಿ ವೈಷ್ಣವಿ ಪರಾ ॥ 36 ॥

ವಾರಾಹಿ ಚ ತಥೇಂದ್ರಾಣೀ ಚಾಮುಂಡಾರಮಯಾ ಸಹ ।
ಕ ಕುಪ್ಸು ವಕ್ರತುಂಡಾಧ್ಯಾಂಶಸು ಪ್ರತಿಪೂಜಯೇತ್ ॥ 37 ॥

ವಕ್ರತುಂಡೈಕದಂಷ್ಟ್ರೌ ಚ ತಥಾ ಲಂಬೋದರಾಭಿಧಃ ।
ವಿಕಟೋ ಧೂಮ್ರವರ್ಣಶ್ಚ ವಿಘ್ನಶ್ಚಾಪಿ ಗಜಾನನಃ ॥ 38 ॥

ವಿನಾಯಕೋ ಗಣಪತಿರ್ಹಸ್ತಿದಂತಾಭಿಧೋಂತಿಮಃ ।
ಇಂದ್ರಾದ್ಯಾನಪಿ ವಜ್ರಾದ್ಯಾನ್ಪೂಜಯೇದಾವೃತಿದ್ವಯೆ ॥ 39 ॥
ಏವಂ ಸಿದ್ಧೆ ಮನೌ ಮಂತ್ರಿ ಪ್ರಯೋಗಾನ್ ಕರ್ತುಮರ್ಹತಿ ।

ಈಗ ಉಚ್ಚಿಷ್ಟ ಗಣಪತಿ ಮಂತ್ರದ ಪುರಶ್ಚರಣ ವಿಧಾನವನ್ನು ವರ್ಣಿಸಲಾಗುತ್ತದೆ. ಈ ಮಂತ್ರದ ಒಂದು ಲಕ್ಷ ಜಪ ಮಾಡಬೇಕು. ನಂತರ ತಿಲದಿಂದ ಅದರ ದಶಾಂಶ ಹೋಮ ಮಾಡಬೇಕು. ಈ ಮೊದಲು ವಿವರಿಸಿದ ಪ್ರಕಾರ ಪೀಠದ ಮೇಲೆ ಉಚ್ಚಿಷ್ಟ ಗಣಪತಿಯ ಪೂಜೆ ಮಾಡಬೇಕು.

ಸರ್ವ ಪ್ರಥಮವಾಗಿ ಅಂಗಗಳ ಪೂಜೆ ಮಾಡಿ ಎಂಟು ದಿಕ್ಕುಗಳಲ್ಲಿ ಬ್ರಾಹ್ಮಿಯಿಂದ ಹಿಡಿದು ರಮಾದವರೆಗೆ ಅಷ್ಟಮಾತೃಕೆಗಳ ಪೂಜೆ ಮಾಡಬೇಕು. ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ ಮತ್ತು ರಮಾ ಇವು ಅಷ್ಟ ಮಾತೃಕೆಯರಿರುತ್ತಾರೆ. ಪುನಃ ದಶದಿಕ್ಕುಗಳಲ್ಲಿ ವಕ್ರತುಂಡ, ಏಕದಂಷ್ಟ್ರ, ಲಂಬೋದರ, ವಿಕಟ, ಧೂಮ್ರವರ್ಣ, ವಿಘ್ನ, ಗಜಾನನ, ವಿನಾಯಕ, ಗಣಪತಿ ಮತ್ತು ಹಸ್ತಿದಂತರ ಪೂಜೆ ಮಾಡಬೇಕು. ನಂತರ ಎರಡು ಆವರಣಗಳಲ್ಲಿ ಇಂದ್ರಾದಿ ದಶ ದಿಕ್ಪಾಲಕರನ್ನು ಪೂಜೆ ಮಾಡಬೇಕು. ಈ ಪ್ರಕಾರ ಪುರಶ್ಚರಣ ದ್ವಾರಾ ಮಂತ್ರ ಸಿದ್ಧವಾದ ನಂತರ ಸಾಧಕರು ಕಾಮ್ಯ ಪ್ರಯೋಗದ ಅರ್ಹತೆಯನ್ನು ಪಡೆಯುತ್ತಾರೆ.





ಪೀಠಪೂಜೆಗಾಗಿ ಆಧಾರಶಕ್ತಿ ಪೂಜಾ, ಮೂಲಮಂತ್ರದಿಂದ ದೇವತಾ ಮೂರ್ತಿಯ ಕಲ್ಪನೆ, ಧ್ಯಾನ, ನಂತರ ಆವಾಹನಾದಿ ಪೂಜೋಪಚರಾದಿಗಳನ್ನು ಪೂರ್ವೋಕ್ತ ವಿಧಾನಗಳಂತೆ ಪೂರೈಸಬೇಕು. ಪೂರ್ವ ಆದಿ ಅಷ್ಟ ದಿಶಾಗಳಲ್ಲಿ ಅಷ್ಟಮಾತೃಕೆಯರನ್ನು, "ಓಂ ಬ್ರಾಹ್ಮ್ಯೈ ನಮಃ, ಓಂ ಮಾಹೇಶ್ವರ್ಯೈ ನಮಃ, ಓಂ ಕೌಮಾರ್ಯೈ ನಮಃ, ಓಂ ವೈಷ್ಣವ್ಯೈ ನಮಃ, ಓಂ ವಾರಾಹ್ಯೈ ನಮಃ, ಓಂ ಇಂದ್ರಾಣ್ಯೈ ನಮಃ, ಓಂ ಚಾಮುಂಡಾಯೈ ನಮಃ, ಓಂ ಮಹಾಲಕ್ಷ್ಮ್ಯೈ ನಮಃ ಈ ಮಂತ್ರಗಳಿಂದ ಪೂಜಿಸಬೇಕು.

ನಂತರ, ಪೂರ್ವಾದಿ ದಶ ದಿಶೆಗಳಲ್ಲಿ, "ಓಂ ವಕ್ರತುಂಡಾಯ ನಮಃ, ಓಂ ಏಕದಂಷ್ಟ್ರಾಯ ನಮಃ, ಓಂ ಲಂಬೋದರಾಯ ನಮಃ, ಓಂ ವಿಕಟಾಯ ನಮಃ, ಓಂ ಧೂಮ್ರವರ್ಣಾಯ ನಮಃ, ಓಂ ವಿಘ್ನಾಯ ನಮಃ, ಓಂ ಗಜಾನನಾಯ ನಮಃ, ಓಂ ವಿನಾಯಕಾಯ ನಮಃ, ಓಂ ಗಣಪತಯೇ ನಮಃ, ಓಂ ಹಸ್ತಿದಂತಾಯ ನಮಃ ಈ ಮಂತ್ರಗಳಿಂದ ಮತ್ತು ದಶ ದಿಕ್ಕುಗಳಲ್ಲಿ ಅದರ ಹೊರಗೆ ಇಂದ್ರಾದಿ ದಶ ದಿಕ್ಪಾಲರು ಮತ್ತು ಅವರ ವಜ್ರಾದಿ ಆಯುಧಗಳನ್ನು ಪೂಜಿಸಬೇಕು. ಈ ಪ್ರಕಾರ ವಿಧಾನೋಕ್ತವಾಗಿ ಮಂತ್ರ ಸಿದ್ಧಿಯಾದ ನಂತರ ವಿವಿಧ ಕಾಮ್ಯ ಪ್ರಯೋಗಗಳನ್ನು ಮಾಡುವ ಸಾಮರ್ಥ್ಯ ದೊರಕುತ್ತದೆ.

**ಕಾಮ್ಯ ಪ್ರಯೋಗ ವಿಧಾನ**

ಸ್ವಾಂಗುಷ್ಠ ಪ್ರತಿಮಾಂ ಕೃತ್ವಾ ಕಪಿನಾ ಸಿತಭಾನುನಾ ॥ 40 ॥
ಗಣೇಶ ಪ್ರತಿಮಾಂ ರಮ್ಯಾಮುಕ್ತಲಕ್ಷಣಲಕ್ಷಿತಾಮ್ ।
ಪ್ರತಿಷ್ಠಾಪ್ಯ ವಿಧಾನೇನಂ ಮಧುನಾ ಸ್ನಾಪಯೇಚ್ಛಿತಾಮ್ ॥ 41 ॥

ಆರಭ್ಯ ಕೃಷ್ಣಭೂತಾದಿ ಯಾವಚ್ಛು ಕ್ಲಾ ಚತುರ್ದಶಿ ।
ಸಗುಡಂ ಪಾಯಸಂ ತಸ್ಮೈ ನಿವೇದ್ಯ ಪ್ರಜಪೇನ್ಮನುಮ್ ॥ 42 ॥

ಸಹಸ್ರಂ ಪ್ರತ್ಯಹಂ ತಾವತ್ ಜುಹುಯಾತ್ ಸಘೃತೈಸ್ತಿಲೈಃ ।
ಗಣೇಶೋಹಮಿತಿ ಧ್ಯಾಯನ್ನುಚ್ಛಿಷ್ಟೋನಾವೃತೋ ರಹಃ ॥ 43 ॥

ಪಕ್ಷಾದ್ರಾಜ್ಯಮವಾಪ್ನೋತಿ ನೃಪಜೋನ್ಯೋಪಿ ವಾ ನರಃ ।
ಕುಲಾಲಮೃತ್ಸ್ನಾ ಪ್ರತಿಮಾ ಪೂಜಿತೈವಂ ಸುರಾಜ್ಯದಾ ॥ 44 ॥

ವಲ್ಮೀಕಮೃತ್ಕೃತಾ ಲಾಭಮೇವಮಿಷ್ಟಾನ್ ಪ್ರಯಚ್ಛತಿ ।
ಗೌಡಿ ಸೌಭಾಗ್ಯದಾ ಸೈವಂ ಲಾವಣೀ ಕ್ಷೋಭಯೇ ದರೀನ್ ॥ 45 ॥

ವಿನಿಯೋಗ :

ಅಸ್ಯ ಶ್ರೀ ಗಣೇಶಮಂತ್ರಸ್ಯ ಭಾರ್ಗವಋಷಿಃ ಅನುಷ್ಟುಪ್ ಛಂದಃ ಗಣೇಶೋ ದೇವತಾ ವಂ ಬೀಜಂ ಯಂ ಶಕ್ತಿಃ ಅಭೀಷ್ಟ ಸಿದ್ಧ್ಯಯೆ ಜಪೇ ವಿನಿಯೋಗಃ

ಋಷ್ಯಾದಿ ನ್ಯಾಸ :

ಭಾರ್ಗವ ಋಷಯೇ ನಮಃ ಶಿರಸಿ । ಅನುಷ್ಟುಪ್‌ಛಂದಸೇ ನಮಃ ಮುಖೆ । ಗಣೇಶದೇವತಾಯೈ ನಮಃ ಹೃದಿ ।ವಂ ಬೀಜಾಯ ನಮಃ ಗುಹ್ಯೊ । ಯಂ ಶಕ್ತಯೇ ನಮಃ ಪಾದಯೋಃ

ಕರನ್ಯಾಸ ಮತ್ತು ಷಡಂಗನ್ಯಾಸ

ರಾಯಸ್ಪೋಷಸ್ಯ ಅಂಗುಷ್ಠಾಭ್ಯಾಂ ನಮಃ । ದದಿತಾ ತರ್ಜನೀಭ್ಯಾಂ ನಮಃ । ನಿಧಿದೊ ರತ್ನಧಾತುಮಾನ್ ಮಧ್ಯಮಾಭ್ಯಾಂ ನಮಃ । ರಕ್ಷೋಹಣೋ ಅನಾಮಿಕಾಭ್ಯಾಂ ನಮಃ । ಬಲಗಹನೊ ಕನಿಷ್ಠಿಕಾಭ್ಯಾಂ ನಮಃ । ವಕ್ರತುಂಡಾಯ ಹುಂ ಕರತಲಕರ ಪೃಷ್ಠಾಭ್ಯಾಂ ನಮಃ

ನಂತರ "ಉದ್ಯದ್ದಿನೇಶ್ವರ ರುಚಿಂ" ಶ್ಲೋಕ (2.6) ದ ಮೂಲಕ ಧ್ಯಾನ ಮಾಡಬೇಕು.

ಷಡಕ್ಷರೋಪರೋಮಂತ್ರ

ಪದ್ಮನಾಭಯುತೊ ಭಾನುರ್ಮೇಧಾ ಸದ್ಯ ಸಮನ್ವಿತಾ ॥ 29 ॥
ಲಕಾವನಂತ ಮಾರೂಢೌ ವಾಯುಃ ಪಾವಕ ಮೋಹಿನಿ ।
ಷಡಕ್ಷರೋಯಮಾದಿಷ್ಟೊ ಭಜತಾಮಿಷ್ಟದೊ ಮನುಃ ॥ 30 ॥
ಪೂರ್ವವತ್ ಸರ್ವಮೇತಸ್ಯ ಸಮಾರಾಧನ ಮೀರೀತಮ್ ।

ಪದ್ಮನಾಭ (ಐ) ದಿಂದ ಯುಕ್ತ ಭಾನು ಮ (ಗೆ), ಸದ್ಯ (ಜ) ಸಹಿತ ಧ (ಧೊ), ದೀರ್ಘ ಆಕಾರ ಸಹಿತ ಲ್ ಮತ್ತು ಕಕಾರ (ಕ್ಲಾ), ನಂತರ ವಾಯು (ಯ) ಮತ್ತು ಅಂತದಲ್ಲಿ ಪಾವಕಗೇಹಿನಿ (ಸ್ವಾಹಾ) ಜೋಡಿಸುವುದರಿಂದ ನಿಷ್ಪನ್ನವಾಗುತ್ತದೆ. ಈ ಷಡಕ್ಷರ ಮಂತ್ರವು ಸವಾಭಿಷ್ಟಪ್ರದಾಯಕವಾಗಿದೆ. ಈ ಮಂತ್ರದ ಪುರಶ್ಚರಣ, ಅರ್ಘ್ಯ ಮತ್ತು ಹೋಮಾದಿ ವಿಧಾನಗಳು ಈ ಹಿಂದೆ ವಿವರಿಸಿದಂತೆಯೆ ಇರುತ್ತವೆ.





ನವಾಕ್ಷರ ಮಂತ್ರ

ಲಕುಲೀದ್ಯತಮಾರೂಢೌ ಭೃಗುತೌ ಲೋಹಿತಃ ಸದೃಕ್ ॥ 31 ॥
ವಕಃ ಸದೀರ್ಘಷ್ಟಃ ಸಾಕ್ಷಿರ್ಲಿಖೇನ್ಮಂತ್ರಃ ಶಿರೋಂತಿಮಃ ।
ನವಾಕ್ಷರೊ ಮನುಸ್ತ್ವಾಸ್ಯ ಕಂಕೋಲಃ ಪರಿಕೀರ್ತಿತಃ ॥ 32 ॥
ವಿರಾಟಛಂದೋ ದೇವತಾ ತು ಸ್ಯಾದ್ದೈ ಚೋಚ್ಛಿಷ್ಟನಾಯಕಃ ।

ಲಕುಲಿ (ಹ) ಇ ದ ಜೊತೆಗೆ ಭೃಗು (ಸ) ಮತ್ತು ತ ಅರ್ಥಾತ್ 'ಸ್ತಿ' ಸದೃಕ 'ಇ' ದ ಸಹಿತ ಲೋಹಿತ 'ಪ' ಅರ್ಥಾತ್ ಪಿ, ದೀರ್ಘ ಸಹಿತ ವಕ (ಶ) ಅರ್ಥಾತ್ ಶಾ, ಸಾಕ್ಷಿ ಇ ದಿಂದ ಯುಕ್ತ ಚ (ಚಿ) ನಂತರ ಅಂತದಲ್ಲಿ ಶಿರ (ಸ್ವಾಹಾ) ಜೋಡಿಸುವುದರಿಂದ ನವಾಕ್ಷರ ಮಂತ್ರವು ನಿಷ್ಪನ್ನವಾಗುತ್ತದೆ.

"ಓಂ ಹಸ್ತಿ ಪಿಶಾಚಿ ಲಿಖೆ ಸ್ವಾಹಾ"

ಈ ಮಂತ್ರಕ್ಕೆ ಕಂಕೋಲ ಋಷಿ, ವಿರಾಟ ಛಂದ, ಉಚ್ಛಿಷ್ಟ ಗಣಪತಿ ದೇವತಾ ಇರುತ್ತಾರೆ.

ಪಂಚಾಂಗ ನ್ಯಾಸ

ದ್ವಾಭ್ಯಾಂ ತ್ರಿಭಿರ್ದ್ವಯೇನಾಥ ದ್ವಾಭ್ಯಾಂ ಸಕಲಮಂತ್ರತಃ ॥ 33 ॥
ಪಂಚಾಂಗನ್ಯಾಸ್ಯ ಕುರ್ವೀತ ಧ್ಯಾಯೇತ್ತಂ ಶಶಿಶೇಖರಮ್ ।

ಎರಡು, ಮೂರು, ಎರಡು, ಎರಡು ಅಕ್ಷರಗಳಿಂದ ನ್ಯಾಸ ಮಾಡಿದ ನಂತರ ಪಂಚಾಂಗನ್ಯಾಸ ಮಾಡಬೇಕು. ಮತ್ತು ನಂತರ ಉಚ್ಛಿಷ್ಟ ಗಣಪತಿಯ ಪೂಜೆ ಮಾಡಬೇಕು.

ವಿನಿಯೋಗ : ಅಸ್ಯೋಚ್ಛಿಷ್ಟ ಗಣಪತಿ ಮಂತ್ರಸ್ಯ ಕಂಕೋಲ ಋಷಿ ವಿರಾಟ ಛಂದಃ ಉಚ್ಛಿಷ್ಟ ಗಣಪತಿ ದೇವತಾ ಸರ್ವಾಭಿಷ್ಟ ಸಿದ್ಧ್ಯರ್ಥೆ ಜಪೆ ವಿನಿಯೋಗಃ

ಷಡಂಗನ್ಯಾಸ : ಓಂ ಹಸ್ತಿ ಹೃದಯಾಯ ನಮಃ । ಓಂ ಪಿಶಾಚಿ ಶಿರಸೆ ಸ್ವಾಹಾ । ಓಂ ಲಿಖೆ ಶಿಖಾಯೈ ವೌಷಟ್ । ಓಂ ಸ್ವಾಹಾ ಕವಚಾಯ ಹುಮ್ । ಓಂ ಹಸ್ತಿ ಪಿಶಾಚಿ ಲಿಖೆ ಸ್ವಾಹಾ ಅಸ್ತ್ರಾಯ ಫಟ್

ಈ ಪ್ರಕಾರ ಪಂಚಾಂಗನ್ಯಾಸ ಮಾಡಿದ ನಂತರ ಉಚ್ಛಿಷ್ಟ ಗಣಪತಿಯ ಧ್ಯಾನ ಮಾಡಬೇಕು.

ಉಚ್ಛಿಷ್ಟ ಗಣಪತಿ ಧ್ಯಾನ

ಚತುರ್ಭುಜಂ ರಕ್ತತನುಂ ತ್ರಿನೇತ್ರಂ ಪಾಶಾಂಕುಶೌ ಮೋದಕಪಾತ್ರದಂತೌ।
ಕರೆರ್ದಧಾನಂ ಸರಸೀರುಹಸ್ಥಮನ್ಮತ್ತ ಮುಚ್ಛಿಷ್ಟ ಗಣೇಶ ಮೀಡೆ ॥34 ॥

ಈ ಪ್ರಕಾರ ಪಂಚಾವರಣ ಪೂಜೆ ಮಾಡಿದ ನಂತರ ಆರು ಲಕ್ಷ ಜಪ, ದಶಾಂಶ ಹವನ, ದಶಾಂಶ ಅಭಿಷೇಕ ಮತ್ತು ದಶಾಂಶ ಬ್ರಾಹ್ಮಣ ಭೋಜನ ಮಾಡುವುದರಿಂದ ಪುರಶ್ಚರಣ ಪೂರ್ಣವಾಗುತ್ತದೆ ಮತ್ತು ಮಂತ್ರಸಿದ್ಧಿಯಾಗುತ್ತದೆ.

ಕಾಮ್ಯ ಪ್ರಯೋಗ ಸಾಧನೆ

ತತಃ ಸಿದ್ಧೆ ಮನೌ ಕಾಮ್ಯಾನ್ ಪ್ರಯೋಗಾನ್ ಸಾಧಯೇನ್ನಿಜಾನ್ ।
ಬ್ರಹ್ಮಚರ್ಯರತೋ ಮಂತ್ರಿ ಜಪೇದ್ ರವಿಸಹಸ್ರಕಮ್ ॥ 19 ॥
ಷಣ್ಮಾಸಮಧ್ಯಾದ್ದಾರಿದ್ರ್ಯಂ ನಾಶಯತ್ಯೇವ ನಿಶ್ಚಿತಮ್ ।
ಚತುರ್ಥ್ಯಾದಿ ಚತುರ್ಥ್ಯಂತಂ ಜಪೇದ್ದಶಾಸಹಸ್ರಕಮ್ ॥ 20 ॥
ಪ್ರತ್ಯಹಂ ಜುಹುಯಾದಷ್ಟೋತ್ತರಂ ಶತಮತಂದ್ರಿತಃ ।
ಪೂರ್ವೋಕ್ತಂ ಫಲಮಾಪ್ನೋತಿ ಷಣ್ಮಾಸಾದ್ ಭಕ್ತಿತತ್ಪರಃ ॥ 21 ॥
ಆಜ್ಯಾಕ್ತಾನ್ನಸ್ಯ ಹೋಮೇನ ಭವೇದ್ಧನ ಸಮೃದ್ಧಿಮಾನ್ ।
ಪೃಥುಕೈರ್ನಾರಿಕೇಲೈರ್ವಾ ಮರೀಚೈರ್ವಾ ಸಹಸ್ರಕಮ್ ॥ 22 ॥
ಪ್ರತ್ಯಹಂ ಜುಹ್ವತೋ ಮಾಸಾಜ್ಜಾಯತೇ ಧನಸಂಚಯಃ ।
ಜೀರಸಿಂಧುಮರೀಚಾಕ್ತೈರಷ್ಟದ್ರವ್ಯೈಃ ಸಹಸ್ರಕಮ್ ॥ 23 ॥
ಜುಹ್ವಂಪ್ರತಿದಿನಂ ಪಕ್ಷಾತ್ ಸ್ಯಾತ್ ಕುಬೇರ ಇವಾರ್ಥವಾನ್ ।
ಚತುಃ ಶತಂ ಚತುಶ್ಚತ್ವಾರಿಂಶದಾಢ್ಯಂ ದಿನೇ ದಿನೇ ॥ 24 ॥
ತರ್ಪಯೇನ ಮೂಲಮಂತ್ರೇಣ ಮಂಡಲಾದಿಷ್ಟಮಾಪ್ನುಯಾತ್ ।

ಮಂತ್ರ ಸಿದ್ಧಿ ಪ್ರಾಪ್ತವಾದ ನಂತರ ಕಾಮ್ಯ ಪ್ರಯೋಗವನ್ನು ಮಾಡಬೇಕು. ಸಾಧಕನು ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತ ಪ್ರತಿದಿನ ಹನ್ನೆರಡು ಸಾವಿರ ಮಂತ್ರಗಳನ್ನು ಜಪಿಸಿದರೆ ಆರು ತಿಂಗಳಲ್ಲಿ ಅವನ ದಾರಿದ್ರ್ಯವು ನಿಶ್ಚಿತ ರೂಪದಲ್ಲಿ ದೂರವಾಗುತ್ತದೆ. ಒಂದು ಚತುರ್ಥಿಯಿಂದ ಇನ್ನೊಂದು ಚತುರ್ಥಿಯವರೆಗೆ ಪ್ರತಿದಿನ ಹತ್ತು ಸಾವಿರ ಜಪ ಮಾಡಬೇಕು. ಮತ್ತು ಏಕಾಗ್ರಚಿತ್ತದಿಂದ ಪ್ರತಿದಿನ ಒಂದು ನೂರಾ ಎಂಟು ಆಹುತಿಗಳನ್ನು ಕೊಡಬೇಕು. ಈ ಪ್ರಕಾರ ಭಕ್ತಿಪೂರ್ವಕವಾಗಿ ಸಾಧನೆ ಮಾಡುವುದರಿಂದ ಈ ಮೊದಲು ಹೇಳಿದಂತೆ ಆರು ತಿಂಗಳಲ್ಲಿ ಅವರ ದಾರಿದ್ರ್ಯವು ನಾಶವಾಗುವುದು.

ತುಪ್ಪ ಮಿಶ್ರಿತ ಅನ್ನದ ಆಹುತಿಯನ್ನು ಕೊಡುವುದರಿಂದ ಧನ-ಧಾನ್ಯ ಸಮೃದ್ಧಿಯಾಗುತ್ತದೆ. ಚಿವುಡಾ (ಅವಲಕ್ಕಿ) ಅಥವಾ ತೆಂಗಿನಕಾಯಿ ಅಥವಾ ಮೆಣಸಿನಕಾಯಿಯಿಂದ ಪ್ರತಿದಿನ ಒಂದು ಸಾವಿರ ಆಹುತಿ ಕೊಡುವುದರಿಂದ





ಒಂದು ತಿಂಗಳೊಳಗೆ ಅಪಾರ ಸಂಪತ್ತು ದೊರೆಯುತ್ತದೆ. ಜೀರಿಗೆ, ಸೈಂಧವ ಲವಣ ಮತ್ತು ಕರಿಮೆಣಸು ಮಿಶ್ರಿತ ಅಷ್ಟದ್ರವ್ಯಗಳಿಂದ ಪ್ರತಿದಿನ ಒಂದು ಸಾವಿರ ಆಹುತಿ ಕೊಡುವುದರಿಂದ ವ್ಯಕ್ತಿಯು ಒಂದೇ ಪಕ್ಷ (ಹದಿನೈದು ದಿವಸ) ದಲ್ಲಿ ಕುಬೇರ ಸಮಾನ ಶ್ರೀಮಂತನಾಗುತ್ತಾನೆ. ಪ್ರತಿನಿತ್ಯ ಮೂಲಮಂತ್ರವನ್ನು 444 ಬಾರಿ ಜಪಿಸುವುದರಿಂದ ಮನೋವಾಂಛಿತ ಫಲಗಳು ಪ್ರಾಪ್ತವಾಗುತ್ತವೆ.

ನಿಧಿ ಪ್ರದಾಯಕ ಮಂತ್ರ

ಅಥ ಮಂತ್ರಾಂತರಂ ವಕ್ಷೆ ಸಾಧಕಾನಾಂ ನಿಧಿಪ್ರದಮ್ ॥ 25 ॥
ರಾಯಸ್ಪೋಷಪದ್ಯಗುರ್ಯಾಧ್ಯೋ ದದಿತಾಮೇಷಸಾತ್ಪತೌ ।
ಸದ್ಭೌ ದೋರತ್ನಧಾತುಮಾನ್ ರಕ್ಷೊ ಗಗನಂ ರತಿಃ ॥ 26 ॥
ಸಸಧ್ಯಾ ಬಲಶಾರ್ಂಗಿ ಖಂ ನೋಷಡಕ್ಷರ ಸಂಯುತಃ ।

'ರಾಯಸ್ಪೋಷ' ಶಬ್ದದ ಮುಂದೆ 'ಯ' ದಿಂದ ಯುಕ್ತನಾದ ಈಕಾರಯುಕ್ತ ಮೇಷ "ನಿ", ಈಕಾರಯುಕ್ತ ಧ (ಧಿ) (ನಿಧಿ) ತಪಶ್ಚಾತ್ 'ದೋ ರತ್ನಧಾತುಮಾನ್ ರಕ್ಷೊ' ನಂತರ ಗಗನ (ಹ) ಸದ್ಯ (ಓ) ದಿಂದ ಯುಕ್ತ ರತಿ (ಣ) ಅರ್ಥಾತ್ ಹಣೊ. ನಂತರ ಬಲ ಮತ್ತು ಶಾಂಗಿ (ಗ), ಖಂ (ಹ), ನಂತರ 'ನೋ', ಅಂತದಲ್ಲಿ 'ವಕ್ರತುಂಡಾಯ ಹುಮ್' (ಷಡಕ್ಷರ ಮಂತ್ರ) ಜೋಡಿಸುವುದರಿಂದ 31 ಅಕ್ಷರಗಳ ಮನೋವಾಂಛಿತ ಫಲದಾಯಕವಾದ ಮಂತ್ರ ಸಿದ್ಧವಾಗುತ್ತದೆ.

ಮಂತ್ರ :

ರಾಯಸ್ಪೋಷಸ್ಯ ದದಿತಾ ನಿಧದೊ ರತ್ನಧಾತುಮಾನ್ ।
ರಕ್ಷೋಹಣೊ ಬಲಗಹನೊ ವಕ್ರತುಂಡಾಯ ಹುಮ್ ।
ಏಕತ್ರಿಂಶದ್ವರ್ಣಯುಕ್ತೊ ಮಂತ್ರೋಭಿಷ್ಟ ಪ್ರದಾಯಕಃ ॥27॥

ನಾಯಕೈಸ್ತ್ರಿಭಿರಷ್ಟಾಭಿಶ್ಚತುರ್ಭಿಃ ಪಂಚಭಿ ರಕ್ಷೈಃ ।
ಮಂತ್ರೋತ್ಥೈಃ ಕ್ರಮಾದ್ವರ್ಣೈಃ ಷಡಂಗಃ ಸಮಿರೀರಿತಮ್ ॥ 28 ॥
ಋಷ್ಯಾದ್ಯರ್ಚಾಪ್ರಯೋಗಾಃ ಸ್ಯುಃ ಪೂರ್ವವನ್ನಿಧಿದೊ ಹಾಯಮ್ ।

ಈ ಮಂತ್ರದ 5, 3, 8, 4, 5 ಮತ್ತು ಷಡಕ್ಷರಗಳಿಂದ ಷಡಂಗನ್ಯಾಸ ಮಾಡಬೇಕು. ಈ ಮಂತ್ರದ ಋಷಿ (ಭಾರ್ಗವ) ದೇವತಾ (ವಿಘ್ನೇಶೊ) ಛಂದ (ಅನುಷ್ಟುಪ್) ಮತ್ತು ಪೂಜೆಯ ವಿಧಾನ ಈ ಮೊದಲಿನಂತೆ ಇರುತ್ತದೆ. ಈ ಮಂತ್ರವು ನಿಧಿ ಪ್ರದಾಯಕವಾಗಿರುತ್ತದೆ.

ಪೂಜೆ ಮಾಡಿದ ನಂತರ ಮಧ್ಯದಲ್ಲಿ "ವಿಘ್ನನಾಶಿನ್ಯೈ ನಮಃ" ನಂತರ "ಓಂ ಸರ್ವಶಕ್ತಿ ಕಮಲಾಸನಾಯ ನಮಃ" ಮಂತ್ರದಿಂದ ಆಸನ ನೀಡಿ ಮೂಲ ಮಂತ್ರದಿಂದ ಗಣೇಶನ ಮೂರ್ತಿಯ ಕಲ್ಪನೆ ಮಾಡಿ ಅದರಲ್ಲಿ ಗಣೇಶನನ್ನು ಆವಾಹನೆ ಮಾಡಿ ಪಾದ್ಯ ಮತ್ತು ಅರ್ಘ್ಯ ಮುಂತಾದ ಸಮಸ್ತ ಉಪಚಾರಗಳಿಂದ ಪೂಜೆ ಮಾಡಿ ಆವರಣ ಪೂಜೆಯನ್ನು ಮಾಡಬೇಕು.

ಓಂ ಗಾಂ ಹೃದಯಾಯ ನಮಃ ಆಗ್ನಯೆ ।
ಓಂ ಗೀಂ ಶಿರಸೆ ಸ್ವಾಹಾ ನೈಋತ್ಯೆ ।
ಓಂ ಗೂಂ ಶಿಖಾಯೈ ವಷಟ್ ವಾಯುವ್ಯೆ ।
ಓಂ ಗೈಂ ಕವಚಾಯ ಹುಮ್ ಈಶಾನ್ಯೆ ।
ಓಂ ಗೌಂ ನೇತ್ರತ್ರಯಾಯ ವೌಷಟ್ ಅಗ್ರೆ ।
ಓಂ ಗಃ ಅಸ್ತ್ರಾಯ ಫಟ್ ಚತುರ್ದಿಕ್ಷು

ಈ ಮಂತ್ರಗಳಿಂದ ಷಡಂಗ ಪೂಜೆ ಮಾಡಿ ಪುಷ್ಪಗಳನ್ನು ಅರ್ಪಿಸಿ ಮೂಲಮಂತ್ರದ ಉಚ್ಚಾರಣೆ ಮಾಡಿ "ಅಭೀಷ್ಟ ಸಿದ್ಧಿಂ ಮೇ ದೇಹಿ ಶರಣಾಗತವತ್ಸಲ । ಭಕ್ತಯಾ ಸಮರ್ಪಯೆ ತುಭ್ಯಂ ಪ್ರಥಮಾವರಣಾರ್ಚನಮ್" ಎಂದು ಹೇಳಿ ಪುಷ್ಪಗಳನ್ನು ಅರ್ಪಿಸಬೇಕು. ನಂತರ ದ್ವಿತಿಯಾವರಣದಲ್ಲಿ ಎಂಟು ಶಕ್ತಿಗಳನ್ನು ಪೂರ್ವಾದಿ ದಿಶೆಯಿಂದ ಎಂಟು ದಿಕ್ಕುಗಳಲ್ಲಿ ಪೂಜಿಸಬೇಕು.

ಓಂ ವಿದ್ಯಾಯೈ ನಮಃ ಪೂರ್ವೆ ।
ಓಂ ವಿಧಾತ್ರ್ಯೈ ನಮಃ ಆಗ್ನೆಯೆ ।
ಓಂ ಭೋಗದಾಯೈ ನಮಃ ದಕ್ಷಿಣೆ ।
ಓಂ ವಿಘ್ನಘಾತಿನ್ಯೈ ನಮಃ ನೈಋತ್ಯೆ ।
ಓಂ ನಿಧಿ ಪ್ರದೀಪಾಯೈ ನಮಃ ಪಶ್ಚಿಮೆ
ಓಂ ಪಾಪಘ್ನೆ ನಮಃ ವಾಯುವ್ಯೆ ।
ಓಂ ಪುಣ್ಯಾಯೈ ನಮಃ ಸೌಮ್ಯೆ ।
ಓಂ ಶಶಿಪ್ರಭಾಯೈ ನಮಃ ಈಶಾನ್ಯ,

ನಂತರ ಮೂಲಮಂತ್ರದ ಜೊತೆಗೆ "ಅಭೀಷ್ಟ ಸಿದ್ಧಿಂ ಮೇ ದೇಹಿ"........ ದ್ವಿತಿಯಾವರಣಾರ್ಚನಮ್" ಎಂದು ಹೇಳಿ ಪುಷ್ಪಗಳನ್ನು ಸಮರ್ಪಿಸಬೇಕು. ನಂತರ ಅಷ್ಟದಳ ಕಮಲದಲ್ಲಿ –

ಓಂ ವಕ್ರತುಂಡಾಯ ನಮಃ । ಓಂ ಏಕದಂಷ್ಟ್ರಾಯ ನಮಃ । ಓಂ



ಮಹೋದರಾಯ ನಮಃ । ಓಂ ಗಜಾಸ್ಯಾಯ ನಮಃ । ಓಂ ಲಂಬೋದರಾಯ ನಮಃ । ಓಂ ವಿಕಟಾಯ ನಮಃ । ಓಂ ವಿಘ್ನರಾಜಾಯ ನಮಃ । ಓಂ ಧೂಮ್ರವರ್ಣಾಯ ನಮಃ

ಈ ಮಂತ್ರಗಳಿಂದ ವಕ್ರತುಂಡ ಮುಂತಾದವರನ್ನು ಪೂಜಿಸಿ ಮೂಲಮಂತ್ರದ ಜೊತೆಗೆ "ಅಭೀಷ್ಟಸಿದ್ಧಿಂ ಮೆ ದೇಹಿ.....ಯಿಂದ ತೃತಿಯಾವರಣಾರ್ಚನಮ್" ರವೆಗೆ ಮಂತ್ರ ಉಚ್ಚರಿಸುತ್ತ ಪುಷ್ಪಗಳನ್ನು ಸಮರ್ಪಿಸಬೇಕು. ನಂತರ ಅಷ್ಟದಳದ ಅಗ್ರ ಭಾಗದಲ್ಲಿ –

ಓಂ ಇಂದ್ರಾಯ ನಮಃ ಪೂರ್ವೆ ।
ಓಂ ಆಗ್ನಯೆ ನಮಃ ಆಗ್ನಯೆ ।
ಓಂ ಯಮಾಯ ನಮಃ ದಕ್ಷಿಣೆ ।
ಓಂ ನಿಋತಯೆ ನಮಃ ನೈಋತ್ಯೆ ।
ಓಂ ವರುಣಾಯ ನಮಃ ಪಶ್ಚಿಮೆ ।
ಓಂ ವಾಯುವೆ ನಮಃ ವಾಯುವ್ಯೆ ।
ಓಂ ಸೋಮಾಯ ನಮಃ ಉತ್ತರೆ ।
ಓಂ ಈಶಾನಾಯ ನಮಃ ಈಶಾನ್ಯೆ ।
ಓಂ ಬ್ರಹ್ಮಣೆ ನಮಃ ಆಕಾಶೆ ।
ಓಂ ಅನಂತಾಯ ನಮಃ ಪಾತಾಳ

ಈ ಮಂತ್ರಗಳಿಂದ ದಶ ದಿಕ್ಪಾಲರನ್ನು ಪೂಜಿಸಿ ಮೂಲಮಂತ್ರವನ್ನು ಪಠಿಸಿ, "ಅಭಿಷ್ಟ ಸಿದ್ಧಿಂ–ಮೇ–ದೇಹಿ...ಯಿಂದ ಚತುರ್ಥಾವರಣಾರ್ಚನಮ್" ಮಂತ್ರ ಹೇಳುತ್ತ ಪುಷ್ಪಗಳನ್ನು ಅರ್ಪಿಸಬೇಕು. ನಂತರ ಅಷ್ಟದಳದ ಅಗ್ರಭಾಗದ ಅಂತದಲ್ಲಿ–

ಓಂ ವಜ್ರಾಯ ನಮಃ । ಓಂ ಶಕ್ತಯೆ ನಮಃ । ಓಂ ದಂಡಾಯ ನಮಃ । ಓಂ ಖಡ್ಗಾಯ ನಮಃ । ಓಂ ಪಾಶಾಯ ನಮಃ । ಓಂ ಅಂಕುಶಾಯ ನಮಃ । ಓಂ ಗದಾಯೈ ನಮಃ ।

ಓಂ ತ್ರಿಶೂಲಾಯೈ ನಮಃ । ಓಂ ಚಕ್ರಾಯ ನಮಃ । ಓಂ ಪದ್ಮಾಯ ನಮಃ

ಈ ಮಂತ್ರಗಳಿಂದ ದಶದಿಕ್ಪಾಲರ ವಜ್ರಾದಿ ಆಯುಧಗಳನ್ನು ಪೂಜೆ ಮಾಡಿ ಮೂಲಮಂತ್ರದ ಜೊತೆಗೆ "ಅಭೀಷ್ಟ ಸಿದ್ಧಿಂ....ಪಂಚಾವರಣಾರ್ಚನಮ್" ವರೆಗೆ ಮಂತ್ರ ಪಠಿಸುತ್ತ ಪುಷ್ಪಗಳನ್ನು ಅರ್ಪಿಸಬೇಕು.

ವಿನಾಯಕಸ್ಯ ಮಂತ್ರಾಣಾಮೇತಾಃ ಸ್ಯುಃ ಪೀಠಶಕ್ತಯಃ ।
ಸರ್ವಶಕ್ತಿಕಮಾಂತೇ ತು ಲಾಸನಾಯ ಹೃದಂತಿಕಃ ॥ 11 ॥
ಪೀಠಮಂತ್ರಸ್ತದೀಯೇನ ಬೀಜನಾದೌ ಸಮನ್ವಿತಃ ।
ಪ್ರದಾಯಾಸನಮೇತೇನ ಮೂರ್ತಿ ಮೂಲೇನ ಕಲ್ಪಯೇತ್ ॥ 12 ॥
ತಸ್ಯಾಂ ಗಣೇಶಮಾವಾಹ್ಯ ಪೂಜಯೇದಾಸನಾದಿಭಿಃ ।
ಅಭ್ಯರ್ಚ್ಯ ಕುಸುಮೈರೀಶಂ ಕುರ್ಯಾದಾವರಣಾರ್ಚನಮ್ ॥ 13 ॥

ಆಧಾರ ಶಕ್ತಿಯಿಂದ ಪ್ರಾರಂಭಿಸಿ ಪರತತ್ವದ ಪರ್ಯಂತ ಪೀಠದ ಪೂಜೆ ಮಾಡಬೇಕು. ಅದರ ಮೇಲೆ ಎಂಟು ದಿಕ್ಕುಗಳಲ್ಲಿ ಮತ್ತು ಮಧ್ಯದಲ್ಲಿ ನವಶಕ್ತಿಗಳನ್ನು ಪೂಜೆ ಮಾಡಬೇಕು.

ತೀವ್ರಾ, ಚಾಲಿನಿ, ನಂದಾ, ಭೋಗದಾ, ಕಾಮರೂಪಿಣಿ, ಉಗ್ರಾ, ತೇಜೋವತಿ, ಸತ್ಯಾ ಮತ್ತು ವಿಘ್ನನಾಶಿನಿ ಇವುಗಳು ಶ್ರೀ ಗಣೇಶ ಮಂತ್ರದ ನವಶಕ್ತಿಗಳು.

ಪ್ರಾರಂಭದಲ್ಲಿ ಗಣಪತಿಯ ಬೀಜಮಂತ್ರ 'ಗಂ' ಜೋಡಿಸಿ 'ಸರ್ವಶಕ್ತಿಕಮ' ನಂತರ 'ಲಾಸನಾಯ' ಅಂತದಲ್ಲಿ 'ಹೃತ' (ನಮಃ) ಹಚ್ಚುವುದರಿಂದ ಪೀಠ ಮಂತ್ರವಾಗುತ್ತದೆ.-

"ಗಂ ಸರ್ವಶಕ್ತಿ ಕಮಲಾಸನಾಯ ನಮಃ" ಈ ಮಂತ್ರದಿಂದ ಆಸನ ಕೊಟ್ಟು ಮೂಲಮಂತ್ರದಿಂದ ಗಣೇಶನ ಮೂರ್ತಿಯ ಕಲ್ಪನೆ ಮಾಡಬೇಕು. ಆ ಮೂರ್ತಿಯಲ್ಲಿ ಶ್ರೀ ಗಣೇಶನನ್ನು ಆವಾಹನೆ ಮಾಡಿ ಆಸನಾದಿಗಳನ್ನು ಕೊಟ್ಟು ಪುಷ್ಪಗಳಿಂದ ಪೂಜೆ ಮಾಡಿ ಆವರಣ ದೇವತೆಗಳನ್ನು ಪೂಜಿಸಬೇಕು.

ಪಂಚಾವರಣ ಪೂಜಾ ವಿಧಾನ

ಆಗ್ನೇಯಾದಿಷು ಕೋಣೇಷು ಹೃದಯಂ ಚ ಶಿರಃ ಶಿಖಾಮ್
ವರ್ಮಾಭ್ಯರ್ಚ್ಯಾಗ್ರತೋ ನೇತ್ರಂ ದಿಕ್ಷ್ವಸ್ತ್ರಂ ಪೂಜಯೇತ್ ಸುಧೀಃ ॥14॥

ದ್ವಿತೀಯಾವರಣೇ ಪೂಜ್ಯಾಃ ಪ್ರಾಗಾದ್ಯಷ್ಟೌವಶಕ್ತಯಃ ।
ವಿಧ್ಯಾದಿಮಾಂ ವಿಧಾತ್ರಿ ಚ ಭೋಗದಾ ವಿಘ್ನಘಾತಿನಿ ॥15॥

ನಿಧಿಪ್ರದೀಪಾ ಪಾಪಘ್ನಿ ಪುಣ್ಯಾ ಪಶ್ಚಾಚ್ಛಶಿಪ್ರಭಾ ।
ದಲಾಗ್ರೇಷು ವಕ್ರತುಂಡ ಏಕದಂಷ್ಟ್ರೋ ಮಹೋದರಃ ॥16॥

ಗಜಾಸ್ಯಲಂಬೋದರ ಕೌ ವಿಕಟೋ ವಿಘ್ನರಾಜಕಃ ।
ಧೂಮ್ರವರ್ಣಸ್ತದಗ್ರೇಷು ಶಕ್ರಾದ್ಯಾ ಆಯಾಧೈರ್ಯುತಾಃ ॥17॥



ಏವಮಾವರಣೈಃ ಪೂಜ್ಯೋ ಪಂಚಭಿರ್ಗಣನಾಯಕಃ ।
ಪೂರ್ವೋಕ್ತಾ ಚ ಪುರಶ್ಚರ್ಯಾ ಕಾರ್ಯಾ ಮಂತ್ರಸ್ಯ ಸಿದ್ಧಯೆ ॥ 18॥

ಶ್ರೀ ಗಣೇಶ ಪೂಜನ ಯಂತ್ರ



ಪ್ರಥಮಾವರಣ, ಪೂಜೆಯಲ್ಲಿ ಆಗ್ನೇಯದಲ್ಲಿ, "ಗಾಂ ಹೃದಯಾಯ ನಮಃ, ನೈರುತ್ಯದಲ್ಲಿ, "ಗೀಂ ಶಿರಸೆ ಸ್ವಾಹಾ", ವಾಯುವ್ಯದಲ್ಲಿ "ಗೃಂ ಶಿಖಾಯೈ ವಷಟ್", ಮತ್ತು ಈಶಾನ್ಯದಲ್ಲಿ, "ಗೈಂ ಕವಚಾಯ ಹುಮ್" ಮತ್ತು ನಂತರ ಮಧ್ಯದಲ್ಲಿ "ಗೌಂ ನೇತ್ರತ್ರಯಾಯ ವೌಷಟ್' ಮತ್ತು ನಾಲ್ಕೂ ದಿಕ್ಕುಗಳಲ್ಲಿ "ಅಸ್ತ್ರಾಯ ಫಟ್" ಮಂತ್ರಗಳಿಂದ ಷಡಂಗ ಪೂಜೆ ಮಾಡಬೇಕು.

ದ್ವಿತೀಯ ಆವರಣದಲ್ಲಿ ಪೂರ್ವಾದಿ ದಿಶೆಗಳಲ್ಲಿ ಅಷ್ಟ ಶಕ್ತಿಗಳನ್ನು ಪೂಜಿಸಬೇಕು. ವಿದ್ಯಾ, ವಿಧಾತ್ರಿ, ಭೋಗದಾ, ವಿಘ್ನಘಾತಿನಿ, ನಿಧಿಪ್ರದೀಪಾ, ಪಾಪಘ್ನಿ, ಪುಣ್ಯಾ, ಮತ್ತು ಶಶಿಪ್ರಭಾ ಇವು ಗಣಪತಿಯ ಎಂಟು ಶಕ್ತಿಗಳಾಗಿವೆ.

ತೃತೀಯಾವರಣದಲ್ಲಿ ಅಷ್ಟದಲದ ಅಗ್ರಭಾವದಲ್ಲಿ ವಕ್ರ ತುಂಡ, ಏಕದಂಷ್ಟ್ರ, ಮಹೋದರ, ಗಜಾಸ್ಯ, ಲಂಬೋದರ, ವಿಕಟ, ವಿಘ್ನರಾಜ ಮತ್ತು ಧೂಮ್ರವರ್ಣರನ್ನು ಪೂಜಿಸಬೇಕು.

ಚತುರ್ಥಾವರಣದಲ್ಲಿ ಅಷ್ಟದಲದಲ್ಲಿ ಅಗ್ರಭಾಗದಲ್ಲಿ ಇಂದ್ರಾದಿ ದೇವತೆಗಳನ್ನು ಮತ್ತು ಪಂಚಾವರಣದಲ್ಲಿ ಅವುಗಳ ವಜ್ರಾಯುಧ ಮುಂತಾದ ಆಯುಧಗಳನ್ನು ಪೂಜಿಸಬೇಕು. ಈ ಪ್ರಕಾರ ಐದೂ ಆವರಣ ಗಳೊಂದಿಗೆ ಗಣೇಶನ ಪೂಜೆಯನ್ನು ಮಾಡಬೇಕು. ಮಂತ್ರಸಿದ್ಧಿಗಾಗಿ ಪುರಶ್ಚರಣ ಪ್ರಾರಂಭಿಸುವ ಪೂರ್ವದಲ್ಲಿ ಪಂಚಾವರಣ ಪೂಜೆಯನ್ನು ಅವಶ್ಯವಾಗಿ ಮಾಡಬೇಕು.

ಪ್ರಯೋಗ ವಿಧಾನ

ಪೀಠಪೂಜೆ ಮಾಡಿದ ನಂತರ ಅದರ ಮೇಲೆ ಗಣೇಶ ಮಂತ್ರದ ನವಶಕ್ತಿಗಳನ್ನು ಮಂತ್ರಗಳಿಂದ ಪೂಜೆ ಮಾಡಬೇಕು. ಪೂರ್ವ ಆದಿ ಎಂಟು ದಿಶೆಗಳಲ್ಲಿ–

ಓಂ ತೀವ್ರಾಯೈ ನಮಃ । ಓಂ ಚಾಲಿನ್ಯೈ ನಮಃ । ಓಂ ನಂದಾಯೈ ನಮಃ । ಓಂ ಭೋಗದಾಯೈ ನಮಃ । ಓಂ ಕಾಮರೂಪಿಣ್ಯೈ ನಮಃ । ಓಂ ಉಗ್ರಾಯೈ ನಮಃ । ಓಂ ತೇಜೋವತ್ಯೈ ನಮಃ । ಓಂ ಸತ್ಯಾಯೈ ನಮಃ

## ಗಣೇಶ ಷಡಕ್ಷರ ಮಂತ್ರ ಸಾಧನೆ

ಭಾರ್ಗವೋ ಮುನಿರಸ್ಯೋಕ್ತಶ್ಛಂದೋನುಷ್ಟುಬು ದಾಹೃತಃ ।
ವಿಘ್ನೇಶೋ ದೇವತಾ ಬೀಜಂ ವಂ ಶಕ್ತಿರ್ಯಮಿತೀರಿತಮ್ ॥ 3 ॥
ಷಡಕ್ಷರೈಃ ಸವಿಧುಭಿಃ ಪ್ರಣವಾದ್ಯೈರ್ನಮೋಂತ ಕೈಃ ।
ಪ್ರಕುರ್ಯಾಜ್ಜಾತಿ ಸಂಯುಕ್ತೈಃ ಷಡಂಗವಿಧಿಮುತ್ತಮಮ್ ॥ 4 ॥
ಭ್ರೂಮಧ್ಯಕಂಠಹೃದಯ ನಾಭೀಲಿಂಗಪದೇಷು ಚ ।
ಮನೋ ವರ್ಣಾನ್ ಕ್ರಮಾನ್ನ್ಯಸ್ಯ ವ್ಯಾಪಯ್ಯಾಥೋ ಸ್ಮರೇತ್ ಪ್ರಭುಮ್ ॥ 5 ॥

ವಿನಿಯೋಗ : ಈ ಮಂತ್ರದ ಋಷಿ ಭಾರ್ಗವ, ಅನುಷ್ಟುಪ್ ಛಂದ, ದೇವತಾ ವಿಘ್ನೇಶ, 'ವಂ' ಬೀಜ ಮತ್ತು 'ಯಂ' ಶಕ್ತಿ "ಅಸ್ಯ ಶ್ರೀ ಗಣೇಶ ಮಂತ್ರಸ್ಯ" ಭಾರ್ಗವ ಋಷಿಃ ಅನುಷ್ಟುಪ್ ಛಂದಃ ವಿಘ್ನೇಶೋ ದೇವತಾ 'ವಂ'ಬೀಜಂ 'ಯಂ' ಶಕ್ತಿರಾತ್ಮನೋಭಿಷ್ಟ ಸಿದ್ಧ್ಯರ್ಥೇ ಜಪೇ ವಿನಿಯೋಗಃ ।

ಷಡಂಗನ್ಯಾಸ: ಷಡಕ್ಷರ ಮಂತ್ರಗಳ ಮೇಲೆ ಅನುಸ್ವಾರ ಹಚ್ಚಿ ಪ್ರಾರಂಭದಲ್ಲಿ 'ಓಂ' ಮತ್ತು ಅಂತದಲ್ಲಿ 'ನಮಃ' ಜೋಡಿಸಿ ಷಡಂಗನ್ಯಾಸ ಮಾಡಬೇಕು.

ಓಂ ವಂ ನಮಃ ಅಂಗುಷ್ಠಾಭ್ಯಾಂ ನಮಃ । ಓಂ ಕ್ರಂ ನಮಃ ತರ್ಜನೀಭ್ಯಾಂ ನಮಃ । ಓಂ ತುಂ ನಮಃ ಮಧ್ಯಮಾಭ್ಯಾಂ ನಮಃ । ಓಂ ಡಾಂ ನಮಃ ಅನಾಮಿಕಾಭ್ಯಾಂ ನಮಃ । ಓಂ ಯಂ ನಮಃ ಕನಿಷ್ಠಿಕಾಭ್ಯಾಂ ನಮಃ । ಓಂ ಹುಂ ನಮಃ ಕರತಲಕರ ಪೃಷ್ಠಾಭ್ಯಾಂ ನಮಃ

ಈ ಪ್ರಕಾರ ಹೃದಯ, ಶಿರ, ಶಿಖಾ, ಕವಚ, ನೇತ್ರತ್ರಯ ಮತ್ತು ಅಸ್ತ್ರಾಯ ಫಟ್‌ದಿಂದ ಷಡಂಗನ್ಯಾಸ ಮಾಡಬೇಕು.

ಸರ್ವಾಂಗನ್ಯಾಸ :

ಓಂ ವಂ ನಮಃ ಭ್ರೂಮಧ್ಯೆ । ಓಂ ಕ್ರಂ ನಮಃ ಕಂಠೆ । ಓಂ ತುಂ ನಮಃ ಹೃದಯೆ । ಓಂ ಡಾಂ ನಮಃ ನಾಭೌ । ಓಂ ಯಂ ನಮಃ ಲಿಂಗೆ । ಓಂ ಹುಮ್ ನಮಃ ಪಾದಯೊ । ಓಂ ವಕ್ರತುಂಡಾಯ ಹುಮ್ ಸರ್ವಾಂಗೆ

ಈ ಪ್ರಕಾರ ಭ್ರೂಮಧ್ಯ, ಕಂಠ, ಹೃದಯ, ನಾಭಿ, ಲಿಂಗ ಮತ್ತು ಪಾದಗಳಲ್ಲಿ ಕ್ರಮವಾಗಿ ಈ ಮಂತ್ರಾಕ್ಷರಗಳಿಂದ ನ್ಯಾಸ ಮಾಡಿ ಸಂಪೂರ್ಣ ಮಂತ್ರದಿಂದ ಪೂರ್ತಿ ಶರೀರದಲ್ಲಿ ನ್ಯಾಸ ಮಾಡಬೇಕು.





### ಗಣೇಶ ಧ್ಯಾನ

ಉಧದ್ದಿನೇಶ್ವರರುಚಿಂ ನಿಜಹಸ್ತಪದ್ಮೈಃ ।
ಪಾಶಾಂಕುಶಾಭಯವರಾನ್ ದಧತಂ ಗಜಾಸ್ಯಮ್ ॥ 6 ॥
ರಕ್ತಾಂಬರಂ ಸಕಲದುಃಖಹರಮ್ ಗಣೇಶಂ ।
ಧ್ಯಾಯೇತ್ ಪ್ರಸನ್ನಮಖಿಲಾಭರಣಾಭಿ ರಾಮಮ್ ॥ 7 ॥

ಯಾರ ಅಂಗ-ಪ್ರತ್ಯಂಗಗಳು ಉದಯಿಸುವ ಸೂರ್ಯನ ಸಮಾನ ರಕ್ತವರ್ಣದ್ದಾಗಿವೆಯೊ, ಯಾರು ತನ್ನ ಎಡಗೈಯಲ್ಲಿ ಪಾಶ ಮತ್ತು ಅಭಯಮುದ್ರಾ ಮತ್ತು ಬಲಗೈಯಲ್ಲಿ ವರದಮುದ್ರಾ ಮತ್ತು ಅಂಕುಶ ಧಾರಣ ಮಾಡಿರುವರೊ, ಯಾರು ಸಮಸ್ತ ದುಃಖಗಳನ್ನು ದೂರ ಮಾಡುವರೊ, ರಕ್ತವಸ್ತ್ರಧಾರಿಯಾಗಿ ಪ್ರಸನ್ನ ಮುಖ ಮತ್ತು ಸಮಸ್ತ ಆಭರಣಗಳಿಂದ ಅಲಂಕೃತನಾಗಿ ಮನೋಹರವಾಗಿ ಕಾಣುತ್ತಿರುವರೋ ಆ ಗಜಾನನ ಗಣೇಶನನ್ನು ಧ್ಯಾನಿಸುತ್ತೇನೆ.

### ಗಣೇಶ ಮಂತ್ರ ಸಿದ್ಧಿ ವಿಧಾನ

ಋತುಲಕ್ಷಂ ಜಪೇನ್ಮಂತ್ರಷ್ಟ ದ್ರವ್ಯೈರ್ದಶಾಂಶತಃ ।
ಜುಹುಯಾನ್ಮಂತ್ರಸಂಸಿದ್ಧ್ಯೆ ವಾಡವಾನ್ ಭೋಜಯೇಚ್ಛುಚೀನ ॥ 8 ॥
ಈಕ್ಷವಃ ಸಕ್ತವೊ ರಂಭಾ ಫಲಾನಿ ಚಿಪಿಟಾಸ್ತಿಲಾಃ ।
ಮೋದಕಾ ನಾರಿಕೇಲಾನಿ ಲಾಜಾದ್ರವ್ಯಾಷ್ಟ ಕೈಸ್ಕೃತಮ್ ॥9 ॥

ಮಂತ್ರ ಪುರಶ್ಚರಣ ವಿಧಾನದಲ್ಲಿ ಈ ಮಂತ್ರದ ಆರು ಲಕ್ಷ ಜಪ ಮಾಡಬೇಕು. ಜಪ ಸಂಖ್ಯೆಯ (6 ಲಕ್ಷದ) ದಶಾಂಶ (ಅರವತ್ತು ಸಾವಿರ) ಸಂಖ್ಯೆಯಲ್ಲಿ ಅಷ್ಟ ದ್ರವ್ಯಗಳಿಂದ ಕಬ್ಬಿನ ಜಲ್ಲೆ, ಹುರಿಗಡಲೆಯ ಹಿಟ್ಟು, ಬಾಳೆಹಣ್ಣು, ಚಪೇಟಾನ್ನ, ತಿಲ, ಮೋದಕ, ತೆಂಗಿನಕಾಯಿ, ಭತ್ತದ ಹೊಟ್ಟುಗಳ ಮಿಶ್ರಣದಿಂದ ಹೋಮ ಮಾಡಬೇಕು. ನಂತರ ಮಂತ್ರದ ಫಲ ಪ್ರಾಪ್ತಿಗಾಗಿ ಸಂಸ್ಕಾರವಂತ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

### ಪೀಠ ಪೂಜಾ ವಿಧಾನ

ಪೀಠಮಾಧಾರಶಕ್ತ್ಯಾದಿಪರತತ್ವಾಂತ ಮರ್ಚಯೇತ್ ।
ತತ್ರಾಷ್ಟದಿಕ್ಷು ಮಧ್ಯೆ ಚ ಸಂಪೂಜ್ಯಾ ನವಶಕ್ತಯಃ ॥ 9 ॥
ತೀವ್ರಾ ಚ ಚಾಲಿನಿ ನಂದಾ ಭೋಗದಾಕಾಮರೂಪಿಣಿ ।
ಉಗ್ರಾ ತೇಜೋವತಿ ಸತ್ಯಾ ನವಮಿ ವಿಘ್ನನಾಶಿನಿ ॥10 ॥

ತರ್ಪಣ ಮತ್ತು ತರ್ಪಣದ ದಶಾಂಶ ಮಾರ್ಜನ (ಅಭಿಷೇಕ) ಮಾಡಬೇಕು. ಮೂಲಮಂತ್ರದ ನಂತರ ದ್ವಿತೀಯಾಂತ ದೇವತೆಗಳ ನಾಮ, ನಂತರ "ತರ್ಪಯಾಮಿ ನಮಃ" ಹೇಳುತ್ತ ತರ್ಪಣ ಕೊಡಬೇಕು. ಈ ಪ್ರಕಾರ ಅಭಿಷೇಕದಲ್ಲಿ ಮೂಲಮಂತ್ರದ ನಂತರ ದ್ವಿತಿಯಾಂತ ದೇವರ ನಾಮ ಮತ್ತು ಅಂತ್ಯದಲ್ಲಿ "ಋಷಿ ಸಿಂಚಾಮಿ" ಹೇಳುತ್ತ ಅಭಿಷೇಕ ಮಾಡಬೇಕು.

ಗಣಪತಿ ಮಂತ್ರದ ಒಂದು ಲಕ್ಷ ಜಪದ ಪುರಶ್ಚರಣದಲ್ಲಿ ಹತ್ತು ಸಾವಿರ ಹವನ ಸಂಖ್ಯೆ ಮತ್ತು ಒಂದು ಸಾವಿರ ತರ್ಪಣ ಮತ್ತು ನೂರು ಅಭಿಷೇಕ ಮತ್ತು ಬ್ರಾಹ್ಮಣ ಭೋಜನದ ಸಂಖ್ಯೆ ಹತ್ತು ಆಗುತ್ತದೆ. ಇದೇ ಪ್ರಕಾರ ಅನ್ಯ ಅನುಷ್ಠಾನಗಳಲ್ಲಿಯೂ ಕೂಡ ಈ ಕ್ರಮವನ್ನು ಅನುಸರಿಸಬೇಕು.

ಉದಾಹರಣಾರ್ಥ, ಉಚ್ಚಿಷ್ಟ ಗಣಪತಿ ಮಂತ್ರದಲ್ಲಿ –

**"ಓಂ ಹಸ್ತಿ ಪಿಶಾಚಿ ಲಿಖೆ ಸ್ವಾಹಾ ಉಚ್ಚಿಷ್ಟ ಗಣಪತಿಂ ತರ್ಪಯಾಮಿ ನಮಃ"** ಎಂದು ತರ್ಪಣ ಕೊಡಬೇಕು, ಮತ್ತು "ಓಂ ಹಸ್ತಿ ಪಿಶಾಚಿ ಲಿಖೆ ಸ್ವಾಹಾ ಉಚ್ಚಿಷ್ಟ ಗಣಪತಿಮಾಭಿಷಿಂಚಾಮಿ" ಎಂದು ಅಭಿಷೇಕ ಮಾಡಬೇಕು.

ನಂತರ ವಿವಿಧ ಪ್ರಕಾರದ ಪಕ್ವಾನ್ನಗಳನ್ನು ತಯಾರಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇಷ್ಟದೇವತಾ ಸ್ವರೂಪವಾಗಿ ಆಗಮಿಸಿದ ಬ್ರಾಹ್ಮಣರ ಪೂಜೆ ಮಾಡಿ, ದಕ್ಷಿಣೆ ಕೊಡಬೇಕು. ಈ ಪ್ರಕಾರ ಬ್ರಾಹ್ಮಣರನ್ನು ಆರಾಧಿಸುವುದರಿಂದ ಅನುಷ್ಠಾನದಲ್ಲಿ ಉಂಟಾಗುವ ನ್ಯೂನತೆಗಳು ದೂರವಾಗಿ ದೇವತೆಗಳು ಪ್ರಸನ್ನರಾಗುತ್ತಾರೆ ಮತ್ತು ಸಾಧಕರ ಮನೋರಥ ಸಿದ್ಧಿಯಾಗುತ್ತದೆ.

|| ಈ ಪ್ರಕಾರ ಶ್ರೀಮನ್ಮಹೀಧರ ವಿರಚಿತ
ಮಂತ್ರಮಹೋದಧಿಯ ಪ್ರಥಮ ತರಂಗ ಸಂಪೂರ್ಣವು||







# || ದ್ವಿತೀಯ ತರಂಗ ||



## ಸರ್ವಾಭಿಷ್ಟಪ್ರದಾಯಕ ಗಣೇಶ ಮಂತ್ರಗಳು

ಗಣೇಶಸ್ಯ ಮನೂನ್ ವಕ್ಷ್ಯೆ ಸರ್ವಾಭಿಷ್ಟ ಪ್ರದಾಯಕಾನ್ ।
ಈಗ ಸರ್ವಾಭಿಷ್ಟ ಪ್ರದಾಯಕವಾದ ಗಣೇಶ ಮಂತ್ರವನ್ನು ಹೇಳುತ್ತೇನೆ.

### ಗಣೇಶ ಮಂತ್ರ

ಜಲಂ ಚಕ್ರಿ ವಹ್ನಿಯುತಃ ಕರ್ಣೇಂದ್ವಾಢ್ಯಾ ಚ ಕಾಮಿಕಾ ||1||
ದಾರಕೋ ದೀರ್ಘಸಂಯುಕ್ತೋ ವಾಯುಃ ಕವಚ ಪಶ್ಚಿಮಃ ।
ಷಡಕ್ಷರ ಮಂತ್ರರಾಜೊ ಭಜತಾಮಿಷ್ಟಸಿದ್ಧಿದಃ ||2||

ಜಲ (ವ) ನಂತರ ವಹ್ನಿ (ರ) ಸಹಿತ ಚಕ್ರಿ (ಕ) ಅರ್ಥಾತ್ (ಕ್ರ), ಕರ್ಣೇಂದುವಿನ ಜೊತೆಗೆ ಕಾಮಿಕಾ (ತುಂ), ದೀರ್ಘದಿಂದ ಯುಕ್ತದಾರಕ (ಡ) ಮತ್ತು ವಾಯು (ಯ), ಅಂತ್ಯದಲ್ಲಿ ಕವಚ (ಹುಮ್) ಈ ಪ್ರಕಾರ 6 ಅಕ್ಷರಗಳಿಂದ ಯುಕ್ತ "ವಕ್ರತುಂಡಾಯ ಹುಮ್" ಗಣಪತಿ ಮಂತ್ರವು ಸಾಧಕರಿಗೆ ಇಷ್ಟಸಿದ್ಧಿಪ್ರದಾಯಕವಾಗಿದೆ.

**ಅವಗುಂಠನ ಮುದ್ರಾ :** ಬಲಗೈ ಮುಷ್ಟಿ ಮಾಡಿ ಮಧ್ಯಮ ಮತ್ತು ತರ್ಜನಿ ಬೆರಳುಗಳನ್ನು ಅಧೋಮುಖವಾಗಿ ಮಾಡಿ ನಾಲ್ಕೂ ಕಡೆಗೆ ತಿರುಗಿಸುವುದನ್ನು ಅವಗುಂಠನ ಮುದ್ರಾ ಎನ್ನುತ್ತಾರೆ.

**ಧೇನು ಮುದ್ರಾ :** ಎರಡೂ ಕೈಗಳ ಕನಿಷ್ಠ ಮತ್ತು ಅನಾಮಿಕಾ ಬೆರಳುಗಳನ್ನು ಮಧ್ಯಮದೊಂದಿಗೆ ಸೇರಿಸಿದರೆ ಧೇನು ಮುದ್ರೆಯಾಗುತ್ತದೆ. ಈ ಮುದ್ರೆಯನ್ನು ಅಮೃತೀಕರಣಕ್ಕಾಗಿ ಪ್ರದರ್ಶಿಸಬೇಕು.

**ಮಹಾ ಮುದ್ರಾ :** ಹೆಬ್ಬೆರಳುಗಳನ್ನು ಪರಸ್ಪರ ಸೇರಿಸಿ ಬೆರಳುಗಳನ್ನು ಪಸರಿಸುವುದನ್ನು ಮಹಾಮುದ್ರಾ ಎನ್ನುತ್ತಾರೆ. ಪರಮೀಕರಣ ಮುದ್ರಾ ಎಂತಲೂ ಇದನ್ನು ಕರೆಯುತ್ತಾರೆ.

ಈ ಪ್ರಕಾರ ಮುದ್ರೆಗಳನ್ನು ಪ್ರದರ್ಶಿಸಿದ ನಂತರ ಅಗ್ನಿ ಮತ್ತು ಇಷ್ಟದೇವತೆಗಳ ನಾಡಿಸಂಧಾನಕ್ಕಾಗಿ ಮೂಲಮಂತ್ರದಿಂದ ಹನ್ನೊಂದು ಆಹುತಿಗಳನ್ನು ಕೊಡಬೇಕು.

ಪುನಃ ಇಷ್ಟದೇವತೆಯ ಆವರಣ ದೇವತೆಗಳಿಗೆ ಒಂದೊಂದು ಆಹುತಿ ಕೊಡಬೇಕು. ನಂತರ ಮೂಲಮಂತ್ರದಿಂದ ಹತ್ತು ತುಪ್ಪದ ಆಹುತಿ ಕೊಡಬೇಕು.

ನಂತರ ಆಯಾ ಕಲ್ಪಗಳಲ್ಲಿ ಪ್ರತಿಪಾದಿತ ಆಯಾ ದೇವತೆಗಳ ವಿಶೇಷಗಳ ಹವಿಸ್ಸಿಂದ, ಜಪದ ದಶಾಂಶ ಹೋಮ ಮಾಡಿ ಹೋಮದ ಸಮಾಪನ ಮಾಡಬೇಕು. ನಂತರ ಏಕಾಗ್ರಚಿತ್ತದಿಂದ ಪೂರ್ಣಾಹುತಿ ಮಾಡಬೇಕು.

ಸಾಧಕನು ಹೋಮವಶಿಷ್ಟ ಘೃತದಿಂದ ಸ್ರುಚಿಯನ್ನು ತುಂಬಿ ಅದರಲ್ಲಿ ಪುಷ್ಪ ಮತ್ತು ಫಲಗಳನ್ನಿಟ್ಟು ಸ್ರುವಾದಿಂದ ಮುಚ್ಚಿ, ಎದ್ದುನಿಂತು, ಮೂಲಮಂತ್ರದ ಅಂತ್ಯದಲ್ಲಿ 'ವೌಷಟ್' ಹೇಳುತ್ತ ಪೂರ್ಣಾಹುತಿ ಕೊಡಬೇಕು ಮತ್ತು ಶೇಷ ಹೋಮದ್ರವ್ಯದಿಂದ ಆವರಣ ದೇವತೆಗಳಿಗೆ ಬೇರೆ ಬೇರೆ ಆಹುತಿ ಕೊಡಬೇಕು.

ನಂತರ ಹೃದಯದಲ್ಲಿ ಇಷ್ಟದೇವತೆಯನ್ನು ವಿಸರ್ಜನೆ ಮಾಡಿ, ಅಗ್ನಿಯ ಏಳು ಜಿಹ್ವೆಗಳಿಗೆ ಮತ್ತು ಎಂಟು ಮೂರ್ತಿಗಳಿಗೆ ಆಹುತಿ ಕೊಡಬೇಕು. ನಂತರ ಮಹಾವ್ಯಾಹೃತಿಗಳಿಂದ ಹವನ ಮಾಡಿ ಪ್ರೋಕ್ಷಣಿ ಜಲದಿಂದ ಅಗ್ನಿಯ ಸಿಂಚನ ಮಾಡಬೇಕು.





ಸಂಪ್ರಾರ್ಥ್ಯಾನೇನ ಮನುನಾ ನತ್ವಾಂ ತಂ ವಿಸೃಜೇದ್ಧದಿ ।
ಭೋ ಭೋ ವಹ್ನೇ ಮಹಾಶಕ್ತೆ ಸರ್ವಕರ್ಮ ಪ್ರಸಾಧಕ ॥200॥

ಕರ್ಮಾಂತರೇಪಿ ಸಂಪ್ರಾಪ್ತೆ ಸಾನಿಧ್ಯಂ ಕುರು ಸಾದರಮ್ ।
ವಹ್ನೌ ಪವಿತ್ರೆ ನಿಕ್ಷಿಪ್ಯ ಪ್ರಣೀತಾಂಬು ಭುವಿ ಕ್ಷಿಪೇತ್ ॥201॥

ವಿಧಿಂ ವಿಸೃಜ್ಯ ಸಕುಶಾನ್ ಪರಿಧಿನ್ನಿಕ್ಸೇದ್ಬಸೌ ।
ಏವಂ ಹೋಮಂ ಸಮಾಪ್ಯಾಥ ತರ್ಪಯೇದ್ ದೇವತಾಂ ಜಲೆ ॥202॥

"ಭೋ ಭೋ ವಹ್ನೇ ಮಹಾಶಕ್ತೆ ಸರ್ವಕರ್ಮ ಪ್ರಸಾದಕಃ ।
ಕರ್ಮಾಂತರೇಪಿ ಸಂಪ್ರಾಪ್ತೆ ಸಾನಿಧ್ಯಂ ಕುರು ಸಾದರಮ್ ।

ಈ ಮಂತ್ರದಿಂದ ಅಗ್ನಿದೇವನನ್ನು ಪ್ರಾರ್ಥಿಸಿ ನಮಸ್ಕಾರ ಮಾಡಿದ ನಂತರ ಹೃದಯದಲ್ಲಿ ಅವುಗಳ ವಿಸರ್ಜನೆ ಮಾಡಬೇಕು.

ಪವಿತ್ರಗಳ ರೂಪದ ದರ್ಭೆಗಳನ್ನು ಅಗ್ನಿಯಲ್ಲಿ ಹಾಕಬೇಕು ಮತ್ತು ಪ್ರಣೀತಾದ ಜಲವನ್ನು ನೆಲದ ಮೇಲೆ ಹಾಕಬೇಕು. ನಂತರ ಬ್ರಹ್ಮದೇವರನ್ನು ವಿಸರ್ಜನೆ ಮಾಡಿ ಪರಿಧಿಯಾಕಾರದಲ್ಲಿ ಇರಿಸಿದ ದರ್ಭೆಯನ್ನು ಅಗ್ನಿಯಲ್ಲಿ ಅರ್ಪಿಸಬೇಕು. ಈ ಪ್ರಕಾರ ಹೋಮವನ್ನು ಸಮಾಪ್ತಿಗೊಳಿಸಿ ಜಲದಿಂದ ಇಷ್ಟದೇವತೆಗೆ ತರ್ಪಣ ಕೊಡಬೇಕು.

ತರ್ಪಣ

ಆವಾಹ್ಯಾ ತದ್ದಾಶಾಂಶೇನ ತರ್ಪಣೌಧಿಭಿಷೇಚನಮ್ ।
ತರ್ಪಯಾಮಿ ನಮಶ್ಚೇತಿ ದ್ವಿತೀಯಾಂತೇಷ್ಟ ಪೂರ್ವಕಮ್ ॥203॥

ಮೂಲಾಂತೆ ತು ಪದಂ ದೇಯಂ ಸಿಂಚಾಮಿತ್ಯಾಭಿಷೇಚನೆ ।
ತತ ನಾನಾ ವಿಧೈರನ್ನೈಸ್ತರ್ಪಯೇದ್ ದ್ವಿಜಸತ್ತಮಾನ್ ॥204॥

ಇಷ್ಟರೂಪಾನ್ಯಮಾರಾಧ್ಯ ತೇಭ್ಯೋ ದಧ್ಯಾಚ್ಚ ದಕ್ಷಿಣಾಮ್।
ನ್ಯೂನಂ ಸಂಪೂರ್ಣತಾ ಮೇತಿ ಬ್ರಾಹ್ಮಣಾರಾಧನಾನ್ನೃಣಾಮ್ ॥204॥
ದೇವತಾಶ್ಚ ಪ್ರಸೀದಂತಿ ಸಂಪದ್ಯಂತೆ ಮನೋರಥಾಃ ॥206॥

ನೀರಿನಿಂದ ದೇವತೆಗಳನ್ನು ಆವಾಹನೆ ಮಾಡಿ, ಹೋಮದ ಸಂಖ್ಯೆಯ ದಶಾಂಶ

1. ಓಂ ಸ್ವಾಹಾ
2. ಓಂ ಶ್ರೀಂ ಸ್ವಾಹಾ
3. ಓಂ ಶ್ರೀಂ ಹ್ರೀಂ ಸ್ವಾಹಾ
4. ಓಂ ಶ್ರೀಂ ಹ್ರೀಂ ಕ್ಲೀಂ ಸ್ವಾಹಾ
5. ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಸ್ವಾಹಾ
6. ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಸ್ವಾಹಾ
7. ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೆ ಸ್ವಾಹಾ
8. ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೆ ವರ ವರದ ಸ್ವಾಹಾ
9. ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೆ ವರ ವರದ ಸರ್ವಜನ ಮೇವಶ ಸ್ವಾಹಾ
10. ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೆ ವರ ವರದ ಸರ್ವಜನ ಮೆ ವಶಮಾನಯ ಸ್ವಾಹಾ

ಈ ಹತ್ತು ಮಂತ್ರಗಳಿಂದ ಒಂದೊಂದು ಆಹುತಿ ಕೊಡಬೇಕು. ನಂತರ ಸಂಪೂರ್ಣ ಇಪ್ಪತ್ತೆಂಟು ಮಂತ್ರಾಕ್ಷರಗಳಿಂದ ತುಪ್ಪದ ನಾಲ್ಕು ಆಹುತಿ ಕೊಡಬೇಕು.

ತತ್ರೇಷ್ಟ ದೇವಮಾವಾಹ್ಯಾ ಮುದ್ರಾ ಆವಾಹನಾದಿಕಾಃ ।
ಪ್ರದರ್ಶ್ಯ ವಹ್ನಿರೂಪಸ್ಯ ದೇವಸ್ಯ ವದನೆ ಪುನಃ ||192||
ಮೂಲೇನ ಜುಹುಯಾತ್ ಪಂಚನೇತ್ರಾಸಂಖ್ಯಾ ಘೃತಾಹುತಿಃ ।
ವಕ್ತ್ರೈಕೀಕರಣಂ ತನ್ನಿರ್ದೇವಯೋಸ್ತೇನ ಜಾಯತೆ ||193||
ನಾಡಿಸಂಧಾನಸಿದ್ಧ್ಯರ್ಥ ವಹ್ನಿದೇವತಯೋಸ್ತತಃ ।
ಜುಹುಯಾನ್ಮೂಲಮಂತ್ರೇಣ ರುದ್ರಸಂಖ್ಯಾ ಘೃತಾಹುತಿಃ ||194||
ಇಷ್ಟದೇವಸ್ಯಾವೃತಿನಾಮೆಕೈಕಾ ಮಾಹುತಿಂ ಚರೇತ್ ।
ತತಸ್ತು ಮೂಲಮಂತ್ರೇಣ ದಶಧಾ ಜುಹುಯಾದ್ ಘೃತಮ್ ||195||
ತತಃ ಕಲ್ಪೋಕ್ತದ್ರವ್ಯೇಣ ದಶಾಂಶಂ ಜುಹುಯಾಜ್ಜಪಾತ್ ।
ಹೋಮಂ ಸಮಾಪ್ಯ ಕುರ್ವೀತ ಪೂರ್ಣಾಹುತಿಮನನ್ಯಧೀಃ ||196||
ಹೋಮಾವಶಿಷ್ಟೆನಾಜ್ಯೇನ ಪೂರಯಿತ್ವಾ ಸುಚಂ ಸುಧೀಃ ।
ಪುಷ್ಪಂ ಫಲಂ ನಿದಾಯಾಗ್ರೆ ಸ್ರುವೇಣೌಪ್ಯಾದ್ಯ ತಾಂ ಪುನಃ ||197||
ಉತ್ಥಿತೌ ವೌಷಡಂತೇನ ಮೂಲೇನ ಜುಹುಯಾದ್ ವಶೌ ।
ತದೌದ್ರವ್ಯೇಣೌ ವೃತೀನಾಂ ಚ ಜುಹುಯಾದಾಹುತಿಂ ಪೃಥಕ್ ||198||





ದೇವಂ ವಿಸೃಜ್ಯ ಸ್ವಹೃದಿ ಪಹ್ನೇರ್ಜಿಹ್ವಾಂಗ ಮೂರ್ತಿಭಿಃ ।
ಜುಹುಯಾದ್ ವ್ಯಾಹೃತಿರ್ಹುತ್ವಾ ಪ್ರೋಕ್ಷಿತ್ತಂ ಪ್ರೋಕ್ಷಣಿಜಲೈಃ ||199||

ಪ್ರಥಮದಲ್ಲಿ ಆವಾಹನಾದಿ ಮುದ್ರೆಗಳನ್ನು ಪ್ರದರ್ಶನ ಮಾಡುತ್ತ ಇಷ್ಟದೇವತೆಯನ್ನು ಪೀಠದ ಮೇಲೆ ಆವಾಹನೆ ಮಾಡಬೇಕು. ನಂತರ ಅಗ್ನಿ ಮತ್ತು ಇಷ್ಟದೇವರ ಬಾಯಿಯಲ್ಲಿ ಮೂಲ ಮಂತ್ರದಿಂದ ಇಪ್ಪತ್ತೈದು ತುಪ್ಪದ ಆಹುತಿ ನೀಡಬೇಕು. ಈ ಪ್ರಕಾರ ಅಗ್ನಿ ಮತ್ತು ದೇವತೆಯ ಬಾಯಿಗಳ ಏಕೀಕರಣವಾಗುತ್ತದೆ.

ಇಷ್ಟದೇವತೆಯ ಆವಾಹನೆ ಮಾಡುವಾಗ ಸಾಧಕನು ಈ ಮುದ್ರಾಗಳನ್ನು ಪ್ರದರ್ಶಿಸಬೇಕು.

ಆವಾಹನಿ ಮುದ್ರಾ :

"ಓಂ ಪುಷ್ಪೆ ಪುಷ್ಪೆ ಮಹಾಪುಷ್ಪೆ ಸುಪುಷ್ಪೆ ಪುಷ್ಪಸಂಭವೆ ಪುಷ್ಪಂ ಚ ಯವಕೀರ್ಣ ಹುಂ ಫಟ್ ಸ್ವಾಹಾ" ಈ ಮಂತ್ರವನ್ನು ಹೇಳುತ್ತ ಎರಡೂ ಕೈಗಳ ಅಂಜಲಿ ಮಾಡುವುದನ್ನು ಆವಾಹನಿ ಮುದ್ರಾ ಎನ್ನುತ್ತಾರೆ.

ಆವಾಹನಾ ಮುದ್ರೆ

ಸ್ಥಾಪನಿ ಮುದ್ರಾ : ಆವಾಹನಿ ಮುದ್ರಾವನ್ನು ಅಧೋಮುಖಿಯಾಗಿ ಪ್ರದರ್ಶಿಸುವುದು ಸ್ಥಾಪನಿ ಮುದ್ರಾ ಆಗುತ್ತದೆ.

ಸನ್ನಿಧಾನ ಮುದ್ರಾ : ಎರಡೂ ಕೈಗಳ ಮುಷ್ಟಿ ಕಟ್ಟಿ ಹೆಬ್ಬೆರಳುಗಳನ್ನು ಮೇಲೆತ್ತಿ ಮುಷ್ಟಿಗಳನ್ನು ಪರಸ್ಪರ ಸ್ಪರ್ಶಿಸುವುದರಿಂದ ಸನ್ನಿಧಾನ ಮುದ್ರಾ ಆಗುತ್ತದೆ.

ಸನ್ನಿರೋಧ ಮುದ್ರಾ : ಹೆಬ್ಬೆರಳುಗಳನ್ನು ಒಳಮುಖಮಾಡಿ ಎರಡೂ ಮುಷ್ಟಿಗಳನ್ನು ಪರಸ್ಪರ ಸ್ಪರ್ಶಿಸುವುದರಿಂದ ಸನ್ನಿರೋಧ ಮುದ್ರೆಯಾಗುತ್ತದೆ.

ಸಮ್ಮುಖೀಕರಣ ಮುದ್ರಾ : ಹೃದಯ ಪ್ರದೇಶದಲ್ಲಿ ಅಂಜಲಿ ಮಾಡುವುದರಿಂದ ಸಮ್ಮುಖೀಕರಣ ಮುದ್ರೆಯಾಗುತ್ತದೆ.

ಸಕಲೀಕರಣ ಮುದ್ರಾ : ದೇವತೆಗಳ ಅಂಗಗಳ ಮೇಲೆ ಷಡಂಗನ್ಯಾಸ ಮಾಡುವುದರಿಂದ ಸಕಲೀಕರಣ ಮುದ್ರೆಯಾಗುತ್ತದೆ.

ನಂತರ ಅಗ್ನಿದೇವತೆಯ ಆರು ನಾಮಕರಣಗಳನ್ನು ಮಾಡಬೇಕು. ಗಣೇಶ ಮಂತ್ರದ ಆಹುತಿ ಕೊಡುವುದಿದ್ದರೆ 'ಗಣೇಶಾಗ್ನಿ' ಮತ್ತು ಕೃಷ್ಣ ಮಂತ್ರದ ಆಹುತಿಯಿದ್ದರೆ 'ಕೃಷ್ಣಾಗ್ನಿ' ಈ ಪ್ರಕಾರ ನಾಮಕರಣ ಮಾಡಬೇಕು. ಈ ಪ್ರಕಾರ ನಾಮಕರಣದ ನಂತರ ಅವುಗಳ ಮಾತಾಪಿತಾ, ವಾಗೀಶಿ ಮತ್ತು ವಾಗೀಶರನ್ನು ತಮ್ಮ ಹೃದಯದಲ್ಲಿ ಸ್ಥಾಪಿತಗೊಳಿಸಬೇಕು. ನಂತರ ಅನ್ನಪ್ರಾಶನ, ಚೌಲ, ಉಪನಯನ ಮತ್ತು ವಿವಾಹ ಮುಂತಾದ ಸಂಸ್ಕಾರಗಳನ್ನು, ಸಂಕಲ್ಪ ಮಾಡುತ್ತ ಒಂದೊಂದೆ ಆಹುತಿಯನ್ನು ಕೊಡುತ್ತ ಮಾಡಬೇಕು.

ಏಕೈಕಾ ಮಾಹುತಿಂ ಕುರ್ಯಾದ್ ವಹ್ನೇರ್ಜಿಹ್ವಾಂಗ ಮೂರ್ತಿಭಿಃ ।
ಇಂದ್ರಾದಿಭಿಶ್ಚ ವಜ್ರಾದ್ಯೈರ್ದ್ವಿತಾಂತ್ಯೈರ್ಜುಹುಯಾತ್ತತಃ
ಸ್ರುವೇಣಾಜ್ಯಂ ಚತುರ್ವಾರಂ ನಿದಾಯ ಸ್ರೂಚಿತಾಂ ಸುಧಿಃ ।  ॥184॥
ಅಪಿಧಾಯ ಸ್ರುವೇಣಾತೌ ಗೃಹಣೆಯಾತ್ ಕರಯುಗ್ಮತಃ
ತಿಷ್ಠನ್ಮೂಲಂ ತಯೋರ್ನಾಭೌ ಕೃತ್ವಾಗ್ರೇ ಕುಸುಮಂ ಕ್ಷಿಪೇತ್ ।  ॥185॥
ವಾಮಸ್ತನಾಂತಂ ತನ್ಮೂಲಂ ಕೃತ್ವಾಗ್ನಿ ಮನುನಾ ಸುಧಿಃ
ಜುಹುಯಾದ್ವೌಷಡಂತೇನ ಸಂಪತ್ಯರ್ಥಮತದ್ರಿಂತಃ ।  ॥186॥
ಮಹಾಗಣೇಶ ಮಂತ್ರೇಣ ವ್ಯಸ್ತೇನ ದಶಾಧಾ ತತಃ
ಜುಹುಯಾಚ್ಚ ಸಮಸ್ತೇನ ಚತುರ್ವಾರಂ ಘೃತಾಹುತಿಃ ।  ॥187॥
ಪೂರ್ವಪೂರ್ವಯುತಂ ಬೀಜಾಷ್ಟಕಂ ಬಾಣಾಶ್ಚ ಸಾಯಕಾಃ
ಮುನಯೊ ಮಾರ್ಗಣಾಶ್ಚೇತಿ ವಿಭಾಗಸ್ತನ್ಮನೋಃ ಸ್ಮೃತಃ ।  ॥188॥
ತಾರೊ ಲಕ್ಷ್ಮೀರ್ಗಿರಿಸುತಾ ಕಾಮೊ ಭೂರ್ಗಣನಾಯಕಃ  ॥189॥

ಅಗ್ನಿಯ ಜಿಹ್ವೆಗಳಿಗೆ ಮತ್ತು ಅಗ್ನಿಯ ಮೂರ್ತಿಗಳಿಗೆ ಪೂರ್ವೋಕ್ತ (ಶ್ಲೋಕ 142) ಮಂತ್ರಗಳಿಂದ, ಪ್ರತ್ಯೇಕ ಮಂತ್ರದಲ್ಲಿ ಚತುರ್ಥಿ ವಿಭಕ್ತಿ ಹಚ್ಚಿ ಅಂತದಲ್ಲಿ 'ಸ್ವಾಹಾ' ಉಚ್ಚಾರಣೆ ಮಾಡುತ್ತ, 'ಹಿರಣ್ಯಾಯೈ ಸ್ವಾಹಾ' ಹೇಳುತ್ತ ಒಂದೊಂದು ಆಹುತಿ ನೀಡಬೇಕು. ನಂತರ ಇಂದ್ರಾದಿ ದೇವತೆಗಳು ಮತ್ತು ಅವರ ಆಯುಧಗಳಿಗೆ ಚತುರ್ಥ್ಯಂತ ನಾಮ ಮಂತ್ರಗಳ ಮುಂದೆ 'ಸ್ವಾಹಾ' ಹೇಳುತ್ತ, 'ಇಂದ್ರಾಯ ಸ್ವಾಹಾ, ವಜ್ರಾಯ ಸ್ವಾಹಾ' ಎಂದು ಆಹುತಿ ನೀಡಬೇಕು.

ನಂತರ ಸ್ರುವಾದಿಂದ ಸ್ರುಚಿಯಲ್ಲಿ ನಾಲ್ಕು ಬಾರಿ ತುಪ್ಪ ಹಾಕಿ, ಸ್ರುವಾದಿಂದ





ಸ್ರುಚಿಯನ್ನು ಮುಚ್ಚಿ, ಎದ್ದುನಿಂತು ಎರಡೂ ಕೈಗಳಿಂದ ಹಿಡಿದು ನಾಭಿಯ ಎದುರು ಮಾಡಿ ಅದರ ಮೇಲೆ ಪುಷ್ಪವನ್ನು ಏರಿಸಬೇಕು. ಅವುಗಳ ಮೂಲವನ್ನು ತನ್ನ ಎಡಸ್ತನದ ಹತ್ತಿರ ತಂದು, "ವೈಶ್ವಾನರ ಜಾತವೇದ ಇಹಾವಹ ಲೋಹಿತಾಕ್ಷ ಸರ್ವಕರ್ಮಾಣಿ ಸಾಧಯ ಸ್ವಾಹಾ ವೌಷಟ್" ಅಗ್ನಿ ಮಂತ್ರವನ್ನು ಹೇಳುತ್ತ ಸಂಪತ್ ಪ್ರಾಪ್ತಿಗಾಗಿ ಸಾಧಕನು ಒಂದು ಆಹುತಿಯನ್ನು ನೀಡಬೇಕು.

ನಂತರ ಮಹಾಗಣಪತಿ ಮಂತ್ರದ ಹತ್ತು ವಿಭಾಗಗಳನ್ನು ಮಾಡಿ, ಪ್ರತ್ಯೇಕ ಭಾಗದಿಂದ ಒಂದೊಂದು ಆಹುತಿ ನೀಡಬೇಕು. ಆ ಮೇಲೆ ಗಣಪತಿಯ ಸಮಸ್ತ ಮಂತ್ರವನ್ನು ನಾಲ್ಕು ಬಾರಿ ಪಠಿಸುತ್ತ, ನಾಲ್ಕು ತುಪ್ಪದ ಆಹುತಿಗಳನ್ನು ಕೊಡಬೇಕು. ಮಹಾಗಣಪತಿ ಮಂತ್ರದ ಪ್ರಥಮ ಆರು ಬೀಜಗಳಿಂದ ಆರು ಆಹುತಿ ಮತ್ತು ನಂತರ 5, 5, 7 ಮತ್ತು 5 ಅಕ್ಷರಗಳ ಮಂತ್ರಗಳಿಂದ ಒಂದೊಂದು ಆಹುತಿ ನೀಡುವ ವಿಧಾನವಿದೆ.

ತಾರಾ (ಓಂ), ಲಕ್ಷ್ಮೀ (ಶ್ರೀ), ಗಿರಿಸುತಾ (ಹ್ರೀಂ), ಕಾಮ (ಕ್ಲೀಂ), ಭೂ (ಗ್ಲೌಂ), ಗಣನಾಯಕ (ಗಂ) ನಂತರ ಗಣಪತಿಯ ಚತುರ್ಥ್ಯಂತ (ಗಣಪತಯೆ), ನಂತರ 'ವರ' ಮತ್ತು 'ವರದ' (ವರ ವರದ), ಆಮೇಲೆ 'ಸರ್ವಜನ', ಮುಂದೆ 'ಮೆ ವಶ' ಮುಂದಕ್ಕೆ 'ಮಾನಯ', ನಂತರ 'ಸ್ವಾಹಾ' ಹಚ್ಚುವುದರಿಂದ ಇಪ್ಪತ್ತೆಂಟು ಅಕ್ಷರಗಳ ಮಂತ್ರವಾಗುತ್ತದೆ. ಈ ಪ್ರಕಾರ ಅಗ್ನಿಯ ಸಂಸ್ಕಾರ ಮಾಡಿ ದೇವ-ಪೀಠದ ಪೂಜೆ ಮಾಡಬೇಕು.

ಚತುರ್ಥ್ಯಂತೊ ಗಣಪತಿರ್ವರಾಂತೆ ವರದೇತಿ ಚ ।
ಸರ್ವಾಂತೆ ಜನಮಿತ್ಯುಕ್ತ್ವಾ ಮೆ ವಶಾಂತೆ ತು ಮಾನಯ  ॥190॥
ಸ್ವಾಹಾಂತೊ ವಸುಯುಗ್ಮಾರ್ಣೋ ಮಹಾಗಣಪತೆರ್ಮನುಃ ।
ಏವಂ ಕೃತ್ವಾಗ್ನಿ ಸಂಸ್ಕಾರಂ ಪೀಠಂ ದೇವಸ್ಯ ಪೂಜಯೇತ್  ॥191॥

ಮಹಾಗಣಪತಿಯ ಮಂತ್ರವು ಈ ಪ್ರಕಾರವಿರುತ್ತದೆ -

ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೆ ವರ ವರದ ಸರ್ವಜನಂ ಮೆ ವಶ ಮಾನಯ ಸ್ವಾಹಾ"

ಹವನ ವಿಧಾನ :

ಸಾಧಕರು ಮಂತ್ರದ ಹತ್ತು ಭಾಗಗಳನ್ನು ಮಾಡಿ ಈ ಪ್ರಕಾರ ಹವನ ಮಾಡಬೇಕು-

ನರಸಿಂಹಾಸ್ಯ ದೇವೇಷು ವಹ್ನೇರ್ನೇತ್ರತ್ರಯಂ ಸ್ಮೃತಮ್ ।
ಮಹಾವ್ಯಾಹೃತಿಭಿರ್ವ್ಯಸ್ತಸಮಸ್ತಾಭಿಶ್ಚತುಷ್ಟಯಮ್ ||178||

ಆಹುತೀನಾಂ ತ್ರಯಂ ವಹ್ನಿಮಂತ್ರೇಣೈವ ತತಶ್ಚರೇತ್ ।
ಘೃತಾಹುತಿಭಿರಷ್ಟಾಭಿರೇಕೈಕಾಂ ಸಂಸ್ಕೃತಿಂ ಚರೇತ್ ||179||

ಪುನಃ ಅನಾಮಿಕ ಮತ್ತು ಅಂಗುಷ್ಠ ಎರಡೂ ಬೆರಳುಗಳಿಂದ ಎರಡು ದರ್ಭೆಗಳನ್ನು ತೆಗೆದುಕೊಂಡು 'ಅಸ್ತ್ರಾಯ ಫಟ್' ಮಂತ್ರದಿಂದ ತುಪ್ಪವನ್ನು ಮೂರು ಬಾರಿ ಮೇಲಕ್ಕೆ ಸಿಂಪಡಿಸಬೇಕು. ಇದನ್ನು 'ಉತ್ಪವನ' ಎನ್ನುತ್ತಾರೆ.

'ಓಂ ನಮಃ' ಈ ಮಂತ್ರದಿಂದ ತುಪ್ಪವನ್ನು ಮೂರು ಬಾರಿ ಎದುರಿಗೆ ಸಿಂಪಡಿಸುವುದನ್ನು 'ಸಂಪ್ಲವನ' ಎನ್ನುತ್ತಾರೆ. ನೀರಾಜನಾದಿ ಸಂಸ್ಕಾರಗಳಲ್ಲಿ ಅಗ್ನಿಯಲ್ಲಿ ದರ್ಭೆಯನ್ನು ಹಾಕಬೇಕು.

ಗಂಟು ಹಾಕಿದ ಎರಡು ದರ್ಭೆಗಳನ್ನು ತುಪ್ಪದಲ್ಲಿ ಹಾಕಬೇಕು.ನಂತರ ವಾಮ ಮತ್ತು ದಕ್ಷಿಣ ಎರಡೂ ಸ್ವರಗಳನ್ನು ಧ್ಯಾನಿಸುತ್ತ ಇಡಾ, ಪಿಂಗಳಾ ಮತ್ತು ಸುಷುಮ್ನ ಮೂರೂ ನಾಡಿಗಳನ್ನು ಧ್ಯಾನ ಮಾಡಬೇಕು. ಸಾಧಕನು ಬಲ, ಎಡ ಮತ್ತು ಮಧ್ಯಭಾಗದಲ್ಲಿ 'ಓಂ ನಮಃ' ಮಂತ್ರದಿಂದ ತುಪ್ಪವನ್ನು ತೆಗೆದುಕೊಂಡು "ಓಂ ಅಗ್ನಯೇ ಸ್ವಾಹಾ" "ಓಂ ಸೋಮಾಯ ಸ್ವಾಹಾ" ಈ ಎರಡೂ ಮಂತ್ರಗಳಿಂದ ಅಗ್ನಿಯ ಎರಡು ನೇತ್ರಗಳಲ್ಲಿ ಮತ್ತು "ಓಂ ಅಗ್ನಿಷೋಮಾಭ್ಯಾಂ ಸ್ವಾಹಾ" ಈ ಮಂತ್ರದಿಂದ ಅದರ ಮೂರನೆಯ ನೇತ್ರದಲ್ಲಿ ಆಹುತಿಯನ್ನು ಕೊಡಬೇಕು.

ಆಹುತಿಯ ಶೇಷ ಭಾಗವನ್ನು ಪ್ರಣಿತಾದಲ್ಲಿ ಹಾಕಬೇಕು. ನಂತರ 'ಓಂ ನಮಃ' ಮಂತ್ರದಿಂದ ಬಲಗಡೆಯಿಂದ ತುಪ್ಪವನ್ನು ತೆಗೆದುಕೊಂಡು "ಓಂ ಅಗ್ನಯೇ ಸ್ವಿಷ್ಟಕೃತೇ ಸ್ವಾಹಾ" ಮಂತ್ರದಿಂದ ಒಂದು ಆಹುತಿಯನ್ನು ಅಗ್ನಿದೇವನ ಬಾಯಿಯಲ್ಲಿ ಹಾಕಬೇಕು. ಈ ಪ್ರಕಾರ ಮಾಡುವುದರಿಂದ ನೇತ್ರಗಳ ಉದ್ಘಾಟನೆಯಾಗುತ್ತದೆ.

ನರಸಿಂಹನನ್ನು ಬಿಟ್ಟು ವಿಷ್ಣುವಿನ ಮಂತ್ರಗಳಿಂದ ಎರಡೂ ನೇತ್ರಗಳಲ್ಲಿ ಎರಡು ಆಹುತಿಗಳನ್ನು ಕೊಡಬೇಕು. ನರಸಿಂಹ ಮತ್ತು ಅನ್ಯ ದೇವತೆಗಳ ಮಂತ್ರಗಳ ದಶಾಂಶ ಹೋಮದಲ್ಲಿ ಅಗ್ನಿಯ ಮೂರು ನೇತ್ರಗಳಲ್ಲಿ ಆಹುತಿ ನೀಡಬೇಕು.





ಮಹಾವ್ಯಾಹೃತಿಗಳಿಗೆ ಬೇರೆ ಬೇರೆಯಾಗಿ,

ಓಂ ಭೂಃ ಸ್ವಾಹಾ

ಓಂ ಭುವಃ ಸ್ವಾಹಾ

ಓಂ ಸ್ವಃ ಸ್ವಾಹಾ

ಓಂ ಭೂರ್ಭುವಃ ಸ್ವಃ ಸ್ವಾಹಾ

ಈ ಪ್ರಕಾರ ನಾಲ್ಕು ಆಹುತಿಗಳನ್ನು ಕೊಡಬೇಕು. ನಂತರ ಅಗ್ನಿ ಮಂತ್ರ "ಓಂ ವೈಶ್ವಾನರ ಜಾತವೇದ ಇಹಾವಹ ಲೋಹಿತಾಕ್ಷ ಸರ್ವಕರ್ಮಾಣಿ ಸಾಧಯ ಸ್ವಾಹಾ" ಮಂತ್ರದಿಂದ ಮೂರು ಬಾರಿ ಆಹುತಿ ನೀಡಬೇಕು. ನಂತರ ಒಂದೊಂದು ತುಪ್ಪದ ಆಹುತಿಯಂತೆ ಅಗ್ನಿಯ ಎಂಟು ಸಂಸ್ಕಾರಗಳಿಗೆ ಒಂದೊಂದರಂತೆ ಎಂಟು ಆಹುತಿ ಕೊಡಬೇಕು.

### ಅಗ್ನಿಷ್ಟ ಸಂಸ್ಕಾರ ಕರಣ

ಓಮಸ್ಯಾಗ್ನೇರಮುಂ ಸಂಸ್ಕಾರಂ ಕರೋಮ್ಯಗ್ನಿವಲ್ಲಭಾ ।
ಇತ್ಥಂ ಮನುಂ ಜಪನ್ ಗರ್ಭಾದಾನಂ ಪುಂಸವನಂ ತತ್ ||180||
ಸೀಮಂತೋನ್ನಯನಂ ಜಾತಕರ್ಮ ಕೃತ್ವಾ ತತಶ್ಚರೇತ್ ।
ವಹ್ನೌ ಪಂಚಸಮಿದ್ಹೋಮಾನಾಲಾಪನಯನಂ ವಸೋಃ ||181||
ಕುರ್ಯಾದ್ ದೇವಾಭಿದಾನೇನ ಪೂರ್ವವನ್ನಾಮಶುಷ್ಟಣಃ ।
ನಾಮಾನಂತರಮೇತಸ್ಯ ಪಿತರೌ ಸ್ವೇರ್ಪಯೇದ್ಧ್ವದಿ ||182||
ಅನ್ನಪ್ರಾಶಂ ತಥಾ ಚೌಲೋಪನಯೌ ದಾರಯೋಜನಮ್ ।
ಸಂಸ್ಕಾರಾಃ ಸ್ಯುರ್ವಿವಾಹಾಂತಾ ಮೃತ್ಯುಂತಾ ಕ್ರೂರಕರ್ಮಾಣಿ ||183||

ಪ್ರಪ್ರಥಮವಾಗಿ, "ಓಂ ಅಸ್ಯಾಗ್ನೇ ಗರ್ಭಾದಾನಂ ಸಂಸ್ಕಾರಂ ಕರೋಮಿ ಸ್ವಾಹಾ" ಮಂತ್ರದಿಂದ

1. ಗರ್ಭದಾನ ಸಂಸ್ಕಾರ ಮಾಡಿರಿ. ನಂತರ ಕ್ರಮವಾಗಿ, ಇದೇ ಪ್ರಕಾರ

2. ಪುಂಸವನ 3. ಸೀಮಂತೋನ್ನಯನ 4. ಜಾತಕರ್ಮ

5.ನಾಲಚ್ಛೇದನದಲ್ಲಿ ಸಂಬಂಧಿತ ಅಗ್ನಿ ಮಂತ್ರ ಪಠಿಸುತ್ತ ಪಲಾಶದ ಐದು ಸಮಿಧಾಗಳನ್ನು ಒಂದೊಂದರಂತೆ ಅಗ್ನಿಯಲ್ಲಿ ಆಹುತಿ ಕೊಡಬೇಕು.

ಓಂ ಹಾಂ ಇಚ್ಛಾತ್ಮನೆ ನಮಃ ಸ್ರುವಮೂಲೆ ನ್ಯಸಾಮಿ
ಓಂ ಹ್ರೀಂ ಜ್ಞಾನಾತ್ಮನೆ ನಮಃ ಸ್ರುವ ಮಧ್ಯೆ ನ್ಯಸಾಮಿ
ಓಂ ಹುಂ ಕ್ರಿಯಾತ್ಮನೆ ನಮಃ ಸ್ರುವಾಗ್ರೆ ನ್ಯ ಸಾಮಿ

ಇದೇ ಪ್ರಕಾರ ಸ್ರುಚಿಯಲ್ಲಿಯೂ ಕೂಡ ಈ ಮೂರು ಶಕ್ತಿಗಳ ಮೂಲಕ ನ್ಯಾ... ಮಾಡಬೇಕು.

ಪುನಃ ಸ್ರುಚಿಯ ಹೃದಯದಲ್ಲಿ ಶಕ್ತಿ ಮತ್ತು ಸ್ರುವದಲ್ಲಿ ಶಿವನ ನ್ಯಾಸ ಮಾ... ಮೂರು ರಕ್ಷಾ ಸೂತ್ರಗಳಿಂದ ಅವುಗಳನ್ನು ಕಟ್ಟಿಹಾಕಿ ಪುಷ್ಪಗಳಿಂದ ಅರ್ಚನೆ ಮಾ... ಅವುಗಳನ್ನು ದರ್ಭೆಗಳ ಮೇಲೆ, ಅಗ್ನಿಯ ಎಡಭಾಗದಲ್ಲಿ ಸ್ಥಾಪಿಸಬೇಕು.

**ಕುಶೋಪರಿ ನ್ಯಸೇದ್ದಕ್ಷೆ ತಯೋಃ ಸಂಸ್ಕಾರ ಈರಿತಃ ।**
**ಅಸ್ತ್ರೋಕ್ಷಿತಾಯಾಮಾಜ್ಯಸ್ಯ ಸ್ಥಾಲ್ಯಾಮಾಜ್ಯಂ ವಿನಿಃಕ್ಷಿಪೇತ್ ||166||**
**ವೀಕ್ಷಣಾದಿಕಸಂಸ್ಕಾರ ಸಂಸ್ಕೃತಂ ಮೂಲಮಂತ್ರತಃ ।**
**ಗೋಮುದ್ರಯಾಮೃತಿಕೃತ್ಯ ಷಟ್ ಸಂಸ್ಕಾರಾಸ್ತತಶ್ಚರೇತ್ ||167||**
**ಕುಂಡೋಧೃತೆ ವಾಯುಕೋಣೆ ಸ್ಥಿತೇಂಗಾರೆ ವಿನಿಃಕ್ಷಿಪೇತ್ ।**
**ಹೃದೇತಿ ತಾಪನಂ ಪ್ರೋಕ್ತಂ ದರ್ಭಯುಗ್ಮಂ ಪ್ರದೀಪಿತೇಮ್ ||168||**
**ಆಜ್ಯೆ ಕ್ಷಿಪ್ತ್ವಾ ಹೃದಾವಹ್ನೌ ಪವಿತ್ರೀಕರಣಂ ಕ್ಷಿಪೇತ್ ||169||**
**ಆಜ್ಯಂ ನಿರಾಜಯೇದ್ ದೀಪ್ತದರ್ಭಯುಗ್ಮೇನ ವರ್ಮಣಾ ।**
**ಅಭಿದ್ಯೋತನ ಮುಕ್ತಂ ತದ್ವೀಪ್ತಂ ದರ್ಭತ್ರಯಂ ಘೃತ್ ||170||**
**ದಶರಯೇದಸ್ತ್ರೇಣೋದ್ಯೋತೆ ಗೃಹೀತ್ವಾ ಘೃತ ಪಾತ್ರಕಮ್ ।**
**ಸಂಯೋಜ್ಞಾಗ್ನೌ ತದಂ ಗಾರಾನ್ ಸಲಿಲಂ ಸಂಸ್ಪೃಶೇತ್ ಸುಧಿಃ ||171||**

"ಸ್ರುಚಿ ಹೃದಯೆ ಶಕ್ತಿಂ ನ್ಯಸಾಮಿ ಸ್ರುವೋಪರಿ ಶಂಭುನ್ನಸಾಮಿ" ಸ್ರುವಾ ಮ... ಸ್ರುಚಿಗಳ ಸಂಸ್ಕಾರ ವಿಧಿಯ ನಂತರ ಆಜ್ಯ ಮತ್ತು ಆಜ್ಯಸ್ಥಳಗಳ ಸಂಸ್ಕಾರ ವಿಧಿಯ... ಹೇಳಲಾಗುತ್ತದೆ.

"ಅಸ್ತ್ರಾಯ ಫಟ್" ಮಂತ್ರದಿಂದ ಪ್ರೋಕ್ಷಿತ ಆಜ್ಯ ಸ್ಥಳದಲ್ಲಿ ಆಜ್ಯ (ತುಪ್ಪ... ಸುರಿಯಬೇಕು. ನಂತರ ಈಕ್ಷಣ, ಪ್ರೋಕ್ಷಣ, ತಾಡನ ಮತ್ತು ಸೇಚನ ಮುಂತಾದ ನಾ... ಪ್ರಕಾರದ ಸಂಸ್ಕಾರಗಳಿಂದ ಸಂಸ್ಕರಿಸಿ ಧೇನು ಮುದ್ರೆಯನ್ನು ಪ್ರದರ್ಶಿಸುತ್ತ ಮ... ಮಂತ್ರದಿಂದ ಆದರ ಅವೃತೀಕರಣ ಮಾಡಬೇಕು. ನಂತರ ವಕ್ಷ್ಯಮಾಣ ...





ಸಂಸ್ಕಾರಗಳು – ಅಗ್ನಿ ಸಂಸ್ಥಾಪನ, ತಾಪನ, ಅಭಿದ್ಯೋತನ, ಸೇಚನ ಮತ್ತು ಉಚ್ಚವನ, ಸಂಪ್ಲವನಗಳಿಂದ ಆಜ್ಯಸ್ಥಳದ ಸಂಸ್ಕಾರ ಮಾಡಬೇಕು.

ಕುಂಡದಿಂದ ತೆಗೆದ ಅಗ್ನಿಯ ಮೇಲೆ ಆಜ್ಯಯುಕ್ತ ಥಾಲಿಯನ್ನು ಸ್ಥಾಪನೆ ಮಾಡಬೇಕು. ಇದನ್ನು ಅಗ್ನಿಸ್ಥಾಪನೆ ಎನ್ನುತ್ತಾರೆ.

ನಂತರ 'ಓಂ ನಮಃ' ಮಂತ್ರದಿಂದ ಅದನ್ನು ಕಾಯಿಸುವುದನ್ನು ತಾಪನ ಎನ್ನುತ್ತಾರೆ. ನಂತರ ಎರಡು ದರ್ಭೆಗಳನ್ನು ಉರಿಸಿ ಅದನ್ನು ತುಪ್ಪದಲ್ಲಿ ಹಾಕಬೇಕು ಮತ್ತು ತದನಂತರ ಓಂ ನಮಃ ಮಂತ್ರದಿಂದ ಅಗ್ನಿಯಲ್ಲಿ ಆ ಎರಡೂ ದರ್ಭೆಗಳನ್ನು ಹಾಕಬೇಕು.

ಉರಿಯುತ್ತಿರುವ ದರ್ಭೆಗಳನ್ನು 'ಹುಮ್' ಮಂತ್ರ ಹೇಳುತ್ತ ತುಪ್ಪದ ನಾಲ್ಕೂ ಕಡೆಗೆ ತಿರುಗಿಸಿದರೆ ಅಭಿದ್ಯೋತನ ಎನ್ನುತ್ತಾರೆ. ಪುನಃ ತುಪ್ಪದಲ್ಲಿ ಮೂರು ದರ್ಭೆಗಳನ್ನು ಅದ್ದಿ 'ಅಸ್ತ್ರಾಯ ಫಟ್' ಮಂತ್ರದಿಂದ ಉರಿಸಿ ತುಪ್ಪದ ಥಾಲಿಯಲ್ಲಿ ಹಾಕಬೇಕು. ಪುನಃ ಅಂಗಾರವನ್ನು ಅದೇ ಕುಂಡದಲ್ಲಿ ಹಾಕಬೇಕು. ನಂತರ ಸಾಧಕನು ಜಲವನ್ನು ಸ್ಪರ್ಶಿಸಬೇಕು.

ಅಂಗುಷ್ಠಾನಾಮಿಕಾಭ್ಯಾಂ ತು ದರ್ಭಾವಾದಾಯ ನಿಕ್ಷಿಪೇತ್ ।
ತ್ರಿರಗ್ನಿಸಂಮುಖೀಕೃತ್ಯಾಜ್ಯಮಸ್ತ್ರೇಣೋತ್ಪವನಂ ತ್ರಿಧಮ್ ||172||
ಹೃದಾತ್ಮಸಮ್ಮುಖಂ ತದ್ವದಾಜ್ಯಕ್ಷೇಪಸ್ತು ಸಂಪ್ಲವಃ ।
ನೀರಾಜನಾದಿಸಂಸ್ಕಾರೆಷ್ವಗ್ನೌ ದುರ್ಭಾನ ವಿನಿಃಕ್ಷೇಪೇತ್ ||173||
ದರ್ಭದ್ವಯಂ ಗ್ರಂಥಿಯುತಂ ಘೃತಮಧ್ಯೆ ವಿನಿಃಕ್ಷಿಪೇತ್ ।
ವಾಮದಕ್ಷಿಣಯೋಃ ಪಕ್ಷೌ ಸ್ಮೃತ್ವಾ ನಾಡಿತ್ರಯಂ ಸ್ಮರೇತ್ ॥
ದಕ್ಷಿಣಾದ್ವಾಮತೊ ಮಧ್ಯಾಧೃದಾದಾಯ ಘೃತಂ ಸುಧಿಃ ||174||
ಅಗ್ನಯೋಗ್ನಿಪ್ರಿಯಾ ಸೋಮಾಯಸ್ವಾಹೆತ್ಯಗ್ನಿನೇತ್ರಯೋಃ ।
ಜುಹುಯಾದಗ್ನಿಷೋಮಾಭ್ಯಾಂ ಸ್ವಾಹೇತ್ಯಕ್ಷ್ಣಿ ತೃತಿಯಕೆ ||175||
ಪಾತಯೇದಾಹುತೇಃ ಶೇಷಮಾಹುತಿಗ್ರಹಣಸ್ಥಲೆ ।
ಭೂಯೋ ಹೃದಾದಕ್ಷಭಾಗಾದಾದಾಯಾಜ್ಯಂ ಮುಖೆ ಯಜೇತ್ ||176||
ಅಗ್ನಯೆ ಸ್ವಿಷ್ಟಕೃತೆ ತನ್ನೆತ್ರಾಸ್ಯೋದ್ಘಾಟನಂ ಮತಮ್ ।
ನರಸಿಂಹಂವಿನಾ ವಿಷ್ಣುಂ ಮಂತ್ರನೇತ್ರದ್ವಯಂ ಯಜೇತ್ ||177||

ಹೋಮಕ್ಕೆ ಬೇಕಾಗುವ ದ್ರವ್ಯಗಳು, ತುಪ್ಪ, ಗರಿಕೆ, ಮುತ್ತುಗದ ಐದು ಸಮಿಧಾ ಮತ್ತು ಅನ್ಯ ಉಪಯೋಗಿ ವಸ್ತುಗಳನ್ನು ಇಡಬೇಕು.

**ಕೃತ್ವಾ ಪವಿತ್ರ ಮೂಲೇನ ಪ್ರೋಕ್ಷಿತ್ವಾನಿ ಶುಭಾಂಭಸಾ ।**
**ಉತ್ತಾನಾನಿ ವಿಧಾಯಾಥ ಪ್ರಣೀತಾಂ ಪೂರಯೇಜ್ಜಲೈಃ** ॥157॥
**ತೀರ್ಥ ಮಂತ್ರೇಣ ತೀರ್ಥಾನಿ ಸೃಣ್ಯಾ ತತ್ರಾಹ್ವಯೇತ್ ಸುಧೀಃ ।**
**ಪವಿತ್ರ ಹ್ಯಾಕ್ಷತಾಂಸ್ತತ್ರ ನಿಕ್ಷಿಪ್ಯೋತ್ತವನಂ ಚರೇತ್** ॥158॥
**ಅಥೋದೀಚ್ಯಾಂ ನಿಧಾಯೈತಾಂ ಪ್ರೋಕ್ಷಣ್ಯಾಂ ತಜ್ಜಲಂ ಕ್ಷಿಪೇತ್ ।**
**ಹವನೀಯಂ ದ್ರವ್ಯಜಾತಮುಕ್ಷೆತ್ತೋಯೈಃ ಪವಿತ್ರಗೈಃ** ॥159॥
**ಮೂಲೇನ ಮೂಲಗಾಯತ್ರ್ಯಾ ಯದ್ವಾ ಹೃದಯ ಮಂತ್ರತಃ ।**
**ದಕ್ಷಿಣೆ ಪೀಠಮಾಸಾಧ್ಯ ತತ್ರ ಬ್ರಹ್ಮಣಾ ಮಾಹ್ವಯೇತ್** ॥160॥

ಪವಿತ್ರಗಳನ್ನು ತಯಾರಿಸಿ ಮೂಲಮಂತ್ರದ್ವಾರಾ ಪವಿತ್ರ ಜಲದಿಂದ ಆ ವಸ್ತುಗಳನ್ನು ಪ್ರೋಕ್ಷಣ ಮಾಡಬೇಕು. ನಂತರ ಎಲ್ಲ ಪಾತ್ರೆಗಳನ್ನು ಮೇಲ್ಮುಖವಾಗಿ ಇಟ್ಟುಕೊಂಡು, ಪ್ರಣೀತಾ ಪಾತ್ರೆಯಲ್ಲಿ ನೀರು ತೆಗೆದುಕೊಳ್ಳಬೇಕು. ನಂತರ ತೀರ್ಥ ಮಂತ್ರ -

**ಗಂಗೆ ಚ ಯಮುನೆ ಚೈವ ಗೋದಾವರಿ ಸರಸ್ವತಿ ।**
**ನರ್ಮದೆ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ॥**

ಈ ಮಂತ್ರವನ್ನು ಜಪಿಸುತ್ತ ಅಂಕುಶ ಮುದ್ರಾ ದ್ವಾರಾ ಆ ಜಲದಲ್ಲಿ ತೀರ್ಥಗಳನ್ನು ಆವಾಹನೆ ಮಾಡಬೇಕು. ಎರಡು ದರ್ಭೆಯನ್ನು ಆ ನೀರಿನಲ್ಲಿ ಹಾಕಿ ನೀರನ್ನು ಪವಿತ್ರಗೊಳಿಸಬೇಕು. ನಂತರ ಪ್ರಣೀತಾ ಪಾತ್ರೆಯನ್ನು ಅಗ್ನಿಯ ಉತ್ತರ ಭಾಗದಲ್ಲಿ ಇಟ್ಟು ಅದರ ಜಲವನ್ನು ಪ್ರೋಕ್ಷಣಿ ಪಾತ್ರೆಯಲ್ಲಿ ಹಾಕಬೇಕು. ಈ ಜಲವನ್ನು ಎಲ್ಲ ಹವನ ಸಾಮಗ್ರಿಗಳ ಮೇಲೆ ಪ್ರೋಕ್ಷಣೆ ಮಾಡಬೇಕು.

ಅಗ್ನಿಯ ದಕ್ಷಿಣದಲ್ಲಿ ಪೀಠವನ್ನು ನಿರ್ಮಾಣ ಮಾಡಿ, ಅದರ ಮೇಲೆ ಮೂಲ ಮಂತ್ರದಿಂದ, ಗಾಯತ್ರಿ ಮಂತ್ರದಿಂದ ಅಥವಾ 'ಓಂ ನಮಃ' ಹೃದಯ ಮಂತ್ರದಿಂದ ಬ್ರಹ್ಮದೇವರನ್ನು ಆವಾಹನೆ ಮಾಡಬೇಕು.

**ಅಣಿಮಾದ್ಯಾಃ ಸಿದ್ಧಯೋಷ್ಟೌ ಬ್ರಹ್ಮಣಃ ಪೀಠದೇವತಾಃ ।**
**ತಾರಾ ಹೃತ್ಪೂರ್ವಕೊ ಬ್ರಹ್ಮಾ ಮಂತ್ರೋಸ್ಯ ಪೂಜನೆ** ॥161॥



ಅಣಿಮಾದಿ ಅಷ್ಟಸಿದ್ಧಿಗಳು ಬ್ರಹ್ಮಪೀಠದ ದೇವತೆಗಳು. ತಾರ (ಓಂ) ಮತ್ತು ಹೃದ್ (ನಮಃ), ಆಮೇಲೆ ಬ್ರಹ್ಮ ಪದದಲ್ಲಿ ಚತುರ್ಥಿ ಹಚ್ಚಿ "ಓಂ ನಮೋ ಬ್ರಹ್ಮಣೆ ನಮಃ" ಮಂತ್ರದಿಂದ ಅವುಗಳನ್ನು ಪೂಜಿಸಬೇಕು.

'ಅಣಿಮಾಯೈ ನಮಃ' ಈ ಪ್ರಕಾರ ಸಿದ್ಧಿಗಳನ್ನು ಮಂತ್ರಗಳಿಂದ ಆವಾಹನೆ ಮಾಡಬೇಕು. ಪೂಜೆ ಮಾಡಿ ಪೀಠವನ್ನು ನಿರ್ಮಾಣ ಮಾಡಬೇಕು. ಆ ಮೇಲೆ "ಓಂ ನಮೋ ಬ್ರಹ್ಮಣೆ" ಮಂತ್ರದಿಂದ ಅವುಗಳನ್ನು ಪೂಜಿಸಬೇಕು.

**ಹಸ್ತಾಭ್ಯಾಂ ಸ್ರುಕ್‌ಸ್ರುವೌ ಧೃತ್ವಾ ತಾಪಯೇತ್ತ್ರಿರ್ಥೋಮುಖೌ ।**
**ವಾಮಹಸ್ತೇನ ತೌ ಧೃತ್ವಾ ದರ್ಭೈರ್ದಕ್ಷೇಣ ಮಾರ್ಜಯೇತ್** ॥162॥
**ಸಂಪ್ರೋಕ್ಷ್ಯ ಪ್ರೋಕ್ಷಣೀತೋಯೈಃ ಪ್ರತಪ್ಯ ಪೂರ್ವವತ್ ಪುನಃ ।**
**ನ್ಯಸ್ಯಾಗ್ನೌ ಮಾರ್ಜನಾಂದರ್ಭಾಸ್ತಯೋಃ ಶಕ್ತಿತ್ರಯಂ ನ್ಯಸೇತ್** ॥163॥

ಎರಡೂ ಕೈಗಳಲ್ಲಿ ಸ್ರುವಾ ಮತ್ತು ಸ್ರುಚಿಗಳನ್ನು ತೆಗೆದುಕೊಂಡು ಅಧೋಮುಖವಾಗಿ ಮಾಡಿ ಮೂರು ಬಾರಿ ಅವುಗಳನ್ನು ಅಗ್ನಿಯ ಮೇಲೆ ಕಾಯಿಸಬೇಕು. ನಂತರ ಅವೆರಡನ್ನು ಎಡಗೈಯಲ್ಲಿಟ್ಟುಕೊಂಡು ಬಲಗೈಯಲ್ಲಿ ಕುಶವನ್ನು ತೆಗೆದುಕೊಂಡು ಮಾರ್ಜನ ಮಾಡಬೇಕು. ನಂತರ ಪ್ರಣೀತಾದ ನೀರಿನಿಂದ ಸಿಂಚನ ಮಾಡಿ ಪುನಃ ಮೊದಲಿನಂತೆ ಮೂರು ಬಾರಿ ಅಗ್ನಿಯಲ್ಲಿ ಕಾಯಿಸಿ, ಅಗ್ನಿಯ ಎಡಭಾಗದಲ್ಲಿ ಸ್ಥಾಪನೆ ಮಾಡಬೇಕು. ಮಾರ್ಜನ ಮಾಡಲಾದ ಕುಶಗಳನ್ನು ಅಗ್ನಿಯಲ್ಲಿ ಹಾಕಬೇಕು. ನಂತರ ಅವುಗಳ ಮೇಲೆ ಮೂರು-ಮೂರು ಶಕ್ತಿಗಳ ನ್ಯಾಸ ಮಾಡಬೇಕು.

ಶಕ್ತಿತ್ರಯಗಳು

**ಇಚ್ಛಾ ಜ್ಞಾನ ಕ್ರಿಯಾ ಸಂಜ್ಞಾ ಚತುರ್ಥಿನಮಸಾನ್ವಿತಾ ।**
**ದೀರ್ಘತ್ರಯೇಂದುಯು ಗ್ವ್ಯೋಮಪೂರ್ವಕಂ ಸ್ಥಾನಕತ್ರಯೆ** ॥164॥
**ಹೃದಾಸುಚಿನ್ಯಸೇಚ್ಛಕ್ತಿಂ ಸ್ರುವೆ ಶಂಭುಂ ತತಸ್ತು ತೌ ।**
**ಸೂತ್ರತ್ರಯೇಣ ಸಂವೇಷ್ಟ್ಯಂ ಸಂಪೂಜ್ಯ ಕುಸುಮಾದಿಭಿಃ** ॥165॥

ಇಚ್ಛಾ, ಜ್ಞಾನ ಮತ್ತು ಕ್ರಿಯಾ ರೂಪಿ ಶಕ್ತಿಗಳ ಮುಂದೆ ಚತುರ್ಥ್ಯಂತ ವಿಭಕ್ತಿ ಪ್ರತ್ಯಯ ಹಚ್ಚಿ ಅದರಲ್ಲಿ 'ನಮಃ' ಜೋಡಿಸಿರಿ. ಪ್ರಾರಂಭದಲ್ಲಿ ಕ್ರಮವಾಗಿ ಆ, ಈ, ಊ ಸಹಿತ ಸ್ವರಸಹಿತ ಆಕಾಶ (ಹ) ಜೋಡಿಸಿ ಶಕ್ತಿಗಳಿಂದ ಸ್ರುವ ಮತ್ತು ಸ್ರುಚಿಗಳ ಮೂಲ, ಮಧ್ಯ ಮತ್ತು ಅಂತದಲ್ಲಿ ಈ ಪ್ರಕಾರ ನ್ಯಾಸ ಮಾಡಬೇಕು.

ತ್ರಿನೇತ್ರ ಮಾರಕ್ತತನುಂ ಸುಕ್ಲವಸ್ತ್ರಂ ಸುವರ್ಣಸಜಮಗ್ನಿಮೀಡೆ ।
ವರಾಭಯಸ್ವಸ್ತಿಕಶಕ್ತಿಹಸ್ತಂ ಪದ್ಮಸ್ಥಮಾಕಲ್ಪಸ ಮೂಹಯುಕ್ತಮ್ ॥146॥

ಮೂರು ಕಣ್ಣುಗಳುಳ್ಳ, ರಕ್ತವರ್ಣ ಶರೀರವುಳ್ಳ, ಶುಭ್ರವಸ್ತ್ರಧಾರಿಯಾದ, ಬಂಗಾರದ ಆಭರಣ ಧರಿಸಿದ, ಎಡಗೈಯಲ್ಲಿ ಅಭಯಮುದ್ರಾ ಮತ್ತು ಶಕ್ತಿಧಾರಣ ಮಾಡಿರುವ, ಆಭೂಷಣಯುಕ್ತನಾಗಿ ಕಮಲದ ಆಸನದಲ್ಲಿ ವಿರಾಜಮಾನನಾಗಿರುವ ಅಗ್ನಿದೇವನನ್ನು ನಾನು ಧ್ಯಾನ ಮಾಡುತ್ತೇನೆ.

ಏವಂ ಧ್ಯಾತ್ವಾರ್ಚನಂ ಕುರ್ಯಾನ್ಮಾನಸಂ ವಿಧಿವದ್ವಸೋಃ ।
ಪರಿಷಿಂಚೇತ್ತತಸ್ತೋಯೈಃ ಕುಂಡಂ ಸ್ಥಂಡಿಲಮೇವ ವಾ ॥147॥
ದರ್ಭೈಃ ಪರಿಸ್ತರೇದಗ್ನಿಂ ಪ್ರಾಗಗ್ರೈರುದಗಗ್ರಕೈಃ ।
ಪ್ರತ್ಯಗ್ದಕ್ಷಿಣ ಸೌಮ್ಯಾಸು ನ್ಯಸೇತ್ರಿಸ್ತರಿಧಿಂಕ್ರಮಾತ್ ॥148॥
ಪಾಲಾಶಾಂಬಿಲ್ವಜಾಂಸ್ತೇಷು ಬ್ರಹ್ಮಾವಿಷ್ಣು ಶಿವಾನ್ಯಜೇತ್ ।
ವಹ್ನೌ ತತ್ಪೀಠಮಭ್ಯಾವಾಹಯೆತ್ತ್ವಹ್ನ ದೋಲನಮ್ ॥149॥

ಅಗ್ನಿದೇವನ ಧ್ಯಾನ ಮಾಡಿದ ನಂತರ ಸರ್ವೋಪಚಾರಗಳಿಂದ, ವಿಧಿವತ್ತಾಗಿ ಮಾನಸ ಪೂಜೆಯನ್ನು ಮಾಡಬೇಕು. ನಂತರ ನೀರಿನಿಂದ ಕುಂಡ ಅಥವಾ ಸ್ಥಂಡಿಲವನ್ನು ಪರಿಷಿಂಚನ ಮಾಡಬೇಕು. ನಂತರ ಪೂರ್ವ ಮತ್ತು ಉತ್ತರ ಅಗ್ರಭಾಗವುಳ್ಳ ದರ್ಭೆಯಿಂದ ಪೂರ್ವ ದಿಶಾ ಕ್ರಮದಿಂದ ಪರಿಸ್ತರಣ ಮಾಡಬೇಕು. ಪುನಃ ಮುತ್ತುಗ ಮತ್ತು ಬಿಲ್ವ ವೃಕ್ಷದ ಶಾಖೆಗಳಿಂದ ಪಶ್ಚಿಮ, ದಕ್ಷಿಣ ಮತ್ತು ಉತ್ತರದಲ್ಲಿ ಕ್ರಮವಾಗಿ ಮೂರು ಪರಿಧಿಗಳನ್ನು ರಚಿಸಿ ಅದರ ಮೇಲೆ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರ ಪೂಜೆಯನ್ನು ಮಾಡಬೇಕು. ಅಗ್ನಿಯಲ್ಲಿ ಅವುಗಳ ಪೀಠಸ್ಥ ದೇವತೆಗಳನ್ನು ಪೂಜಿಸಿ ಹೃದಯದಲ್ಲಿ ಅಗ್ನಿದೇವನನ್ನು ಆಹ್ವಾನಿಸಬೇಕು.

ಗಂಧಾದಿಭಿಃ ಸಮಭ್ಯರ್ಚ್ಯ ಪೂಜಯೇತ್ ಪಾವಕಂ ವ್ರತಿ ।
ಷಟಸ್ತು ಕೋಣೇಷು ಮಧ್ಯೇ ಚ ಜಿಹ್ವಾಸ್ಸ ದ್ದೇವತಾ ಯಜೇತ್ ॥150॥
ಈಶಾನಾದಿಷು ವಾಯವಂತ ಕೋಣೇಷು ಷಟ್ ಸಮರ್ಚಯೇತ್।
ಹಿರಣ್ಯಾದ್ಯತಿರಕ್ತಾಂತಾ ಮಧ್ಯೇ ತು ಬಹುರೂಪಿಣೀಮ್ ॥151॥



ಕೇಸರೇಷ್ಟಂಗ ಪೂಜಾಸ್ಯಾದಲೇಷ್ವಷ್ಟಸು ಮೂರ್ತಯಃ ।
ಮಾತರೋಷ್ಟೌ ದಲಾಂತೇಷು ಭೈರವಾಃ ಸ್ತುಸ್ತದಗ್ರತಃ ॥152॥
ಧರಾಪುರೇ ತು ಶುಕ್ರಾದ್ಯಾ ವಜ್ರಾದ್ಯಾಯು ಧ ಸಂಯುತಾಃ ।
ಏವಮಾವರಣೈರ್ಯುಕ್ತಂ ಸಪ್ತಭಿಃ ಪಾವಕಂ ಯಜೇತ್ ॥153॥

ನಂತರ ವ್ರತಧಾರಿಯಾದ ಸಾಧಕನು ಗಂಧ ಮುಂತಾದ ಪೂಜೋಪಚಾರಗಳಿಂದ ಅಗ್ನಿ ದೇವನನ್ನು ಪೂಜಿಸಬೇಕು. ಷಟ್ಕೋಣ ಮತ್ತು ಮಧ್ಯದಲ್ಲಿ ಅಗ್ನಿಯ ಸಪ್ತಜಿಹ್ವಾವನ್ನು ಪೂಜಿಸಬೇಕು. ಈಶಾನ್ಯದಿಂದ ಪ್ರಾರಂಭಿಸಿ ಊರ್ಧ್ವಾಧ ವಾಯುವ್ಯದವರೆಗೆ, ಷಟ್ಕೋಣದಲ್ಲಿ ಹಿರಣ್ಯಾದಿಂದ ಪ್ರಾರಂಭಿಸಿ ಅತಿರಿಕ್ತಾದವರೆಗೆ ಆರು ಅಗ್ನಿ ಜಿಹ್ವೆಗಳ ಮತ್ತು ಮಧ್ಯದಲ್ಲಿ ಬಹುರೂಪಿಣಿ ಅಗ್ನಿಜಿಹ್ವಾವನ್ನು ಪೂಜಿಸಬೇಕು.

ಕೇಶರಗಳಲ್ಲಿ ಅಂಗಪೂಜೆ, ಅಷ್ಟದಳಗಳಲ್ಲಿ ಅಷ್ಟಮೂರ್ತಿಗಳ ಪೂಜೆಯನ್ನು ಮತ್ತು ದಳಗಳ ಅಂತದಲ್ಲಿ ಅಷ್ಟ ಮಾತೃಕೆಗಳ ಪೂಜೆ ಮತ್ತು ದಳಾಂತದ ಮುಂದಕ್ಕೆ ಅಷ್ಟಭೈರವರನ್ನು ಪೂಜೆ ಮಾಡಬೇಕು.

ಭೂಪುರದಲ್ಲಿ ಇಂದ್ರಾದಿ ದೇವತೆಗಳ ಮತ್ತು ವಜ್ರಾದಿ ಆಯುಧಗಳನ್ನು ಪೂಜಿಸಬೇಕು. ಈ ಪ್ರಕಾರ ಸಪ್ತಾವರಣದಲ್ಲಿ ದೇವತೆಗಳ ಜೊತೆಗೆ ಅಗ್ನಿದೇವನ ಯಜ್ಞವನ್ನು ಮಾಡಬೇಕು. ಅಸಿತಾಂಗ, ರುದ್ರ, ಚಂಡ, ಕ್ರೋಧ, ಉನ್ಮತ್ತ, ಕಪಾಲಿ, ಭೀಷಣ ಮತ್ತು ಸಂಹಾರ ಈ ಅಷ್ಟ ಭೈರವರ ನಾಮಗಳಾಗಿವೆ.

ಅಷ್ಟಭೈರವ ನಾಮ

ಅಸಿತಾಂಗೊ ರುರುಶ್ಚಂಡಃ ಕ್ರೋಧ ಉನ್ಮತ್ತಸಂಜ್ಞಕಃ ।
ಕಪಾಲಿ ಭೀಷಣಶ್ಚಾಪಿ ಸಂಹಾರಶ್ಚಾಷ್ಟ ಭೈರವಃ ॥154॥
ವಾಮೆ ಕುಶಾನಥಾಸ್ತೀರ್ಯ ತತ್ರ ವಸ್ತೂನಿ ನಿಃಕ್ಷಿಪೇತ್ ।
ಪ್ರಣೀತಾ ಪ್ರೋಕ್ಷಣಿ ಪಾತ್ರೆ ಆಜ್ಯಸ್ಥಾಲಿಂ ಸ್ರುವಂ ಸುಚಮ್ ॥155॥
ಅಧೋಮುಖಾನಿ ಚೈತಾನಿ ಹೋಮದ್ರವ್ಯಂ ಘೃತಂ ಕುಶಾನಿ ।
ಸಮಿಧಃ ಪಂಚಪಾಲಾಶೀರನ್ಯದಪ್ಯುಪ ಯೋಗಿ ಯತ್ ॥156॥

ಅಗ್ನಿಯ ಎಡಭಾಗದಲ್ಲಿ ದರ್ಭೆಗಳನ್ನು ಹರಡಿ ಅದರ ಮೇಲೆ ಪ್ರಣೀತಾ, ಪ್ರೋಕ್ಷಣಿ ಪಾತ್ರ, ಆಜ್ಯ ಪಾತ್ರ, ಸ್ರುವಾ ಮತ್ತು ಸುಚಿ ಮುಂತಾದ ಯಜ್ಞಪಾತ್ರಗಳನ್ನು ಅಧೋಮುಖ (ತಲೆಕೆಳಗೆ ಮಾಡಿ)ವಾಗಿ ಸ್ಥಾಪನೆ ಮಾಡಬೇಕು. ಅದರ ಜೊತೆಗೆ

ಓಂ ಸುರೇಭ್ಯೋ ನಮಃ ಲಿಂಗೆ
ಓಂ ಪಿತೃಭ್ಯೋ ನಮಃ ಪಾಯೌ
ಓಂ ಗಂಧರ್ವೇಭ್ಯೋ ನಮಃ ಮೂರ್ಧ್ನಿ
ಓಂ ಯಕ್ಷೇಭ್ಯೋ ನಮಃ ಮುಖೆ
ಓಂ ನಾಗೇಭ್ಯೋ ನಮಃ ನಾಸಿಕಾಯಾಮ್
ಓಂ ಪಿಶಾಚೇಭ್ಯೋ ನಮಃ ನೇತ್ರೆ
ಓಂ ರಾಕ್ಷಸೇಭ್ಯೋ ನಮಃ ಸರ್ವಾಂಗೆ

**ಷಡಂಗನ್ಯಾಸ**

**ಧೂಮಾಂತೆ ವ್ಯಾಪಿನೆ ವರ್ಮ ಸಪ್ತಜಿಹ್ವಾಯ ನೇತ್ರಕಮ್**
**ಅಸ್ತ್ರಂ ಧನುರ್ಧರಾಯೇತಿ ಷಡಂಗಾನಿ ಸಮಾಚರೇತ್** ॥139॥

ಓಂ ಸಹಸ್ರಾರ್ಚಿಷೆ ಹೃದಯಾಯ ನಮಃ
ಓಂ ಸ್ವಸ್ತಿಪೂರ್ಣಾಯ ಶಿರಸೆ ಸ್ವಾಹಾ
ಓಂ ಉತ್ತಿಷ್ಠ ಪುರುಷಾಯ ಶಿಖಾಯೈ ವಷಟ್
ಓಂ ಧೂಮವ್ಯಾಪಿನೆ ಕವಚಾಯ ಹುಮ್
ಓಂ ಸಪ್ತಜಿಹ್ವಾಯ ನೇತ್ರತ್ರಯಾಯ ವೌಷಟ್
ಓಂ ಧನುರ್ಧರಾಯ ಅಸ್ತ್ರಾಯ ಫಟ್

ಈ ಪ್ರಕಾರ ಷಡಂಗನ್ಯಾಸ ಮಾಡಬೇಕು.

**ಮೂರ್ಧ್ನಿ ವಾಮೆಂಸಕೆ ಪಾರ್ಶ್ವೆ ಕಟೌಲಿಂಗೆ ಕಟೌಪುನಃ ।**
**ದಕ್ಷ ಪಾರ್ಶ್ವೇಂಸಕೆ ನ್ಯಸ್ಯನ್ಮೂರ್ತಿರಷ್ಟೌ ವಿಭಾವಸೋಃ** ॥140॥
**ತಾರಾಗ್ನಯೆ ಪದಾಧ್ಯಾಸ್ತಾಶ್ಚತುರ್ಥೀನಮಸಾನ್ವಿತಃ ।**
**ಜಾತವೇದಾಃ ಸಪ್ತಜಿಹ್ವೋ ಹವ್ಯವಾಹನ ಇತ್ಯಪಿ** ॥141॥
**ಅಶ್ವೋದರಜಸಂಜ್ಞೋನ್ಯಸ್ತಥಾ ವೈಶ್ವಾನರಾಹ್ವಯಃ ।**
**ಕೌಮಾರತೇಜಾಃ ಸ್ಯಾದ್ವಿಶ್ವಮುಖೊ ದೇವಮುಖಸ್ತಥಾ** ॥142॥
**ತತೊ ನ್ಯಸೇನ್ನಿಜೆ ದೇಹೆ ಪೀಠಂ ಹಾಟಕರೇತಸಃ ।**
**ವಹ್ನಿಮಂಡಲ ಪರ್ಯಂತಂ ಮಂಡೂಕಾದಿ ಯಥೋದಿತಮ್** ॥143॥
**ಪೀತಾ ಶ್ವೇತಾರುಣಾ ಕೃಷ್ಣಾ ಧೂಮ್ರಾ ತೀವ್ರಾ ಸ್ಫುಲಿಂಗಿನಿ ।**
**ರುಚಿರಾ ಜ್ವಾಲಿನಿ ಚೇತಿ ಕೃಶಾನೋಃ ಪೀಠಶಕ್ತಯಃ** ॥144॥





**ಬೀಜಂ ವಹ್ನ್ಯಾಸನಾಯೇತಿ ಇದಂತಃ ಪೀಠಮಂತ್ರಕಃ ।**
**ಏವಂ ವಿನ್ಯಸ್ಯ ಪೀಠಾಂತಂ ಪಾವಕಂ ಚಿಂತಯೇತ್ತನೌ** ॥145॥

ಶಿರ, ಎಡಹೆಗಲು, ಎಡಭಾಗ, ಎಡಕಟಿ, ಲಿಂಗ ಮತ್ತು ಪುನಃ ಬಲ ಕಟಿ, ಬಲಪಾರ್ಶ್ವ, ಬಲಭುಜ ಈ ಅಂಗಗಳಲ್ಲಿ ಅಗ್ನಿಯ ಎಂಟು ಮೂರ್ತಿಗಳಿಂದ ನ್ಯಾಸ ಮಾಡಬೇಕು.

ಪ್ರಾರಂಭದಲ್ಲಿ ಪ್ರಣವ (ಓಂ), ನಂತರ 'ಅಗ್ನಯ', ಆಮೇಲೆ ಮೂರ್ತಿಯ ಹೆಸರುಗಳಲ್ಲಿ ನಾಲ್ಕನೆಯದು, ನಂತರ 'ನಮಃ' ಪದಗಳಿಂದ ಸೂಚಿತ ಸ್ಥಾನದಲ್ಲಿ ನ್ಯಾಸ ಮಾಡಬೇಕು. ಜಾತವೇದ, ಸಪ್ತಜಿಹ್ವ, ಹವ್ಯವಾಹನ, ಅಶ್ವೋದರಜ, ವೈಶ್ವಾನರ, ಕೌಮಾರತೇಜಸ್, ವಿಶ್ವಮುಖ ಮತ್ತು ದೇವಮುಖ ಇವು ಅಗ್ನಿಯ ಎಂಟು ಮೂರ್ತಿ (ರೂಪ)ಗಳ ಹೆಸರುಗಳಾಗಿವೆ.

| | |
|---|---|
| ಓಂ ಅಗ್ನಯೇ | ಜಾತವೇದಸೆ ನಮಃ ಮೂರ್ಧ್ನಿ |
| ಓಂ ಅಗ್ನಯೇ | ಸಪ್ತಜಿಹ್ವಾಯ ನಮಃ ವಾ ಮಾಂಸೆ |
| ಓಂ ಅಗ್ನಯೇ | ಹವ್ಯವಾಹನಾಯ ನಮಃ ವಾಮ ಪಾರ್ಶ್ವೆ |
| ಓಂ ಅಗ್ನಯೇ | ಅಶ್ವೋದರಜಾಯ ನಮಃ ವಾಮಕಟೌ |
| ಓಂ ಅಗ್ನಯೇ | ವೈಶ್ವಾನರಾಯ ನಮಃ ಲಿಂಗೆ |
| ಓಂ ಅಗ್ನಯೇ | ಕೌಮಾರ ತೇಜಸೆ ನಮಃ ದಕ್ಷ ಕಟೌ |
| ಓಂ ಅಗ್ನಯೇ | ವಿಶ್ವಮುಖಾಯ ನಮಃ ದಕ್ಷ ಪಾರ್ಶ್ವೇ |
| ಓಂ ಅಗ್ನಯೇ | ದೇವಮುಖಾಯ ನಮಃ ದಕ್ಷಾಂಸೆ |

ಅಗ್ನಿ ಮೂರ್ತಿಗಳ ನ್ಯಾಸ ಮಾಡಿದ ನಂತರ ಪೀಠ ದೇವತೆ ಮತ್ತು ಶಕ್ತಿಗಳ ನ್ಯಾಸ ಮಾಡಬೇಕು. ಆ ಮೇಲೆ ತನ್ನ ಶರೀರದಲ್ಲಿ ಮಂಡೂಕದಿಂದ ಹಿಡಿದು ಅಗ್ನಿಮಂಡಲ ಪರ್ಯಂತ ಅಗ್ನಿಪೀಠದ ದೇವತೆಗಳ ನ್ಯಾಸ ಮಾಡಬೇಕು. ಪೀತಾ, ಶ್ವೇತಾ, ಅರುಣಾ ಕೃಷ್ಣಾ ಧೂಮ್ರಾ, ತೀವ್ರಾ, ಸ್ಫುಲಿಂಗಿನಿ, ರುಚಿರಾ ಮತ್ತು ಜ್ವಾಲಿನಿ ಇವುಗಳು ಅಗ್ನಿಪೀಠದ ಶಕ್ತಿಗಳಾಗಿರುತ್ತವೆ.

"ಓಂ ರಂ ವಹ್ನ್ಯಾಸನಾಯ ನಮಃ" ಇದು ಪೀಠದ ಮಂತ್ರವಾಗಿದೆ. ಈ ಪ್ರಕಾರ ಪೀಠಪರ್ಯಂತ ನ್ಯಾಸ ಮಾಡಿ ತನ್ನ ಶರೀರದಲ್ಲಿ ಅಗ್ನಿಯ ಧ್ಯಾನ ಮಾಡಬೇಕು.

ನಂತರ ಅಗ್ನಿಮಂತ್ರದ ನ್ಯಾಸ ಮಾಡಬೇಕು. ಪ್ರಥಮದಲ್ಲಿ ವೈಶ್ವಾನರ, ನಂತರ ಜಾತವೇದ, ಇಹಾವಹ, ಆಮೇಲೆ ಲೋಹಿತಾಕ್ಷ, ಸರ್ವಕರ್ಮಾಣಿ, ಸಾಧಯ ಮತ್ತು ಅಂತ್ಯದಲ್ಲಿ ಸ್ವಾಹಾ ಈ ಪ್ರಕಾರ 26 ಅಕ್ಷರಗಳಿಂದ ಅಗ್ನಿಮಂತ್ರವಾಗುತ್ತದೆ.

ಲೋಹಿತಾಕ್ಷಪದಾತ್ ಸರ್ವಕರ್ಮಣ್ಯಂತೆ ತು ಸಾಧಯ ।
ವಹ್ನಿಪ್ರಿಯಾಂತೊ ಮಂತ್ರೋಯಂ ಷಡ್‌ವಿಶಂತ್ಯಕ್ಷರಾನ್ವಿತಃ
ಋಷೊಶ್ಛಂದೊ ದೇವತಾಸ್ಯ ಭೃಗುರ್ಗಾಯತ್ರಪಾವಕಾಃ । ॥132॥
ರಂಬೀಜಂ ಠದ್ವಯಂ ಶಕ್ತಿರ್ಹವನೆ ವಿನಿಯೋಜನಮ್
ಲಿಂಗೆ ಪಾಯೌ ಮೂರ್ಧ್ನಿ ವಕ್ತ್ರೆನಸಿ ನೇತ್ರೆ ಖಿಲಾಂಗಕೆ । ॥132॥

ಈ ಮಂತ್ರದ ಸ್ವರೂಪವು ಈ ಪ್ರಕಾರವಾಗುತ್ತದೆ- "ವೈಶ್ವಾನರ ಜಾತವೇದ ಇಹಾವಹ ಲೋಹಿತಾಕ್ಷ ಸರ್ವಕರ್ಮಾಣಿ ಸಾಧಯ ಸ್ವಾಹಾ"

ಈ ಮಂತ್ರದ ಋಷಿ ಭೃಗು, ಗಾಯತ್ರಿ ಛಂದ ಮತ್ತು ಪಾವಕ ಈ ಮಂತ್ರದ ದೇವತೆಯಾಗಿದೆ. 'ರಂ' ಬೀಜ ಮತ್ತು 'ಸ್ವಾಹಾ' ಶಕ್ತಿಯಾಗಿದೆ. ಹವನ ಕಾರ್ಯಗಳಲ್ಲಿ ಈ ಮಂತ್ರದ ವಿನಿಯೋಗ ಮಾಡಲಾಗುತ್ತದ.

**ಜಿಹ್ವಾ ಬೀಜೋದ್ಧಾರಃ**

ವಹ್ನೇರ್ಜಿಹ್ವಾಃ ಸ್ವಬೀಜಾಢ್ಯಾ ನ್ಯಸೇ ತಾನಮೋನ್ವಿತಾಃ ॥133॥
ಹಿರಣ್ಯಾ ಗಗನಾ ರಕ್ತಾ ಕೃಷ್ಣಾಸುಪ್ರಭಯಾನ್ವಿತಾ ।
ಬಹುರೂಪಾತಿ ರಕ್ತೋತಿ ಜಿಹ್ವಾ ದಮುನಸೋ ಮತಾಃ ॥134॥
ದೀಪಿಕಾನಲವಾಯುಸ್ಥಾಃ ಸಾಧ್ಯಾ ವರ್ಣವಿಲೋಮತಃ ।
ಸೇಂದವಃ ಸಪ್ತಜಿಹ್ವಾನಾಂ ಸಪ್ತನಾಂ ಬೀಜತಾಂ ಗತಾ ॥135॥

ಈಗ ಸಪ್ತಜಿಹ್ವಾ ಮಂತ್ರ ಮತ್ತು ಅದರ ನ್ಯಾಸವನ್ನು ಹೇಳಲಾಗುತ್ತದೆ - ಲಿಂಗ, ಗುದ, ಶಿರ, ಮುಖ, ನಾಸಿಕ, ನೇತ್ರ ಮತ್ತು ಸರ್ವಾಂಗಗಳಲ್ಲಿ ಬೀಜ ಮಂತ್ರಗಳ ಜೊತೆಗೆ ನಮಃ ಸೇರಿಸಿ ಪ್ರತಿಯೊಂದು ಅಗ್ನಿ ಜಿಹ್ವೆಯ ಮುಂದೆ ಚತುರ್ಥ ಮತ್ತು ಏಕವಚನದಿಂದ ನ್ಯಾಸ ಮಾಡಬೇಕು. ಹಿರಣ್ಯ, ಗಗನಾ, ರಕ್ತಾ, ಕೃಷ್ಣಾ, ಸುಪ್ರಭಾ, ಬಹುರೂಪಾ ಮತ್ತು ಅತಿರಕ್ತ ಇವು ಏಳು ಅಗ್ನಿ ಜಿಹ್ವೆಗಳ ಹೆಸರುಗಳಾಗಿವೆ.

ದೀಪಿಕಾ (ಉ), ಅನಲ (ರು), ವಾಯು (ಯ) ಈ ಮೂರನ್ನು ಒಂದರಲ್ಲಿ





ಸೇರಿಸಿ ಅರ್ಥಾತ್ "ಯ್ರು"ದಲ್ಲಿ, ಸಕಾರಾದಿ (ಸ, ಕ್ಷ, ಶ, ವ, ಲ, ರ, ಯ) ಸಪ್ತವರ್ಣಗಳನ್ನು ವಿಲೋಮ ರೂಪದಲ್ಲಿ ಸೇರಿಸಿದರೆ, ಅಗ್ನಿಜಿಹ್ವಾದ ಬೀಜ ಮಂತ್ರಗಳಾಗುತ್ತವೆ. ಸ್ರ್ಯೂ, ಕ್ಷ್ರ್ಯೂ, ಶ್ರ್ಯೂ, ವ್ರ್ಯೂ, ಲ್ರ್ಯೂ, ರ್ರ್ಯೂ, ಯ್ರ್ಯೂ ಇವು ಕ್ರಮವಾಗಿ ಸಪ್ತಜಿಹ್ವಾದ ಬೀಜ ಮಂತ್ರಗಳಾಗಿವೆ.

ಓಂ ಸ್ರ್ಯೂಂ ಹಿರಣ್ಯಾಯೈ ನಮಃ ಲಿಂಗೆ
ಓಂ ಕ್ಷ್ರ್ಯೂಂ ಗಗನಾಯೈ ನಮಃ ಪಾಯೌ
ಓಂ ಶ್ರ್ಯೂಂ ರಕ್ತಾಯೈ ನಮಃ ಶಿರಸಿ
ಓಂ ವ್ರ್ಯೂಂ ಕೃಷ್ಣಾಯೈ ನಮಃ ವಕ್ತ್ರೆ
ಓಂ ಲ್ರ್ಯೂಂ ಸುಪ್ರಭಾಯೈ ನಮಃ ನಾಸಿಕಾಯಾಮ್
ಓಂ ರ್ರ್ಯೂಂ ಅತಿರಕ್ತಾಯೈ ನಮಃ ನೇತ್ರೆ
ಓಂ ಯ್ರ್ಯೂಂ ಬಹುರೂಪಾಯೈ ನಮಃ ಸರ್ವಾಂಗೆ
ಈ ಪ್ರಕಾರ ನ್ಯಾಸ ಮಾಡಬೇಕು.

ಗೀರ್ವಾಣ ಪಿತೃಗಂಧರ್ವಯಕ್ಷನಾಮಪಿಶಾಚಿಕಾಃ ।
ರಾಕ್ಷಸಾಶ್ಚೇತಿ ಜಿಹ್ವಾನಾಂ ದೇವತಾಸ್ತಸ್ಥಲೆ ನ್ಯಸೇತ್ ॥136॥
ನ್ಯಾಸರ್ಚನೆ ವ್ಯತ್ಯಮಃ ಸ್ಯಾದ್ ಬಹುರೂಪಾತಿ ರಕ್ತಯೋಃ ।
ನೇತ್ರೇತಿರಿಕ್ತಾ ನ್ಯಸ್ತವ್ಯಾ ಸರ್ವಾಮಗೆ ಬಹುರೂಪಿಕಾ ॥137॥
ಸಹಸ್ರಾರ್ಚಿಷೆ ಹೃದಯಂ ಸ್ವಸ್ತಿಪೂರ್ಣಾಯ ಮಸ್ತಕಮ್ ।
ಉತ್ತಿಷ್ಠ ಪುರುಷಾಯೇತಿ ಶಿಖಾಮಂತ್ರೋಯ ಮೀರಿತಃ ॥136॥

**ದೇವತಾ ನ್ಯಾಸ :**

ಸುರ, ಪಿತೃ, ಗಂಧರ್ವ, ಯಕ್ಷ, ನಾಗ, ಪಿಶಾಚ ಮತ್ತು ರಾಕ್ಷಸ ಈ ಸಪ್ತಜಿಹ್ವಾಗಳಿಗೆ ಅಧಿದೇವತೆಗಳಾಗಿರುತ್ತಾರೆ. ಅವುಗಳನ್ನು ಕ್ರಮವಾಗಿ ಆಯಾ ಅಂಗಗಳಲ್ಲಿ ನ್ಯಾಸ ಮಾಡಬೇಕು. ಪೂಜಾ ಕಾಲದಲ್ಲಿ ಬಹುರೂಪಾ ಮತ್ತು ಅತಿರಿಕ್ತಾಗಳ ಯಾವ ಕ್ರಮ ಹೇಳಲಾಗಿದೆಯೋ, ಅದು ನ್ಯಾಸದಲ್ಲಿ ವ್ಯತ್ಕ್ರಮವಾಗುತ್ತದೆ. ಕಾರಣ ನೇತ್ರದಲ್ಲಿ ಪ್ರಥಮವಾಗಿ ಅತಿರಿಕ್ತಾದ ನ್ಯಾಸ ಮತ್ತು ನಂತರ ಸರ್ವಾಂಗದಲ್ಲಿ ಬಹುರೂಪಾದ ನ್ಯಾಸ ಪ್ರದರ್ಶಿತಗೊಳಿಸಬೇಕು.

ನಂತರ ಕವಚ (ಹುಮ್) ಮಂತ್ರವನ್ನು ಪಠಿಸುತ್ತ "ಅವಗುಂಠನ ಮುದ್ರಾ" ಪ್ರದರ್ಶಿಸುತ್ತ ಅದನ್ನು ಅವಕುಂಠಿತಗೊಳಿಸಿ ಮೂರು ಬಾರಿ ಪ್ರಣವ ಮಂತ್ರವನ್ನು ಉಚ್ಚರಿಸುತ್ತ ಆ ಅಗ್ನಿಕುಂಡ ಅಥವಾ ವೇದಿಯ ಮೇಲೆ ಮೂರು ಬಾರಿ ತಿರುಗಿಸಬೇಕು.

**ಶಯ್ಯಾಗತಾಮೃತುಸ್ನಾತಾಂ ನೀಲೇಂದಿವ ರ ಧಾರಿಣೀಮ್।**
**ದೇವೇನ ಭುಜ್ಯಮಾನಾಂ ತಾಂ ಸ್ಮೃತಾ ತದ್ಯೋನಿ ಮಂಡಲೆ** ||123||
**ಈಶರೇತೋಧಿಯಾ ವಹ್ನಿಂ ಸ್ಥಾಪಯೇದಾತ್ಮ ಸಮ್ಮುಖಮ್।**
**ಮೂಲಂ ನವಾರ್ಣಂ ಚ ಪಠಜ್ಞಾನುಸ್ಪೃಷ್ಟಧರಾತಲಃ** ||124||

ನಂತರ ಮೊಣಕಾಲೂರಿ ನೆಲದ ಮೇಲೆ ಕುಳಿತುಕೊಂಡು ವಕ್ಷ್ಯಮಾಣ ನವಾರ್ಣ ಮಂತ್ರವನ್ನು ಪಠಿಸುತ್ತ, ಶಯ್ಯಾದ ಮೇಲೆ ಮಲಗಿರುವ, ಋತುಸ್ನಾತಳಾದ, ನೀಲಕಮಲಧಾರಿಣಿಯಾದ, ಅಗ್ನಿದೇವನಿಂದ ಸಂಭೋಗಿಸಲ್ಪಡುತ್ತಿರುವ ಅಗ್ನಿಪತ್ನಿಯಾದ ಸ್ವಾಹಾ ದೇವಿಯ ಸ್ಮರಣೆ ಮಾಡುತ್ತ, ಆದರ ಯೋನಿಮಂಡಲ ಸ್ಥಾನದಲ್ಲಿ ಶಿವನ ವೀರ್ಯದ ಭಾವನೆ ಮಾಡುತ್ತ ಆ ಅಗ್ನಿಯನ್ನು ತನ್ನ ಎದುರಿಗೆ ಸ್ಥಾಪನೆ ಮಾಡಬೇಕು.

**ಧೇನುಮುದ್ರಾ :** ಎರಡೂ ಕೈಗಳ ಕನಿಷ್ಠ ಮತ್ತು ಅನಾಮಿಕ ಮತ್ತು ತರ್ಜನಿ ಹಾಗೂ ಮಧ್ಯದ ಬೆರಳಿಗಳನ್ನು ಪರಸ್ಪರ ಸೇರಿಸುವುದರಿಂದ ಧೇನುಮುದ್ರೆಯಾಗುತ್ತದೆ.

**ಅವಗುಂಠನ ಮುದ್ರಾ :**

ಬಲಗೈ ಮುಷ್ಟಿ ಮಾಡಿ ತರ್ಜನಿ ಮತ್ತು ಮಧ್ಯಮಾ ಬೆರಳುಗಳನ್ನು ಅಧೋಮುಖಿ ವಾಗಿರಿಸಿ ನಾಲ್ಕೂ ಕಡೆಗೆ ತಿರುಗಿಸುವುದರಿಂದ ಅವಗುಂಠನ ಮುದ್ರಾ ಆಗುತ್ತದೆ.

**ವಹ್ನಿನವಾರ್ಣ ಮಂತ್ರೋದ್ಧಾರ**

**ರೇಫಾರ್ಧಶೇಂದು ಸಂಯುಕ್ತಂ ಗಗನಂ ವಹ್ನಿಚೈ ತತಃ ।**
**ತನ್ನಾಯಹೃದಯಾಂತೋಽಯಂ ನವಾರ್ಣೋಗಿನಿಧಾಪನೆ** ||125||
**ವಿಶ್ರಾಸ್ಯಾಚಮನಂ ದೇವಿದೇವಂಯೋರ್ಜ್ವಾಲಯೇದ್ವಸುಮ್ ।**
**ಚತುರ್ವಿಂಶತಿವರ್ಣೇನ ಮಂತ್ರೇಣ ಶ್ರವಣಾದಿಭಿಃ** ||126||

ರೇಫ, ಅರ್ಧೇಶ = ಉ, ಇಂದು – ಅನುಸ್ವಾರಯುಕ್ತ ಗಗನ (ಹ) ಅರ್ಥಾತ್ ಹುಂ, ತದನಂತರ ವಹ್ನಿ, ಚೈ, ನಂತರ 'ತನ್ಯಾಯ', ತದನಂತರ ಹೃದಯ, "ನಮಃ"ವನ್ನು ಉಚ್ಚಾರಣೆ ಮಾಡುವುದರಿಂದ ನವಾರ್ಣ ಮಂತ್ರ ರಚಿತವಾಗುತ್ತದೆ.





"ಹುಂ ವಹ್ನಿಚೈತನ್ಯಾಯ ನಮಃ"

ಈ ಮಂತ್ರದಿಂದ ಅಗ್ನಿ ಸ್ಥಾಪನೆ ಮಾಡಲಾಗುತ್ತದೆ. ನಂತರ ದೇವ ಹಾಗೂ ದೇವಿಯರಿಗೆ ಆಚಮನ ಕೊಟ್ಟು ವಕ್ಷ್ಯಮಾಣ ಇಪ್ಪತ್ನಾಲ್ಕು ಅಕ್ಷರಾತ್ಮಕ ಮಂತ್ರಗಳನ್ನು ಜಪಿಸುತ್ತ ಸಮಿಧಾದಿಂದ ಅಗ್ನಿಯನ್ನು ಪ್ರಜ್ವಲಿಸಬೇಕು.

**ವಹ್ನಿಚತುರ್ವಿಂಶತ್ಯಕ್ಷರ ಮಂತ್ರೋದ್ಧಾರಃ**

**ಚಿತ್ಪಿಂಗಲಹನದ್ವಂದ್ವ ದಹಯುಗ್ಮಂ ಪಚದ್ವಯಮ್।**
**ಸರ್ವಜ್ಞಾಜ್ಞಾಪಯ ಸ್ವಾಹಾ ಮಂತ್ರೋ ವೇದಭುಜಾಕ್ಷರಃ** ||127||
**ಪ್ರದರ್ಶ್ಯ ಜ್ವಾಲಿನಿಂ ಮುದ್ರಾಮುತ್ಥಾಯ ವಿಹಿತಾಂಜಲಿಃ ।**
**ಶ್ಲೋಕರೂಪೇಣ ಮಂತ್ರೇಣ ಹ್ಯುಪತಿಷ್ಠೇದ್ದುತಾಶನಮ್** ||128||

ಪ್ರಾರಂಭದಲ್ಲಿ 'ಚಿತ್ಪಿಂಗಲ', ನಂತರ 'ಹನ' ಎರಡುಬಾರಿ ಆಮೇಲೆ ಎರಡು ಬಾರಿ 'ದಹ', ಎರಡು ಬಾರಿ 'ಪಚ' ಮತ್ತು ಅಂತ್ಯದಲ್ಲಿ "ಸರ್ವಜ್ಞಾಜ್ಞಾಪಯ ಸ್ವಾಹಾ" ಈ ಪ್ರಕಾರ "ಚಿತ್ಪಿಂಗಲ ಹನ ಹನ ದಹ ದಹ ಪಚ ಪಚ "ಸರ್ವಜ್ಞಾಜ್ಞಾಪಯ ಸ್ವಾಹಾ" ಇಪ್ಪತ್ನಾಲ್ಕು ಅಕ್ಷರಗಳ ಮಂತ್ರವಾಗುತ್ತದೆ.

ನಂತರ ಆಸನದಿಂದ ಎದ್ದು ಕೈಗಳನ್ನು ಜೋಡಿಸಿ 'ಜ್ವಾಲಿನಿ ಮುದ್ರಾ' ಪ್ರದರ್ಶನ ಮಾಡುತ್ತ ಶ್ಲೋಕರೂಪ ಮಂತ್ರವನ್ನು ಪಠಿಸುತ್ತ ಅಗ್ನಿಯನ್ನು ಉಪಸ್ಥಾನ ಮಾಡಬೇಕು.

**ಶ್ಲೋಕ ಮಂತ್ರಾಗ್ನಿ ಮಂತ್ರೋದ್ಧಾರಃ**

**ಅಗ್ನಿಂ ಪ್ರಜ್ವಲಿತಂ ವಂದೇ ಜಾತವೇದಂ ಹುತಾಶನಮ್।**
**ಸುವರ್ಣವರ್ಣಮಂಗಲಂ ಸಮಿದ್ಧಂ ವಿಶ್ವತೋಮುಖಿಮ್** ||129||
**ಅಥಾಗ್ನಿ ಮಂತ್ರಂ ವಿನ್ಯಸ್ಯೇತ್ತದ್ವಿಧಾನಮುದೀರ್ಯತೆ ।**
**ವೈಶ್ವಾನರಾಂತೆ ಜಾತೇತಿ ವೇದಾಂತೆ ಸ್ವಾದಿಹಾವಹ** ||130||

ಈಗ ಅಗ್ನಿಪ್ರಜ್ವಲಿತಂ......... ವಿಶ್ವತೋಮುಖಿಮ್ ಶ್ಲೋಕರೂಪ ಮಂತ್ರದಿಂದ ಅಗ್ನಿಯನ್ನು ಸ್ಥಾಪನೆ ಮಾಡಬೇಕು. ಬಂಗಾರದ ವರ್ಣದ ಸಮಾನ ಅಮಲ, ದೇದಿಪ್ಯಮಾನ, ವಿಶ್ವತೋಮುಖಿ, ಜಾತವೇದ ಮತ್ತು ಹುತಾಶನಾದಿ ನಾಮವುಳ್ಳ ಅಗ್ನಿಗೆ ನಾನು ನಮಸ್ಕರಿಸುತ್ತೇನೆ.

ಯಜೇತ್ತೌ ತಾರಮಾಯಾಭ್ಯಾಂ ಗಂಧಾ ಧ್ವೈರುಪಚಾರಕೈಃ ।
ಲಕ್ಷ್ಮೀನಾರಾಯಣೌ ತ್ವರ್ಚ್ಯೇದ್ ವೈಷ್ಣವೇ ಹೋಮಕರ್ಮಣಿ ||116||
ಸೂರ್ಯಕಾಂತಾದರಣೀತಃ ಶ್ರೋತ್ರಿಯಾಗಾರತೋಪಿ ವಾ ।
ಪಾತ್ರೇಣ ಪಿಹಿತೆ ಪಾತ್ರೆ ವಹ್ನಿಮಾನಾಯಯೇತ್ತತಃ ||117||

ಸಂಸ್ಕಾರದ ನಂತರ ವೇದಿಯ ಮೇಲೆ ಯಂತ್ರವನ್ನು ಬರೆಯಬೇಕು. ಮೊದಲು ತ್ರಿಕೋಣ ನಂತರ ಷಟ್ಕೋಣ, ಅಷ್ಟದಲ ಮತ್ತು ಚತುಷ್ಕೋಣ



ಯಂತ್ರವನ್ನು ಬರೆದು ಅದರ ಮಧ್ಯದಲ್ಲಿ 'ಓಂ ಹ್ರೀಂ ಓಂ' ಬರೆದು ಪೀಠವನ್ನು ಪೂಜೆ ಮಾಡಬೇಕು. ನಂತರ ಮಂಡೂಕದಿಂದ ಹಿಡಿದು ಪರತತ್ವದವರೆಗೆ ಮತ್ತು ಜಯಾದಿ ಪೀಠಶಕ್ತಿಗಳ ಪೂಜೆ ಮಾಡಬೇಕು.

ನಂತರ "ಓಂ ಹ್ರೀಂ ವಾಗೀಶಿವಾಗೀಶ್ವರರ್ಯೋರ್ಯೋಗ ಪೀಠಾತ್ಮನೆ ನಮಃ" ಈ ಮಂತ್ರದಿಂದ ಆಸನ ನೀಡಬೇಕು. ನಂತರ ತಾರಾ (ಓಂ), ಮಾಯಾ (ಹ್ರೀಂ) ಅಂದರೆ "ಓಂ ಹ್ರೀಂ" ಮಂತ್ರದಿಂದ ಗಂಧಾದಿ ಉಪಚಾರಗಳಿಂದ ಪೂಜೆ ಮಾಡಬೇಕು. ವಿಷ್ಣು ದೇವತಾ ಸಂಬಂಧಿ ಹೋಮ ಮಾಡುವುದಿದ್ದರೆ "ಓಂ ಹ್ರೀಂ ಲಕ್ಷ್ಮೀನಾರಾಯಣಾಭ್ಯಾಂ ನಮಃ" ಈ ಮಂತ್ರದ ಮೂಲಕ ಲಕ್ಷ್ಮೀನಾರಾಯಣನನ್ನು ಪೂಜಿಸಬೇಕು.





ಅಸ್ತ್ರೇಣಾದಾಯ ತತ್ಪಾತ್ರಂ ಪರ್ಮಣೋದ್ಘಾಟಯೇತ್ತು ತಮ್।
ಅಸ್ತ್ರಮಂತ್ರೇಣ ನೈಋತ್ಯೆ ಕ್ರವ್ಯಾದಾಂಶಂ ತತಸ್ತ್ಯಜೇತ್ ||118||
ಮೂಲೇನ ಪುರುತೊ ಧೃತ್ವಾ ಸಂಸ್ಕಾರಾಂಶ್ಚ ತತಶ್ಚರೇತ್ ।
ವೀಕ್ಷಣಾಧ್ಯಾನ ಪೂರಾ ಪ್ರೋಕ್ತಾನಲ್ಪಂ ಪ್ರೋಕ್ಷಣಮಾಚರನ್ ||119||
ಪರಮಾತ್ಮಾನಲೇನಾಥ ಜಾಠರೇಣಾಪಿ ವಹ್ನಿನಾ ।
ಸ್ಮರನ್ನೈಕ್ಯಂ ವಹ್ನಿಬೀಜಾಚ್ಚೈತನ್ಯಂ ಯೋಜಯೇತ್ತತಃ ||120||
ತಾರೇಣ ಚಾಭಿಮಂತ್ರಾಗ್ನಿಂ ಸುಧಯಾ ಧೇನುಮುದ್ರಯಾ।
ಅಮೃತೀಕೃತ್ಯ ಸಂರಕ್ಷೇದಸ್ತ್ರಂ ಮಂತ್ರೇಣ ಮಂತ್ರವಿತ್ ||121||
ಮುದ್ರಯಾ ತ್ವವಗುಂಠಿನ್ಯಾ ಕದಚೇನಾದಗುಂಠಯೇತ್।
ಕುಂಡೋಪರಿ ತತೋ ವಹ್ನಿಂ ಭ್ರಾಮಯೇತ್ ತ್ರಿಧುವಂ ಪಠನ್ ||122||

ಸೂರ್ಯಕಾಂತ ಮಣಿಯ ಮೂಲಕ, ಅರಣಿಮಂಥನದ ಮೂಲಕ ಅಥವಾ ಶ್ರೋತ್ರಿಯ ಬ್ರಾಹ್ಮಣರ ಮನೆ (ಹೋಮಶಾಲಾ)ದಿಂದ ಅಗ್ನಿಯನ್ನು ಪಾತ್ರೆಯಲ್ಲಿಟ್ಟುಕೊಂಡು, ಮೇಲೆ ಇನ್ನೊಂದು ಪಾತ್ರೆಯಿಂದ ಮುಚ್ಚಿ ತರಬೇಕು.

:ಅಸ್ತ್ರಾಯ ಫಟ್' ಮಂತ್ರವನ್ನು ಉಚ್ಚರಿಸುತ್ತ ಅಗ್ನಿ ಪಾತ್ರೆಯನ್ನು ಸ್ವೀಕರಿಸಬೇಕು. 'ಹುಮ್' ಮಂತ್ರ ಹೇಳುತ್ತ ಪಾತ್ರೆಯ ಮುಚ್ಚಳವನ್ನು ತೆಗೆಯಬೇಕು. ಪುನಃ 'ಅಸ್ತ್ರಾಯ ಫಟ್' ಉಚ್ಚಾರಣೆ ಮಾಡುತ್ತ, ಅದರ ಕೆಲವು ಅಂಶವನ್ನು ಮಾಂಸಭೋಜಿ ಅಗ್ನಿಗಾಗಿ ನೈಋತ್ಯ ದಿಕ್ಕಿನಲ್ಲಿ ಎಸೆಯಬೇಕು. ಪುನಃ ಮೂಲ ಮಂತ್ರವನ್ನು ಉಚ್ಚರಿಸುತ್ತ ಅಗ್ನಿಪಾತ್ರೆಯನ್ನು ತಮ್ಮ ಎದುರಿಗೆ ಇಟ್ಟುಕೊಂಡು ಸ್ವಲ್ಪ ರೂಪದಲ್ಲಿ ಸಿಂಚನೆ ಮಾಡಬೇಕು.

ಈಗ ಪರಮಾತ್ಮರೂಪಿ ಅನಲ (ಅಗ್ನಿ ವೈರುದ್ರಃ) ಮತ್ತು ಜಾಠರಾಗ್ನಿ ಮತ್ತು ಎದುರಿಗೆ ಇರುವ ಅಗ್ನಿಗಳಲ್ಲಿ ಏಕರೂಪತೆಯ ಭಾವನೆಗಳನ್ನು ಮಾಡುತ್ತ "ರಂ" ಬೀಜದಿಂದ ಅದರಲ್ಲಿ ಚೈತನ್ಯವನ್ನು ಉಂಟು ಮಾಡಬೇಕು. ನಂತರ ಬ್ರಾಹ್ಮಣರು ತಾರಾ ಮಂತ್ರ (ಓಂ)ದಿಂದ ಅಗ್ನಿಯನ್ನು ಅಭಿಮಂತ್ರಿತಗೊಳಿಸಿ, ಸುಧಾಬೀಜ (ವಂ)ದಿಂದ "ಧೇನು ಮುದ್ರಾ ಪ್ರದರ್ಶನ ಮಾಡುತ್ತ ಅದರ ಅಮೃತಿಕರಣ ಮಾಡಬೇಕು ಮತ್ತು "ಅಸ್ತ್ರಾಯ ಫಟ್" ಮಂತ್ರದಿಂದ ಅದನ್ನು ಸಂರಕ್ಷಿಸಬೇಕು.

ಆ ಮಧ್ಯಾಹ್ನಂ ಜಪಂ ಕುರ್ಯಾದುಪಾಂಶುತ್ವಥ ಮಾನಸಮ್ ।
ಹವಿಷ್ಯಂ ನಿಶಿ ಭುಂಜೀತ್ ತ್ರಿಸ್ನಾಯ್ಯಭ್ಯಂಗವರ್ಜಿತಃ
ವ್ಯಗ್ರತಾಲಸ್ಯನಿಷ್ಠೀವಕ್ರೋಧ ಪಾದ ಪ್ರಸಾರಣಮ್। ||106||
ಅನ್ಯ ಭಾಷಾಂ ಪರೇಕ್ಷಾಂ ಚ ಜಪಕಾಲೇ ತ್ಯಜೇತ್ ಸುಧೀಃ
ಸ್ತ್ರೀ ಶೂದ್ರ ಭಾಷಣಂ ನಿಂದಾಂ ತಾಂಬೂಲಂ ಶಯನಂ ದಿವಾ । ||107||
ಪ್ರತಿಗ್ರಹಂ ನೃತ್ಯಗೀತೆ ಕೌಟಿಲ್ಯಂ ವರ್ಜಯೇತ್ ಸದಾ
ಭೂಶಯ್ಯಾಂ ಬ್ರಹ್ಮಚರ್ಯ ಚ ತ್ರಿಕಾಲಂ ದೇವತಾರ್ಚನಮ್ । ||108||
ನೈಮಿತ್ತಿಕಾರ್ಚನಂ ದೇವಸ್ತುತಿಂ ವಿಶ್ವಾಸಮಾಶ್ರಯೇತ್
ಪ್ರತ್ಯಹಂ ಪ್ರತ್ಯಹಂ ತಾವತ್ಯೆವ ನ್ಯೂನಾಧಿಕಂ ಕ್ವಚಿತ್ । ||109||
ಏವಂ ಜಪಂ ಸಮಾಪ್ಯಾಂತೆ ದಶಾಂಶಂ ಹೋಮಮಾಚರೇತ್
ತತ್ತತ್ಕಲ್ಪೋದಿತೈರ್ದ್ರವ್ಯೈಸು ತದ್ವಿಧಾನಮುದೀರ್ಯತೆ । ||110||
ಪ್ರಾಣಾಯಾಮಂ ಷಡಂಗಂ ಚ ಕೃತ್ವಾ ಮೂಲೇನ ಮಂತ್ರವಿತ್ ||111||
ಕುಂಡೆ ವಾ ಸ್ಥಂಡಿಲೆ ಕುರ್ಯಾತ್ಸಂಸ್ಕಾರಾಣಾಂ ಚತುಷ್ಟಯಮ್ ।
ಮೂಲೇನೇಕ್ಷಣ ಮಂತ್ರೇಣಂ ಪ್ರೋಕ್ಷಣಂ ತಾಡನಂ ಕುಶೌ ||112||

ಸಾಧಕರು ಪ್ರಾತಃಕಾಲದಿಂದ ಮಧ್ಯಾಹ್ನದವರೆಗೆ ಉಪಾಂಶು ಅಥವಾ ಮಾನಸ ಜಪ ಮಾಡಬೇಕು. ಮೂರು ಸಮಯ ಸ್ನಾನ ಮಾಡಬೇಕು. ಅಭ್ಯಂಗ ಸ್ನಾನ ಮಾಡಬಾರದು. ವ್ಯಗ್ರತೆ, ಆಲಸ್ಯ, ಉಗುಳುವುದು, ಕ್ರೋಧ, ಕಾಲು ಚಾಚುವುದು, ಸ್ತ್ರೀಯರೊಂದಿಗೆ, ಶೂದ್ರರೊಂದಿಗೆ ಮಾತನಾಡುವುದು, ಅನ್ಯರನ್ನು ನಿಂದಿಸುವುದು, ತಾಂಬೂಲ ಸೇವನೆ, ಹಗಲು ನಿದ್ರಿಸುವುದು, ವೈರ ಸಾಧನೆ, ನೃತ್ಯ, ಗೀತಾದಿಗಳಲ್ಲಿ ಭಾಗವಹಿಸುವುದು, ಕುಟಿಲತೆಯನ್ನು ವರ್ಜ್ಯ ಮಾಡಬೇಕು. ಭೂಮಿಯ ಮೇಲೆ ಮಲಗುವುದು, ಬ್ರಹ್ಮಚರ್ಯ ಪಾಲನೆ, ತ್ರಿಕಾಲ ದೇವತಾರ್ಚನೆ ಮಾಡಬೇಕು. ನೈಮಿತ್ತಿಕ ಕರ್ಮಗಳು, ದೇವತಾ ಅರ್ಚನೆ ಮತ್ತು ದೇವತಾ ಸ್ತುತಿ ಮಾಡಬೇಕು. ಮತ್ತು ಇಷ್ಟದೇವತೆಯಲ್ಲಿ ಶ್ರದ್ಧೆ ಮತ್ತು ವಿಶ್ವಾಸವಿಟ್ಟಿರಬೇಕು. ಪ್ರತಿದಿನ ಒಂದೇ ಸಮಾನ





ಸಂಖ್ಯೆಯಲ್ಲಿ ಜಪ ಮಾಡಬೇಕು. ಹೆಚ್ಚು-ಕಡಿಮೆ ಮಾಡಬಾರದು. ಈ ಪ್ರಕಾರ ನಿಗದಿತ ಸಂಖ್ಯೆಯಲ್ಲಿ ಜಪ ಮಾಡಿದ ನಂತರ ದಶಾಂಶ ಹೋಮ ಮಾಡಬೇಕು.

ನಾಲಿಗೆ ಮತ್ತು ತುಟಿಗಳ ಚಲನೆಯ ಮೂಲಕ ತನಗೆ ಮಾತ್ರ ಕೇಳಿಸುವಂತೆ ಜಪ ಮಾಡುವುದಕ್ಕೆ 'ಉಪಾಂಶು' ಜಪವೆನ್ನುತ್ತಾರೆ. ಯಾವುದರಲ್ಲಿ ನಾಲಿಗೆ, ತುಟಿಗಳ ಸಂಚಲನವಿರದೆ, ಕೇವಲ ಮಂತ್ರ, ಮಂತ್ರಾರ್ಥ ಮತ್ತು ದೇವತೆಗಳ ಸ್ಮರಣ ಮಾಡಿ ಜಪ ಮಾಡಿದರೆ ಅದು 'ಮಾನಸ' ಜಪವಾಗುತ್ತದೆ.

ಹವಿಷ್ಯಾನ್ನ :

ಗೋಧಿ, ಹೆಸರುಬೇಳೆ, ಅಕ್ಕಿ, ಆಕಳಹಾಲು, ಮೊಸರು, ತುಪ್ಪ, ಬೆಣ್ಣೆ, ಸಕ್ಕರೆ, ಎಳ್ಳು, ಖೋವಾ, ತೆಂಗು ಬಾಳೆಹಣ್ಣು, ಹಣ್ಣು, ನೆಲ್ಲಿಕಾಯಿ, ಸೈಂಧವಲವಣ ಮುಂತಾದವುಗಳಿಗೆ ಹವಿಷ್ಯಾನ್ನವೆಂದು ಕರೆಯಲಾಗುತ್ತದೆ. ಇವುಗಳಿಂದ ತಯಾರಿಸಿದ ಭೋಜನವನ್ನು ದಿನದಲ್ಲಿ ಒಂದು ಬಾರಿ ಮಾತ್ರ ಮಾಡಬೇಕು. ಭೋಜನ ದೋಷವಿದ್ದರೆ ಮಂತ್ರಸಿದ್ಧಿಯಲ್ಲಿ ತಡೆಯಾಗುತ್ತದೆ.

ನಂತರ ಕಲ್ಪೋಕ್ತ ಗ್ರಂಥದಲ್ಲಿ ಹೇಳಿದಂತೆ ಹವಿಷ್ಯ ದ್ರವ್ಯಗಳಿಂದ ದಶಾಂಶ ಹೋಮವನ್ನು ಮಾಡುವ ವಿಧಾನವಿದೆ. ಪ್ರಾರಂಭದಲ್ಲಿ ಮೂಲಮಂತ್ರದಿಂದ ಪ್ರಾಣಾಯಾಮ ಮತ್ತು ಷಡಂಗನ್ಯಾಸ ಮಾಡಿ 'ಹುಮ್' ಮಂತ್ರದಿಂದ ಮುಷ್ಟಿಕಾದಿಂದ ಸೇಚನ ಮಾಡಬೇಕು. ಈಕ್ಷಣ, ಪ್ರೋಕ್ಷಣ, ತಾಡನ ಮತ್ತು ಸೇಂಚನ ಇವು ಕುಂಡದ ನಾಲ್ಕು ಸಂಸ್ಕಾರಗಳಾಗಿರುತ್ತವೆ.

ಅಗ್ನಿ ಪೂಜನ

ವರ್ಮಣಾ ಮುಷ್ಟಿನಾಸಿಕ್ಕ ಲಿಖೇದ್ಯಂತ್ರ ತದಂತರೆ ।
ವಹ್ನಿಕೋಣಷಡಸ್ರಾಷ್ಟದಲ ಭೂಮಂದಿರಾತ್ಮಕಮ್ ||113||
ಮಧ್ಯೆ ತಾರಪುಟಾಂ ಮಾಯಾಂ ಲಿಖಿತ್ವಾ ಪೀಠಮರ್ಚಯೇತ್ ।
ಮಂಡೂಕಾತ್ ಪರತತ್ವಾಂತಂ ಪೀಠಶಕ್ತಿರ್ಜಯಾದಿಕಾಃ ||114||
ವಾಗೀಶಿವಾಗೀಶ್ವರಯೋರ್ಯೋಗಪೀಠಾತ್ಮನೆ ನಮಃ ।
ಮಾಯಾದಿಕಃ ಪೀಠಮಂತ್ರಸ್ತಯೋಸ್ತೇನಾಸನಂ ದಿಶೇತ್ ||115||

ಪರ್ಯಂತ ವರ್ಣಗಳ ವಿಲೋಮ ಕ್ರಮದಲ್ಲಿ ಲಲಾಟಾದಿ ಸ್ಥಾನಗಳಲ್ಲಿ ನ್ಯಾ ಮಾಡಬೇಕು.

ಸೃಷ್ಟಿನ್ಯಾಸದಲ್ಲಿ ವಿಸರ್ಗಯುಕ್ತ ವರ್ಣಗಳಿಂದ, ಸ್ಥಿತಿನ್ಯಾಸದಲ್ಲಿ ವಿಸರ್ಗ ಮ ಅನುಸ್ವಾರಯುಕ್ತ ಎರಡು ಪ್ರಕಾರದ ವರ್ಣಗಳಿಂದ ಮತ್ತು ಸಂಹಾರನ್ಯಾಸದಲ್ಲಿ ಅನುಸ್ವಾರಯುಕ್ತ ವರ್ಣಗಳಿಂದ ನ್ಯಾಸ ಮಾಡಬೇಕು. ಅಂಗ ಪೂಜೆಯಲ್ಲಿ ವರ್ಣ ಪ್ರಾರಂಭದಲ್ಲಿ ಪ್ರಣವ ಮತ್ತು ಅಂತ್ಯದಲ್ಲಿ ನಮಃ ಸೇರಿಸಿ ನ್ಯಾಸ ಮಾಡ ವಿಧಾನವಿರುತ್ತದೆ. ಉದಾಹರಣಾರ್ಥ, ಓಂ ಅಂ ನಮಃ, ಓಂ ಆಂ ನಮಃ

ಸೃಷ್ಟಿನ್ಯಾಸಂ ಸ್ಥಿತಿನ್ಯಾಸಂ ಪುನಃ ಕುರ್ಯಾತ್ ಪ್ರಯತ್ನತಃ ।<br>
ಅನ್ಯೆ ತು ಮಾತೃಕಾ ನ್ಯಾಸಾಃ ಕಥ್ಯಾಃ ಪೂಜತರಂಗಕೆ ||100||

ಸಂಹಾರನ್ಯಾಸದ ನಂತರ ಪುನಃ ಪ್ರಯತ್ನಪೂರ್ವಕವಾಗಿ ಸ್ಥಿತಿನ್ಯಾಸ ಮ ಸೃಷ್ಟಿನ್ಯಾಸ ಮಾಡಬೇಕು. ಮಾತೃಕಾನ್ಯಾಸದ ಹೆಚ್ಚಿನ ವಿವರಗಳನ್ನು ಪೂಜಾ ತ (29ನೇ ತರಂಗದಲ್ಲಿ) ಕೊಡಲಾಗಿದೆ.

ಮಂತ್ರಸ್ನಾನಾದಿವಿಧಯೊ ಗದ್ಯಾಸ್ತತ್ರೈವ ತೆ ಮಯಾ ।<br>
ಭಾರತೀಮೇವಮಾರಾಧ್ಯ ಭಜೇದಿಷ್ಟಾನ್ ಮನೂನ್ ಸುಧಿಃ ||<br>
ವಿಷ್ಣುಃ ಶಿವೊ ಗಣೇಶೊರ್ಕೊ ದುರ್ಗಾ ಪಂಚೈವ ದೇವತಾಃ ।<br>
ಆರಾಧ್ಯಾಃ ಸಿದ್ಧಕಾಮೇನ ತತ್ತನ್ಮಂತ್ರೈರ್ಯಥೋದಿತಮ್ ||<br>
ಆದೌ ದೇವಂ ವಶೀಕರ್ತುಂ ಪುರಶ್ಚರಣ ಮಾಚರೇತ್ ।<br>
ತೀರ್ಥಾದೌ ನಿರ್ಜನೆ ಸ್ಥಾನೆ ಭೂಮಿಗ್ರಹಣ ಪೂರ್ವಕಮ್ ||<br>
ನವಧಾ ತಾಂ ಧರಾಂ ಕೃತ್ವಾ ಪೂರ್ವಾದಿಷು ಸಮಾಲಿಖೇತ್ ।<br>
ಕೋಷ್ಠೇಷು ಸಪ್ತವರ್ಗಾಶ್ಚ ಲಕ್ಷೌ ಮಧ್ಯೆ ತಥಾ ಸ್ವರಾನ್ ||<br>
ಕ್ಷೇತ್ರನಾಮಾದಿಮೊ ವರ್ಣಸ್ತತ್ರ ಕೋಷ್ಠೆ ಭವೇತ್ತತಃ ।<br>
ಉಪವಿಶ್ಯ ಜಪಂ ಕುರ್ಯಾನ್ನಾನ್ಯಸ್ಮಿನ್ ದುಃಖದೆ ಸ್ಥಲೆ ||

ಈಗ ಮಂತ್ರಸ್ನಾನ ಮುಂತಾದ ವಿಧಾನಗಳನ್ನು ವಿವರಿಸುತ್ತೇವೆ. ಸಾಧಕನು ಸರಸ್ವತಿಯ ಆರಾಧನೆಯ ನಂತರವೇ ತನ್ನ ಇಷ್ಟದೇವತೆಯ ಮಂತ್ರಗಳ ಆರಾ ಮಾಡಬೇಕು. ವಿಷ್ಣು, ಶಿವ, ಗಣೇಶ, ಸೂರ್ಯ ಮತ್ತು ದುರ್ಗಾ ಈ ಐ ಪಂಚಾಯತನದ ದೇವತೆಗಳಾಗಿವೆ. ಸಿದ್ಧಿಯ ಆಕಾಂಕ್ಷಿಯಾದ ಸಾಧಕನು ಆ





ಮಂತ್ರಗಳಿಂದ ಶಾಸ್ತ್ರ ವಿಧಿತ ವಿಧಾನಕ್ಕನುಗುಣವಾಗಿ ಅವುಗಳ ಆರಾಧನೆಯನ್ನು ಮಾಡಬೇಕು.

ಪುರಶ್ಚರಣದ ಪ್ರಾರಂಭದಲ್ಲಿ, ಇಷ್ಟದೇವತೆಯನ್ನು ತನ್ನ ವಶವರ್ತಿಯನ್ನಾಗಿ ಮಾಡಿಕೊಳ್ಳಲು ಯಾವುದಾದರೊಂದು ತೀರ್ಥಕ್ಷೇತ್ರ, ಅಥವಾ ನಿರ್ಜನವನದಲ್ಲಿ, ಯಾವುದಾದರೊಂದು ಪವಿತ್ರ ಸ್ಥಳವನ್ನು ನಿಶ್ಚಿತಗೊಳಿಸಿ ಪುರಶ್ಚರಣ ಕ್ರಿಯೆಯನ್ನು ಪ್ರಾರಂಭಿಸಬೇಕು. ಪುರಶ್ಚರಣಕ್ಕಾಗಿ ಇಚ್ಛಿತ ಭೂಮಿಯನ್ನು ಒಂಬತ್ತು ಭಾಗಗಳಲ್ಲಿ ವಿಭಜನೆ ಮಾಡಬೇಕು. ಪೂರ್ವದಿಂದ ಪ್ರಾರಂಭಿಸಿ ಉತ್ತರದವರೆಗೆ ಏಳು ದಿಕ್ಕುಗಳಲ್ಲಿ ಏಳು ವರ್ಗ, ಈಶಾನ್ಯ ಮೂಲೆಯಲ್ಲಿ ಲ, ಕ್ಷ ವರ್ಣ ಮತ್ತು ಮಧ್ಯದಲ್ಲಿ ಸ್ವರಗಳನ್ನು ಬರೆಯಬೇಕು. ಪುರಶ್ಚರಣದ ಸ್ಥಾನದ ಹೆಸರಿನ ಮೊದಲನೆಯ ಅಕ್ಷರವು ಯಾವ ಕೋಷ್ಟಕದಲ್ಲಿರುತ್ತದೆಯೋ, ಸ್ಥಾನದ ಆ ಭಾಗದಲ್ಲಿ ಕುಳಿತು ಮಂತ್ರಜಪ ಮಾಡಬೇಕು. ಅನ್ಯ ಸ್ಥಾನಗಳಲ್ಲಿ ಮಾಡಬಾರದು. ವಿವರಣೆಗಾಗಿ ಈ ಕೋಷ್ಟಕವನ್ನು ಗಮನಿಸಿರಿ :

ಪೂರ್ವ

| | | | | |
|---|---|---|---|---|
| ಈಶಾನ್ಯ | ಲ, ಕ್ಷ | ಕ ಖ ಗ ಘ ಙ | ಚ,ಛ,ಜ,ಝ | ಆಗ್ನೇಯ |
| ಉತ್ತರ | ಶ,ಷ,ಸ,ಹ | ಮಧ್ಯ<br>ಅ, ಆ, ಇ, ಈ, ಉ, ಊ.<br>ಋ, ಋೂ, ಲ, ಳ, ಎ, ಏ,<br>ಒ, ಔ, ಅಂ, ಅಃ | ಟ,ಠ,ಡ,ಢ,ಣ | ದಕ್ಷಿಣ |
| ವಾಯುವ್ಯ | ಯ,ರ,ಲ,ವ | ಪ, ಫ, ಬ, ಭ ,ಮ | ತ,ಥ,ದ,ಧ,ನ | ನೈಋತ್ಯ |

ಪಶ್ಚಿಮ

ಉದಾಹರಣಾರ್ಥವಾಗಿ, ಪುರಶ್ಚರಣಕ್ಕಾಗಿ ಕಾಶಿಯ ಯಾವುದೋ ನಿರ್ಜನ ಸ್ಥಾನವನ್ನು ಆಯ್ದುಕೊಳ್ಳಬೇಕಾಗಿದೆ. ಎಂದು ತಿಳಿಯಿರಿ. ಒಂಬತ್ತು ಭಾಗದ ಈ ಕೋಷ್ಟಕದಲ್ಲಿ ಕಾಶಿಯ ಮೊದಲಾಕ್ಷರ ಕ ವು ಪೂರ್ವ ಭಾಗದಲ್ಲಿರುತ್ತದೆ. ಕಾರಣ, ಕಾಶಿಯ ಪೂರ್ವ ಭಾಗದ ಯಾವುದಾದರೊಂದು ನಿರ್ಜನ ಸ್ಥಾನವನ್ನು ಆಯ್ದುಕೊಂಡು ಮಂತ್ರ ಜಪ ಮಾಡಬೇಕು.

ಓಂ ವಂ ಮೇದಾತ್ಮನೆ ನಮಃ ವಾಮಾಂಸೆ
ಓಂ ಶಂ ಅಸ್ಥ್ಯಾತ್ಮನೆ ನಮಃ ಹೃದಯಾದಿ ದಕ್ಷಹಸ್ತಾಂತಮ್
ಓಂ ಷಂ ಮಜ್ಜಾತ್ಮನೆ ನಮಃ ಹೃದಯಾದಿ ವಾಮಹಸ್ತಾಂತಮ್
ಓಂ ಸಂ ಶುಕ್ರಾತ್ಮನೆ ನಮಃ ಹೃದಯಾದಿ ದಕ್ಷಪಾದಾಂತಮ್
ಓಂ ಹಂ ಆತ್ಮನೆ ನಮಃ ಹೃದಯಾದಿ ವಾಮಪಾದಾಂತಮ್
ಓಂ ಳಂ ಪರಮಾತ್ಮನೆ ನಮಃ ಜಠರೆ
ಓಂ ಕ್ಷಂ ಪ್ರಾಣಾತ್ಮನೆ ನಮಃ ಮುಖೆ

ಈ ಪ್ರಕಾರ ಹೃದಯದಿಂದ ಎರಡೂ ಕೈಗಳು, ಕಾಲುಗಳು, ಜಠರ ಮತ್ತು ಮುಖದಲ್ಲಿ ಸೃಷ್ಟಿನ್ಯಾಸ ಮಾಡಿ ಸ್ಥಿತಿನ್ಯಾಸ ಮಾಡಬೇಕು.

## ಸ್ಥಿತಿನ್ಯಾಸ

ಸ್ಥಿತಿನ್ಯಾಸದ ಋಷಿ, ಛಂದ ಇತ್ಯಾದಿ ಮೊದಲಿನಂತೆಯೆ ಇರುತ್ತದೆ. ವಿಶ್ವಪಾಲಿನಿ ದೇವತೆ, ತನ್ನ ಪ್ರಿಯತಮನ ಮಡಿಲಲ್ಲಿ ಕುಳಿತಿರುವ ಈ ದೇವಿಯನ್ನು ಸಾಧಕನು ಏಕಾಗ್ರಚಿತ್ತದಿಂದ ಧ್ಯಾನ ಮಾಡಬೇಕು. ದೇವಿಯ ಬಲಗೈಯಲ್ಲಿ ವರಮುದ್ರಾ, ಅಕ್ಷಸೂತ್ರ, ದಿವ್ಯಮಾಲಾ ಮತ್ತು ಎಡಕೈಯಲ್ಲಿ ಮೃಗಶಾವಕ, ವಿದ್ಯಾ, ವರ್ಣಮಾಲೆ ಯಿರುತ್ತದೆ. ಈ ಪ್ರಕಾರ ವಿಶ್ವಪಾಲಿನಿ ಸರಸ್ವತಿಯನ್ನು ಧ್ಯಾನ ಮಾಡಿಡಬೇಕು.

ವಿನಿಯೋಗಃ ಓಂ ಅಸ್ಯ ಶ್ರೀ ಮಾತೃಕಾನ್ಯಾಸಸ್ಯ ಪ್ರಜಾಪತಿ ಋಷಿಃ ಗಾಯತ್ರೀ ಛಂದಃ ವಿಶ್ವಪಾಲಿನಿ ದೇವತಾ ಹಲೊ ಬೀಜಾನಿ ಸ್ವರಾ ಶಕ್ತಯಃ ಕ್ಷಂ ಕೀಲಕಮ್ ಅಭೀಷ್ಟಪ್ರಾಪ್ತಯೆ ಸ್ಥಿತಿ ಮಾತೃಕಾನ್ಯಾಸೆ ವಿನಿಯೋಗಃ

ಧ್ಯಾನ ಮಾಡಿದ ನಂತರ ಡಕಾರಾದಿ ವರ್ಣಗಳಿಂದ ದಕ್ಷಿಣ ಗುಲ್ಫದಿಂದ ವಾಮಜಾನು (ಎಡ ತೊಡೆ) ಪರ್ಯಂತ ಅಂಗಗಳಲ್ಲಿ ನ್ಯಾಸ ಮಾಡಬೇಕು. ಇದನ್ನು ಸ್ಥಿತಿನ್ಯಾಸವೆಂದು ಕರೆಯಲಾಗುತ್ತದೆ.

ಓಂ ಡಂ ನಮಃ ದಕ್ಷಿಣ ಗುಲ್ಫೆ
ಓಂ ಢಂ ನಮಃ ದಕ್ಷಪಾದಾಂಗುಲಿಮೂಲೆ
ಓಂ ಣಂ ನಮಃ ದಕ್ಷಿಣಪಾದಾಂಗುಲ್ಯಗ್ರೆ
ಓಂ ತಂ ನಮಃ ವಾಮಪಾದಮೂಲೆ





ಓಂ ಥಂ ನಮಃ ವಾಮಪಾದಜಾನುನಿ

ಈ ಪ್ರಕಾರ ಬಲಗುಲ್ಫದಿಂದ ವಾಮಜಾನು ಪರ್ಯಂತ ಸ್ಥಿತಿನ್ಯಾಸ ಮಾಡಬೇಕು.

ಏವಂ ಧ್ಯಾತ್ವಾ ಡಕಾರಾಧ್ಯಾನ್ವರ್ಣಾಂಗೇಷು ವಿನ್ಯಸೇತ್।
ಗುಲ್ಫಾದಿ ಜಾನು ಪರ್ಯ್ಯಂತಂ ಸ್ಥಿತಿನ್ಯಾಸೋಯ ಮೀರಿತಃ ॥95॥

## ಸಂಹಾರನ್ಯಾಸ

ನ್ಯಾಸೆ ಸಂಹಾರಸಂಜ್ಞೆ ತು ಋಷಿಶ್ಛಂದಶ್ಚ ಪೂರ್ವವತ್।
ಸಂಹಾರಿಣಿಸಪತ್ನಾನಾಂ ಶಾರದಾ ದೇವತಾ ಸ್ಮೃತಾ ॥96॥
ಅಕ್ಷಸ್ರಕ್ಚಂ ಗಸಾರಂಗ ವಿದ್ಯಾಹಸ್ತಾಂ ತ್ರಿಲೋಚನಾಮ್।
ಚಂದ್ರಮೌಲಿಂ ಕುಚಾನಮ್ರಾಂ ರಕ್ತಾಬ್ಜಸ್ಥಾಂ ಗಿರಂ ಭಜೆ ॥97॥
ಧ್ಯಾತ್ವೈವಂ ವಿನ್ಯಸೇದ್ವರ್ಣಾನ್ ಕ್ಷಾದ್ಯಾನಂತಾತ್ ವಿಲೋಮತಃ ।
ಸೃಷ್ಟಿನ್ಯಾಸೆ ತು ಸರ್ಗಾಂತಾಃ ಸರ್ಗಬಿಂದ್ವಂತಿಕಾಃ ಸ್ಥಿತೌ ॥98॥
ಬಿಂದ್ವಂತಾಃ ಸಂಹೃತೊ ಚೈಷಾ ಪೂರ್ವವಚ್ಚಾಂಗ ಪೂಜನೆ ।
ನ್ಯಸ್ಯಾಃ ಸರ್ವತ್ರ ನತ್ಯಂತಾ ವರ್ಣಾ ವಾ ತಾರಸಂಪುಟಾಃ ॥99॥

ಸೃಷ್ಟಿನ್ಯಾಸ ಮಾಡಿದ ನಂತರ ಸಂಹಾರನ್ಯಾಸ ಮಾಡಬೇಕು. ಸಂಹಾರನ್ಯಾಸದ ಋಷಿ ಮತ್ತು ಛಂದ ಪೂರ್ವದಲ್ಲಿಯಂತಿರುತ್ತದೆ. ಶತ್ರುಪ್ರಣಾಶಿನಿ ಶಾರದೆ ಇದರ ದೇವತೆಯಾಗಿರುತ್ತಾಳೆ.

ಧ್ಯಾನ :

ರಕ್ತ ವರ್ಣದ ಕಮಲದಲ್ಲಿ ವಿರಾಜಮಾನಳಾಗಿ ಬಲಗೈಯಲ್ಲಿ ಅಕ್ಷಮಾಲೆ, ಪರಶು ಮತ್ತು ಎಡಗೈಯಲ್ಲಿ ಮೃಗಶ್ರಾವಕ ಮತ್ತು ವಿದ್ಯೆಯನ್ನು ಹೊಂದಿದ್ದು, ಚಂದ್ರಕಲೆಗಳಿಂದ ಸುಶೋಭಿತ ಸ್ತನಭಾರದಿಂದ ಬಾಗಿರುವ ಮತ್ತು ಮೂರು ನೇತ್ರವುಳ್ಳ ಶಾರದಾ ದೇವಿಯ ಧ್ಯಾನವನ್ನು ಮಾಡುತ್ತೇನೆ.

ವಿನಿಯೋಗ : ಅಸ್ಯ ಶ್ರೀ ಸಂಹಾರ ಮಾತೃಕಾನ್ಯಾಸಸ್ಯ ಪ್ರಜಾಪತಿ ಋಷಿಃ ಗಾಯತ್ರಿ ಛಂದಃ ಶತ್ರು ಸಂಹಾರಿಣಿ ಶಾರದಾ ದೇವತಾ ಹಲೋ ಬೀಜಾನಿ ಸ್ವರಾ ಶಕ್ತಯಃ ಕ್ಷಂ ಕೀಲಕಂ ಮಮಾಭೀಷ್ಟ ಸಿದ್ಧ್ಯರ್ಥೆ ನ್ಯಾಸೆ ವಿನಿಯೋಗಃ ॥

ವಿನಿಯೋಗ ಮತ್ತು ಧ್ಯಾನದ ನಂತರ ಕ್ಷ ಕಾರಾದಿ ವರ್ಣಗಳಿಂದ ಅಕಾರ

ಲಲಾಟೆ ಮುಖವೃತ್ತೇಕ್ಷಿಶ್ರವೋನಾಸಾಸು ಗಂಡಯೋಃ ।
ಓಷ್ಠಯೋರ್ದಂತ ಪಂಕ್ತ್ಯೋಶ್ಚ ಮೂರ್ಧ್ನಿವಕ್ತ್ರೇ ನ್ಯಸೇತ್ಸ್ವರಾನ್
ಬಾಹ್ವೋಃ ಸಂಧಿಷು ಸಾಗ್ರೇಷು ಕಚವರ್ಗೌ ನ್ಯಸೇತ್ ಸುಧಿಃ । ||89||
ಟತವರ್ಗೌ ಪದೋಸ್ತದ್ವತ ಪಾರ್ಶ್ವಯೋಃ ಪೃಷ್ಠದೇಶತಃ
ನಾಭೌ ಕುಕ್ಷಾ ಪ ವರ್ಗ ಚ ಹೃದಂಸಂ ಕುಕುದಂ ತತಃ । ||90||
ನ್ಯಸ್ಯ ಯಾದಿ ಚತುರ್ವರ್ಣೌಟ್ಬಾದಿಷಟಕಂ ತತೋ ನ್ಯಸೇತ್
ಹೃದಾದಿಕರಯೋರಂಗಮಧ್ಯೋಜ್ಜಠರೆ ವದನೆ ತಥಾ । ||91||
ಸೃಷ್ಟಿನ್ಯಾಸಂ ವಿಧಾಯೈವಂ ಸ್ಥಿತಿನ್ಯಾಸಂ ಸಮಾಚರೇತ್
ಋಷಿಶ್ಛಂದಸ್ಯ ಪೂರ್ವೋಕ್ತೋ ದೇವತಾ ವಿಶ್ವಪಾಲಿನಿ । ||92||
ಉಪವಿಷ್ಟಾಂ ವಲ್ಲಭಾಂಗೆ ಧ್ಯಾಯೇದ್ ದೇವಿಮನನ್ಯಧೀಃ
ಮೃಗಬಾಲಂ ವರಂ ವಿದ್ಯಾಮಕ್ಷಸೂತ್ರಂ ದಧತ್ ಕರೈಃ । ||93||
ಮಾಲಾವಿದ್ಯಾಲಸದ್ದಸ್ತಾಂ ವಹನ್ ಧ್ಯೇಯಃ ಶಿವೋಗಿರಮ್ ||94||

ಈಗ ಶರೀರದಲ್ಲಿ ಮಾತೃಕಾನ್ಯಾಸ ವಿಧಾನವನ್ನು ಹೇಳಲಾಗುತ್ತದೆ. ಮಸ್ತಕ, ಮುಖ, ಎರಡು ನೇತ್ರಗಳು, ಎರಡು ಕಣ್ಣುಗಳು, ಎರಡೂ ನಾಸಿಕ ರಂಧ್ರಗಳು, ಎರಡೂ ಗಂಡಸ್ಥಳಗಳು, ಎರಡೂ ತುಟಿಗಳು, ಎರಡೂ ದಂತಪಂಕ್ತಿಗಳು, ಶಿರ ಮತ್ತು ಬಾಯಿಯಲ್ಲಿ ನ್ಯಾಸ ಮಾಡಬೇಕು. ಎರಡೂ ಬಾಹುಗಳಲ್ಲಿ, ಮೂಲ, ಕೂರ್ಪರ, ಮಣಿಬಂಧ, ಅಂಗುಲಿಮೂಲ ಮತ್ತು ಅಂಗುಲಿ (ಬೆರಳಿನ) ಮೇಲ್ಭಾಗದಲ್ಲಿ ಕ್ರಮವಾಗಿ ಕ ವರ್ಗ ಮತ್ತು ಚ ವರ್ಗಗಳ ನ್ಯಾಸ ಮಾಡಬೇಕು. ಟ ವರ್ಗ ಮತ್ತು ತ ವರ್ಗದ ನ್ಯಾಸವನ್ನು ಎರಡೂ ಕಾಲುಗಳ ಮೂಲ, ತೊಡೆ, ಗುಲ್ಫ, ಪಾದದ ಬೆರಳಿನ ಮೂಲ ಮತ್ತು ಪಾದದ ಬೆರಳಿನ ಅಗ್ರಭಾಗದಲ್ಲಿ, ಪ ವರ್ಗದ ನ್ಯಾಸವನ್ನು ಎರಡೂ ಪಾರ್ಶ್ವ, ಬೆನ್ನು, ನಾಭಿ ಮತ್ತು ಉದರದಲ್ಲಿ, ಯ ವರ್ಗದ ನಾಲ್ಕು ವರ್ಣ ಯ, ರ, ಲ, ವ ಗಳ ನ್ಯಾಸವನ್ನು ಹೃದಯ, ಎರಡೂ ಹೆಗಲು ಮತ್ತು ಕಿಕುದ ಮತ್ತು ಶ, ಷ, ಸ, ಹ ಗಳ ನ್ಯಾಸವನ್ನು ಎರಡೂ ಕೈಗಳು ಮತ್ತು ಎರಡು ಕಾಲುಗಳಲ್ಲಿ, ಳ ಮತ್ತು ಕ್ಷದ ನ್ಯಾಸವನ್ನು ಉದರ ಮತ್ತು ಬಾಯಿಯಲ್ಲಿ ಮಾಡಬೇಕು.





ನ್ಯಾಸ ಕ್ರಮ

| | |
|---|---|
| ಓಂ ಅಂ ನಮಃ ಲಲಾಟೆ | ಓಂ ಆಂ ನಮಃ ಮುಖವೃತೆ |
| ಓಂ ಇಂ ನಮಃ ದಕ್ಷನೇತ್ರ | ಓಂ ಈಂ ನಮಃ ವಾಮನೇತ್ರ |
| ಓಂ ಉಂ ನಮಃ ದಕ್ಷಕರ್ಣೆ | ಓಂ ಊಂ ನಮಃ ವಾಮಕರ್ಣೆ |
| ಓಂ ಋಂ ನಮಃ ದಕ್ಷನಾಸಾಪುಟೆ | ಓಂ ೠಂ ನಮಃ ವಾಮನಾಸಾಪುಟೆ |
| ಓಂ ಌಂ ನಮಃ ದಕ್ಷಗಂಡೆ | ಓಂ ೡಂ ನಮಃ ವಾಮಗಂಡೆ |
| ಓಂ ಏಂ ನಮಃ ಊಧ್ವೋಷ್ಠೆ | ಓಂ ಐಂ ನಮಃ ಅಧರೋಷ್ಠೆ |
| ಓಂ ಓಂ ನಮಃ ಊರ್ಧ್ವದಂತಪಂಕ್ತ್ಯೆ | ಓಂ ಔಂ ನಮಃ ಅಧೋದಂತಪಂಕ್ತೆ |
| ಓಂ ಅಂ ನಮಃ ಮೂರ್ಧ್ನಿ | ಓಂ ಅಃ ನಮಃ ಮುಖೆ |

ಈ ಪ್ರಕಾರ ವರ್ಣಗಳ ಆದಿಯಲ್ಲಿ ಪ್ರಣವ, ಮಾಯಾ, ಬೀಜ, ಲಕ್ಷ್ಮೀ ಬೀಜ ಮತ್ತು ವಾಗ್ಬೀಜ ಮತ್ತು ಅಂತ್ಯದಲ್ಲಿ ನಮಃ ಸೇರಿಸಿ ಶರೀರದಲ್ಲಿ ಸಮಸ್ತ ವರ್ಣಗಳ ನ್ಯಾಸ ಮಾಡಬೇಕು.

| | |
|---|---|
| ಓಂ ಕಂ ನಮಃ ದಕ್ಷಬಾಹುಮೂಲೆ | ಓಂ ಖಂ ನಮಃ ವಾಮಬಾಹುಕೂರ್ಪರೆ |
| ಓಂ ಗಂ ನಮಃ ದಕ್ಷಬಾಹುಮಣಿಬಂಧೆ | ಓಂ ಘಂ ನಮಃ ದಕ್ಷಬಾಹು ಹಸ್ತಾಂಗುಲಿಮೂಲ |
| ಓಂ ಙಂ ನಮಃ ದಕ್ಷಬಾಹ್ವಂಗುಲ್ಯಗ್ರೆ | ಓಂ ಚಂ ನಮಃ ವಾಮಬಾಹುಮೂಲೆ |
| ಓಂ ಛಂ ನಮಃ ವಾಮಬಾಹುಕೂರ್ಪರಾ | ಓಂ ಜಂ ನಮಃ ವಾಮಬಾಹುಮಣಿಬಂಧೆ |
| ಓಂ ಝಂ ನಮಃ ವಾಮವಾಹ್ವಂಗುಲಿಮೂಲೆ | ಓಂ ಞಂ ನಮಃ ವಾಮ ವಾಹ್ವಂಗ್ಯುಲ್ಯಗ್ರೆ |
| ಓಂ ಟಂ ನಮಃ ದಕ್ಷಿಣಪಾದಮೂಲೆ | ಓಂ ಠಂ ನಮಃ ದಕ್ಷಿಣಪಾದ ಜಾನುನಿ |
| ಓಂ ಡಂ ನಮಃ ದಕ್ಷಿಣಗುಲ್ಫೆ | ಓಂ ಢಂ ನಮಃ ದಕ್ಷಿಣಪಾದಾಂಗುಲಿಮೂಲೆ |
| ಓಂ ಣಂ ನಮಃ ದಕ್ಷಿಣಪಾದಾಂಗುಲ್ಯಗ್ರೆ | ಓಂತಂ ನಮಃ ವಾಮಪಾದಗುಲ್ಫೆ |
| ಓಂ ಥಂ ನಮಃ ವಾಮಪಾದಾಂಗುಲಿಮೂಲೆ | ಓಂ ನಂ ನಮಃ ವಾಮಪಾದಾಂಗ್ಯುಲಗ್ರೆ |
| ಓಂ ಪಂ ನಮಃ ದಕ್ಷಿಣಪಾರ್ಶ್ವೆ | ಓಂ ಫಂ ನಮಃ ವಾಮಪಾರ್ಶ್ವೆ |
| ಓಂ ಬಂ ನಮಃ ಪೃಷ್ಠೆ | ಓಂ ಭಂ ನಮಃ ನಾಭೌ |
| ಓಂ ಮಂ ನಮಃ ಉದರೆ | ಓಂ ಯಂ ತ್ವಗಾತ್ಮನೆ ನಮಃ ಹೃದಿ |
| ಓಂ ರಂ ಅಸೃಗಾತ್ಮನೆ ನಮಃ ದಕ್ಷಾಂಸೆ | ಓಂ ಲಂ ಮಾಂಸಾತ್ಮನೆ ನಮಃ ಕಕುದಿ |

ಓಂ ಅಂ ಕ್ಷಂ ಕೀಲಕಾಯ ನಮಃ ಅಃ ಸರ್ವಾಂಗೇ

ಕರನ್ಯಾಸ ಮತ್ತು ಅಂಗನ್ಯಾಸ

ಓಂ ಅಂ ಕಂ ಖಂ ಗಂ ಘಂ ಙಂ — ಅಂ ಅಂಗುಷ್ಠಾಭ್ಯಾಂ ನಮಃ ।
ಓಂ ಈಂ ಚಂ ಛಂ ಜಂ ಝಂ — ಈಂ ತರ್ಜನೀಭ್ಯಾಂ ನಮಃ ।
ಓಂ ಉಂ ಟಂ ಠಂ ಡಂ ಢಂ ಣಂ — ಓಂ ಮಧ್ಯಮಾಭ್ಯಾಂ ನಮಃ ।
ಓಂ ಏಂ ತಂ ಥಂ ದಂ ಧಂ ನಂ — ಏಂ ಅನಾಮಿಕಾಭ್ಯಾಂ ನಮಃ ।
ಓಂ ಓಂ ಪಂ ಫಂ ಬಂ ಭಂ ಮಂ — ಔಂ ಕನಿಷ್ಠಿಕಾಭ್ಯಾಂ ನಮಃ ।
ಓಂ ಕ್ಷಂ ಯಂ ರಂ ಲಂ ವಂ ಶಂ — ಷಂ ಸಂ ಹಂ ಲಂ ಕ್ಷಂ
ಅಃ ಕರತಲಕರಪೃಷ್ಠಾಭ್ಯಾಂ ನಮಃ ।

ಈ ಪ್ರಕಾರ ಮಂತ್ರಗಳಿಂದ ಕ್ರಮವಾಗಿ ಹೃದಯ, ಶಿರ, ಶಿಖಾ, ಕವಚ, ನೇತ್ರಗಳನ್ನು ಸ್ಪರ್ಶ ಮಾಡಬೇಕು. ನಂತರ ಕೊನೆಯ ಮಂತ್ರದ ಮುಂದೆ 'ಅಸ್ತ್ರಾಯ ಫಟ್' ಎಂದು ಹೇಳಿ ಚಪ್ಪಾಳೆ ತಟ್ಟಬೇಕು.

**ಪಂಚಾಶದಕ್ಷರೈರಚಿತಾಂಗ ಭಾಗಾಂ ಧೃತೇಂದು ಖಂಡಾ ಕುಮುದಾವದಾತಾಮ್।**
**ವರಾಭಯ ಪುಸ್ತಕಮಕ್ಷಸೂತ್ರಂ ಭಜೇಗಿರಂ ಸಂದಧಂತಿ ತ್ರಿನೇತ್ರಾಮ್ ॥81॥**

ಹದಿನಾರು ಸ್ವರಗಳು ಮತ್ತು ಮೂವತ್ನಾಲ್ಕು ಹಲಗಳು ಸೇರಿ ಒಟ್ಟು ಐವತ್ತು ವರ್ಣಗಳಿಂದ ಯಾರ ಶರೀರವು ರಚಿಸಲ್ಪಟ್ಟಿದೆಯೋ, ಯಾರು ಮಸ್ತಕದಲ್ಲಿ ಚಂದ್ರಕಲೆಯನ್ನು ಧಾರಣ ಮಾಡಿರುವರೋ, ಯಾರು ಕಮಲದಂತೆ ಅತ್ಯಂತ ಶುಭ್ರರಾಗಿರುವರೋ, ಯಾರ ಎಡಗೈಯಲ್ಲಿ ಅಕ್ಷಮಾಲಾ, ಬಲಗೈಯಲ್ಲಿ ವರದ ಮುದ್ರೆ, ಅಭಯ ಮುದ್ರೆ ಮತ್ತು ಪುಸ್ತಕಗಳು ಶೋಭಿತವಾಗಿರುವವೋ, ಸಮಸ್ತ ವಾಣಿಗಳನ್ನು ಧಾರಣ ಮಾಡಿರುವ, ತ್ರಿನೇತ್ರವುಳ್ಳವಳಾದ ಸರಸ್ವತಿಯನ್ನು ನಾನು ಧ್ಯಾನಿಸುತ್ತೇನೆ.

**ಪೀಠ ಮತ್ತು ಆವರಣ ಪೂಜೆ**

**ಧ್ಯಾತ್ವೈವಂ ಪೂಜಯೇತ್ ಪೀಠೆ ದೇವತಾಃ ಪೂರ್ವಮೀರಿತಾಃ ।**
**ಪೀಠಶಕ್ತಿಸ್ತದುಪರಿ ಸರಸ್ವತ್ಯಾನವಾರ್ಚಯೇತ್ ॥82॥**
**ಮೇಧಾಪ್ರಜ್ಞಾಪ್ರಭಾ ವಿದ್ಯಾಶ್ರೀ ಧೃತಿ ಸ್ಮೃತಿ ಬುದ್ಧಯಃ ।**
**ವಿದ್ಯೇಶ್ವರೀತಿ ಸಂಪ್ರೋಕ್ತಾ ಮಾತೃಕಾ ಪೀಠಶಕ್ತಯಃ ॥83॥**





**ವಿಯದ್‌ಭೃಗುಸ್ಥಮನುಯುಗ್ವಿಸರ್ಗಾಢ್ಯಂ ಚ ಮಾತೃಕಾ ।**
**ಯೋಗಪೀಠಾಯನತ್ಯಂತೊ ಮನುರಾಸನ ದೇಶನೆ ॥84॥**
**ಮೂರ್ತಿ ಸಂಕಲ್ಪ್ಯ ಮೂಲೇನ ತಸ್ಯಾಂ ವಾಣಿಂ ಪ್ರಪೂಜಯೇತ್।**
**ಆದಾವಂಗಾನಿ ಸಂಪೂಜ್ಯ ದ್ವಿತಿಯೆ ಪೂಜಯೇತ್ ಸ್ವರಾ ॥85॥**
**ದ್ವೌ ದ್ವೌ ತೃತೀಯೆ ವರ್ಗಾಷ್ಟ ವರ್ಗಶಕ್ತಿಶ್ಚತುರ್ಥಕೆ ।**
**ವ್ಯಾಪಿನಿ ಪಾಲಿನಿ ಚಾಪಿ ಪಾವನಿ ಕ್ಲೇದಿನಿ ಪುನಃ ॥86॥**
**ಧಾರಿಣೆ ಮಾಲಿನಿ ಪಶ್ಚಾದ್ಧಂಸಿನಿ ಶಂಖಿನಿ ತಥಾ ।**
**ವರ್ಗಶಕ್ತಯ ಇತ್ಯುಕ್ತಾಃ ಪಂಚಮೆ ತ್ವಷ್ಟಮಾತರಃ ॥87॥**
**ಷಷ್ಠೆ ಶಕ್ರಾದಯೊ ದೇವಾಃ ಸಪ್ತಮ ವಜ್ರಪೂರ್ವಕಾಃ ।**
**ಇತ್ಥಂ ಸಂಪೂಜ್ಯ ದೇವೇಶಿಂ ನ್ಯಸೇದ್ವರ್ಣಾನ್ನಿಜಾಂಗಕೆ ॥88॥**

ಸರಸ್ವತಿ ದೇವಿಯ ಧ್ಯಾನದ ನಂತರ ಪೂರ್ವೋಕ್ತ ಪೀಠ ದೇವತೆಗಳು ಮತ್ತು ಒಂಬತ್ತು ಪೀಠ ಶಕ್ತಿಗಳನ್ನು ಪೂಜೆ ಮಾಡಬೇಕು. ನಂತರ ಸರಸ್ವತಿಯ ಪೂಜೆಯನ್ನು ಮಾಡಬೇಕು. ಮೇಧಾ, ಪ್ರಜ್ಞಾ, ಪ್ರಭಾ, ವಿದ್ಯಾ, ಶ್ರೀ, ಧೃತಿ, ಸ್ಮೃತಿ, ಬುದ್ಧಿ ಮತ್ತು ವಿದ್ಯೇಶ್ವರಿ ಇವು ಮಾತೃಕಾ ಪೀಠದ ಒಂಬತ್ತು ಶಕ್ತಿಗಳಾಗಿವೆ.

ವಿಯತ್ (ಹ), ಭೃಗು (ಸ)ದ ಮುಂದೆ ಮನು (ಔ) ನಂತರ ವಿಸರ್ಗ ಸೇರಿಸಿ, ಮುಂದೆ "ಮಾತೃಕಾ ಯೋಗಪೀಠಾಯ ನಮಃ" ಅರ್ಥಾತ್ "ಹಸೌ ಮಾತೃಕಾ ಯೋಗಪೀಠಾಯ ನಮಃ" ಮಂತ್ರ ಹೇಳುತ್ತ ಆಸನ ಪೂಜೆ ಮಾಡಬೇಕು. ನಂತರ ಸರಸ್ವತಿ ದೇವಿಯ ಮೂರ್ತಿಯ ಕಲ್ಪನೆ ಮಾಡಿಕೊಂಡು ಮೂಲ ಮಂತ್ರದಿಂದ ಮೂರ್ತಿಯನ್ನು ಪೂಜಿಸಬೇಕು. ಪ್ರಥಮ ಆವರಣದಲ್ಲಿ ಅಂಗಗಳ, ದ್ವಿತೀಯ ಆವರಣದಲ್ಲಿ ಎರಡೆರಡು ಸ್ವರಗಳ, ತೃತೀಯ ಆವರಣದಲ್ಲಿ ಕ ವರ್ಗಾದಿ ಅಷ್ಟವರ್ಗಗಳು ಮತ್ತು ಚತುರ್ಥ ಆವರಣದಲ್ಲಿ ವರ್ಗ ಶಕ್ತಿಗಳ ಪೂಜೆಯನ್ನು ಮಾಡಬೇಕು. ವ್ಯಾಪನಿ, ಪಾಲಿನಿ, ಪಾವನಿ, ಕ್ಲೇದಿನಿ, ಧಾರಿಣಿ, ಮಾಲಿನಿ, ಹಂಸಿನಿ ಮತ್ತು ಶಂಖಿನಿ ಇವುಗಳು ವರ್ಗಗಳ ಶಕ್ತಿಗಳಾಗಿವೆ. ಇದರ ನಂತರ ಪಂಚಮ ಆವರಣದಲ್ಲಿ ಬ್ರಾಹ್ಮಿ ಮುಂತಾದ ಅಷ್ಟಮಾತೃಕೆಯರು, ಅಷ್ಟಮ ಆವರಣದಲ್ಲಿ ಇಂದ್ರಾದಿ ದೇವಗಣ, ಸಪ್ತಮ ಆವರಣದಲ್ಲಿ ಅವುಗಳ ವಜ್ರಾದಿ ಆಯುಧಗಳ ಪೂಜೆ ಮಾಡಿ ದೇವೇಶಿಯ ಪೂಜೆ ಮಾಡಬೇಕು ಮತ್ತು ನಂತರ ಶರೀರದಲ್ಲಿ ವರ್ಣನ್ಯಾಸ ಮಾಡಬೇಕು.

ಮಾಡುವಾಗ 'ಮಮ'ದ ಸ್ಥಾನದಲ್ಲಿ ಯಂತ್ರ ಅಥವಾ ಪ್ರತಿಮಾ ದೇವತೆಯ ಹೆಸರನ್ನು ಸೇರಿಸಿಕೊಂಡು ಅದರ ಮುಂದೆ 'ದೇವತಾಯಾ' ಪ್ರಯೋಗಿಸಬೇಕು. (ಉದಾಹರಣೆಗೆ, ಶಿವದೇವತಾಯಾ, ದುರ್ಗಾದೇವತಾಯಾ ಇತ್ಯಾದಿ)

"ಓಂ ಆಂ ಹ್ರೀಂ ಕ್ರೋಂ ಯಂ ರಂ ಲಂ ವಂ ಶಂ ಷಂ ಸಂ ಹೋಂ ಓಂ ಕ್ಷಂ ಸಂ ಹಂಸಃ ಹ್ರೀಂ ಓಂ ಹಂಸಃ" ಈ ಪ್ರಾಣಪ್ರತಿಷ್ಠಾ ಮಂತ್ರವನ್ನು 'ಮಮ' ಪದದೊಂದಿಗೆ-

"ಓಂ ಆಂ ಹ್ರೀಂ ಕ್ರೋಂ ಯಂ ರಂ ಲಂ ವಂ ಶಂ ಷಂ ಸಂ ಹೋಂ ಓಂ ಕ್ಷಂ ಸಂ ಹಂಸಃ ಹ್ರೀಂ ಓಂ ಹಂಸಃ" ಈ ಪ್ರಾಣಾಃ ಇಹ ಪ್ರಾಣಾಃ ಮಂತ್ರವನ್ನು ಉಚ್ಚರಿಸುತ್ತ ಪ್ರಾಣಪ್ರತಿಷ್ಠೆ ಮಾಡಬೇಕು.

ಈ ಪ್ರಕಾರ 'ಓಂ ಆಂ' ದಿಂದ 'ಹ್ರೀಂ ಓಂ ಹಂಸಃ'ದ ವರೆಗೆ ಹೇಳುತ್ತ "ಮಮ ಜೀವ ಇಹ ಸ್ಥಿತಃ" ಹೇಳುತ್ತ ಹೃದಯದಲ್ಲಿ ಜೀವಾತ್ಮನನ್ನು ಪ್ರತಿಷ್ಠಾಪಿಸಬೇಕು. ಪುನಃ "ಓಂ ಆಂ"ದಿಂದ ಪ್ರಾರಂಭಿಸಿ 'ಹ್ರೀಂ ಓಂ ಹಂಸಃ" ವರೆಗೆ ಮಂತ್ರ ಉಚ್ಚರಿಸುತ್ತ "ಮಮ ಸರ್ವೇಂದ್ರಿಯಾಣಿ ಇಹ ಸ್ಥಿತಾನಿ" ಹೇಳುತ್ತ ಸಮಸ್ತ ಇಂದ್ರಿಯಗಳನ್ನು ಸ್ಥಾಪನೆ ಮಾಡಬೇಕು.

ಈ ಪ್ರಕಾರ, ಮೊದಲಿನಂತೆ ಮಂತ್ರಗಳನ್ನು ಉಚ್ಚರಿಸುತ್ತ "ಮಮ ವಾಂಙ್ಮನ ಚಕ್ಷುಃ ಶ್ರೋತ್ರ ಘ್ರಾಣಪ್ರಾಣಾಃ ಇಹಾಗತ್ಯ ಸುಖಂ ಚಿರಂ ತಿಷ್ಠಂತು ಸ್ವಾಹಾ ಓಂ ಕ್ಷಂ ಸಂ ಹಂಸಃ ಹ್ರೀಂ ಓಂ" ಹೇಳುತ್ತ ಎಲ್ಲ ಜ್ಞಾನೇಂದ್ರಿಯಗಳು, ಮನಸ್ಸು ಮತ್ತು ಪ್ರಾಣಗಳ ಪ್ರತಿಷ್ಠಾಪನೆ ಮಾಡಬೇಕು. ಈ ಪ್ರಕ್ರಿಯೆಯನ್ನು ಮೂರು ಬಾರಿ ಪುನರಾವರ್ತನೆ ಮಾಡಬೇಕು.

ಸಬಿಂದವೊ ಮೇರುಹಂಸಾಕಾಶಾಃ ಸರ್ಗಿಭೃಗುಃ ಪುನಃ ।
ಮಾಯೇತಿ ತಾರರುದ್ಧೋಯಂ ಮಂತ್ರಃ ಸಪ್ತಾಕ್ಷರೊ ಮತಃ ॥76॥
ಏವಂ ಪ್ರಾಣಾನ್ ಪ್ರತಿಷ್ಠಾಪ್ಯ ಮಾತೃಕಾನ್ಯಾಸ ಮಾಚರೇತ್।
ಅಕಾರಾದ್ಯಃ ಕ್ಷಕಾರಾಂತಾ ವರ್ಣಾಃ ಪ್ರೋಕ್ತಾ ತು ಮಾತೃಕಾ ॥77॥
ಪ್ರಜಾಪತಿರ್ಮುನಿಸ್ತಸ್ಯಾ ಗಾಯತ್ರಿಛಂದ ಈರೀತಮ್।
ಸರಸ್ವತಿದೇವತೋಕ್ತಾ ವಿನಿಯೋಗೊಖಿಲಾಪ್ತಯೆ ॥78॥
ಹಲೋ ಬೀಜಾನಿ ಚೋಕ್ತಾನಿ ಸ್ವರಾಃ ಶಕ್ತಯ ಈರಿತಾಃ ॥78॥
ಮೂರ್ಧ್ನಿ ವಕ್ತ್ರೆ ಹೃದಿ ನ್ಯಸ್ಯೆದೃಷ್ಯಾದೀನ ಸಾಧಕೋತ್ತಮಃ ।
ಪಂಚವರ್ಗೈರ್ಯಾದಿಭಿಶ್ಚ ಷಡಂಗಾನಿ ಸಮಾಚರೇತ್ ॥79॥





ಕ್ಲೀಬಹೀನಶಶಾಂಕಾಢ್ಯ ಹ್ರಸ್ವದೀರ್ಘಾಂತರ ಸ್ಥಿತೈಃ ।
ಸಾನುಸ್ವಾರೈರ್ಜಾತಿಯುಕ್ತಾ ಧ್ಯಾಯೇದ್ ದೇವಿ ಹೃದಂಬುಜೆ ॥80॥

ಪ್ರಾಣ ಪ್ರತಿಷ್ಠೆಯನ್ನು ಮಾಡಿದ ನಂತರ ಸಪ್ತಾಕ್ಷರ ಮಂತ್ರದ ಉದ್ಧಾರವನ್ನು ವಿವರಿಸಲಾಗುತ್ತದೆ. ಸ್ವರಸಹಿತ, ಮೇರು (ಕ್ಷಂ), ಹಂಸ (ಸಂ), ಆಕಾಶ (ಹಂ)ಗಳ ಜೊತೆಗೆ ಭೃಗು (ಸಃ) ಮತ್ತು ಮಾಯಾ ಬೀಜ (ಹ್ರೀಂ) ಇವೆಲ್ಲವುಗಳನ್ನು ಓಂ ದಿಂದ ಸಂಪುಟಿತಗೊಳಿಸಿದಾಗ - "ಓಂ ಕ್ಷಂ ಸಂ ಹಂಸಃ ಹ್ರೀಂ ಓಂ" ಈ ಪ್ರಕಾರ ಸಪ್ತಾಕ್ಷರ ಮಂತ್ರವಾಗುತ್ತದೆ.

**ಮಾತೃಕಾನ್ಯಾಸ**

ಅಕಾರದಿಂದ ಹಿಡಿದು ಕ್ಷಕಾರದವರೆಗೆ ಸಮಸ್ತ ವರ್ಣ(ಅಕ್ಷರ)ಗಳಿಗೆ 'ಮಾತೃಕಾ' ಎಂದು ಕರೆಯಲಾಗುತ್ತದೆ. ಈ ಮಾತೃಕಾ ನ್ಯಾಸಕ್ಕೆ ಪ್ರಜಾಪತಿ ಋಷಿ, ಗಾಯತ್ರಿ ಛಂದ, ಸರಸ್ವತಿ ದೇವತಾ ಮತ್ತು ಹಲ ವರ್ಣಗಳು ಬೀಜವೆಂದು ಮತ್ತು ಸ್ವರ ಶಕ್ತಿಯೆಂದು ಕರೆಯಲಾಗುತ್ತದೆ. ಅಭೀಷ್ಟ ಪ್ರಾಪ್ತಿಗಾಗಿ ಇದರ ವಿನಿಯೋಗವನ್ನು ಹೇಳಲಾಗಿದೆ.

ಶಿರ, ಮುಖ ಮತ್ತು ಹೃದಯಗಳಲ್ಲಿ ಕ್ರಮವಾಗಿ ಋಷಿ, ಛಂದ ಮತ್ತು ದೇವತೆಗಳ ಮೂಲಕ ಋಷ್ಯಾದಿ ನ್ಯಾಸ ಮಾಡಬೇಕು. ಈ ನ್ಯಾಸವನ್ನು ಕೇವಲ ಹ್ರಸ್ವ ಮತ್ತು ದೀರ್ಘ ವರ್ಣಗಳಿಂದ ಮಾತ್ರ ಸಂಪುಟಿತವಾಗಿರಬೇಕು. ಈ ಪ್ರಕಾರ ಹ್ರಸ್ವ ಮತ್ತು ದೀರ್ಘ ವರ್ಣಗಳಿಂದ ಸಂಪುಟಿತ ಸ್ವಾನುಸ್ವಾರ ಕ ವರ್ಗ, ಚ ವರ್ಗ, ಟ ವರ್ಗ, ತ ವರ್ಗ, ಪ ವರ್ಗ, ಯ ವರ್ಗಗಳಿಂದ ಕರನ್ಯಾಸ ಮತ್ತು ಷಡಂಗನ್ಯಾಸ ಮಾಡಬೇಕು. ನಂತರ ಹೃದಯ ಕಮಲದಲ್ಲಿ ಸರಸ್ವತಿಯ ವಕ್ಷ್ಯಮಾಣ ರೂಪವನ್ನು ಕುರಿತು ಧ್ಯಾನ ಮಾಡಬೇಕು.

ಓಂ ಅಸ್ಯ ಶ್ರೀ ಮಾತೃಕಾನ್ಯಾಸ ಮಂತ್ರಸ್ಯ ಬ್ರಹ್ಮಾ ಋಷಿಃ ಗಾಯತ್ರೀ ಛಂದಃ ಸರಸ್ವತಿ ದೇವತಾ ಹಲೋ ಬೀಜಾನಿ ಸ್ವರಾಃ ಶಕ್ತರಯಃ (ಕ್ಷಂ ಕೀಲಕಂ) ಅಖಿಲಾಪ್ತಯೆ ಮಾತೃಕಾ ನ್ಯಾಸ ವಿನಿಯೋಗಃ

ವಿನಿಯೋಗಃ
ಓಂ ಅಂ ಪ್ರಜಾಪತಯೇ ನಮಃ ಆಂ ಶಿರಸಿ
ಓಂ ಇಂ ಗಾಯತ್ರಿಛಂದಸೆ ನಮಃ ಈಂ ಮುಖೆ
ಓಂ ಉಂ ಸರಸ್ವತಿದೇವತಾಯೈ ನಮಃ ಊಂ ಹೃದಿ
ಓಂ ಏಂ ಹಲ್ಭೀಜೇಭ್ಯೋ ನಮಃ ಐಂ ಗುಹ್ಯೋ

ಕೇಸರಗಳಲ್ಲಿ ಸಂ ಸವಿನ್ನಾಲಾಯ ನಮಃ

ವಿಂ ವಿಕಾರಮಯ ಕೇಸರೇಭ್ಯೋ ನಮಃ

ಸಂ ಸೂರ್ಯಮಂಡಲಾಯ ನಮಃ

ಚಂ ಚಂದ್ರಮಂಡಲಾಯ ನಮಃ

ಅಂ ಅಗ್ನಿಮಂಡಲಾಯ ನಮಃ

ಮಾಂ ಮಾಯಾತತ್ತ್ವಾಯ ನಮಃ

ಕಂ ಕಲಾತತ್ತ್ವಾಯ ನಮಃ

ಎಂದು ಹೇಳುತ್ತ ಪೂಜೆ ಮಾಡಿ, ಪತ್ರಗಳಲ್ಲಿ ಅಷ್ಟಮಾತೃಕೆಯರ ಪೂಜೆ ಮಾಡಬೇಕು. ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ ಮತ್ತು ಮಹಾಲಕ್ಷ್ಮಿ ಇವು ವಿಶ್ವದ ಎಂಟು ಮಾತೆಯರು (ಶಕ್ತಿಗಳು) ಎಂದು ಪರಿಗಣಿಸಲಾಗುತ್ತದೆ.

ದೇವತಾ ಪೂಜೆಯು ಕಾರ್ಯದಲ್ಲಿ ಪೂಜಕ ಮತ್ತು ಪೂಜ್ಯರ ಮಧ್ಯದಲ್ಲಿ ಪೂರ್ವ ದಿಕ್ಕಿರುತ್ತದೆ. ಷಟ್ಕೋಣ ಮತ್ತು ಅಷ್ಟದಳಗಳಲ್ಲಿ ನಿರ್ದಿಷ್ಟ ದಿಶೆಯಲ್ಲಿ ಅವುಗಳ ಅಧಿಪತಿಗಳಾದ ಆಯಾ ದೇವತೆಗಳ ನಾಮದ ಮಂತ್ರಗಳಿಂದ ಅವುಗಳನ್ನು ಪೂಜಿಸಬೇಕು.

ನಂತರ ತಮ್ಮ ತಮ್ಮ ದಿಕ್ಕುಗಳಲ್ಲಿ ಇಂದ್ರಾದಿ ದಿಕ್ಪಾಲಕರ ಪೂಜೆ ಮಾಡಬೇಕು. ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಸೋಮ, ಈಶಾನ, ಅನಂತ ಮತ್ತು ಬ್ರಹ್ಮ ಇವರು ಅಷ್ಟದಿಕ್ಪಾಲಕರಾಗಿರುವರು. ವಜ್ರ, ಶಕ್ತಿ, ದಂಡ, ಖಡ್ಗ, ಪಾಶ, ಅಂಕುಶ, ಗದಾ, ತ್ರಿಶೂಲ, ಚಕ್ರ ಮತ್ತು ಪದ್ಮ ಇವುಗಳು ಕ್ರಮವಾಗಿ ಈ ದಿಕ್ಪಾಲಕರ ಆಯುಧಗಳಾಗಿವೆ. ಹತ್ತು ದಿಕ್ಕುಗಳಲ್ಲಿ ಇಂದ್ರ ಮತ್ತು ದಶದಿಕ್ಪಾಲಕರು ಮತ್ತು ಅವರ ಆಯುಧಗಳ ಪೂಜೆಯನ್ನು ಮಾಡಬೇಕು. ಈ ಪ್ರಕಾರ ಪಂಚ ಆವರಣಯುಕ್ತ ಪ್ರಾಣಶಕ್ತಿಯನ್ನು ಪೂಜೆ ಮಾಡಿ, ಹೃದಯದ ಮೇಲೆ ಕೈಯಿಟ್ಟು ವಕ್ಷ್ಯಮಾಣ ಮಂತ್ರದಿಂದ ಮೂರು ಬಾರಿ ಜಪ ಮಾಡಬೇಕು.

ಪೂರ್ವೇ ಈ ಇಂದ್ರಾಯ ನಮಃ, ಆಗ್ನೇಯಾಮ್ ಅಂ ಅಗ್ನಯೇ ನಮಃ, ದಕ್ಷಿಣಸ್ಯ ಯಂ ಯಮಾಯ ನಮಃ ಈ ಪ್ರಕಾರ ಕ್ರಮಪೂರ್ವಕವಾಗಿ ಪೂರ್ವಾದಿ ದಶ ದಿಕ್ಕುಗಳಲ್ಲಿ ದಶ ದಿಕ್ಪಾಲಕರನ್ನು ಪೂಜಿಸಿ, ಅದೇ ಕ್ರಮದಲ್ಲಿ -





ವಂ ವಜ್ರಾಯ ನಮಃ

ಶಂ ಶಕ್ತಯೇ ನಮಃ

ದಂ ದಂಡಾಯ ನಮಃ

ಇತ್ಯಾದಿ ಮಂತ್ರಗಳಿಂದ ಆಯಾ ದಿಕ್ಪಾಲಕರ ಆಯುಧಗಳನ್ನು ಪೂಜಿಸಬೇಕು.

## ಸಪ್ತಾಕ್ಷರ ಮಂತ್ರೋದ್ಧಾರ

ವಕ್ಷ್ಯೇಧುನಾ ಮನೋಃಸ್ತಸ್ಯೋದ್ಧಾರಂ ಧ್ಯಾತೃಸುಖಾವಹಮ್।  
ಪಾಶಂ ಮಾಯಾ ಸೃಣಿ ಪ್ರೋಚ್ಯ ಯಾದಿಂಸಪ್ತೇಂದು ಯುತಾನ್ ॥70॥  
ತಾರಾನ್ವಿತಂ ನಭಃ ಸಪ್ತವರ್ಣಂ ಮಂತ್ರಂ ತತೋಜಪಾಮ್।  
ಮಮ ಪ್ರಾಣಾ ಇಹ ಪ್ರಾಣಾ ಮಮ ಜೀವ ಇಹಸ್ಥಿತಃ ॥71॥  
ಮಮ ಸರ್ವೇಂದ್ರಿಯಾಣ್ಯಯುಕ್ತ್ವಾ ಮಮ ವಾಙ್ಮನ ಈರಯೇತ್ ।  
ಚಕ್ಷುಃ ಶ್ರೋತ್ರಘ್ರಾಣ ಪದಾತ್ ಪ್ರಾಣಾ ಇಹ ಸಮೀಪ್ಯ ಚ ॥72॥  
ಆಗತ್ಯ ಸುಖಿ ಮುಚ್ಚಾರ್ಯ್ಯ ಚಿರಂ ತಿಷ್ಠನ್ತ್ವಿಂದಂ ಪಠೇತ್।  
ದಕ್ಷಿಣಾಯಾಂ ಚ ಸಪ್ತಾರ್ಣ ಮಂತ್ರಮಂತೆ ಪುನರ್ವದೇತ್ ॥73॥  
ಪ್ರಾಣಪ್ರತಿಷ್ಠಾ ಮಂತ್ರೋಯಂ ಸ್ಮೃತಃ ಪ್ರಾಣನಿಧಾಪನೇ ।  
ಮಮೇತ್ಯಸ್ಯ ಪದಸ್ಯಾದೌ ಪಾಶಾದೀನಿ ಸಮುಚ್ಚರೇತ್ ॥74॥  
ಯಂತ್ರೇಷು ಪ್ರತಿಮಾದೌ ವಾ ಪ್ರಾಣಸ್ಥಾಪನ ಮಾಚರನ್ ।  
ಮಮಸ್ಥಾನೆ ತಸ್ಯ ತಸ್ಯ ಷಷ್ಠ್ಯಂ ತಾಮಭಿದಾಂ ವದೇತ್ ॥75॥

ಈಗ ಸಾಧಕನಿಗೆ ಸುಖಕಾರಕವಾದ ಪ್ರಾಣ ಪ್ರತಿಷ್ಠಾ ಮಂತ್ರದ ಉದ್ಧಾರವನ್ನು ವಿವರಿಸಲಾಗುತ್ತದೆ.

ಪ್ರಾರಂಭದಲ್ಲಿ ಪಾಶ (ಆಂ), ಮಾಯಾ (ಹ್ರೀಂ), ಸೃಣಿ (ಕ್ರೋಂ) ಈ ಬೀಜಾಕ್ಷರಗಳನ್ನು ಉಚ್ಚರಿಸುತ್ತ ಸಪ್ತಾಕ್ಷರ ಮಂತ್ರ, "ಓಂ ಕ್ಷಂ ಸಂ ಹಂ ಸಃ ಹ್ರೀಮ್" ಮತ್ತು ಕೊನೆಯಲ್ಲಿ ಅಜಪಾ (ಹಂಸಃ)ದ ಉಚ್ಚಾರಣೆ ಮಾಡಬೇಕು. ನಂತರ "ಮಮ ಪ್ರಾಣಾಃ ಇಹ ಪ್ರಾಣಾಃ ಮಮ ಜೀವ ಇಹ ಸ್ಥಿತಃ ಮಮ ಸರ್ವೇಂದ್ರಿಯಾಣಿ ಇಹ ಸ್ಥಿತಾನಿ ಮಮ ವಾಙ್ಮನಚಕ್ಷುಃ ಶ್ರೋತ್ರಘ್ರಾಣಾ ಪ್ರಾಣಾಃ ಇಹಾಗತ್ಯ ಸುಖಂ ಚಿರಂ ತಿಷ್ಠಂತು ಸ್ವಾಹಾ" ಹೇಳುತ್ತ ಕೊನೆಯಲ್ಲಿ ಸಪ್ತಾಕ್ಷರ ಮಂತ್ರ "ಓಂ ಕ್ಷಂ ಸಂ ಹಂಸಃ ಹ್ರೀಂ ಓಂ"ವನ್ನು ಪುನಃ ಉಚ್ಚರಿಸಬೇಕು. 'ಮಮ' ಇತ್ಯಾದಿ ಪದಗಳ ಮೊದಲು ಪಾಶಾದಿ (ಆಂ, ಹ್ರೀಂ, ಕ್ರೋಂ) ಗಳನ್ನುಚ್ಚರಿಸಬೇಕು. ಯಂತ್ರ ಮತ್ತು ಪ್ರತಿಮೆಗಳ ಪ್ರಾಣಪ್ರತಿಷ್ಠೆ

ಜಂ ಜಯಾಯೈ ನಮಃ
ವಿಂ ವಿಜಯಾಯೈ ನಮಃ
ಅಂ ಅಜಿತಾಯೈ ನಮಃ
ಅಂ ಅಪರಾಜಿತಾಯೈ ನಮಃ
ನಿಂ ನಿತ್ಯಾಯೈ ನಮಃ
ವಿಂ ವಿಲಾಸಿನ್ಯೈ ನಮಃ
ದೋಂ ದೋಗ್ಧ್ರ್ಯೈ ನಮಃ
ಅಂ ಅಘೋರಾಯೈ ನಮಃ



ಈ ಮಂತ್ರಗಳಿಂದ ಪೀಠದ ಈ ಎಂಟೂ ಶಕ್ತಿಗಳನ್ನು ಸೂಚಿಸಬೇಕು. ನಂತರ ಕರ್ಣಿಕಾದಲ್ಲಿ "ಮಂ ಮಂಗಳಾಯೈ ನಮಃ" ಹೇಳುತ್ತ ಪೂಜೆ ಮಾಡಬೇಕು. ಆಮೇಲೆ ಪಾಶಾದಿ ಮೂರು ಬೀಜಾಕ್ಷರ ಆಂ ಹ್ರೀಂ ಕ್ರೋಂಗಳನ್ನು ಉಚ್ಚರಿಸುತ್ತ ಆಂ, ಹ್ರೀಂ, ಕ್ರೋಂ ಪೀಠಾಯ ನಮಃ" ಮಂತ್ರದಿಂದ ಪೀಠವನ್ನು ಪೂಜಿಸಿ ದೇಹಮಯ ಪೀಠದ ಮೇಲೆ ನವಯೌವನದಿಂದ ಯುಕ್ತಳಾದ, ರಕ್ತಮಯ ಸಮುದ್ರದಲ್ಲಿ ನೌಕೆಯಲ್ಲಿ ಕೆಂಪು ಕಮಲದ ಮೇಲೆ ಆಸೀನಳಾಗಿ ಎಡಗೈಯಲ್ಲಿ ಪಾಶ, ಬಿಲ್ಲು ಮತ್ತು ಶೂಲಗಳನ್ನು ಧರಿಸಿ, ಮೂರು ಕಣ್ಣುಗಳು, ಆರು ಭುಜಗಳಿಂದ ಯುಕ್ತಳಾದ ಪ್ರಾಣಶಕ್ತಿಯ ಧ್ಯಾನ ಮಾಡಬೇಕು.





## ಪ್ರಾಣಶಕ್ತಿಯ ಧ್ಯಾನ

ಪಾಶಂ ಚಾಪಾಸ್ಯಕಪಾಲೇ ಸೃಣೀಷು
ಚ್ಛೂಲಂ ಹಸ್ತೈರ್ಬಿಭ್ರತಿಂ ರಕ್ತವರ್ಣಾಮ್।
ರಕ್ತೋದನ್ವತ್ಪೋತರಕ್ತಾಂಬುಜಸ್ಥಾಂ
ದೇವಿಂ ಧ್ಯಾಯೇತ್ ಪ್ರಾಣಶಕ್ತಿಂ ತ್ರಿನೇತ್ರಾಮ್ ॥61॥
ಅಷ್ಟಪತ್ರಸ್ಥ ಷಟ್ಕೋಣೇ ಧ್ಯಾತ್ವೈವಂ ಪೂಜಯೇತ್ತು ತಾನ್ ।
ಪ್ರಾಗ್ರಕ್ಷೋನಿಲ್ವಾಯು ಕೋಣೇಷು ಬ್ರಹ್ಮವಿಷ್ಣು ಶಿವಾನ್ ಯಜೇತ್ ॥62॥
ಅಗ್ನಿವಾರುಣಶೈವೇಷು ವಾಣಿಲಕ್ಷ್ಮಿ ಹಿಮಾದ್ರಿಜಾಃ ।
ಕೇಸರೇಷು ಷಡಂಗಾನಿ ಪ್ರತ್ರೇಷ್ವಷ್ಟೌ ತು ಮಾತರಃ ॥63॥
ಬ್ರಾಹ್ಮಿ ಮಾಹೇಶ್ವರಿ ಚಾಪಿ ಕೌಮಾರಿ ವೈಷ್ಣವಿ ತಥಾ ।
ವಾರಾಹಿ ಚ ತಥೇಂದ್ರಾಣಿ ಚಾಮುಂಡಾ ಸಪ್ತಮಿ ಮತಾ ॥64॥
ಅಷ್ಟಮಿ ತು ಮಹಾಲಕ್ಷ್ಮೀಃ ಪ್ರೋಕ್ತಾ ವಿಶ್ವಸ್ಯ ಮಾತರಃ ।
ದೇವತಾ ಪೂಜನೇ ಪ್ರಾಚಿ ಮಧ್ಯೆ ಪೂಜಕ ಪೂಜ್ಯಯೋಃ ॥65॥
ಇಂದ್ರಾದಯಃ ಸ್ವದಿಕ್ಷ್ವೇವಂ ಪೂಜನೀಯಾ ದಿಗೀಶ್ವರಾಃ ।
ಇಂದ್ರಃ ಕೃಶಾನುಃ ಕೀನಾಶೋ ನಿರ್ಋತಿರ್ವರುಣೋನಿಲಃ ॥66॥
ಸೋಮ ಈಶಾನನಾಮಾಧೋನಂತ ಊರ್ಧ್ವ ಚತುರ್ಮುಖಃ ।
ತತ ಇಂದ್ರಾದಿ ಕಾಷ್ಠಾಸು ಪೂಜ್ಯಾ ದಿಕ್ಪಾಲ ಹೇತಯಃ ॥67॥
ವಜ್ರಂ ಶಕ್ತಿರ್ದಂಡಖಡ್ಗೌ ಪಾಶಾಂಕುಶಗದೆ ಅಪಿ ।
ತ್ರಿಶೂಲ ಚಕ್ರಪದ್ಮಾನಿ ದಶಾದಿಕ್ಪಾಲ ಹೇತಯಃ ॥68॥
ಏವಮಿಷ್ಟ್ವಾ ಪ್ರಾಣಶಕ್ತಿಂ ಪಂಚಾವರಣ ಸಂಯುತಾಮ್।
ಧ್ಯಾಯನ್ ಹೃದಿ ಕರಂ ಧೃತ್ವಾ ತ್ರಿರ್ಜಪ್ತ್ವ ಪ್ರೇತಸ್ಥನುಂ ಸುಧಿಃ ॥69॥

ಅಷ್ಟದಳದ ಒಳಗೆ ಷಟ್ಕೋಣದಲ್ಲಿ ಸ್ಥಿತ ಪ್ರಾಣಶಕ್ತಿಯ ಸ್ವರೂಪವನ್ನು ಈ ಪ್ರಕಾರ ಧ್ಯಾನ ಮಾಡಿ ಪೂರ್ವ, ನೈಋತ್ಯ ಮತ್ತು ವಾಯುವ್ಯ ದಿಕ್ಕುಗಳಲ್ಲಿ ಕ್ರಮವಾಗಿ ಬ್ರಹ್ಮ, ವಿಷ್ಣು ಮತ್ತು ಶಿವ ಮತ್ತು ಆಗ್ನೇಯ, ಪಶ್ಚಿಮ ಮತ್ತು ಈಶಾನ್ಯಗಳಲ್ಲಿ ಕ್ರಮವಾಗಿ ವಾಣಿ, ಲಕ್ಷ್ಮಿ ಮತ್ತು ಪಾರ್ವತಿಯರನ್ನು ಪೂಜಿಸಬೇಕು.

ನಂತರ ಪೀಠದ ನಾಲ್ಕೂ ದಿಕ್ಕುಗಳಲ್ಲಿ ಕ್ರಮವಾಗಿ ಆಗ್ನೇಯ ಕೋಣದಿಂದ ಪ್ರಾರಂಭಿಸಿ -

ಧಂ ಧರ್ಮಾಯ ನಮಃ
ಜ್ಞಾಂ ಜ್ಞಾನಾಯ ನಮಃ
ವೈಂ ವೈರಾಗ್ಯಾಯ ನಮಃ
ಏಂ ಐಶ್ವರ್ಯಾಯ ನಮಃ
ಈ ಮಂತ್ರಗಳಿಂದ ನ್ಯಾಸ ಮಾಡಬೇಕು.

ಪುನಃ ಪೀಠದ ನಾಲ್ಕೂ ದಿಶೆಗಳಲ್ಲಿ ಪೂರ್ವ ದಿಕ್ಕಿನಿಂದ ಪ್ರಾರಂಭಿಸಿ -

ಅಂ ಅಧರ್ಮಾಯ ನಮಃ
ಅಂ ಅಜ್ಞಾನಾಯ ನಮಃ
ಅಂ ಅವೈರಾಗ್ಯಾಯ ನಮಃ
ಅಂ ಅನೈಶ್ವರ್ಯಾಯ ನಮಃ
ಈ ಮಂತ್ರಗಳಿಂದ ಈ ಪೀಠ ಪಾದಗಳ ನ್ಯಾಸ ಮಾಡಬೇಕು.

ನಂತರ ಪೀಠದ ಅಂಗಗಳಾದ, ಮಧ್ಯದಲ್ಲಿರುವ ಪೀಠದೇವತೆಗಳನ್ನು -

ಅಂ ಅನಂತಾಯ ನಮಃ
ಪಂ ಪದ್ಮಾಯ ನಮಃ
ಅಂ ಆನಂದಮಯ ಕಂದಕಾಯ ನಮಃ
ಸಂ ಸಂವಿನ್ನಾಲಾಯ ನಮಃ
ವಿಂ ವಿಕಾರಮಯ ಕೇಸರೇಭ್ಯೋ ನಮಃ
ಪ್ರಂ ಪ್ರಕೃತ್ಯಾತ್ಮಕ ಪತ್ರೇಭ್ಯೋ ನಮಃ
ಪಂ ಪಂಚಾಶದ್ವರ್ಣ ಕರ್ಣಿಕಾಯೈ ನಮಃ
ಸಂ ಸೂರ್ಯಮಂಡಲಾಯ ನಮಃ
ಚಂ ಚಂದ್ರಮಂಡಲಾಯ ನಮಃ
ಅಂ ಅಗ್ನಿಮಂಡಲಾಯ ನಮಃ
ಸಂ ಸತ್ವಾಯ ನಮಃ
ರಂ ರಜಸೇ ನಮಃ



ತಂ ತಮಸೇ ನಮಃ
ಆಂ ಆತ್ಮನೇ ನಮಃ
ಅಂ ಅಂತರಾತ್ಮನೇ ನಮಃ
ಪಂ ಪರಮಾತ್ಮನೇ ನಮಃ
ಮಾಂ ಮಾಯಾತತ್ವಾಯ ನಮಃ
ಕಂ ಕಲಾತತ್ವಾಯ ನಮಃ
ವಿಂ ವಿದ್ಯಾತತ್ವಾಯ ನಮಃ
ಪಂ ಪರತತ್ವಾಯ ನಮಃ
ಈ ಮಂತ್ರಗಳಿಂದ ನ್ಯಾಸ ಮಾಡಬೇಕು.

ಪೂಜನೆ ಸರ್ವದೇವಾನಾ ಪೀಠೆ ತಾಃ ಪರಿಪೂಜಯೇತ್ ।
ನ್ಯಾಸಸ್ಥಾನಾನಿ ಚೇತಾಸಾಂ ಶರೀರೇ ಬಹಿರರ್ಚನೆ ॥56॥
ಪೂಜಾತರಂಗೆ ವಕ್ಷ್ಯಂತೆ ಸೇಂದ್ವಾದ್ಯರ್ಣಯುತಾಶ್ಚ ತಾಃ ।
ಪ್ರಾಣಶಕ್ತೇಸ್ತತಃ ಪೂಜ್ಯಾ ಅಷ್ಟೌ ಪೀಠಸ್ಯ ಶಕ್ತಯಃ ॥57॥
ಹೃದಯಾಂಭೋಜಪತ್ರೇಷು ನವಮಿತ್ಥಧಿಕರ್ಣಿಕಮ್ ।
ಜಯಾಖ್ಯಾ ವಿಜಯಾ ಪಶ್ಚಾದಜಿತಾ ಚಾಪರಾಜಿತಾ ॥58॥
ನಿತ್ಯಾ ವಿಲಾಸಿನಿ ದೋಗ್ಧ್ರಿ ತ್ವಘೋರಾ ಮಂಗಲಾಂತಿಮಾ ।
ಪಾಶಾದಿಬೀಜತ್ರಿತಯಂ ಪ್ರೋಚ್ಯ ಪೀಠಂ ದಿಶೋತ್ತತಃ ॥59॥
ಏವಂ ದೇಹಮಯೆ ಪೀಠೆ ಧ್ಯಾಯೇತ್ ದೇವಿಮಸುಪ್ರದಾಮ್ ।
ನವಯೌವನಗರ್ವಾಢ್ಯಾಂ ಪೀವರಸ್ತನಶೋಭಿನೀಮ್ ॥60॥

ಸಕಲ ದೇವತೆಗಳ ಪೂಜೆಯಲ್ಲಿ ಪೀಠದಲ್ಲಿರುವ ಎಲ್ಲ ದೇವತೆಗಳ ಪೂಜೆ ಮಾಡಬೇಕು. ಬಾಹ್ಯ ಪೂಜೆಯಲ್ಲಿ ಶರೀರದಲ್ಲಿ ಈ ದೇವತೆಗಳ ನ್ಯಾಸ ಮಾಡಬೇಕು. ನಂತರ ಹೃದಯ ಕಮಲದಲ್ಲಿ ದೇವತೆಗಳ ಹೆಸರುಗಳನ್ನು ನರಸಹಿತ, ಹೆಸರಿನ ಮೊದಲಕ್ಷರಯುಕ್ತ, ಎಂಟು ದಳಗಳ ಮೇಲೆ, ಎಂಟು ಪೀಠಶಕ್ತಿಗಳ ಪೂಜೆ ಮಾಡಬೇಕು ಮತ್ತು ಕರ್ಣಿಕಾದಲ್ಲಿ ನವಮ ಮಹಾಶಕ್ತಿಯನ್ನು ಪೂಜಿಸಬೇಕು. ಜಯಾ, ವಿಜಯಾ, ಅಜಿತಾ, ಅಪರಾಜಿತಾ, ನಿತ್ಯಾ, ವಿಲಾಸಿನಿ, ದೋಗ್ಧ್ರಿ, ಅಘೋರಾ ಮತ್ತು ಮಂಗಳಾ ಈ ಒಂಬತ್ತು ಪೀಠ ಶಕ್ತಿಗಳಿವೆ.

ಭೃಗವಾದಿಕಂ ನ್ಯಸೇಜ್ಜೀವಮೇತಾನ್ ಹೃದಯದೇಶತಃ ।
ಯಕಾರಾದ್ಯಾ ಅಷ್ಟವರ್ಣಾಃ ಸರ್ವಸ್ಯುಶ್ಚಂದ್ರಭೂಷಿತಾಃ ||48||
ತತಃ ಸಮಸ್ತಮೂಲೇನ ಮೂರ್ಧಾದಿಚರಣಾವಧಿ ।
ವಿಧಾಯ ವ್ಯಾಪಕನ್ಯಾಸಂ ವಿನ್ಯಸೇತ್ ಪೀಠದೇವತಾಃ ||49||

ತ್ವಕ್, ಅಸೃಕ್, ಮಾಂಸ, ಮೇದ, ಅಸ್ಥಿ, ಮಜ್ಜಾ ಮತ್ತು ಶುಕ್ರ ಶಬ್ದಗಳ ಮುಂದೆ 'ಆತ್ಮನೇ ನಮಃ' ಹೇಳುತ್ತ ಹೃದಯ ಪ್ರದೇಶದಲ್ಲಿ ನ್ಯಾಸ ಮಾಡಬೇಕು. ಅವುಗಳ ಪ್ರಾರಂಭದಲ್ಲಿ ಯಕಾರಾದಿ ಏಳು ವರ್ಣಗಳನ್ನು ಸಾನುಸ್ವಾರವಾಗಿ ಉಚ್ಚಾರಣೆ ಮಾಡಬೇಕು. ಆಮೇಲೆ ಓ ದಿಂದ ಯುಕ್ತ ಆಕಾಶ 'ಹ'ವನ್ನು ಪ್ರಾರಂಭದಲ್ಲಿ ಉಚ್ಚರಿಸುತ್ತ 'ಓಜಾತ್ಮನೇ ನಮಃ' ಎಂದು 'ಖ' ದಿಂದ ಯುಕ್ತ ಆಕಾಶ ಬೀಜ 'ಹಂ' ದ ಮುಂದೆ ಪ್ರಾಣಾತ್ಮನೇ ನಮಃ ಮತ್ತು ಭೃಗು 'ಸ' ದ ಮುಂದೆ 'ಜೀವಾತ್ಮನೇ ನಮಃ' ಹೇಳುತ್ತ ಹೃದಯದಲ್ಲಿ ನ್ಯಾಸ ಮಾಡಬೇಕು. ನಂತರ ಯಕಾರಾದಿ ಸಮಸ್ತ ವರ್ಣಗಳಿಗೆ ಅನುಸ್ವಾರಪೂರ್ವಕ ಮೂಲಮಂತ್ರಗಳಿಂದ ಮೂರ್ಧಾದಿ ಚರಣಾವಧಿ ವ್ಯಾಪಕ ನ್ಯಾಸ ಮಾಡಿ ನಂತರ ಪೀಠದೇವತಾ ನ್ಯಾಸ ಮಾಡಬೇಕು.

| | | |
|---|---|---|
| ಓಂ ಯಂ | ತ್ವಗಾತ್ಮನೇ ನಮಃ | ಹೃದಿ |
| ಓಂ ರಂ | ಅಸೃಗಾತ್ಮನೇ ನಮಃ | ಹೃದಿ |
| ಓಂ ಲಂ | ಮಾಂಸಾತ್ಮನೇ ನಮಃ | ಹೃದಿ |
| ಓಂ ವಂ | ಮೇದಸಾತ್ಮನೇ ನಮಃ | ಹೃದಿ |
| ಓಂ ಶಂ | ಅಸ್ಥ್ಯಾತ್ಮನೇ ನಮಃ | ಹೃದಿ |
| ಓಂ ಷಂ | ಮಜ್ಜಾತ್ಮನೇ ನಮಃ | ಹೃದಿ |
| ಓಂ ಸಂ | ಶುಕ್ರಾತ್ಮನೇ ನಮಃ | ಹೃದಿ |
| ಓಂ ಹಾಂ | ಓಜಾತ್ಮನೇ ನಮಃ | ಹೃದಿ |
| ಓಂ ಹಂ | ಪ್ರಾಣಾತ್ಮನೇ ನಮಃ | ಹೃದಿ |
| ಓಂ ಸಂ | ಜೀವಾತ್ಮನೇ ನಮಃ | . ಹೃದಿ |

ಈ ಪ್ರಕಾರ ಮಂತ್ರಗಳನ್ನು ಉಚ್ಚರಿಸುತ್ತ ಹೃದಯದಲ್ಲಿ ನ್ಯಾಸ ಮಾಡಬೇಕು. ನಂತರ, "ಓಂ ಯಂ ರಂ ಲಂ ವಂ ಶಂ ಷಂ ಹಂ ಕ್ಷಂ ಮೂರ್ಧ್ನಾದಿಚರಣಾವಧಿ ವ್ಯಾಪಕಂ ಕರೋಮಿ" ಎಂದು ಹೇಳುತ್ತ ವ್ಯಾಪಕ ನ್ಯಾಸ ಮಾಡಬೇಕು.





ಪೀಠ ದೇವತಾ ನ್ಯಾಸ

ಮಂಡೂಕಶ್ಚಾತ ಕಾಲಾಗ್ನಿ ರುದ್ರ ಆಧಾರಶಕ್ತಿಯುಕ್ ।
ಕೂರ್ಮೋಧರಾಸುಧಾಸಿಂಧುಃ ಶ್ವೇತದ್ವೀಪ ಸುರಾಂಘ್ರಿಪಾಃ ||50||
ಮಣಿಹರ್ಮ್ಯಂ ಹೇಮಪೀಠಂ ಧರ್ಮೋಜ್ಞಾನಂ ವಿರಾಗತಾ ।
ಐಶ್ವರ್ಯ ಧರ್ಮಪೂರ್ವಾಸ್ತು ಚತ್ವಾರಸ್ತೇ ನತ್ರಾದಿಕಾಃ ||51||
ಧರ್ಮಾದಯಃ ಸ್ಮೃತಾಃ ಪಾದಾಃ ಪೀಠಗಾತ್ರಾಣಿ ಚೇತರೆ ।
ಮಧ್ಯೇನಂತಸ್ತತ್ತ ಪದ್ಮಮಾನಂದ ಮಯಕಂದಕಮ್ ||52||
ಸುವಿನ್ನಾಲ ತತಃ ಪ್ರೋಕ್ತಾ ವಿಕಾರಮಯ ಕೇಸರಾಃ ।
ಪ್ರಕೃತ್ಯಾತ್ಮಕ ಪತ್ರಾಣಿ ಪಂಚಾಶದ್ವರ್ಣ ಕರ್ಣಿಕಾ ||53||
ಸೂರ್ಯಸ್ಯೇಂದೋಃ ಪಾವಕಸ್ಯ ಮಂಡಲತ್ರಿತಯಂ ತತಃ ।
ಸತ್ವಂ ರಜಸ್ತಮಃ ಪಶ್ಚಾದಾತ್ಮ ಯುಕ್ತೋಂತರಾತ್ಮನಾ ||54||
ಪರಮಾತ್ಮಾಥ ಜ್ಞಾನಾತ್ಮಾ ತತ್ವ ಮಾಯಾಕಲಾದಿಕೇ ।
ವಿದ್ಯಾತತ್ವಂ ಪರಂ ತತ್ವಂ ಕಥಿತಾಃ ಪೀಠದೇವತಾಃ || ||55||

ಸ್ವರಸಹಿತವಾಗಿ ತಮ್ಮ ತಮ್ಮ ಹೆಸರಿನ ಮೊದಲಕ್ಷರ ಸಹಿತ ಆಯಾ ಪೀಠ ದೇವತೆಗಳ ನ್ಯಾಸವನ್ನು ಪೀಠದ ಮಧ್ಯದಿಂದ ಮಾಡಬೇಕು.

ಮಂ ಮಂಡೂಕಾಯ ನಮಃ
ಕಂ ಕಾಲಾಗ್ನಿರುದ್ರಾಯ ನಮಃ
ಆಂ ಆಧಾರಶಕ್ತಯೆ ನಮಃ
ಕೂಂ ಕೂರ್ಮಾಯ ನಮಃ
ಪೃಂ ಪೃಥಿವ್ಯೈ ನಮಃ
ಕ್ಷೀಂ ಕ್ಷೀರಸಮುದ್ರಾಯ ನಮಃ
ಶ್ವೇಂ ಶ್ವೇತದ್ವೀಪಾಯ ನಮಃ
ಕಂ ಕಲ್ಪವೃಕ್ಷಾಯ ನಮಃ
ಮಂ ಮಣಿಮಂಡಲಾಯ ನಮಃ
ಸ್ವಂ ಸ್ವರ್ಣಸಿಂಹಾಸನಾಯ ನಮಃ
ಈ ಮಂತ್ರಗಳನ್ನು ಪಠಿಸುತ್ತ ದೇವತಾ ನ್ಯಾಸ ಮಾಡಬೇಕು.

ಪಂಚಮಂ ಪ್ರಥಮಂ ಪಶ್ಚಾದ್ ದ್ವಿತೀಯಂ ಚ ಚತುರ್ಥಕಮ್।
ತೃತೀಯ ಮಿತ್ಥಂ ಕ್ರಮತೊ ವರ್ಗವರ್ಣಾನ್ ಸಮುಚ್ಚರೇತ್ ॥40॥
ಯವರ್ಗೇಷ್ವೆವಮುಚ್ಚಾರ್ಯ ನಭಃ ಶ್ವೇತೋಂತಿಮೋ ಭೃಗುಃ ।
ವಿಮಲಶ್ಚೇತಿ ಚೋಚ್ಚಾರ್ಯಾಂ ಕ್ರಮಾದ್ವರ್ಣಾಃ ಸಬಿಂದವಃ ॥41॥
ನಭೋ ವಾಪ್ವಗ್ನಿವಾಭೂಮಿನಭ ಆದಯ ಈರಿತಾಃ ।
ಶಬ್ದಸ್ಪರ್ಶೌ ರೂಪರಸಗಂಧಾಃ ಶಬ್ದಾದಯೊ ಮತಾಃ ॥42॥
ಶ್ರೋತ್ರಂ ತ್ವಂಗನಯನಂ ಜಿಹ್ವಾ ಘ್ರಾಣಂ ಶ್ರೋತ್ರಾದಯಃ ಸ್ಮೃತಾಃ ।
ವಾಕ್ಪಾಣಿ ಪಾದಪಾಯು ಚೋಪಸ್ಥೋ ವಾಗಾದಯಃ ಪುನಃ ॥43॥
ವಕ್ತವ್ಯಾದಾನಗಮನ ವಿಸರ್ಗಾನಂದ ಸಂಜ್ಞಕಾಃ ।
ವಕ್ತವ್ಯಾಧ್ಯಾ ಬುದ್ಧಿಮನೋಹಂಕಾರಾಶ್ಚಿತ್ತ ಸಂಯುತಾಃ ॥44॥

ಷಡಂಗನ್ಯಾಸ ಕ್ರಮ

ಕ ವರ್ಗ ಮತ್ತು ನಭಗಳಿಂದ ಹೃದಯದಲ್ಲಿ -

ಓಂ ಙಂ ಕಂ ಖಂ ಘಂ ಗಂ ನಭೋವಾವ್ಯಗ್ನಿವಾರ್ಭೂಮ್ಯಾತ್ಮನೆ
ಹೃದಯಾಯ ನಮಃ।

ಚ ವರ್ಗ ಮತ್ತು ಶಬ್ದಗಳಿಂದ ಶಿರದಲ್ಲಿ -

ಓಂ ಞಂ ಚಂ ಛಂ ಝಂ ಜಂ ಶಬ್ದಸ್ಪರ್ಶರೂಪರಸಗಂಧಾತ್ಮನೆ
ಶಿರಸೆ ಸ್ವಾಹಾ।

ಟ ವರ್ಗ ಮತ್ತು ಶ್ರೋತ್ರಾದಿಗಳಿಂದ ಶಿಖೆಯಲ್ಲಿ -

ಓಂ ಣಂ ಟಂ ಠಂ ಢಂ ಡಂ ಶ್ರೋತ್ರತ್ವಂಗನಯನಜಿಹ್ವಾಘ್ರಾಣಾತ್ಮನೇ
ಶಿಖಾಯೈ ವೌಷಟ್।

ತ ವರ್ಗ ಮತ್ತು ವಾಕ್ ಇತ್ಯಾದಿಗಳಿಂದ ಕವಚದಲ್ಲಿ -

ಓಂ ನಂ ತಂ ಥಂ ಧಂ ದಂ ವಾಕ್ಪಾಣಿಪಾದಪಾಯೂಪಸ್ಥಾತ್ಮನೆ
ಕವಚಾಯ ಹುಮ್।

ಪ ವರ್ಗ ಮತ್ತು ವಕ್ತವ್ಯಾದಿಗಳಿಂದ ನೇತ್ರದಲ್ಲಿ -

ಓಂ ಮಂ ಪಂ ಫಂ ಭಂ ಬಂ ವಕ್ತವ್ಯಾದಾನಗಮನವಿಸರ್ಗಾನಂದಾತ್ಮನೆ
ನೇತ್ರತ್ರಯಾಯ ವೌಷಟ್।



ಯ ವರ್ಗ ಮತ್ತು ಅತೀಂದ್ರಿಯಾದಿಗಳಿಂದ ಕರತಲದಲ್ಲಿ -

ಓಂ ಶಂ ಯಂ ರಂ ವಂ ಲಂ ಹಂ ಷಂ ಕ್ಷಂ ಲಂ
ಬುದ್ಧಿಮನೋಹಂಕಾರ ಚಿತ್ತಾತ್ಮನೆ ಅಸ್ತ್ರಾಯ ಫಟ್।

ಈ ಪ್ರಕಾರ ನ್ಯಾಸ ಮಾಡಬೇಕು. ನಂತರ ಹೃದಯಾದಿ ಅಂಗಗಳಲ್ಲಿ ಈ ಮಂತ್ರಗಳ ನ್ಯಾಸ ಮಾಡಬೇಕು.

ನ್ಯಾಸದಲ್ಲಿ, ಪ್ರಾರಂಭದಲ್ಲಿ ಪ್ರತ್ಯೇಕ ವರ್ಗದ ಪಂಚಮ ವರ್ಣ ಮತ್ತು ನಂತರ ಕ್ರಮವಾಗಿ ಪ್ರಥಮ, ದ್ವಿತೀಯ, ಚತುರ್ಥ ನಂತರ ತೃತೀಯ ವರ್ಣಗಳನ್ನು ಅನುಸ್ವಾರ ಸಹಿತವಾಗಿ ಉಚ್ಚಾರಣೆ ಮಾಡಬೇಕು. ಯ ವರ್ಗದಲ್ಲಿ ಪ್ರಥಮವಾಗಿ ಶಂ, ಯ., ರಂ ವಂ, ಲಂ ಈ ಐದು ಅಕ್ಷರಗಳನ್ನು ಉಚ್ಚಾರಣೆ ಮಾಡಿ, ನಭ (ಹಮ್), ಶ್ವೇತ (ಷಮ್) ತಿಭ (ಕ್ಷಮ್), ಭೃಗು (ಸಮ್) ಮತ್ತು ವಿಮಲ (ಲಮ್) ಈ ಅಕ್ಷರಗಳನ್ನು ಸಾನುಸ್ವಾರ ಉಚ್ಚಾರಣೆ ಮಾಡಬೇಕು.

'ವಾವ್ಯಗ್ನಿವಾರ್ಭೂಮಿ' ಎಂದರೆ ನಭ. 'ಶಬ್ದಸ್ಪರ್ಶರೂಪರಸಗಂಧ' ಎಂದರೆ ಶಬ್ದ, ಶ್ರೋತ್ರಾದಿಗಳ ಅರ್ಥ 'ಶ್ರೋತ್ರತ್ವಂಗನಯನಜಿಹ್ವಾಘ್ರಾಣ'. ವಾಕ್‌ದ ಅರ್ಥ "ವಾಕ್ಪಾಣಿ ಪಾದಪಾಯೂಪಸ್ಥ" ವಕ್ತವ್ಯಾದಿಗಳಿಗೆ, 'ವಕ್ತವ್ಯಾದಾನಗಮನ ವಿಸರ್ಗಾನಂದ' ಮತ್ತು ಅಂತರಿಂದ್ರಿಯಗಳಿಗೆ 'ಬುದ್ಧಿಮನೋಹಂಕಾರ ಚಿತ್ತಾನಿ' ಎಂದು ಅರ್ಥ ಮಾಡಲಾಗಿದೆ.

ಈ ಪ್ರಕಾರ ಷಡಂಗನ್ಯಾಸ ಮಾಡಿದ ನಂತರ, ನಾಭಿಯಿಂದ ಪ್ರಾರಂಭಿಸಿ ಪಾದಗಳವರೆಗೆ ಪಾಶಬೀಜ 'ಆಂ'ದ ನ್ಯಾಸ ಮಾಡಬೇಕು. ಹೃದಯದಿಂದ ನಾಭಿಯವರೆಗೆ ಶಕ್ತಿಬೀಜ ಮಂತ್ರ 'ಹ್ರೀಂ' ದಿಂದ, ಮಸ್ತಕದಿಂದ ಹೃದಯದವರೆಗೆ ಶೃಣಿ 'ಕ್ರೌಂ'ದ ನ್ಯಾಸ ಮಾಡಬೇಕು.

ಅಂತರಿಂದ್ರಿಯ ಸಂಜ್ಞಾಃ ಸ್ಯುರೇವಮುಕ್ತಂ ಷಡಂಗಕಮ್।
ನಾಭೋರಾರಭ್ಯ ಪಾದಾಂತ ಪಾಶಬೀಜಂ ಪ್ರವಿನ್ಯಸೇತ್ ॥45॥
ನಾಭ್ಯಂತಂ ಹೃದಯಾಚ್ಛಕ್ತಿಂ ಹೃದಂತಂ ಮಸ್ತಕಾಚ್ಛೃಣಿಮ್ ।
ತ್ವಣೆಸೃಂಮಾಂಸಮೇದೋಸ್ಥಿಮಜ್ಜಾಶುಕ್ರಾಣಿ ವಿನ್ಯಸೇತ್ ॥46॥
ಆತ್ಮನೆ ಹೃದಯಾಂತಾನಿ ಯಾದಿಸಪ್ತಾದಿಕಾನ್ಯಪಿ ।
ಓಜಃ ಸಧ್ಯಾನ್ವಿತಾಕಾಶಪೂರ್ವಂ ಪ್ರಾಣಂ ತು ಖಾದಿಕಮ್ ॥47॥

ಮಾಡಬೇಕು. ಪಾಪಪುರುಷನ ನಿವಾಸವು ವಾಮಕುಕ್ಷಿಯಲ್ಲಿರುತ್ತದೆ. ಪಾಪಪುರುಷನು ಕಪ್ಪು ವರ್ಣದವನಾಗಿದ್ದು ಅಂಗುಷ್ಠ ಮಾತ್ರ ಪ್ರಮಾಣವಿದ್ದು ಬ್ರಹ್ಮಹತ್ಯೆಯು ಅದರ ಶಿರವಾಗಿದೆ. ಸುವರ್ಣಸ್ತೇಯ ಅದರ ಬಾಹುಗಳು, ಮದಿರಾಪಾನವು ಅದರ ಹೃದಯ, ಗುರುತಲ್ಪಗಮನ ಅದರ ಕಟಿ ಭಾಗವಾಗಿದ್ದು ಎರಡೂ ಕಾಲುಗಳು ಪಾಪಪುರುಷರ ಸಂಸರ್ಗದಿಂದ ಯುಕ್ತವಾಗಿವೆ. ಉಪಪಾತಿಕವು ಅದರ ರೋಮವಾಗಿದೆ. ಅದು ಅವಿವೇಕದ ಖಡ್ಗ ಮತ್ತು ಅಹಂಕಾರದ ಚರ್ಮಧಾರಿಯಾಗಿರುತ್ತದೆ. ಅದು ಮುಖವನ್ನು ಸದಾ ಕೆಳಗೆ ಮಾಡಿದ್ದು ನೋಡಲು ಭಯಾನಕವಾಗಿರುತ್ತದೆ. ಅತ್ಯಂತ ದುಷ್ಟವಾಗಿರುತ್ತದೆ. ಇದು ಪಾಪಪುರುಷನ ಸ್ವರೂಪವಾಗಿರುತ್ತದೆ.

ಪಾಪಪುರುಷನನ್ನು ಭಸ್ಮಗೊಳಿಸುವ ಉಪಾಯವು ಈ ಪ್ರಕಾರವಾಗಿದೆ -

ವಾಯು ಬೀಜ "ಯಮ್" ಜಪಿಸುತ್ತ ಪೂರಕ ವಿಧಾನದಿಂದ ಪಾಪಪುರುಷನ ಶೋಷಣೆ ಮಾಡಬೇಕು. ನಂತರ ಅಗ್ನಿ ಬೀಜ ಮಂತ್ರ "ರಮ್" ಜಪಿಸುತ್ತ ಸಾಧಕನು ತನ್ನ ಶರೀರದೊಂದಿಗೆ ಅದನ್ನು ಭಸ್ಮ ಮಾಡಬೇಕು. ನಂತರ ಪುನಃ ವಾಯು ಬೀಜ "ಯಮ್" ಜಪಿಸುತ್ತ ಭಸ್ಮೀಭೂತವಾದ ಪಾಪಪುರುಷನನ್ನು ರೇಚಕದ ಮೂಲಕ ಹೊರದೂಡಬೇಕು.

ತದನಂತರ, ಸುಧಾ (ಜಲ) ಬೀಜ "ವಮ್" ಜಪಿಸುತ್ತ ಆ ಭಸ್ಮವನ್ನು ಹಸಿ ಮಾಡಬೇಕು. ನಂತರ ಭೂ ಬೀಜ "ಲಮ್" ಮಂತ್ರ ಜಪಿಸುತ್ತ ಆ ಭಸ್ಮವನ್ನು ಗಟ್ಟಿಯಾದ ಬಂಗಾರದ ತತ್ತಿಯಾಕಾರದ ಉಂಡೆಯನ್ನಾಗಿ ಮಾಡಬೇಕು. ನಂತರ ವಿಶುದ್ಧ ದರ್ಪಣದ ಸಮಾನ ಶುಭ್ರವಾದ ಆಕಾಶ ಬೀಜ ಮಂತ್ರ "ಹಮ್" ಜಪ ಮಾಡುತ್ತ ಶಿರದಿಂದ ಪಾದಗಳವರೆಗೆ ಅಂಗಗಳನ್ನು ನಿರ್ಮಿಸಬೇಕು.

ಚಿತ್ಸ್ವರೂಪ ಆತ್ಮನಿಂದ ಆಕಾಶಾದಿ ಪಂಚ ಮಹಾಭೂತಗಳನ್ನು ಉತ್ಪನ್ನ ಮಾಡಿ "ಸೋಹಂ" ಮಂತ್ರಜಪಿಸುತ್ತ ಹೃದಯ ಕಮಲದಲ್ಲಿ ಆತ್ಮವನ್ನು ಪ್ರತಿಷ್ಠಾಪಿಸಬೇಕು. ನಂತರ ಪರತತ್ವ ಆತ್ಮದಿಂದ ಸುಧಾಮಯಿಯಾದ ಕುಂಡಲಿನಿಯನ್ನು ಮತ್ತು ಜೀವವನ್ನು ತೆಗೆದುಕೊಂಡು, ಕುಂಡಲಿನಿಯನ್ನು ಮೂಲಾಧಾರದಲ್ಲಿ ಮೂಲಾಧಾರದಲ್ಲಿ ಮತ್ತು ಜೀವವನ್ನು ಹೃದಯಕಮಲದಲ್ಲಿ ಸ್ಥಾಪನೆ ಮಾಡಿ ಅವುಗಳ ಸ್ಮರಣೆ ಮಾಡಬೇಕು.





ಪ್ರಾಣ ಪ್ರತಿಷ್ಠಾ

ಭೂತಶುದ್ಧಿಂ ವಿಧಾಯೈವಂ ಪ್ರಾಣಸ್ಥಾಪನಮಾಚರೇತ್ ।
ಪ್ರಾಣಪ್ರತಿಷ್ಠಾ ಮಂತ್ರಸ್ಯ ಮುನಯೋಜೇಶಪದ್ಮಜಾ ||35||
ಛಂದಋಗ್ಯಜುಷಂ ಸಾಮಪ್ರಾಣಶಕ್ತಿಸ್ತು ದೇವತಾ ।
ಪಾಶೋ ಬೀಜಂ ತ್ರಪಾ ಶಕ್ತಿರ್ವಿನಿಯೋಗೋಸು ಸಂಸ್ಥಿತೌ ||36||
ಋಷಿಚ್ಛಿರಸಿ ವಕ್ತ್ರೆತು ಛಂದಾಂಸಿ ಹೃದಿ ದೇವತಾಮ್ ।
ಗುಹ್ಯೋ ಬೀಜಂ ಪದೋ ಶಕ್ತಿಂ ನ್ಯಸ್ಯ ಕುರ್ಯಾತ್ಷಡಂಗಕಮ್ ||37||

ಭೂತಶುದ್ಧಿ ಮಾಡಿದ ನಂತರ ಪುನಃ ಪ್ರಾಣಪ್ರತಿಷ್ಠೆ ಮಾಡಬೇಕು.

ವಿನಿಯೋಗಃ ಓಂ ಅಸ್ಯ ಶ್ರೀ ಪ್ರಾಣಪ್ರತಿಷ್ಠಾ ಮಂತ್ರಸ್ಯ ಅಜೇಶ ಪದ್ಮಜಾ ಋಷಯಃ ಋಗ್ಯಜು ಸಾಮಾನಿ ಛಂದಾಸಿ ಪ್ರಾಣಶಕ್ತಿರ್ದೇವತಾ ಪಾಶ (ಆಂ) ಬೀಜಂ, ತ್ರಪಾ (ಹ್ರೀಂ) ಶಕ್ತಿಃ ಕ್ರೌಂ ಕೀಲಕಂ ಪ್ರಾಣಪ್ರತಿಷ್ಠಾಪನೆ ವಿನಿಯೋಗಃ ||

ಋಷ್ಯಾದಿನ್ಯಾಸಃ ಅಜೇಶ ಪದ್ಮಜಾಋಷಿಭ್ಯೋ ನಮಃ ಶಿರಶಿ ಋಗ್ಯಜುಃ ಸಾಮಛಂದೇಭ್ಯೋ ನಮಃ ಮುಖೆ ಪ್ರಾಣಶಕ್ತಿರ್ದೇವತಾಯೈ ನಮಃ ಹೃದಿ ಆಂ ಬೀಜಾಯ ನಮಃ ಗುಹ್ಯೋ ಹ್ರೀಂ ಶಕ್ತಯೇ ನಮಃ ಪಾದಯೋ ಕ್ರೌಂ ಕೀಲಕಾಯ ನಮಃ ಸರ್ವಾಂಗೇ

ಈ ಪ್ರಕಾರ ಋಷಿಯ ನಾಮವನ್ನು ಉಚ್ಚರಿಸುತ್ತ ಶಿರದಲ್ಲಿ ಛಂದದ ನಾಮ ಹೇಳುತ್ತ ಮುಖದಲ್ಲಿ ದೇವತೆಯ ಹೆಸರು ಉಚ್ಚರಿಸುತ್ತ ಹೃದಯದಲ್ಲಿ ಬೀಜಾಕ್ಷರವನ್ನು ಉಚ್ಚಾರಣೆ ಮಾಡುತ್ತ ಗುಹ್ಯಸ್ಥಾನದಲ್ಲಿ ಮತ್ತು ಶಕ್ತಿಯ ಹೆಸರು ಹೇಳುತ್ತ ಪಾದದಲ್ಲಿ ನ್ಯಾಸ ಮಾಡಬೇಕು. ನಂತರ ಷಡಂಗನ್ಯಾಸ ಮಾಡಬೇಕು.

ಕವರ್ಗನಭ ಆಧ್ಯೈರ್ಹ್ಯಚ್ಚ ಶಬ್ದಾದ್ಯೈಃ ಶಿರಃ ಸ್ಮೃತಮ್।
ಟಶ್ರೋತ್ರಾದ್ಯೈಃ ಶಿಖಾಪ್ರೋಕ್ತಾ ತವರ್ಗಾಧ್ಯೈಸ್ತುಸುಚ್ಛದಮ್ ||38||
ಪವಕ್ತ್ವಾದಿಭಿರ್ನೇತ್ರಮಸ್ತ್ರಂ ಯೇನಾಂತರಿಂದ್ರಿಯೈಃ ।
ಆತ್ಮನೇತಾನ್ಮನೂನಂಗಾನ್ ವಿನ್ಯಸೇದ್ ಹೃದಯಾದಿಷು ||39||

ಘ್ರಾಣಂ ಚ ರಸನಾ ಚಕ್ಷುಃ ಸ್ಪರ್ಶನಂ ಶ್ರೋತ್ರಮಿಂದ್ರಿಯಮ್ ।
ಕ್ರಮಾದ್ಧ್ಯೇಯಂ ಧರಾದಿಸ್ಥಂ ಗಂಧಾದಿಗುಣ ಸಂಯುತಮ್ ॥20॥
ಬ್ರಹ್ಮವಿಷ್ಣುಶಿವೇಶಾನಾಂ ಸದಾಶಿವ ಇತಿರಿತಾಃ ।
ಧರಾದಿಭೂತಸಂಘೇಶಾ ಧ್ಯೇಯಾಸ್ತತ್ಮಂಡಲೇಷು ತೇ ॥21॥
ನಿವೃತ್ತಿಶ್ಚ ಪ್ರತಿಷ್ಠಾ ಚ ವಿದ್ಯಾಶಾಂತಿಶ್ಚತುರ್ಥಿಕಾ ।
ಶಾಂತ್ಯತಿತೇತಿ ಪಂಚೈವ ಕಲಾ ಧ್ಯೇಯಾ ಧರಾದಿಗಾಃ ॥22॥
ಸಮಾನೋದಾನವ್ಯಾನಾಶ್ಚಾಪಾನಪ್ರಾಣೌ ಚ ವಾಯುವಃ ।
ಧರಾದಿಮಂಡಲಗತಾಃ ಪಂಚಧ್ಯೇಯಾಃ ಕ್ರಮಾದಿಮೆ ॥23॥
ಏವಂ ಭೂತಾನಿ ಸಚ್ಚಿಂತ್ಯ ಪ್ರತ್ಯೇಕಂ ಪ್ರವಿಲಾಪಯೇತ್ ।
ಭುವಂ ಜಲೆ ಜಲಂ ವಹ್ನೌ ವಹ್ನಿಂ ವಾಯೌ ನಭಸ್ಯಮುಮ್ ॥24॥
ವಿಲಾಪ್ಯ ಖಮಹಂಕಾರೆ ಮಹತ್ತತ್ತ್ವೇಪ್ಯಹಂ ಕೃತಿಮ್ ।
ಮಹಾಂತಂ ಪ್ರಕೃತೌ ಮಾಯಾಮಾತ್ಮಾನಿ ಪ್ರವಿಲಾಪಯೇತ್ ॥25॥

ಪೃಥ್ವಿ ಮುಂತಾದ ಮಂಡಲದಲ್ಲಿ ತಮ್ಮ ಗಮನ ಮತ್ತು ಆದಾನ ಮುಂತಾದ ವಿಷಯಗಳೊಂದಿಗೆ ಪಾದ, ಹಸ್ತ, ಪಾಯು, ಉಪಸ್ಥ ಮತ್ತು ವಾಕ್ ಈ ಕರ್ಮೇಂದ್ರಿಯಗಳ ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದ ಈ ವಿಷಯಗಳ ಜೊತೆಗೆ, ನಾಸಿಕ, ನಾಲಗೆ, ನೇತ್ರ, ತ್ವಚೆ ಮತ್ತು ಕರ್ಣ ಈ ಪಂಚ ಜ್ಞಾನೇಂದ್ರಿಯಗಳ ಬಗೆಗೂ ಕೂಡ ಚಿಂತನೆ ಮಾಡಬೇಕು.

ಈ ತತ್ತ್ವಗಳಿಗೆ ಕ್ರಮವಾಗಿ ಬ್ರಹ್ಮ, ವಿಷ್ಣು, ಶಿವ, ಈಶಾನ ಮತ್ತು ಸದಾಶಿವರು ದೇವತೆಗಳಾಗಿರುತ್ತಾರೆ. ಅವರಿಗೆ ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ ಮತ್ತು ಶಾಂತ್ಯತೀತಾ ಹೀಗೆ ಕ್ರಮವಾಗಿ ಕಲೆಗಳು ಮತ್ತು ಸಮಾನ, ಉದಾನ, ವ್ಯಾನ, ಅಪಾನ ಮತ್ತು ಪ್ರಾಣ ಈ ಐದು ವಾಯುಗಳಿರುತ್ತವೆ. ಕಾರಣ ಪೃಥ್ವಿ ಮುಂತಾದ ಮಂಡಲಗಳ ಜೊತೆಗೆ ಕ್ರಮವಾಗಿ ಇವುಗಳ ಧ್ಯಾನವನ್ನು ಕೂಡ ಮಾಡಬೇಕು.

ಅಂದರೆ ಪೃಥ್ವಿಮುಂತಾದ ಮಂಡಲಗಳಲ್ಲಿ ಪಂಚ ಕರ್ಮೇಂದ್ರಿಯಗಳು, ಪಂಚ ವಿಷಯಗಳು, ಪಂಚ ಜ್ಞಾನೇಂದ್ರಿಯಗಳು ಜೊತೆಗೆ ಆ ಪಂಚ ತತ್ತ್ವಗಳ ದೇವತೆಗಳು, ಕಲಾಗಳ ಮತ್ತು ಪಂಚವಾಯುಗಳ ಚಿಂತನ-ಧ್ಯಾನ ಮಾಡಬೇಕು.





ಈ ಪ್ರಕಾರ ಪಂಚಮಹಾಭೂತಗಳ ಧ್ಯಾನ ಮಾಡಿ ಭೂಮಿಯನ್ನು ಜಲದಲ್ಲಿ ಜಲವನ್ನು ಅಗ್ನಿಯಲ್ಲಿ ಅಗ್ನಿಯನ್ನು ವಾಯುವಿನಲ್ಲಿ ವಾಯುವನ್ನು ಆಕಾಶದಲ್ಲಿ ಆಕಾಶವನ್ನು ಅಹಂಕಾರದಲ್ಲಿ ಅಹಂಕಾರವನ್ನು ಮಹಾತತ್ತ್ವದಲ್ಲಿ ಮಹಾತತ್ತ್ವವನ್ನು ಪ್ರಕೃತಿಯಲ್ಲಿ ಪ್ರಕೃತಿಯನ್ನು ಮಾಯಾದಲ್ಲಿ ಮತ್ತು ಮಾಯೆಯನ್ನು ಆತ್ಮದಲ್ಲಿ ವಿಲೀನಗೊಳಿಸಬೇಕು.

ಶುದ್ಧಸಚ್ಚಿನ್ಮಯೋ ಭೂತ್ವಾ ಚಿಂತಯೇತ್ ಪಾಪಪುರೂಷಮ್।
ದಕ್ಷಕುಕ್ಷಿಸ್ಥಿತಂ ಕೃಷ್ಣಮಂಗುಷ್ಠ ಪರಿಮಾಣಕಮ್ ॥26॥
ವಿಪ್ರಹತ್ಯಾಶಿರೋ ಯುಕ್ತಂ ಕನಕಸ್ತೇಯ ಬಾಹುಕಮ್।
ಮದಿರಾಪಾನ ಹೃದಯಂ ಗುರುತಲ್ಪ ಕಟಿಯುತಮ್ ॥27॥
ಪಾಪಿಸಂಯೋಗಿ ಪದ್ವಂದ್ವಮುಪಪಾತ ಕರೋಮಕಮ್ ।
ಖಡ್ಗಚರ್ಮಧರಂ ದುಷ್ಟಮಧೋವಕ್ತ್ರಂ ಸುದುಃ ಸಹಮ್ ॥28॥
ವಾಯುಬೀಜಂ ಸ್ಮರನ್ ವಾಯುಂ ಸಂಪೂರ್ಯೈನಂ ವಿಶೋಷಯೇತ್ ।
ಸ್ವಶರೀರಯುತಂ ಮಂತ್ರಿ ವಹ್ನಿಬೀಜೇನ ನಿರ್ದಹೇತ್ ॥29॥
ಕುಂಭಕೆ ಪರಿಜಪ್ತೇನ ತತಃ ಪಾಪನರೋದ್ಭವಮ್ ।
ಬಹಿರ್ಭಸ್ಮ ಸಮುತ್ಸಾರ್ಯ್ಯ ವಾಯು ಬೀಜೇನ ರೇಚಯೇತ್ ॥30॥
ಸುಧಾಬೀಜೇನ ದೇಹೋತ್ಥಂ ಭಸ್ಮಸಂಪ್ಲಾವಯೇತ್ ಸುಧಿಃ ।
ಭೂಬೀಜೇನ ಘನಿಕೃತ್ಯ ಭಸ್ಮತತ್ಕನ ಕಾಂಡವತ್ ॥31॥
ವಿಶುದ್ಧಮುಕುರಾಕಾರಂ ಜಪಂಬೀಜಂ ವಿಹಾಯಸಃ ।
ಮೂರ್ಧಾದಿ ಪಾದ ಪರ್ಯಂತಾನ್ಯಂಗಾನಿ ರಚಯೇತ್ ಸುಧಿಃ ॥32॥
ಆಕಾಶಾದೀನಿ ಭೂತಾನಿ ಪುನರುತ್ಪಾದಯೇಚ್ಚಿತ್ತಃ ।
ಸೋಹಂ ಮಂತ್ರೇಣ ಚಾತ್ಮಾನಮಾನಯೇದ್ ಹೃದಯಾಂಬುಜೆ ॥33॥
ಕುಂಡಲಿಂ ಜೀವಮಾದಾಯ ಪರಸಂಗಾತ್ ಸುಧಾಮಯಮ್ ।
ಸಂಸ್ಥಾಪ್ಯ ಹೃದಯಾಂಭೋಜೆ ಮೂಲಾಧಾರಗತಾಂ ಸ್ಮರೇತ್ ॥34॥

ಈ ಪ್ರಕಾರ ಶುದ್ಧ ಸಚ್ಚಿದಾನಂದಮಯ ಆತ್ಮಸ್ವರೂಪರಾಗಿ ಪಾಪಪುರುಷನ ಧ್ಯಾನ

ಪಾದಾದಿಬ್ರಹ್ಮರಂಧ್ರಾಂತಂ ಸ್ಥಿತಂ ಭೂತಗಣಂ ಸ್ಮರೇತ್
ಸ್ವರ್ಣಬೀಜಾಕೃತಿಭಿರ್ಯುಕ್ತಂ ತದ್ವಿಧಿರುಚ್ಯತೇ ॥13॥

ಶರೀರಗತ ಪೃಥ್ವ್ಯಾದಿ ಪಂಚಮಹಾಭೂತಗಳನ್ನು ಶುದ್ಧ ಮಾಡಿ ಪರಮಾತ್ಮನ ಪೂಜೆಗೆ ಅರ್ಹಗೊಳಿಸುವ ಕ್ರಿಯೆಯನ್ನು ಭೂತಶುದ್ಧಿ ಎಂದು ಕರೆಯಲಾಗುತ್ತದೆ.

ಸರ್ವಪ್ರಥಮವಾಗಿ, ಮೂಲಾಧಾರ ಚಕ್ರದಲ್ಲಿ ಸ್ಥಿತವಾಗಿರುವ ಕಮಲದ ದೀಪದ ಸಮಾನ ಮತ್ತು ಸೂಕ್ಷ್ಮವಾದ ವಿದ್ಯುತ್ ಪ್ರಭೆಗೆ ಸಮಾನವಾದ ದೇದಿಪ್ಯಮಾನ ಪರದೇವತಾ ಸ್ವರೂಪಳಾದ ಕುಂಡಲಿನಿಯನ್ನು ಏಕಾಗ್ರಚಿತ್ತದಿಂದ ಧ್ಯಾನಿಸಬೇಕು. ನಂತರ ಕುಂಡಲಿನಿಯನ್ನು ಸುಷುಮ್ನಾದ ಮೂಲಕ ಮೂಲಾಧಾರದಿಂದ ಮೇಲಕ್ಕೆ ಕರೆದೊಯ್ದು ಹೃದಯಕಮಲದಲ್ಲಿ ಪ್ರತಿಷ್ಠಾಪಿಸಬೇಕು. ಅಲ್ಲಿಂದ ಪ್ರದೀಪ್ತ ಶಿಖೆಯ ಆಕಾರದ ಜೀವವನ್ನು ಅದರೊಂದಿಗೆ ಸಂಯೋಜಿಸಿ ಬ್ರಹ್ಮರಂಧ್ರದಲ್ಲಿ ಸ್ಥಿತ ಸಹಸ್ರಾರ ಚಕ್ರದಲ್ಲಿ ಸ್ಥಾಪಿಸಬೇಕು. ಈ ಪ್ರಕಾರ ಧ್ಯಾನ ಮಾಡಬೇಕು. ಅಲ್ಲಿ ಪರಬ್ರಹ್ಮ ಪರಮಾತ್ಮನ ನಿವಾಸವಿದ್ದು, ಸಾಧಕನು 'ಹಂಸ' ಮಂತ್ರ ಜಪ ಮಾಡುತ್ತ ಜೀವಸಹಿತ ಕುಂಡಲಿನಿಯನ್ನು ಪರಮಾತ್ಮನಲ್ಲಿ ಸಂಯೋಜಿಸಬೇಕು.

ಈ ಶರೀರದಲ್ಲಿ ಪಾದದಿಂದ ಹಿಡಿದು ಬ್ರಹ್ಮರಂಧ್ರದ ವರೆಗೆ, ಪಂಚಮಹಾಭೂತಗಳು ತಮ್ಮ ತಮ್ಮ ವರ್ಣ, ಆಕಾರ ಮತ್ತು ಬೀಜ (ಬೀಜಾಕ್ಷರ)ಗಳಿಂದ ಯುಕ್ತವಾಗಿ ಸ್ಥಿತವಾಗಿರುತ್ತವೆ. ಅವುಗಳ ವರ್ಣ, ಆಕಾರ ಮತ್ತು ಬೀಜಾಕ್ಷರಗಳನ್ನು ಸ್ಮರಣೆ ಮಾಡುತ್ತ ಭೂತಶುದ್ಧಿ ಮಾಡಬೇಕು.

### ಭೂತಶುದ್ಧಿ ವಿಧಾನ

ಪಾದಾದಿಜಾನುಪರ್ಯಂತಂ ಚತುಷ್ಕೋಣಂ ಸವಜ್ರಕಮ್ ।
ಭೂಬೀಜಾಢ್ಯಂ ಸ್ವರ್ಣವರ್ಣಂ ಸ್ಮರೇದೇವನಿಮಂಡಲಮ್ ॥14॥
ಜಾನ್ವಾದ್ಯಾನಾಭಿಚಂದ್ರಾರ್ಧನಿಭಂ ಪಂಗದ್ವಯಾಂಕಿತಮ್ ।
ವಂ ಬೀಜಯುಕ್ತಂ ಶ್ವೇತಾಭಮಂಭಸೋ ಮಂಡಲಂ ಸ್ಮರೇತ್ ॥15॥
ನಾಭೇಹೃದಯ ಪರ್ಯಂತಂ ತ್ರಿಕೋಣಂ ಸ್ವಸ್ತಿಕಾನ್ವಿತಮ್ ।
ರಂಬೀಜೇನ ಯುತಂ ರಕ್ತ ಸ್ಮರೇತ್ ಪಾವಕಮಂಡಲಮ್ ॥16॥





ಹೃದೋ ಭ್ರೂಮಧ್ಯ ಪರ್ಯಂತ ವೃತ್ತಂ ಷಡ್‌ಬಿಂದುಲಾಂಛಿತಮ್ ।
ಯಂಬೀಜಯುಕ್ತಂ ಧೂಮ್ರಾಭಂ ನಭಸ್ವಮಂಡಲಂ ಸ್ಮರೇತ್ ॥17॥
ಆಬ್ರಹ್ಮಾರಂಧ್ರಂ ಭ್ರೂಮಧ್ಯಾದ್ ವೃತ್ತಂ ಸ್ವಚ್ಛಮನೋಹರಮ್ ।
ಹಂಬೀಜಯುಕ್ತಾಮಾಕಾಶಮಂಡಲಂ ಪ್ರವಿಚಿಂತಯೇತ್ ॥18॥

ಪಾದದಿಂದ ಹಿಡಿದು ಮೊಳಕಾಲವರೆಗೆ ಪೃಥ್ವಿ ತತ್ತ್ವದ ಸ್ಮರಣೆ ಮಾಡಬೇಕು. ಇದು ಚೌಕೋನ ಅಥವಾ ವಜ್ರಾಕಾರವಾಗಿರುತ್ತದೆ. ಅದರ ಭೂ ಬೀಜ ಲಂ ಬೀಜವಾಗುತ್ತದೆ. ಮತ್ತು ವರ್ಣವು ಬಂಗಾರದ ಸಮಾನ ಹಳದಿ ವರ್ಣದ್ದಾಗಿರುತ್ತದೆ. ಈ ಪ್ರಕಾರ ಸಾಧಕರು ಭೂತತ್ತ್ವದ ಧ್ಯಾನ ಮಾಡಬೇಕು.

ಮೊಳಕಾಲಿನಿಂದ ನಾಭಿ ಪ್ರದೇಶದವರೆಗೆ ಜಲತತ್ತ್ವವಿರುತ್ತದೆ. ಇದು ಆಕಾಶದಲ್ಲಿ ಅರ್ಧಚಂದ್ರಾಕಾರವಾಗಿದ್ದು, ಶ್ವೇತವರ್ಣವನ್ನು ಹೊಂದಿರುತ್ತದೆ. ಇದರಲ್ಲಿ ಎರಡು ಕಮಲಗಳ ಚಿಹ್ನೆಯಿರುತ್ತದೆ. 'ವವ್' ಇದರ ಬೀಜಾಕ್ಷರವಾಗಿದ್ದು, ಅಲ್ಲಿ ಸೋಮಮಂಡಲದ ಧ್ಯಾನ ಮಾಡಬೇಕು.

ನಾಭಿಯಿಂದ ಹಿಡಿದು ಹೃದಯದವರೆಗೆ ಅಗ್ನಿತತ್ತ್ವವಿರುತ್ತದೆ. ಇದರ ಆಕಾರವು ಸ್ವಸ್ತಿಕಯುಕ್ತ ತ್ರಿಕೋಣವಾಗಿರುತ್ತದೆ. ಇದು ರಕ್ತವರ್ಣವಿದ್ದು, 'ರಮ್' ಇದರ ಬೀಜಾಕ್ಷರವಾಗಿರುತ್ತದೆ. ಈ ಪ್ರಕಾರ ಈ ಪ್ರಕಾರ ಅಗ್ನಿಮಂಡಲದ ಧ್ಯಾನ ಮಾಡಬೇಕು.

ಹೃದಯದಿಂದ ಭ್ರೂಮಧ್ಯಪರ್ಯಂತ ವಾಯುತತ್ತ್ವವಿರುತ್ತದೆ. ಅದು ಷಡ್‌ಬಿಂದುಯುಕ್ತ ಗೋಲಾಕಾರವಾಗಿರುತ್ತದೆ. ವರ್ಣ ಧೂಮ್ರವರ್ಣ, 'ಯಮ್' ಬೀಜಾಕ್ಷರವಾಗಿರುತ್ತದೆ. ಈ ಪ್ರಕಾರ ವಾಯುಮಂಡಲವನ್ನು ಧ್ಯಾನಿಸಬೇಕು.

ಭ್ರೂಮಧ್ಯದಿಂದ ಬ್ರಹ್ಮರಂಧ್ರದವರೆಗೆ ಆಕಾಶ ತತ್ತ್ವವಿರುತ್ತದೆ. ಸುಂದರವಾದ ವೃತ್ತಾಕಾರವಾಗಿರುತ್ತದೆ. ವರ್ಣವು ಸ್ವಚ್ಛ (ಶುಭ್ರ) ವರ್ಣವಾಗಿರುತ್ತದೆ. 'ಹಮ್' ಬೀಜಾಕ್ಷರವಿರುತ್ತದೆ. ಇಲ್ಲಿ ಆಕಾಶ ಮಂಡಲವನ್ನು ಧ್ಯಾನಿಸಬೇಕು.

ಈ ಪ್ರಕಾರ ಪಂಚಮಹಾಭೂತಗಳ ಧ್ಯಾನದಿಂದ ಸಾಧಕನಿಗೆ ಭೂತಶುದ್ಧಿಯು ಪ್ರಾಪ್ತವಾಗುತ್ತದೆ.

ಪದ್ಧಸ್ತಪಾಯುಪಸ್ಥಾವಾಕ್ ಕ್ರಮಾ ದ್ದೇಯಾ ಧರಾದಿಗಾಃ ।
ಸ್ವಕೀಯ ವಿಪರ್ಯಯೈರ್ಯುಕ್ತಾ ಗಮನಗ್ರಹಣಾಧಿಭಿಃ ॥19॥

ಮಂತ್ರ ಸಾಧಕರು ಬ್ರಾಹ್ಮಿ ಮುಹೂರ್ತದಲ್ಲಿ ಎದ್ದು ಶಿರ ಪ್ರದೇಶದಲ್ಲಿ ತಮ್ಮ ಶ್ರೀ ಗುರುಗಳ ಚರಣಕಮಲಗಳನ್ನು ಧ್ಯಾನ ಮಾಡಬೇಕು. ನಂತರ ನಿತ್ಯ ಶೌಚಾದಿ ಕರ್ಮಗಳನ್ನು ಪೂರೈಸಿ ನಂತರ ಸ್ನಾನಾರ್ಥವಾಗಿ ನದಿ ತೀರಕ್ಕೆ ತೆರಳಬೇಕು. ನದಿಯಲ್ಲಿ ಶ್ರಾತ ವಿಧಿಗಳಿಂದ ಸ್ನಾನ ಪೂರೈಸಿ ಮಂತ್ರಸ್ನಾನವನ್ನು ಮಾಡಬೇಕು. ನಂತರ ಸ್ಮೃತಿ ಶಾಸ್ತ್ರಗಳಲ್ಲಿ ವಿಧಿಸಿದಂತೆ ಸಂಧ್ಯೋಪಾಸನೆ ಮಾಡಬೇಕು.

ಟಿಪ್ಪಣಿ : ಕಾಯಿಕಸ್ನಾನ, ಮಂತ್ರಸ್ನಾನ ಮತ್ತು ಮಾನಸಸ್ನಾನ ಈ ಪ್ರಕಾರ ಮೂರು ಪ್ರಕಾರದ ಸ್ನಾನಗಳನ್ನು ಹೇಳಲಾಗಿದೆ. ಕಾಯಿಕ ಸ್ನಾನವನ್ನು ನೀರಿನಿಂದ, ಮಂತ್ರಸ್ನಾನವನ್ನು ಮಂತ್ರ ಪಠಿಸುತ್ತ, ಭಸ್ಮಧಾರಣೆ ಮಾಡುತ್ತ ಮತ್ತು ಮಾನಸ ಸ್ನಾನವನ್ನು ಶ್ರೀ ಗುರು ಚರಣದಿಂದ ಉದ್ಭವವಾಗುವ ಪವಿತ್ರ ಜಲಧಾರೆಯಿಂದ ಪೂರೈಸಬೇಕು.

## ದ್ವಾರ ಪೂಜಾ

ಗೃಹದ್ವಾರಮಥಾಗತ್ಯ ದ್ವಾರಪೂಜಾಂ ಸಮಾಚರೇತ್ ।
ದ್ವಾರಮಂತ್ರಾಬುನಾ ಪ್ರೋಕ್ಷ್ಯ ಗಣೇಶಂ ಚೋರ್ಧ್ವತೋ ಯಜೇತ್ ॥4॥
ಮಹಾಲಕ್ಷ್ಮಿಂ ದಕ್ಷಭಾಗೆ ವಾಮಭಾಗೆ ಸರಸ್ವತೀಮ್ ।
ಪುನರ್ದಕ್ಷೆ ಯಜೇದ್ ವಿಘ್ನಂ ಗಂಗಾ ಚ ಯಮುನಾಮಪಿ ॥5॥
ಪುನರ್ವಾಮೆ ಕ್ಷೇತ್ರಪಾಲಂ ಸ್ವಃ ಸಿಂಧುಯಮುನೆ ಅಪಿ ।
ಪುನರ್ದಕ್ಷೆ ತು ಧಾತಾರಂ ವಿಧಾತಾರಂ ತು ವಾಮತಃ ॥6॥
ತದ್ವನ್ನಿಧಿ ಶಂಖಪದ್ಮೌ ತತೋಽರ್ಚ್ಚಯದ್ ದ್ವಾರಪಾಲಕಾನ್ ।
ದ್ವಾರಪೂಜಾಂ ವಿಧಾಯೇತ್ಥಂ ಪ್ರವಿಶ್ಯಾರ್ಚನ ಮಂದಿರಮ್ ॥7॥

ಸ್ನಾನ ವಿಧಿಗಳನ್ನು ಪೂರೈಸಿದ ನಂತರ ಮನೆಯ ಬಾಗಿಲಿಗೆ ಬಂದು ದ್ವಾರಪೂಜೆಯನ್ನು ಮಾಡಬೇಕು. ಪ್ರಾರಂಭದಲ್ಲಿ 'ಅಸ್ತ್ರಾಯ ಫಟ್' ಅಸ್ತ್ರ ಮಂತ್ರದಿಂದ ಅಭಿಮಂತ್ರಿತ ಜಲವನ್ನು ಬಾಗಿಲಿಗೆ ಪ್ರೋಕ್ಷಿಸಬೇಕು. ನಂತರ ಬಾಗಿಲಿನ ಮೇಲ್ಭಾಗದಲ್ಲಿ ಇರುವ ಶ್ರೀ ಗಣೇಶನ ಮೂರ್ತಿಯನ್ನು ಪೂಜಿಸಬೇಕು.

ನಂತರ ದ್ವಾರದ ಬಲಭಾಗದಲ್ಲಿ ಶ್ರೀ ಮಹಾಲಕ್ಷ್ಮೀ ಮತ್ತು ಎಡಭಾಗದಲ್ಲಿ ಮಹಾಸರಸ್ವತಿಯನ್ನು ಪೂಜಿಸಬೇಕು. ನಂತರ ಪುನಃ ಬಲಭಾಗದಲಿ ವಿಘ್ನೇಶ್ವರ, ಗಂಗೆ ಮತ್ತು ಯಮುನೆಯರನ್ನು ಅರ್ಚಿಸಬೇಕು.





ತದನಂತರ ಎಡಭಾಗದಲ್ಲಿ ಕ್ಷೇತ್ರಪಾಲ, ಸಿಂಧು ಮತ್ತು ಯಮುನೆಯರನ್ನು ಪೂಜಿಸಿ, ಬಲಭಾಗದಲ್ಲಿ ಧಾತಾ ಮತ್ತು ಎಡ ಭಾಗದಲ್ಲಿ ವಿಧಾತಾರನ್ನು ಪೂಜಿಸಬೇಕು. ಆ ಮೇಲೆ ಬಲಭಾಗದಲ್ಲಿ ಶಂಖನಿಧಿ ಮತ್ತು ಎಡಭಾಗದಲ್ಲಿ ಪದ್ಮನಿಧಿಯನ್ನು ಪೂಜೆ ಮಾಡಬೇಕು. ಇದೇ ಪ್ರಕಾರ ದ್ವಾರದಲ್ಲಿರುವ ಆಯಾ ದೇವತಾ ರೂಪಿ ದ್ವಾರಪಾಲಕರನ್ನು ಪೂಜಿಸಬೇಕು.

## ಪ್ರಾಣಾಯಾಮ

ಉಪವಿಶ್ಯಾಸನೆ ನತ್ವಾ ಗಣೇಶ ಗುರು ದೇವತಾಃ ।
ಪ್ರಾಣಾನಾಯಮ್ಯ ತಾರೇಣ ಪೂರಕುಂಭಕರೇಚಕೈಃ ॥8॥
ದ್ವಾತ್ರಿಂಶತಾ ಚತುಃಷಷ್ಟ್ಯಾ ಕ್ರಮಾತ್ ಷೋಡಶಸಂಖ್ಯಯಾ ।
ದೇವಾರ್ಚಾ ಯೋಗ್ಯತಾ ಪ್ರಾಪ್ತ್ಯೈ ಭೂತಶುದ್ಧಿಂ ಸಮಾಚರೇತ್ ॥9॥

ದ್ವಾರ ಪೂಜೆಯನ್ನು ಪೂರೈಸಿದ ನಂತರ ಪೂಜಾ ಗೃಹವನ್ನು ಪ್ರವೇಶಿಸಿ, ಆಸನದಲ್ಲಿ ಕುಳಿತುಕೊಂಡು ಶ್ರೀ ಗಣೇಶ, ಗುರು ಮತ್ತು ಕುಲದೇವತಾ, ಇಷ್ಟದೇವತೆಗಳಿಗೆ ನಮಸ್ಕರಿಸಬೇಕು. ನಂತರ ಮೂವತ್ತೆರಡು ಬಾರಿ ಪ್ರಣವ ಮಂತ್ರ ಜಪಿಸುತ್ತ ಪ್ರಾಣವಾಯುವನ್ನು ಒಳಗೆ ಸೆಳೆದುಕೊಳ್ಳುತ್ತ ಪೂರಕ ಮಾಡಿ, ಅರವತ್ನಾಲ್ಕು ಬಾರಿ ಓಂಕಾರ ಜಪಿಸುತ್ತ ಪ್ರಾಣವಾಯುವನ್ನು ನಿಲ್ಲಿಸಿ ಕುಂಭಕ ಮಾಡಿ, ಹದಿನಾರು ಬಾರಿ ಓಂಕಾರ ಜಪಿಸುತ್ತ ಪ್ರಾಣವಾಯುವನ್ನು ಹೊರಗೆ ಬಿಡುತ್ತ ರೇಚಕ ಮಾಡುತ್ತ ಪ್ರಾಣಾಯಾಮ ಮಾಡಬೇಕು. ನಂತರ ದೇವತಾರ್ಚನದ ಯೋಗ್ಯತಾ ಪ್ರಾಪ್ತಿಗಾಗಿ 'ಭೂತಶುದ್ಧಿ'ಯ ಕ್ರಿಯೆಯನ್ನು ಮಾಡಬೇಕು.

## ಭೂತಶುದ್ಧಿ

ಮೂಲಾಧಾರಸ್ಥಿತಾಂ ದೇವಿಂ ಕುಂಡಲಿಂ ಪರದೇವತಾಮ್ ।
ಬಿಸತಂತುನಿಭಾಂ ವಿದ್ಯುತ್ಪ್ರಭಾಂ ಧ್ಯಾಯೇತ್ ಸಮಾಹಿತಃ ॥10॥
ಮೂಲಾಧಾರಾತ್ ಸಮುತ್ಥಾಪ್ಯ ಸಂಗತಾಂ ಹೃದಯಾಂಬುಜೆ ।
ಸುಷುಮ್ನಾ ಮಾರ್ಗಮಾಶ್ರಿತ್ಯಾದಾಯ ಜೀವಂ ಹೃದಂಬುಜಾತ್ ॥ 11 ॥
ಪ್ರದೀಪಕಲಿಕಾ ಕಾರಂ ಬ್ರಹ್ಮರಂಧ್ರಗತಂ ಸ್ಮರೇತ್ ।
ಜೀವಂ ಬ್ರಹ್ಮಣಿ ಸಂಯೋಜ್ಯ ಹಂಸ ಮಂತ್ರೇಣ ಸಾಧಕಃ ॥12॥





# ॥ ಪ್ರಥಮ ತರಂಗ ॥



## ಮಂಗಲಾಚರಣ

ಪ್ರಣಮ್ಯ ಲಕ್ಷ್ಮೀನೃಹರಿಂ ಮಹಾಗಣಪತಿಂ ಗುರುಮ್ ।
ತಂತ್ರಾಣ್ಯನೇ ಕಾನ್ಯಾಲೋಕ್ಯ ವಕ್ಷ ಮಂತ್ರಮಹೋದಧಿಮ್ ॥1॥
ಪ್ರಾತರುತ್ಥಾಯ ಶಿರಸಿ ಧ್ಯಾತ್ವಾ ಗುರುಪದಾಂಬುಜಮ್ ।
ಆವಶ್ಯಕಂ ವಿನಿರ್ವರ್ತ್ಯ ಸ್ನಾತುಂ ಯಾಯಾತ್ ಸರಿತ್ತಟೇ ॥2॥
ಶ್ರೌತೇನ ವಿಧಿನಾ ಸ್ನಾತ್ವಾ ಮಂತ್ರಸ್ನಾನಂ ಸಮಾಚರೇತ್ ।
ಸ್ಮಾರ್ತ ಸಂಧ್ಯಾಂ ಮಂತ್ರಸಂಧ್ಯಾಂ ಕೃತ್ವಾ ದೇವಂ ವಿಚಿಂತಯೇತ್ ॥3॥

ಶ್ರೀ ಮಹಾಲಕ್ಷ್ಮೀ ಸಮೇತ ಶ್ರೀ ನೃಸಿಂಹ, ಶ್ರೀಮನ್ಮಹಾಗಣಪತಿ ಮತ್ತು ಶ್ರೀ ಗುರುಗಳಿಗೆ ನಮಸ್ಕರಿಸಿ, ಮಂತ್ರವೇ ಸಾರಭೂತವಾಗಿರುವ ಅನೇಕ ತಂತ್ರಶಾಸ್ತ್ರ ಗ್ರಂಥಗಳನ್ನು ಅವಲೋಕನ ಮಾಡಿ "ಮಂತ್ರ ಮಹೋದಧಿ" ಎಂಬ ಗ್ರಂಥವನ್ನು ನಾನು (ಮಹೀಧರ) ರಚಿಸುತ್ತೇನೆ.

# ಗ್ರಂಥಾಂತರಂಗ.....

ಈ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ನಿರೂಪಿಸುವ ಈ ಕೈಂಕರ್ಯದಲ್ಲಿ ನಾನು ಭಾಗ್ಯಶಾಲಿಯಾಗಿದ್ದೇನೆ. ಏಕೆಂದರೆ ಮಂತ್ರ-ತಂತ್ರ ಶಾಸ್ತ್ರಗಳ ಮನನ ಮತ್ತು ಸಂಯೋಜನೆಯ ಅವಕಾಶ ನನಗೆ ತಾನಾಗಿಯೇ ಒದಗಿಬಂತು.

ಈ ಕೃತಿಯು ಗುರುವಿನಿಂದ ಉಪದೇಶ ಪಡೆದ ಮತ್ತು ಸದಾ ಗುರುವಿನ ಮಾರ್ಗದರ್ಶನದಲ್ಲಿರುವ ಸಾಧಕರಿಗಾಗಿ ಮಾತ್ರ ರಚಿಸಲ್ಪಟ್ಟಿದೆ ಎಂದು ನನ್ನ ಅಭಿಪ್ರಾಯ. ಈ ಗ್ರಂಥದ ಸಾತ್ವಿಕ ಮತ್ತು ರಾಜಸ ಮಂತ್ರಗಳನ್ನು ಸಾಮಾನ್ಯವಾಗಿ ಪ್ರಯೋಗಿಸಬಹುದು. ಆದರೆ ತಾಮಸ ಮಂತ್ರಗಳ ಪ್ರಯೋಗವನ್ನು ನಿಷೇಧಿಸಲಾಗಿದೆ. ಈ ಮಂತ್ರಗಳ ಅನುಷ್ಠಾನದಲ್ಲಿ ಕಿಂಚಿತ್ ನ್ಯೂನತೆಯಾದರೂ ಸಾಧಕನ ಸರ್ವಸ್ವವನ್ನೂ ನಾಶ ಮಾಡುತ್ತವೆ. ಕಾರಣ ಈ ಮಂತ್ರಗಳನ್ನು ಪ್ರಯೋಗಿಸುವುದನ್ನಾಗಲಿ ಅಥವಾ ಅನ್ಯರಿಗೆ ಉಪದೇಶಿಸುವುದನ್ನಾಗಲಿ ಮಾಡಬಾರದು. ಯಾವುದೇ ಅನುಷ್ಠಾನವನ್ನು ಪ್ರಾರಂಭಿಸುವ ಪೂರ್ವದಲ್ಲಿ ಗ್ರಂಥದಲ್ಲಿ ವಿವರಿಸಿರುವ ಅಂಶಗಳನ್ನು ಸರಿಯಾಗಿ ಮನನ ಮಾಡಿಕೊಳ್ಳಬೇಕು.

ಗ್ರಂಥದ ಕೊನೆಯಲ್ಲಿ ಗ್ರಂಥಕಾರರು ಕೆಲವು ಎಚ್ಚರಿಕೆಗಳನ್ನು ಕೊಡುತ್ತಾರೆ :

**ಕಾಮ್ಯಂ ಕರ್ಮಪ್ರಕರ್ತವ್ಯಮನ್ಯಥಾಭಿಭವೋ ಭವೇತ್ ।**
**ಶುಭಂ ವಾಪ್ಯಶುಭಂ ವಾಪಿ ವಾಪಿ ಕಾಮ್ಯಕರ್ಮ ಕರೋತಿಯಃ ॥**
**ತಸ್ಯಾರಿತ್ವಂ ವಜ್ರೇನ್ಮಂತ್ರೋ ನ ತಸ್ಮಾತ್ತತ್ಪರೋ ಭವೇತ್**

ವಿಷಯಾಸಕ್ತ ಚಿತ್ತ ಮಾನವರ ಸಂತೋಷಕ್ಕಾಗಿ ಪ್ರಾಚೀನ ಆಚಾರ್ಯರು ಕಾಮ ಕರ್ಮಗಳ ಪ್ರಯೋಗವನ್ನು ಪ್ರತಿಪಾದಿಸಿರುತ್ತಾರೆ. ಯಾರು ಶುಭ ಅಥವಾ ಅಶುಭ ಯಾವುದೇ ಪ್ರಕಾರದ ಕಾಮ್ಯ ಕರ್ಮ ಮಾಡುತ್ತಾರೋ ಮಂತ್ರವು ಅವರ ಶತ್ರುವಾಗುತ್ತದೆ. ಕಾರಣ ಕಾಮ್ಯ ಪ್ರಯೋಗಗಳನ್ನು ಸಾಧಕರ ಹಿತದ ದೃಷ್ಟಿಯಿಂದ ನಿಷೇಧಿಸಲಾಗುತ್ತಿದೆ. ಕಾಮ್ಯ ಪ್ರಯೋಗಗಳಲ್ಲಿ ಕೇವಲ ಕಾಮನಾ ಸಿದ್ಧಿಯ ಫಲವು ಮಾತ್ರ ದೊರೆಯುತ್ತದೆ. ಆದರೆ ನಿಷ್ಕಾಮ ಭಾವದಿಂದ ದೇವತೆಗಳ ಉಪಾಸನೆಯನ್ನು ಮಾಡುವವರಿಗೆ ಸಕಲ ಸಿದ್ಧಿಗಳು ಅನಾಯಾಸವಾಗಿ ಪ್ರಾಪ್ತವಾಗುತ್ತವೆ. ಕಾರಣ ಸುಖ ಪ್ರಾಪ್ತಿಗಾಗಿ ಪ್ರತ್ಯೇಕ ಮಂತ್ರಗಳ ಪ್ರಯೋಗಗಳಲ್ಲಿ ಆಸಕ್ತಿಯನ್ನು ತ್ಯಜಿಸಿ, ನಿಷ್ಕಾಮ ಭಾವದಿಂದ ದೇವತೆಗಳ ಉಪಾಸನೆ ಮಾಡಬೇಕು. ವೇದೋಚಿತ ಕರ್ಮ ಮತ್ತು





ದೇವತೆಗಳ ಉಪಾಸನೆಯಿಂದ ಅಂತಃಕರಣ ಶುದ್ಧವಾಗುತ್ತದೆ. ಇದರಿಂದ ಜ್ಞಾನ ಪ್ರಾಪ್ತಿಯಾಗುತ್ತದೆ. ಕಾರ್ಯಕಾರಣಸಂಘಾತ ಶರೀರದಲ್ಲಿರುವ ಜೀವವೇ ಪರಬ್ರಹ್ಮವು. ಈ ಜ್ಞಾನದಿಂದ ಸಾಧಕನು ಮುಕ್ತನಾಗುತ್ತಾನೆ. ಮಾನವ ದೇಹ ಧರಿಸಿದವರೆಲ್ಲರೂ ದೇವತಾ ಉಪಾಸನೆಯಿಂದ ಮುಕ್ತಿಯನ್ನು ಪಡೆದುಕೊಳ್ಳಲಿ.

**ಸರ್ವ ಮಂಗಲಮಾಂಗಲ್ಯೇ ಶಿವೇ ಸರ್ವಾರ್ಥ ಸಾಧಿಕೆ ।**
**ಶರಣ್ಯೇ ತ್ರ್ಯಂಬಕೇ ಗೌರೀ ನಾರಾಯಣಿ ನಮೋಸ್ತುತೇ ॥**

ಎಲ್ಲ ಮಂಗಳ ಪರಂಪರೆಗೂ ಮಂಗಳಸ್ವರೂಪಳಾದ ಶಿವನ ಅರ್ಧಾಂಗಿಯಾದ, ಸಕಲ ಇಷ್ಟಾರ್ಥಗಳನ್ನು ಸಾಧಿಸುವ, ಶರಣ್ಯೆ, ತ್ರಿನೇತ್ರಳಾದ ಗೌರವರ್ಣದ ದೇವಿ ನಾರಾಯಣಿಯೇ ನಿನಗೆ ವಂದನೆಗಳು.

ಜಗನ್ಮಾತೆಯು ಸಕಲ ಸಾಧಕರ ಸಾಧನೆಗಳು ನಿರ್ವಿಘ್ನವಾಗಿ ಸಾಗಿ ಇಷ್ಟಾರ್ಥ ಸಿದ್ಧಿಯಾಗುವಂತೆ ಅನುಗ್ರಹಿಸಲಿ ಎಂದು ಹಾರೈಸುತ್ತ, ಈ ಗ್ರಂಥವನ್ನು ಜನಮಾನಸಕ್ಕೆ ತಲುಪಿಸುವ ಸಾಹಸವನ್ನು ಮಾಡಿರುವ ಶ್ರೀನಿಧಿ ಪಬ್ಲಿಕೇಷನ್ಸ್‌ನ ಶ್ರೀ ನವೀನ್ ಮತ್ತು ಪರಿವಾರದವರಿಗೆ ಶ್ರೀ ಬನಶಂಕರಿಯು ಅನುಗ್ರಹಿಸಲಿ. ಈ ಕೃತಿಯ ನಿರ್ಮಾಣ ಕಾರ್ಯದಲ್ಲಿ ಭಾಗಿಯಾದ ಅಕ್ಷರ ಜೋಡಣೆ, ಪುಟವಿನ್ಯಾಸ, ಮುದ್ರಣ ಮತ್ತಿತರ ವಿಭಾಗಗಳ ಸಾಧಕರಿಗೆ ಸನ್ಮಂಗಳವನ್ನು ಕೋರುತ್ತ,

ಮಹಾಶಿವರಾತ್ರಿ — ಭಗವತ್ಸೇವೆಯಲ್ಲಿ,
02-03-2011 — **ಶ್ರೀಪಾದ ರಘುನಾಥ ಕುಲಕರ್ಣಿ**

||ಮಂತ್ರ ಮಹೋದಧಿ||

ಯಂತ್ರ-ಮಂತ್ರ-ತಂತ್ರಗಳ
ಪ್ರಾಚೀನ ಆಧಾರ ಗ್ರಂಥ

Mantra Mahodadhi - A book
by Vidwan Sripada Raghunatha Kulkarni
& Published by SriSai Charan, Binnypet, Bangalore-23

Sole Distributed by Srinidhi Publications
# 156, Opp. Malabar Restaurant, Balepet Main Road, Bangalore-53
# 33, KSLECA Complex Avenue Road, Bangalore-2
Ph: 22355469 / 26743567 / 9448847113

| | |
|---|---|
| ಗ್ರಂಥದ ಹೆಸರು | : ಮಂತ್ರ ಮಹೋದಧಿ |
| ಲೇಖಕರು | : ಶ್ರೀಪಾದ ರಘುನಾಥ ಕುಲಕರ್ಣಿ |
| ಪ್ರಕಾಶಕರು | : ಶ್ರೀಸಾಯಿಚರಣ ಪಬ್ಲಿಕೇಷನ್ಸ್ |
| ಅಧಿಕೃತ ವಿತರಕರು | : ಶ್ರೀನಿಧಿ ಪಬ್ಲಿಕೇಷನ್ಸ್ |
| ಪ್ರಕಾಶನದ ನಿರ್ವಹಣೆ | : ವಿದ್ವಶ್ರೀ ನವೀನ್ |
| ಪ್ರಥಮ ಮುದ್ರಣ | : 2011 |
| ಹಕ್ಕುಗಳು | : ಪ್ರಕಾಶಕರದ್ದು |
| ಪುಟಗಳು | : 888 |
| ಬೆಲೆ | : 500-00ರೂ |
| ಮುಖಪುಟ ವಿನ್ಯಾಸ | ನವೀನ್... |
| ಪುಟವಿನ್ಯಾಸ | : ವಿಜಯ್ ರಾವ್ ಡಿ.ಕೆ |
| ಮುದ್ರಣ | : ಪ್ರಶಾಂತ್ ಗ್ರಾಫಿಕ್ಸ್, ಬೆಂ |

ಲೇಖಕರ ಸಂಪರ್ಕ :
ಶ್ರೀಪಾದ ರಘುನಾಥ ಕುಲಕರ್ಣಿ, ಬಾಗಲಕೋಟೆ-587101
ದೂ: 08354-244444 / 9481983444

## ಸಾಧಕರೊಂದಿಗೆ...

ಶ್ರೀಮನ್ ಮಹೀಧರ ಭಟ್ಟ ವಿರಚಿತ "ಮಂತ್ರ ಮಹೋದಧಿ" ಕೃತಿಯು ವಿದ್ವಾಂಸರ ಸಮಕ್ಷಮ ಪ್ರಸ್ತುತಗೊಳಿಸಲ್ಪಡುತ್ತಿದೆ. ಅಹಿಚ್ಛತ್ರ ದೇಶದ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಶ್ರೀ ಮಹೀಧರರು, ಸಂಸಾರದ ಅಸಾರತೆಯನ್ನು ಅರಿತು ತಮ್ಮ ದೇಶವನ್ನು ತ್ಯಜಿಸಿ ಕಾಶಿಗೆ ಬಂದು ಶ್ರೀ ನೃಸಿಂಹ ಭಗವಾನನ ಸೇವೆಯಲ್ಲಿ ನಿರತರಾಗುತ್ತಾರೆ. ಪ್ರಕಾಂಡ ಪಂಡಿತರಾದ ಮಹೀಧರರು ವಿದ್ವಾಂಸರ ಮತ್ತು ತಮ್ಮ ಪುತ್ರ ಕಲ್ಯಾಣನ ಆಗ್ರಹದ ಮೇರೆಗೆ ಈ ಮಹಾನ್ ಕೃತಿಯನ್ನು ರಚಿಸಿರುತ್ತಾರೆ. ಅನೇಕ ಗ್ರಂಥಗಳಲ್ಲಿ ಅಡಕವಾಗಿರುವ ನಾನಾ ಪ್ರಕಾರದ ಮಂತ್ರಗಳನ್ನು ಒಂದೇ ಗ್ರಂಥದ ರೂಪದಲ್ಲಿ ಕೊಡಲು "ಮಂತ್ರ ಮಹೋದಧಿ"ಯನ್ನು ರಚಿಸಲಾಗಿದೆ ಎಂದು ಗ್ರಂಥಕಾರರು ಹೇಳುತ್ತಾರೆ.

ಮೂಲ ಸಂಸ್ಕೃತದ ಮಹಾನ್ ಕೃತಿಯನ್ನು ಕರ್ನಾಟಕದ ವಾಚಕ ವೃಂದಕ್ಕೆ ಪರಿಚಯಿಸುವ ಹೊಣೆಯನ್ನು ನನಗೆ ವಹಿಸಿದಾಗ, ಒಪ್ಪಿಕೊಳ್ಳುವ ಧೈರ್ಯ ನನಗಿರಲಿಲ್ಲ. ಅಲ್ಪಮತಿಯಾದ ನನ್ನಿಂದ ಈ ಕಾರ್ಯ ಸಾಧ್ಯವೇ? ನನಗೆ ಆ ಯೋಗ್ಯತೆ ಇದೆಯೇ? ಎಂದೆಲ್ಲ ಯೋಚಿಸಿ ನನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುವ ಯೋಚನೆ ಬಂದಾಗ ನನಗೆ "ಪ್ರಯತ್ನ ಮಾಡು, ನಾನಿರುವೆ" ಎಂದು ಗುರುವಾಣಿಯಾಯ್ತು. ಗುರುಕೃಪಾ ಹಿ ಕೇವಲಂ. ಗುರುವಿನ ಕೃಪೆ, ಅನುಗ್ರಹಗಳೇ ನನಗೆ ಶ್ರೀರಕ್ಷೆಯಾಗಿ, ಶಕ್ತಿಯಾಗಿ ಈ ಸಾಹಸಕ್ಕೆ ಪ್ರೋತ್ಸಾಹಿಸಿದ ಪರಿಣಾಮ ಇಂದು ಈ ರೂಪದಲ್ಲಿದೆ. ಇಂಥದೊಂದು ಬೃಹತ್ ಕೃತಿಯನ್ನು ಪೂರ್ಣಗೊಳಿಸುವಲ್ಲಿ ಅನೇಕ ನ್ಯೂನತೆಗಳು ಇರುವುದು ಸಹಜ. ಕನ್ನಡ ಭಾಷೆಯನ್ನು ಸಂಸ್ಕೃತದಿಂದ ಬೇರ್ಪಡಿಸುವುದು ಕಷ್ಟ. ನನ್ನ ಬುದ್ಧಿಮತ್ತೆಗೆ ಮೀರಿದ ಕೆಲವು ಸಂದರ್ಭಗಳಲ್ಲಿ, ಕನ್ನಡ ಪರ್ಯಾಯ ಶಬ್ದಗಳ ಕೊರತೆಯಿಂದ ಮೂಲ ಸಂಸ್ಕೃತ ಶಬ್ದಗಳು ಉಳಿದಿರಬಹುದು.

ಗ್ರಂಥಕಾರರ ಮೂಲ ಸ್ವೋಪಜ್ಞ 'ನೌಕಾ' ಟೀಕೆಯನ್ನು ಆಧಾರವಾಗಿ ಇಟ್ಟುಕೊಳ್ಳಲಾಗಿದ್ದು, ವಿಷಯ ಸ್ಪಷ್ಟತೆಗಾಗಿ ಅನ್ಯ ವಿದ್ವಾಂಸರ ಕೃತಿಗಳನ್ನು ಆಶ್ರಯಿಸಬೇಕಾದ ಅನಿವಾರ್ಯತೆಯನ್ನು ಒಪ್ಪಿಕೊಳ್ಳಬೇಕು. ತಂತ್ರ ಸಂಪ್ರದಾಯದ

ಓಂ ಶ್ರೀ ಲಕ್ಷ್ಮೀ ತ್ರಿವಿಕ್ರಮಾಯ ನಮಃ

ಶ್ರೀಮನ್ ಮಹೀಧರ ಭಟ್ಟ ವಿರಚಿತ

# ॥ ಮಂತ್ರ ಮಹೋದಧಿ ॥

ಹಲವಾರು ವಿಶಿಷ್ಟ ಫಲಕಾರಿ ಪ್ರಾಯೋಗಿಕ
ಯಂತ್ರ-ಮಂತ್ರ-ತಂತ್ರಗಳ
**ಪ್ರಾಚೀನ ಆಧಾರ ಗ್ರಂಥ**

ಶ್ರೀಪಾದ ರಘುನಾಥ ಕುಲಕರ್ಣಿ
ಬಾಗಲಕೋಟೆ

ಪ್ರಕಾಶಕರು : ಶ್ರೀಸಾಯಿ ಚರಣ ಪಬ್ಲಿಕೇಷನ್ಸ್
ನಂ.279, 2ನೇ ಮೈನ್, ಹೊಸ ಬಿನ್ನಿಪೇಟೆ ಬಡಾವಣೆ, ಬಿನ್ನಿಪೇಟೆ, ಬೆಂಗಳೂರು-23

ಅಧಿಕೃತ ವಿತರಕರು: ಶ್ರೀನಿಧಿ ಪಬ್ಲಿಕೇಷನ್ಸ್



- ನಂ.156, ಮಲಬಾರ್ ಹೋಟೆಲ್ ಎದುರು, ಬಳೇಪೇಟೆ ಮುಖ್ಯರಸ್ತೆ, ಬೆಂಗಳೂರು-53
- ನಂ.33, ಹಳೇ ಪೋಸ್ಟ್ ಆಫೀಸ್(SBM) ಎದುರು, ಅವೆನ್ಯೂ ರಸ್ತೆ, ಬೆಂಗಳೂರು-02

ದೂ: 080-22355469 / 26743567 / 9448847113